
ಕೋಟೆ ಕುಮಾರ್

# ಹೊಸ ತಲೆಮಾರಿನ ಪ್ರಗತಿಪರ ಚಿತ್ರಕಲಾವಿದ

**ಹೊ**ಸ ಹೊಸ ಸೃಜನಶೀಲ ಸಾಧ್ಯತೆಗಳ ಹುಡುಕಾಟಕ್ಕಾಗಿ ತುಡಿಯುವ ಸೂಕ್ಷ್ಮ ಮನಸ್ಸಿನ ಕಲಾವಿದನಾಗಿ, ವ್ಯಂಗ್ಯಚಿತ್ರಕಾರನಾಗಿ, ಛಾಯಾಚಿತ್ರಕಾರನಾಗಿ, ಬರಹಗಾರನಾಗಿ, ಮಾನವೀಯ ಸಂಬಂಧಗಳ ಜೀವತಂತುಗಳನ್ನು ಕಲೆಯಲ್ಲಿನ ವಿವಿಧ ಮಾಧ್ಯಮಗಳ ಮೂಲಕ ಅಭಿವ್ಯಕ್ತಪಡಿಸಲು ನಿರಂತರವಾಗಿ ಪ್ರಯತ್ನಿಸುತ್ತಿರುವ ಕಲಾವಿದರು ಕೋಟೆ ಕುಮಾರ್. ಜಲವರ್ಣ, ತೈಲವರ್ಣ, ಅಕ್ರಲಿಕ್ ಮಾಧ್ಯಮಗಳಲ್ಲಿ ಸಮಕಾಲೀನ ತತ್ವಗಳ ಆಧಾರದಲ್ಲಿ ಪ್ರಸಕ್ತ ವಿದ್ಯಮಾನಗಳ ವಾಸ್ತವಿಕ ಬದುಕಿನ ಅಂತರಾಳದ ಪ್ರೀತಿ, ಶಾಂತಿ, ಕ್ರೌರ್ಯ, ದ್ವಂದ್ವಗಳನ್ನು ಅಭಿವ್ಯಕ್ತಿಗೊಳಿಸುವ ಇವರ ಬಹುಪಾಲು ಕಲಾಕೃತಿಗಳು ಪ್ರಕೃತಿ ಮತ್ತು ಗ್ರಾಮೀಣ ಪರಿಸರದ ಬದುಕಿನ ಸಂವೇದನೆಯಲ್ಲಿ ಸೃಷ್ಟಿಗೊಂಡಿವೆ. ತಮ್ಮ ಗ್ರಹಿಕೆಯನ್ನು ಮೂರ್ತದಿಂದ ಅಮೂರ್ತದೆಡೆಗೆ ರೂಪಾಂತರಗೊಳಿಸಿ ಮಣ್ಣಿಗೆ ಹತ್ತಿರವಾಗಿ ಅದರ ಎಲ್ಲಾ ಧ್ವನಿ, ಸ್ಪರ್ಶ, ಗಂಧಗಳೊಡನೆ ಬದುಕನ್ನು ಅರ್ಥೈಸಲು ಪ್ರಯತ್ನಿಸುತ್ತಾರೆ. ಪ್ರಖರ ಬಣ್ಣಗಳ ಸಂಯೋಜನೆಯಲ್ಲಿ ಮೈದಳೆದಿರುವ ಇವರ ಕೃತಿಗಳಲ್ಲಿ ಬೌದ್ಧಿಕತೆಗಿಂತ, ಭಾವನಾತ್ಮಕತೆಯೇ ಪ್ರಧಾನವಾಗಿ ಆ ಮೂಲಕ ಸೂಕ್ಷ್ಮ ವಿವರಗಳ ಚಿತ್ರಣ ವ್ಯಕ್ತವಾಗುತ್ತದೆ.

ಅನೇಕ ಕಡೆ ಏಕವ್ಯಕ್ತಿ ಹಾಗೂ ಸಮೂಹ ಕಲಾ ಪ್ರದರ್ಶನ ನಡೆಸಿದ್ದಾರೆ. ಹಲವೆಡೆ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದು ಕ್ರಿಯಾಶೀಲ ಸಂಘಟಕರೂ ಆಗಿರುವ ಇವರು ತುಮಕೂರಿನ ಕಲಾವಿದ ಗೆಳೆಯರ ಬಳಗದೊಂದಿಗೆ 'ಕಲರ್ಸ್ ಗ್ರೂಪ್' ಎಂಬ ಸಾಂಸ್ಕೃತಿಕ ಸಂಘಟನೆಯ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದಾರೆ.

ಆರ್. ಶಾಂತಮೂರ್ತಿ
ಪ್ರಶಾಂತನಗರ ಹೊಸ ಬಡಾವಣೆ, ಬಾಲಾಜಿ ಮಾರ್ಜಲ್ ಹತ್ತಿರ, ದೇವರಾಯಪಟ್ಟಣ, ತುಮಕೂರು


ಡ್ರೀಮ್‌ಗರ್ಲ್ (ತೈಲವರ್ಣ)


ಬುದ್ಧ ಮತ್ತು ಲ್ಯಾಡನ್ (ತೈಲವರ್ಣ)


ಭಯೋತ್ಪಾದಕ (ತೈಲವರ್ಣ)


ಭಯೋತ್ಪಾದಕರು (ತೈಲವರ್ಣ)

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಜಿ. ಎಂ. ಬೊಮ್ಮಳ್ಳಿ, ಶ್ರೀಹರಿ, ಬಿ. ವಿಲ್ಸನ್, ಸ್ಯಾಮ್, ಆಶಾ ಹೆಗಡೆ, ಎನ್. ಆರ್. ಬೊಮ್ಮಳ್ಳಿ

**ಮುಖಚಿತ್ರ :** ವಿದ್ಯಾರ್ಥಿಗಳ ಪ್ರತಿಭಟನೆ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

**ಬೆಂ**ಗಳೂರಿನ ದೊಡ್ಡ ಐ.ಟಿ. ಕಂಪನಿಗಳು ಇನ್ನೈದು ವರ್ಷಗಳಲ್ಲಿ ಚೆನ್ನಾಕ್ಕೆ ಸ್ಥಳಾಂತರಗೊಳ್ಳುವುದು ಬಹುತೇಕ ಖಚಿತವೆಂದು ಕರ್ನಾಟಕದ ಮಾಜಿ ಐ. ಟಿ. ಸಚಿವರೊಬ್ಬರು ಇತ್ತೀಚೆಗೆ ಹೇಳಿದರು. ಎಣಿಕೆಗೆ ಸಿಗದಷ್ಟು ಕೋಟಿಗಳ ಲಾಭ ಪಡೆಯುವ ಈ ಕಂಪನಿಗಳು ಶನೀಶ್ವರರೋ ನಕ್ಷತ್ರಿಕರೋ ಎಂದು ತೀರ್ಮಾನವಾಗಬೇಕು. ಸರ್ಕಾರದ ಕೆಚ್ಚಲಿಂದ ಎಷ್ಟು ಹೀರಬಹುದೆಂಬುದೊಂದೇ ಕರ್ನಾಟಕದ ಬಗ್ಗೆ ಅವರ ಆಸಕ್ತಿ. ಅವರು ವಹಿವಾಟು ನಡೆಸುವ ಅಂಗಡಿಗಳಿಗೆ ವ್ಯಾಪಾರಿ ಸಂಸ್ಥೆಗಳು ನೀಡಬೇಕಾದಷ್ಟು ತೆರಿಗೆಯನ್ನು ಕೊಡಲು ತಪ್ಪಿಸಿಕೊಂಡು, ಅವಕಾಶವಾದಾಗಲೆಲ್ಲಾ ಸರ್ಕಾರದ ಭೂಮಿಯನ್ನು ಕಸಿಯುವುದು ಅವರ ಸಂಪ್ರದಾಯ. ಅವರಿಗೆ ಮಾತ್ರ ರಸ್ತೆ, ನೀರು, ವಿದ್ಯುತ್, ಸಾರಿಗೆ, ಎಲ್ಲಾ ಸುಲಕ್ಷಣವಾಗಿರಬೇಕೆಂದು ಚಂಡಿ ಹಿಡಿಯುವ ದುರುಳತನ ಅವರ ಸ್ವಭಾವವಾಗಿ ಹೋಗಿದೆ. ಕರ್ನಾಟಕಕ್ಕೆ ಅವು ನೀಡಿರುವುದಕ್ಕಿಂತ ಸೆಳೆದುಕೊಂಡದ್ದೇ ಹೆಚ್ಚು ಬೆದರಿಕೆ ಒಡ್ಡುವ ಭಯೋತ್ಪಾದಕ ವ್ಯಾಪಾರಿ ಕ್ಷೇತ್ರವೆಂದರೆ ಐ. ಟಿ. ಎಂಬತಾಗಿದೆ. ''ನಾವು ಕೇಳಿದ್ದೆಲ್ಲಾ ಕೊಡದಿದ್ದರೆ ಇಲ್ಲಿಂದ ಓಡಿಹೋಗುತ್ತೇವೆ'' ಎಂಬುದು ಇವರ ಮಂತ್ರ. ''ಅದೆಲ್ಲಿಗೆ ಓಡಿಹೋಗುತ್ತೀರೋ ಹೋಗಿ, ನೋಡೋಣ'' ಎಂದು ಸರ್ಕಾರ ಹೇಳುವುದಿಲ್ಲ. ಇವರ ರಸ್ತೆಯನ್ನು ಇವರೇ ರಿಪೇರಿ ಮಾಡಿಕೊಳ್ಳಲಾಗದಷ್ಟು ಕಾರ್ಪಣ್ಯ ಇವರಿಗೇಕೆ ಬಂತು? ''ಬೇರೆಲ್ಲಾ ರಸ್ತೆಗಳು ಹೇಗಾದರೂ ಇರಲಿ, ಮೊದಲು ನಮ್ಮದು ಸರಿಮಾಡಿ'' ಎನ್ನುವ ಈ ವೃಕೋದರರಿಗೆ ಆಧುನಿಕ ಬಕಾಸುರರೆಂಬ ನಾಮಧೇಯ ಒಪ್ಪುತ್ತದೆ. (ಒಂದು ಭಾಗ ವೃಕೋದರಂಗುಳಿದೊಂದು ಭಾಗವ ತಾವು ನಾಲ್ವರು ನಂದನರು ವಿನಿಯೋಗಿಸುವರವನೀಶ ಕೇಳೆಂದ. – ಕುಮಾರವ್ಯಾಸ. ಅಲ್ಲಿ ಬಕಾಸುರನ ವಧೆಯಾಯಿತು, ಇಲ್ಲಿ ಬಕಾಸುರರು ಗೆಲ್ಲುತ್ತಿದ್ದಾರೆ). ಕರ್ನಾಟಕದವರಿಗೆ ಕೆಳದರ್ಜೆ ನೌಕರಿಗಳನ್ನು ಕಡ್ಡಾಯವಾಗಿ ಕೊಡಲು ಸಹ ಈ ಕಂಪನಿಗಳು ತಯಾರಿಲ್ಲ. ಅವು ಆಡಿದ್ದೆ ಆಟ, ಹೂಡಿದ್ದೆ ಲಗ್ಗೆ! ಸಾಮಾಜಿಕ ಜವಾಬ್ದಾರಿಯ ಹಂಗು ತೊರೆದ ಅಪ್ಪಟ ದೇಶಭಕ್ತರೆಂದರೆ ಇವರೇ! ಡಾ|| ಸಿ. ಎನ್. ಆರ್. ರಾವ್ ಅವರು ಯಾರನ್ನು ''ಐ.ಟಿ.ಕೂಲಿಗಳು'' ಎನ್ನುತ್ತಾರೋ ಅವರ ದರ್ಪವೇ ಇಷ್ಟಾಗಿದೆಯೆಂದರೆ ಕೋಟಿಯ ಮಹತ್ವದ ಅರಿವಾಗಲೇಬೇಕು.

ಟಾಟಾ ಉಕ್ಕು ಕಂಪನಿಯ ವ್ಯವಸ್ಥಾಪಕ ನಿರ್ದೇಶಕ ಬಿ. ಮುತ್ತುರಾಮನ್‌ಗೆ ಈ ವರ್ಷದ ಸ್ವಾತಂತ್ರ್ಯೋತ್ಸವದಂದು ಜ್ಞಾನೋದಯವಾಯಿತು. ಆದರೆ ಅವನು ಗಳಿಸಿದ ಜ್ಞಾನವು ನಮ್ಮ ದೇಶದಲ್ಲಿ ಈಗ ಇನ್ನೂರು ವರ್ಷಗಳಿಂದ ಪರಿಚಿತವಾಗಿದೆ. ಔದ್ಯೋಗಿಕ ಕಚ್ಚಾ ಸಾಮಗ್ರಿಗಳನ್ನು ರಫ್ತು ಮಾಡುವುದು ದೇಶಕ್ಕೆ ಮಾರಕವಾದ್ದರಿಂದ ಅದಕ್ಕೆ ಕಡಿವಾಣ ಹಾಕಬೇಕೆಂದು ಈ ಆಧುನಿಕ ಬುದ್ಧ ಹೇಳಿದ್ದಾನೆ. ನಮ್ಮ ದೇಶದಲ್ಲೇ ಆ ಕಚ್ಚಾ ವಸ್ತುಗಳನ್ನು ಬಳಸಿ ಮಾರಾಟದ ಸರಕನ್ನು ಉತ್ಪಾದಿಸಬೇಕೆಂದು ದುಡಿಯುವ ಜನರಿಗೆ ಲಾಗಾಯ್ತಿನಿಂದ ತಿಳಿದಿತ್ತು, ಅದಕ್ಕಾಗಿ ಹೋರಾಟ ಮಾಡಿದ್ದಾರೆ. ಕಬ್ಬಿಣದ ಅದಿರಿನಂತಹ ಕ್ಷೇತ್ರದಲ್ಲಿ ಅದನ್ನು ರಫ್ತು ಮಾಡುವುದಕ್ಕಾಗಿಯೇ ವಿದೇಶಿ ಬಂಡವಾಳವನ್ನು ಹೂಡಲು ಭಾರತವನ್ನುಳಿದು ಬೇರಾವ ದೇಶದಲ್ಲೂ ಅವಕಾಶ ನೀಡಲಾಗಿಲ್ಲವೆಂದು ಮುತ್ತರಾಮನ್ ಹೇಳಿರುವುದನ್ನು ಮನಮೋಹನ್ ಸಿಂಗ್ ಮತ್ತು ಒರಿಸ್ಸಾದ ನವೀನ್ ಪಟ್ನಾಯಕ್ ಕೇಳಿಸಿಕೊಳ್ಳಬೇಕು. ನಮ್ಮ ರಾಜ್ಯದ ಕುದುರೆಮುಖ ಯೋಜನೆಯ ಬೇಂಬಲಿಗರೂ ಗಮನಿಸಬೇಕು. ನಮ್ಮ ದೇಶದ ಕಬ್ಬಿಣದ ಅದಿರಿನ ಒಟ್ಟು ನಿಕ್ಷೇಪ ೨೦ ಬಿಲಿಯನ್ ಟನ್ ಮಾತ್ರವಂತೆ; ಚೀನಾ, ಉಕ್ರೈನ್ ಮತ್ತು ಆಸ್ಟ್ರೇಲಿಯಾಗಳಲ್ಲಿ ಅದು ಕ್ರಮವಾಗಿ ೪೨, ೭೦ ಮತ್ತು ೬೨ ಬಿಲಿಯನ್ ಟನ್ ಎನ್ನಲಾಗಿದೆ. ಹೆಚ್ಚು ಇರುವವರಿಗಿಂತಲೂ ಕಡಿಮೆ ಇರುವವರ ಮೂರ್ಖ ಧಾರಾಳತನದಿಂದ ನಮ್ಮ ಆರ್ಥಿಕತೆ ಸೊರಗಿಹೋಗುತ್ತಿದೆ; ಅದನ್ನೇ ಆರ್ಥಿಕ ಅಭಿವೃದ್ಧಿಯೆಂದು ಹೇಳುವ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಜನದ್ರೋಹಿಗಳಲ್ಲದೆ ಬೇರೇನೂ ಅಲ್ಲ. ಒರಿಸ್ಸಾದಲ್ಲಿ ಬಾಕ್ಸೈಟನ್ನು ರಫ್ತು ಮಾಡುವ ಯೋಜನೆಯೊಂದು ಪೂರ್ತಿಯಾಗಿ ವಿದೇಶಿ ಬಂಡವಾಳದ ಕೈಲಿದೆ; ಅದನ್ನು ಗುಡ್ಡಗಾಡಿನ ಜನ ವಿರೋಧಿಸಿದಾಗ, ಆ ವಿರೋಧವನ್ನು ಹೇಗೆ ಹತ್ತಿಕ್ಕಬೇಕೆಂದು ಸರ್ಕಾರವು ಆ ಅಯೋಗ್ಯ ಕಂಪನಿಯನ್ನೇ ಕೇಳಿತು! ವಿರೋಧಿಗಳನ್ನು ಚೆನ್ನಾಗಿ ಬಡಿದುಹಾಕಬೇಕೆಂದು ಕಂಪನಿ ಸಲಹೆ ನೀಡಿತು. ಮುತ್ತುರಾಮನ್‌ಗೆ ಉಂಟಾಗಿರುವ ಜ್ಞಾನೋದಯ ಬೇರೆ ಉದ್ದಿಮೆದಾರರಿಗೆ, ಮನಮೋಹನ್ ಸಿಂಗ್ - ಅಹ್ಲುವಾಲಿಯಾ - ನವೀನ್ ಪಟ್ನಾಯಕ್‌ಗಳಿಗೆ ದೊರಕುವಂತೆ ಮಾಡಲು ಜನತೆಯು ಚಾಟಿ ಹಿಡಿದು ಪಾಠ ಕಲಿಸಬೇಕು.

ವೆನಿಜ್ಯೂಲಾದ ಅಧ್ಯಕ್ಷ ಶವೇಜ್‌ನನ್ನು ಕೊಲ್ಲಬೇಕೆಂದು ಜೀಸಸ್ ಕ್ರಿಸ್ತನ ಅಪರಾವತಾರವೆನ್ನಲಾದ ಯಾವನೋ ದುರುಳ ಪಾದ್ರಿಯೊಬ್ಬ ಅಮೆರಿಕಾದ ಸರ್ಕಾರಕ್ಕೆ ಸಲಹೆ ನೀಡಿದ್ದಾನೆ! ಜೀಸಸ್‌ನ ಜನ್ಮ ಜಾಲಾಡಲು ಇಂತಹ ಪಾದ್ರಿಗಳು ಸಾವಿರಾರು ಸಂಖ್ಯೆಯಲ್ಲಿದ್ದಾರೆ. ಅಂತಹವರ ಸಲಹೆ ಇಲ್ಲದೆಯೂ ಅಮೆರಿಕಾ ಸರ್ಕಾರ ಶವೇಜ್‌ನನ್ನು ಕೊಲ್ಲಲು ಯೋಜನೆಗಳನ್ನು

೨೧ನೇ ಪುಟಕ್ಕೆ




ಸಂಪುಟ-೭ ಸಂಚಿಕೆ-೩ ಅಕ್ಟೋಬರ್ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com

**ಸಂಪಾದಕೀಯ**

# ವೃತ್ತಿಪರ ಶಿಕ್ಷಣ : ತೀರ್ಪು ತಂದ ಬಿಕ್ಕಟ್ಟು

ವೃತ್ತಿಪರ ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ಕುರಿತ ಇತ್ತೀಚಿನ ಸರ್ವೋಚ್ಚ ನ್ಯಾಯಾಲಯದ ತೀರ್ಪು ಕಳೆದ ಎರಡು ದಶಕಗಳ ತೀರ್ಮಾನಗಳನ್ನೆಲ್ಲಾ ಇಂದು ಸಂವಿಧಾನಬಾಹಿರವಾಗಿಸಿಬಿಟ್ಟಿದೆ. ಈ ತೀರ್ಪಿನಲ್ಲಿ ಮುಖ್ಯವಾದ ವಿಷಯ ಸರ್ಕಾರದಿಂದ ಅನುದಾನ ಪಡೆಯದ ವೃತ್ತಿ ಶಿಕ್ಷಣ ಸಂಸ್ಥೆಗಳಿಗೆ ಸಂಬಂಧಿಸಿದ್ದು. ಸಹಾಯ ಅಂದರೇನು ಎಂಬ ಪ್ರಶ್ನೆಗೆ ಉತ್ತರ ಬೇಕು. ಒಂದು ಶಿಕ್ಷಣ ಸಂಸ್ಥೆಗೆ ಅದು ಸಾಮಾಜಿಕ ಸೇವೆ ಮಾಡುತ್ತಿದೆ ಎಂಬ ಕಾರಣದಿಂದಾಗಿ, ಸರ್ಕಾರ ಭೂಮಿಯನ್ನು ವರ್ಷಕ್ಕೆ ಒಂದು ರೂಪಾಯಿ ದೇಣಿಗೆಯ ಮೇಲೆ ನೀಡುವುದೋ, ಭೂ ಸ್ವಾಧೀನ ಕಾಯ್ದೆಯ ಮೇರೆಗೆ ಭೂಸ್ವಾಧೀನ ಮಾಡಿಕೊಡುವುದೋ ಅನುದಾನವೆನಿಸುತ್ತದೋ ಇಲ್ಲವೋ ? ಈಗಾಗಲೇ ಸಹಾಯ ಪಡೆಯುತ್ತಿರುವ ಸಂಸ್ಥೆಗಳೂ ಇನ್ನು ಮುಂದೆ ಸಹಾಯವೇ ಬೇಡವೆಂದರೆ ಏನಾಗುತ್ತದೆ ? ಸರ್ಕಾರ ಈ ಸಂಸ್ಥೆಗಳಿಗೆ ಮನ್ನಣೆ ನೀಡುವಾಗ ಯಾವುದೇ ಕರಾರುಗಳನ್ನು ವಿಧಿಸುವುದು ಈ ತೀರ್ಪಿನಿಂದಾಗಿ ಸಾಧ್ಯವಾಗದೇ ಹೋಗಬಹುದು. ವೃತ್ತಿಪರ ಶಿಕ್ಷಣ ಪ್ರವೇಶವೆಂಬುದು ವಿದ್ಯಾರ್ಥಿಯ ಮುಂದಿನ ಜೀವನದಲ್ಲಿ ಸಮಾನತೆಗೆ ಅವಕಾಶ ನೀಡುವ ಬಾಗಿಲು ತೆರೆಯುವ ಸ್ವರೂಪದ್ದು. ಈಗ ಈ ತೀರ್ಮಾನದನ್ವಯ, ಬಹುತೇಕ ಶಿಕ್ಷಣಸಂಸ್ಥೆಗಳಲ್ಲಿ ಶೋಷಿತರಿಗೆ ಯಾವುದೇ ಮೀಸಲಾತಿಗೆ ಅವಕಾಶವಿಲ್ಲವಾಗಿ, ಅವರ ಭವಿಷ್ಯಕ್ಕೆ ಕೊಡಲಿಪೆಟ್ಟು ಬಿದ್ದಿದೆ.

ಬಾಲ್ಕೊ ಕಂಪನಿಯ ಖಾಸಗೀಕರಣ ಪ್ರಶ್ನಿಸಿದ ಮೊಕದ್ದಮೆಯನ್ನು ವಿಶ್ಲೇಷಿಸುತ್ತಾ ಸರ್ವೋಚ್ಚ ನ್ಯಾಯಾಲಯ ಅದು ವಾಣಿಜ್ಯೋದ್ಯಮ ನೀತಿಯ ವಿಷಯ, ಪ್ರಸಕ್ತ ಖಾಸಗೀಕರಣ ನೀತಿಯ ಸನ್ನಿವೇಶದಲ್ಲಿ, ಅಂಥ ನೀತಿ ನಿರೂಪಣೆಯ ವಿಷಯದಲ್ಲಿ ನ್ಯಾಯಾಲಯ ತಲೆಹಾಕುವುದಿಲ್ಲ ಎಂದಿತ್ತು. ಹಾಗಿದ್ದರೆ ಇಂದು ವೃತ್ತಿಪರ ಶಿಕ್ಷಣವು ಉದ್ಯಮವಾಗಿ, ಅದರ ಬಗ್ಗೆ ನೀತಿ ನಿರೂಪಣೆ ಹೇಗೆ ನ್ಯಾಯಾಸ್ಥಾನದ ವಿಷಯವಾಗುತ್ತದೆ ? ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಗಳೂ ಸರ್ಕಾರವೂ ಅನೇಕ ವರ್ಷಗಳ ಚರ್ಚೆಯ, ಏಳು-ಬೀಳುಗಳ ಅನುಭವದ ಹಿನ್ನೆಲೆಯಲ್ಲಿ ಈ ವರ್ಷ ಶೇ. ೬೫, ಶೇ. ೫೦ ಎಂಬ ಒಂದಿಷ್ಟು ಸಮಾಧಾನಕರವಾದ ಒಡಂಬಡಿಕೆಗೆ ಬಂದಿದ್ದವು. ಇದನ್ನು ಈ ತೀರ್ಪು ಬುಡಮೇಲು ಮಾಡಿದೆ. ಬಿಕ್ಕಟ್ಟಿನ ಪರಿಹಾರಕ್ಕೆಂದು ನ್ಯಾಯಾಲಯದ ಮೊರೆಹೋದರೆ ಅದರ ತೀರ್ಪು ಮತ್ತೂ ತೀವ್ರ ಬಿಕ್ಕಟ್ಟನ್ನು ಉಂಟುಮಾಡುವ ವಿಪರ್ಯಾಸ ಉಂಟಾಗಿದೆ.

ಉದ್ಭವಿಸಿರುವ ಬಿಕ್ಕಟ್ಟಿಗೆ ಕೇವಲ ನ್ಯಾಯಾಲಯ ಕಾರಣವೆಂದು ಹೇಳಿದರೆ ಅದು ತಪ್ಪಾಗುತ್ತದೆ. ವರ್ಗಾಧಾರಿತ ಸಮಾಜದಲ್ಲಿ ನ್ಯಾಯಾಲಯವೂ ಪ್ರಭಾವಿವರ್ಗದ ಹಿತಾಸಕ್ತಿಯನ್ನು ಪ್ರತಿನಿಧಿಸುವುದು ವಿಚಿತ್ರವೇನಲ್ಲ. ವೃತ್ತಿಪರಶಿಕ್ಷಣ ಕ್ಷೇತ್ರದ ನಿಯಂತ್ರಣ ಕುರಿತ ಕೇಂದ್ರ ಕರಡು ಶಾಸನದಲ್ಲೂ ಖಾಸಗೀ ಪರವಾಗಿ, ಇಂದಿನ ನ್ಯಾಯಾಲಯದ ತೀರ್ಮಾನಕ್ಕಿಂತ ಮಿಗಿಲಾದ ಪ್ರತಿಗಾಮಿ ಧೋರಣೆ ಅಡಕವಾಗಿದ್ದದ್ದು ಈಗ ಬಹಿರಂಗವಾಗಿದೆ. ಸೋಗಲಾಡಿ ರಾಜಕೀಯ ಪಕ್ಷಗಳು ಈಗ ಎಲ್ಲ ಸಮಸ್ಯೆಗೂ ನ್ಯಾಯಾಲಯ ಕಾರಣವೆಂಬಂತೆ ಮಾತನಾಡಿ ತಮ್ಮ ಇಬ್ಬಂದಿತನವನ್ನು ಹೊರಗೆಡಹಿವೆ. ಹಲವಾರು ವರ್ಷಗಳಿಂದ ಚರ್ಚಿತವಾಗುತ್ತಿರುವ, ದಲಿತ ಕ್ರಿಶ್ಚಿಯನ್ನರಿಗೆ ಮೀಸಲಾತಿ ಹಕ್ಕಿನ ಸಂಬಂಧ ಶಾಸನ ತರಲು ಕಾಲೆಳೆಯುತ್ತ, ಅದರ ಬಗ್ಗೆ ಉದ್ದುದ್ದ ಭಾಷಣ ಮಾಡುತ್ತಾ, ಇಂದು ನ್ಯಾಯಾಲಯ ಮತ್ತಷ್ಟು ಸಮಯ ನೀಡದಿದ್ದರೆ, ಆಗುವ ಪರಿಣಾಮಕ್ಕೆ ನ್ಯಾಯಾಲಯವೂ ಹೊಣೆಯಾಗಬೇಕಾದೀತು ಎಂಬ ಇಂಗಿತ ಬರುವಂತೆ ಸರ್ಕಾರದ ವಕೀಲರು ಕುಹಕ ಆಡಿ, 'ಕಾರ್ಯಕಾರಿಣಿ ಎಲ್ಲೆ ಮೀರಿದರೆ ಅದರ ರೆಕ್ಕೆ ಕಡಿಯುತ್ತೇವೆ' ಎಂದು ನ್ಯಾಯಪೀಠದಿಂದ ಛೀಮಾರಿ ಹಾಕಿಸಿಕೊಂಡಿದ್ದು ಅದರದೇ ರೀತಿಯಲ್ಲಿ ಸಮರ್ಥನೀಯ. ಪದೇ ಪದೇ, ನ್ಯಾಯಾಲಯ ವೃತ್ತಿಪರ ಶಿಕ್ಷಣದ ವಿಷಯ ಸೂಕ್ತವಾದ ಶಾಸನವನ್ನು ಕೇಂದ್ರ ಮಾಡಬೇಕೆಂದು ಸ್ಪಷ್ಟಪಡಿಸಿದ್ದರೂ, ಕನಿಷ್ಠ ಕಾರ್ಯಕ್ರಮದಲ್ಲಿ ಈ ವಿಷಯ ಸೇರಿ ೧೮ ತಿಂಗಳುಗಳಾಗುತ್ತಾ ಬಂದರೂ, ಯುಪಿಎ ಸರ್ಕಾರಕ್ಕೆ ಇದು ಆದ್ಯತೆಯ ವಿಷಯವಾಗಲಿಲ್ಲ. ಕಳೆದ ಎರಡು ತಿಂಗಳು ನೂರಾರು ನಾಗರಿಕ ವಿಮಾನಗಳನ್ನು ಕೊಳ್ಳಲು ಸರ್ಕಾರ ಸಹಸ್ರ ಸಹಸ್ರ ಕೋಟಿ ರೂ.ಗಳನ್ನು ವೆಚ್ಚ ಮಾಡಲು ಮುಂದಾಗಿದೆ. ಈ ಕ್ಷೇತ್ರವನ್ನು ಖಾಸಗೀಕ್ಷೇತ್ರಕ್ಕೆ ಮುಕ್ತಗೊಳಿಸಿದ ಮೇಲೆ, ಇದಕ್ಕೆ ಬೇಕಾದ ಬಂಡವಾಳ ಖಾಸಗಿ ಕ್ಷೇತ್ರದಿಂದ ತಾನೇ ಬರಬೇಕಾಗಿತ್ತು ? ಈ ವೆಚ್ಚದ ಒಂದು ಅಲ್ಪ ಭಾಗದಿಂದ ಬೇಕಾದಷ್ಟು ಸರ್ಕಾರಿ ವೃತ್ತಿಪರ ಕಾಲೇಜುಗಳನ್ನು ತೆರೆಯಬಹುದಿತ್ತಲ್ಲ!

ಪ್ರಸ್ತುತ ನ್ಯಾಯಾಲಯದ ತೀರ್ಪು ಖಾಸಗಿ ಸಂಸ್ಥೆಗಳಿಗೆ ಅವರು ನಿರೀಕ್ಷಿಸದ ಒಂದು ಕ್ಷಿಪ್ರಕ್ರಾಂತಿಯ ವಿಜಯವನ್ನು ತಂದುಕೊಟ್ಟಂತಾಗಿದೆ. ಇದರಂತೆ ಶಿಕ್ಷಣವನ್ನು ನೀಡುವುದೂ ಒಂದು ಉದ್ಯಮ. ಅದು ಮೂಲಭೂತ ಹಕ್ಕಿನ ಆಸ್ತಿಯ ಸ್ವರೂಪದ್ದು. ಅದನ್ನು ಲಾಭ-ನಷ್ಟದ ನೀತಿಯಲ್ಲಿ ನಡೆಸಬೇಕು ಎನ್ನುವುದು ಮುಖ್ಯ ಸಂಗತಿ. ಮತ್ತೊಂದು ಮುಖ್ಯ ಸಂಗತಿ ಸರ್ಕಾರದ 'ಅನುದಾನ' ಪಡೆಯದ ಸಂಸ್ಥೆಗಳಲ್ಲಿ ಸರ್ಕಾರ ಮೀಸಲಾತಿಯ ನೀತಿಯನ್ನು ಹೇರಲಾಗದು ಎಂಬುದು. ಈ ಎರಡೂ ಅಭಿಪ್ರಾಯಗಳನ್ನು ಹಾಲಿ ಇರುವ ಕಾನೂನಿನನ್ವಯ ವಿಶ್ಲೇಷಣೆ ಎಂದು ಹೇಳದೆ ಇವು ಸಂವಿಧಾನದತ್ತ ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದ್ದು ಎಂದು ಹೇಳಿದಂತಿದೆ. ಅಂದರೆ ಮುಂದೆ ಈ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುವ ಯಾವುದೇ ಶಾಸನ ಮಾಡಲಾಗದು ಎಂದೂ ಹೇಳಿದಂತಾಗುತ್ತದೆ. ನಿವೃತ್ತ ಅಟಾರ್ನಿ ಜನರಲ್‌ರವರೊಬ್ಬರು ಮೀಸಲಾತಿ ನೀಡುವ ಯಾವುದೇ ಹೊಸ ಕಾನೂನನ್ನೂ, ರಾಜ್ಯಾಂಗದ ಒಂಭತ್ತನೇ ಷೆಡ್ಯೂಲಿನಲ್ಲಿ ಸೇರಿಸಿದರೂ, ಈ ಮೂಲಭೂತ ಹಕ್ಕುಗಳ ಆಧಾರದ ಮೇಲೆ ನ್ಯಾಯಾಲಯ ವಿಮರ್ಶಿಸಿ ತಳ್ಳಿಹಾಕಲು ಸ್ವತಂತ್ರ ಎಂದು ಹೇಳಿರುವುದು ಈ ತೀರ್ಮಾನದ ಗಂಭೀರ ಸ್ವರೂಪವನ್ನು ಬಿಚ್ಚಿಡುತ್ತದೆ. ಅಂದರೆ ಸಂವಿಧಾನಕ್ಕೇ ತಿದ್ದುಪಡಿಯಾಗಬೇಕು ಎಂದಂತಾಗುತ್ತದೆ. ಈಗಾಗಲೇ ಇರುವ ಮತ್ತೆ ಕೆಲವು ತೀರ್ಮಾನಗಳನ್ವಯ, ನಮ್ಮ ರಾಜ್ಯಾಂಗಕ್ಕೊಂದು ಮೂಲಭೂತ ರಚನೆಯಿದ್ದು ಆ ರಚನೆಯನ್ನು ಪುನಃ ವಿಮರ್ಶಿಸುವ, ಬದಲಾಯಿಸುವ ಯಾವುದೇ ರಾಜ್ಯಾಂಗ ತಿದ್ದುಪಡಿಯೂ ಊರ್ಜಿತವಾಗುವುದಿಲ್ಲ. ಈ ಮೂಲಭೂತ ರಚನೆಯಲ್ಲಿ ಆಸ್ತಿಯ ಹಕ್ಕು ಸೇರಿದ್ದು ಅದನ್ನು ನಿಯಂತ್ರಿಸಿ, ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾತಿಯನ್ನು ಶಾಸನಗಳ ಮೂಲಕ ಬಲಾತ್ಕರಿಸುವುದು ಸಾಧ್ಯವೇ ಇಲ್ಲದ ಮಾತು ಎಂದಂತಾಗುತ್ತದೆ. ನಮ್ಮ ಸಂವಿಧಾನದಲ್ಲಿ ಲೋಕಸಭೆಗೆ ಸಾಧ್ಯವಾಗದ್ದನ್ನು ಜನಮತ ಸಂಗ್ರಹದ ಮೂಲಕ ಮಾಡಿಕೊಳ್ಳಲು ಅವಕಾಶವಿಲ್ಲ. ಶಿಕ್ಷಣ ಕ್ಷೇತ್ರಕ್ಕೆ ಎಂದು ನೀಡಿದ ಈ ತೀರ್ಮಾನ, ಖಾಸಗಿ ಉದ್ಯಮಗಳಲ್ಲಿ ಹಿಂದುಳಿದವರಿಗೆ ಮೀಸಲಾತಿಯನ್ನು ಒತ್ತಾಯಮಾಡಲೂ ಅಡ್ಡಿಯಾಗುತ್ತದೆಯಲ್ಲವೆ? ಹೀಗಾದರೆ ರಾಜ್ಯಾಂಗದ ನಿರ್ದೇಶಕ ತತ್ವಗಳನ್ನು ಕಾರ್ಯಗತಗೊಳಿಸುವುದು ಹೇಗೆ ಸಾಧ್ಯ? ಸಾರ್ವಜನಿಕ ಕ್ಷೇತ್ರವನ್ನು ಕಡೆಗಣಿಸುವ ಜಾಗತೀಕರಣ ಉದಾರೀಕರಣ ಖಾಸಗೀಕರಣ ಕ್ರಿಯೆ ಭರಾಟೆಯಿಂದ ಸಾಗುತ್ತಿರುವಾಗ ಅದರ ಚಕ್ರಕ್ಕೆ ಸಿಕ್ಕಿ ನುಚ್ಚುನುರಿಯಾಗುತ್ತಿರುವ ವ್ಯವಸ್ಥೆಯ ಅಂಚಿನಲ್ಲಿರುವವರಿಗೆ ಬೆಳೆಯಲು ಮುಕ್ತ ಅವಕಾಶ ದೊರಕದೆ ಅವರು ಸೊರಗಬೇಕೆ ? ಯಾರಿಗೆ ಪೈಪೋಟಿಯಲ್ಲಿ

ಭಾಗವಹಿಸುವ ಸಾಮರ್ಥ್ಯದ ಬಲಿತ ರೆಕ್ಕೆ ಇನ್ನೂ ದಕ್ಕಿಲ್ಲವೋ ಅವರಿಗೆ ಬದುಕುವ ಹಕ್ಕನ್ನು ನಿರಾಕರಿಸಿದಂತಾಗುವುದಲ್ಲವೆ ? ಬಹುಜನರು ತಮ್ಮ ಮಾನವೀಯ ಹಕ್ಕುಗಳನ್ನು ಅನುಭವಿಸಲು ಸಹಾಯವಾಗುವಂತೆ ಕೆಲವರ ಆಸ್ತಿಯ ಹಕ್ಕನ್ನು ಒಂದಿಷ್ಟು ಮೊಟಕು ಮಾಡಬೇಕಾಗಿ ಬಂದರೆ ಅದು ರಾಜ್ಯಾಂಗ ವಿರೋಧಿ ಕ್ರಮವೆಂದರೆ ಹೇಗೆ ? ಒಟ್ಟಿನಲ್ಲಿ ಈ ತೀರ್ಪು ಅನೇಕ ಅಸಮಂಜಸತೆಗಳನ್ನು ಮೈಗೂಡಿಸಿಕೊಂಡು ವರ್ಗಾಧಾರಿತ ಸಮಾಜದ ನ್ಯಾಯದ ನೆಲೆಯಲ್ಲೇ ವಿಫಲವಾಗುತ್ತದೆ. ವಾಸ್ತವದಲ್ಲಿ ಶೋಷಿತರ ರೆಕ್ಕೆಯನ್ನು ಮೊಳಕೆಯಲ್ಲೇ ಹರಿದಂತಾಗಿದೆ.

ನ್ಯಾಯ ದೊರಕದೆ ನವೆಯುತ್ತಿರುವ ಶೋಷಿತರ ಪರಿಸ್ಥಿತಿಯ ಮೂಲಭೂತ ಪರಿವರ್ತನೆ ಇಂದಿನ ನ್ಯಾಯಾಂಗ ವ್ಯವಸ್ಥೆಯ ಮೊರೆಹೋಗುವುದರಿಂದ ಸಾಧ್ಯವಾಗುವುದಿಲ್ಲ. ನ್ಯಾಯಾಲಯ ಏನಿದ್ದರೂ ತನ್ನನ್ನು ಸೃಷ್ಟಿಸಿದ ಸಂವಿಧಾನದ ಕೈದಿ. ಹಾಗೂ ಅದು ಯಥಾಸ್ಥಿತಿವಾದಿ. ಇದನ್ನರಿತು, ಭ್ರಮನಿರಸನಗೊಂಡು, ಪ್ರಜ್ಞಾಪೂರ್ವಕವಾದ, ನಿಶ್ಚಿತವಾದ ಉದ್ದೇಶದಿಂದ ಸಂಘಟಿಸಿದ ಜನಾಂದೋಲನಗಳು ಮಾತ್ರ ನಮಗೆ ಬೇಕಾದ ಹೊಸ ಸಂವಿಧಾನವನ್ನು ಘಟಿಸಿಕೊಡಬಲ್ಲವು.

## ಇರಾನಿನ ನಾಶಕ್ಕೆ ಭಾರತದ ಸಹಯೋಗವೆ ?

**ಈ**ವರೆಗಿನ ಪ್ರಧಾನಿ ಮಂತ್ರಿಗಳಲ್ಲೆಲ್ಲಾ ಮನಮೋಹನ ಸಿಂಗ್ ಅತ್ಯಂತ ಬಲಹೀನರೆಂದು ಅದ್ವಾನಿಯವರು ಟೀಕೆ ಮಾಡಿದ್ದಾರೆ. ತಾವು ಲೋಹಪುರುಷರೆಂಬ ಬಿರುದಾಂಕಿತರಾದ್ದರಿಂದ ಹೀಗೆ ಮೂದಲಿಸಿದ್ದಾರೇನೋ ಎನಿಸುತ್ತದೆ. ನಿಜಕ್ಕೂ ನಮಗೆ ಬೇಕಾಗಿರುವುದು ಲೋಹಪುರುಷರೂ ಅಲ್ಲ, ಕಾಷ್ಠ ಪುರುಷರೂ ಅಲ್ಲ; ದೇಶದ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವವನ್ನು ಗೌರವಿಸುವವರು ಮತ್ತು ರಕ್ಷಿಸುವವರು ಬೇಕು. ಲ್ಯಾಂಗ್ಲೆಯ ಅಮೆರಿಕಾದ ಗೂಢಚಾರ ಸಂಸ್ಥೆ (ಸಿ.ಐ.ಎ.)ಗೆ ಖುದ್ದಾಗಿ ಭೇಟಿ ನೀಡಿದ್ದ ಅದ್ವಾನಿಯವರು ಭಾರತದ ಸ್ವಾತಂತ್ರ್ಯ-ಸಾರ್ವಭೌಮತ್ವವನ್ನು ರಕ್ಷಿಸಿಯಾರೆಂಬ ನಿರೀಕ್ಷೆ ಇಲ್ಲ. ಮನಮೋಹನ ಸಿಂಗರು ಸಣ್ಣಧ್ವನಿಯಲ್ಲಿ ಸಂಭಾವಿತನಂತೆ ಮಾತನಾಡುತ್ತಾ ನಮ್ಮ ದೇಶವನ್ನು ಅಮೆರಿಕಾದ ಭಂಟನನ್ನಾಗಿ ಮಾಡುವ ತರಾತುರಿಯಲ್ಲಿದ್ದಾರೆ. ವಿಶ್ವಸಂಸ್ಥೆಯಲ್ಲಿ ಅವರು ಮಾಡಿದ ಭಾಷಣ ಹಾಗೂ ನಂತರ ಅಮೆರಿಕಾದ ರಾಜಕೀಯ ನಾಯಕರೊಂದಿಗೆ ನಡೆಸಿದ ಸಂವಾದ ಇದನ್ನು ಖಚಿತಪಡಿಸುವಂತಿದೆ. ಹಿಂದೆ ಜಸವಂತ ಸಿಂಗ್ ನಮ್ಮ ದೇಶದ ಆಂತರಿಕ ರಾಜಕೀಯವನ್ನು ಬೇರೆ ದೇಶಗಳ ಅಧಿಕಾರಿಗಳ ಜೊತೆ ಚರ್ಚಿಸುತ್ತಿದ್ದರೆಂಬುದು ಪರಮಾಣು ಒಪ್ಪಂದವನ್ನು ವಾಜಪೇಯಿಯವರು ವಿರೋಧಿಸಿರುವ ಬಗ್ಗೆ ಬುಷ್ ಜೊತೆ ಪ್ರಸ್ತಾವಿಸುವುದಕ್ಕೆ ಸಮರ್ಥನೆ ನೀಡುವುದಿಲ್ಲ. ನಾಗರಿಕ ಸೌಲಭ್ಯಗಳ ವಿಸ್ತರಣೆಗೆ ಸಹ ಇರಾನ್ ಪರಮಾಣು ಸಂಶೋಧನೆಯಲ್ಲಿ ತೊಡಗಲೇಕೂಡದೆಂದು ಅಮೆರಿಕಾ ಹೇಳುತ್ತಿದೆ. ಈ ಗರ್ಜನೆಯ ಇರಾಕಿನ ಧ್ವಂಸಕ್ಕೆ ಮುಂಚಿನ ಅಮೆರಿಕಾದ ಕಿರುಚಾಟವನ್ನು ನೆನಪಿಸುತ್ತದೆ. ಈಗಾಗಲೇ ಅಣ್ವಸ್ತ್ರದ ತಯಾರಿಗೆ ಸಿದ್ಧತೆ ನಡೆದಿದೆಯೆಂದು ಇರಾನಿನ ವಿರುದ್ಧ ಆಪಾದನೆ ಹೊರಿಸಬೇಕೆಂಬ ಒತ್ತಾಯವು ಅಂತರರಾಷ್ಟ್ರೀಯ ಪರಮಾಣು ಶಕ್ತಿ ಆಯೋಗದ ಮೇಲೆ ಹೆಚ್ಚುತ್ತಿದೆ. ಈ ಆಯೋಗದಲ್ಲಿ ಭಾರತವು ಸದಸ್ಯರಾಷ್ಟ್ರ ಮತ್ತು ಅದರ ವರದಿಯು ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಹೋದರೆ ಸಾಕು, ಅಮೆರಿಕಾ ಎಲ್ಲರ ತಲೆ ಮತ್ತು ಕೈ ತಿರುಚಿ ಇರಾನಿನ ಆಕ್ರಮಣಕ್ಕೆ ಭೂಮಿಕೆ ತಯಾರಿಸಿಕೊಳ್ಳುತ್ತದೆ. ಹೀಗಿರುವಾಗ ಆ ದೇಶವನ್ನು ವಿನಾಶಕ್ಕೊಯ್ಯಲು ಭಾರತವು ಶಾಮೀಲಾಗಬೇಕೆ ಎಂಬುದು ಮಹತ್ವದ ಪ್ರಶ್ನೆ. ಒಂದು ಕಡೆ ಇರಾನಿನಿಂದ ಪಾಕಿಸ್ತಾನದ ಮುಖಾಂತರ ಭಾರತಕ್ಕೆ ತೈಲ ಕೊಳವೆಯ ನಿರ್ಮಾಣಕ್ಕೆ ಅಡ್ಡಿಮಾಡುವ ಅಮೆರಿಕಾ ಇನ್ನೊಂದು ಕಡೆ ಭಾರತಕ್ಕೆ ಭದ್ರತಾ ಮಂಡಲಿಯಲ್ಲಿ ಖಾಯಂ ಸದಸ್ಯತ್ವದ ಪ್ರಸ್ತಾವಕ್ಕೆ ಬೆಂಬಲ ನೀಡುವುದಾಗಿ ಘೋಷಿಸಿ ಮಾರ್ದವ ಮನಮೋಹನರನ್ನು ಭಾರತಕ್ಕೆ ಸಲ್ಲದ ನೀತಿಗೆ ಬದ್ಧರನ್ನಾಗಿಸುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಭಾರತದ ಉಪಖಂಡದ ಸನಿಹದಲ್ಲಿ ಅಣ್ವಸ್ತ್ರ ಹೊಂದಿರುವ ಇನ್ನೊಂದು ದೇಶ ಇರುವುದು ಭಾರತಕ್ಕೆ ಒಪ್ಪಿಗೆ ಇಲ್ಲವೆಂದು ಮನಮೋಹನ್‌ಸಿಂಗ್ ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿಗೆ ತಿಳಿಸಿದ್ದಾರೆ. ಅಂದರೆ, ಇರಾನ್ ಈಗಾಗಲೇ ಅಣ್ವಸ್ತ್ರ ಹೊಂದಲು ಹೊರಟಿದೆಯೆಂದು ಇದರರ್ಥವೆ ? ಋಗ್ವೇದವನ್ನು ರಚಿಸಿದ ಸಂಸ್ಕೃತಿಯವರಿಗೆ ಅಣ್ವಸ್ತ್ರಬೇಕು, ಆದರೆ ಅದೇ ಕಾಲಘಟ್ಟದ ಅವೆಸ್ತಾ ನೀಡಿದವರಿಗೆ ಅದು ಬೇಡವೆನ್ನಲು ನಮಗೇನು ನೈತಿಕ ಹಕ್ಕಿದೆ? ನಾವೂ ಅದನ್ನು ಮಾಡದಿರಬೇಕಾಗಿತ್ತೆನ್ನುವುದು ಹೆಚ್ಚು ಅರ್ಥವತ್ತಾದ್ದು. ತಾನು ಎಲ್ಲ ಪ್ರಾಬಲ್ಯವನ್ನೂ ಹೊಂದಿ ಇತರರು ಬಲಹೀನರಾಗಿರಬೇಕೆಂಬ ಅಮೆರಿಕಾದ ಹುನ್ನಾರಕ್ಕೆ ನಮ್ಮ ಉತ್ತರ ಸಂಪೂರ್ಣ ಅಣ್ವಸ್ತ್ರ ನಿಶ್ಶಸ್ತ್ರೀಕರಣಕ್ಕೆ ಆಗ್ರಹವೇ ವಿನಾ ಇರಾನನ್ನು ನಿರ್ಬಂಧಿಸುವುದಲ್ಲ. ಭಾರತ-ಪಾಕಿಸ್ತಾನ-ಚೀಣಾ ಅಣ್ವಸ್ತ್ರಗಳನ್ನು ಹೊಂದಿದ್ದರೆ ಇರಾನ್ ಏಕೆ ಹೊಂದಬಾರದೆಂಬ ಪ್ರಶ್ನೆಗೆ ಸಮಂಜಸವಾದ ಉತ್ತರವಿಲ್ಲ. ಅಮೆರಿಕಾ ಬೇಡವೆನ್ನುತ್ತದೆ, ಆದ್ದರಿಂದ ಬೇಡ, ಎನ್ನುವುದು ಭಾರತ ನೀಡಬಹುದಾದ ಉತ್ತರವಲ್ಲ. ಆದಾಗ್ಯೂ, ಅಣ್ವಸ್ತ್ರ ತಯಾರಿಸದೆ ನಾಗರಿಕ ಸೌಲಭ್ಯಗಳ ವಿಸ್ತರಣೆಗಾಗಿ ಇರಾನಿನ ಸಂಶೋಧನೆಯನ್ನು ನಿಗ್ರಹಿಸಲು ಭಾರತವು ಪುಂಡುಗಾರಿಕೆಯ ತಂತ್ರವನ್ನು ಅನುಸರಿಸುವುದು ಸರ್ವಥಾ ಯೋಗ್ಯವಲ್ಲ. ಅಣ್ವಸ್ತ್ರವನ್ನು ತಯಾರಿಸಕೂಡದೆಂಬ ನಿರ್ಬಂಧವನ್ನು ಮಾನ್ಯಮಾಡಲು ಇರಾನಿಗೆ ಬಲವಾದ ಸೂಚನೆಯನ್ನು ಭಾರತ ನೀಡಬಲ್ಲದು, ನೀಡಬೇಕು. ಇರಾನಿನ ಪ್ರಸಕ್ತ ರಾಜಕೀಯ ಸನ್ನಿವೇಶವು ಅಪಥ್ಯಗಳ ಆಗರ, ನಿಜ; ಆದರೆ ಅಮೆರಿಕಾದೊಡನೆ ಕೈಜೋಡಿಸಿ ಇರಾನಿನಲ್ಲಿ ರಕ್ತಪಾತ ಮಾಡಲು ಭಾರತವನ್ನು ಅನಾಗರಿಕತೆಯ ಪ್ರಪಾತಕ್ಕೆ ತಳ್ಳಕೂಡದು. ಹಾಗೆ ತಳ್ಳಬಹುದಾದಂತಹ ಪ್ರಧಾನಿ ನಮಗೆ ಬೇಡ, ಅಂತಹ ರಾಜಕೀಯ ಬೇಡ, ಅಂತಹ ಪರಾಧೀನ ವಿದೇಶಾಂಗ ನೀತಿ ನಮಗೆ ಬೇಡ. ಭದ್ರತಾ ಮಂಡಲಿಯಲ್ಲಿ ಅಮೆರಿಕಾಕ್ಕೆ ಇರಾಕಿನ ಸಂಬಂಧದಲ್ಲಿ ಚೀಣಾ ಪ್ರತಿರೋಧ ಒಡ್ಡಲಿಲ್ಲ; ಈಗ ಇರಾನಿನ ಸರದಿ ಬಂದರೆ ಭಾರತವು ಬಾಯಿಮುಚ್ಚಿಕೊಂಡು ಅಮೆರಿಕಾ ಮಂಡಿಸುವ ನಿರ್ಣಯಗಳನ್ನು ಸ್ವಾಗತಿಸಬೇಕೇನು ? ಇರಾಕಿನಲ್ಲಿ ತೈಲವಿದ್ದಂತೆ ಇರಾನಿನಲ್ಲೂ ಇದೆ. ಇರಾಕಿನಲ್ಲಿ ''ನೂತನ ಪ್ರಜಾಪ್ರಭುತ್ವ''ದ ರುಚಿಯನ್ನು ಅಲ್ಲಿಯ ಜನತೆ ಸವಿಯುತ್ತಿರುವುದನ್ನು ನೋಡನೋಡುತ್ತಾ ಭಾರತವು ಇರಾನನ್ನು ಸ್ಮಶಾನ ಮಾಡಲು ಒಪ್ಪಿಗೆ ನೀಡುವುದು ಖಂಡನೀಯ. ಲೋಹಪುರುಷ ಅದ್ವಾನಿ ಅದಕ್ಕೆ ಏನು ಹೇಳಬಹುದೆಂಬುದು ಊಹೆಗೆ ನಿಲುಕದ ವಿಷಯವಲ್ಲ. ಎಡಪಕ್ಷಗಳ ಬೆಂಬಲದಿಂದ ಬದುಕಿರುವ ಕೇಂದ್ರದ ಸರ್ಕಾರವು ಹೀಗೆ ಪರಾಕ್ರಮಣ ನೀತಿಯನ್ನು ಅನುಸರಿಸಿದರೆ ಅದಕ್ಕಿಂತಲೂ ಘೋರವಾದ ಚಾರಿತ್ರಿಕ ವ್ಯಂಗ್ಯ ಬೇರೊಂದಿರಲಾರದು. ಅಂತರರಾಷ್ಟ್ರೀಯ ಪರಮಾಣು ಶಕ್ತಿ ಆಯೋಗದಲ್ಲಿ ಜವಾಬ್ದಾರಿಯುತ ತೀರ್ಮಾನವನ್ನು ಸ್ವತಂತ್ರವಾಗಿ ತೆಗೆದುಕೊಳ್ಳುವುದು ಭಾರತದ ಕರ್ತವ್ಯ. ಕ್ಷೀಣಧ್ವನಿಯ ಮನಮೋಹನರಿಗೆ ಇದನ್ನು ಗಡುಸಾಗಿಯೇ ತಿಳಿಸಿಕೊಡಬೇಕಾಗಿದೆ.






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೮೩೦೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಸೆಪ್ಟೆಂಬರ್ ಸಂಚಿಕೆ**

**ಕ**ಳೆದ ಜುಲೈ ತಿಂಗಳಲ್ಲಿ ನಮ್ಮ ಪ್ರಧಾನ ಮಂತ್ರಿಗಳು ಅಮೆರಿಕಾಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಭಾರತ ಮತ್ತು ಅಮೆರಿಕಾ ಅಣ್ವಸ್ತ್ರ ನೀತಿಗೆ ಸಂಬಂಧಿಸಿದ ಒಪ್ಪಂದ ಒಂದಕ್ಕೆ ಸಹಿ ಮಾಡಿದುವು. ಈ ಒಪ್ಪಂದದಿಂದ ಭಾರತಕ್ಕೆ ಲಾಭವಲ್ಲದೆ ಏನೂ ಪ್ರತಿಕೂಲ ಪರಿಣಾಮವಾಗದೆಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಆದರೆ ದುಷ್ಟ ಅಮೆರಿಕಾದ ಸ್ವಭಾವವನ್ನು ಬಲ್ಲ ವಿಚಾರವಂತರು ಇದರಿಂದ ಮುಂದೆ ನಮಗೆ ಹಾನಿ ಅಲ್ಲದೆ ಬೇರೇನೂ ಪ್ರಯೋಜನವಾಗದು, ನಮ್ಮ ಜುಟ್ಟನ್ನು ಅವರ ಕೈಯಲ್ಲಿ ಕೊಟ್ಟಂತಾಯಿತು ಎಂದು ಹೇಳುತ್ತಿದ್ದಾರೆ.

ತಾನು ಬಿಟ್ಟು ಬೇರೆ ಯಾವ ದೇಶವೂ ಅಭಿವೃದ್ಧಿ ಹೊಂದಿ ತಲೆ ಎತ್ತಿ ನಿಲ್ಲುವುದನ್ನು ಅಮೆರಿಕಾ ಎಂದೂ ಸಹಿಸದು. ಅವರ ಜನರೇ ಇಲ್ಲವೆಂದು ಹೇಳಿದರೂ ನಂಬದ ಶಕುನಿ ಬುಷ್ ಮಹಾಶಯ ಅಥವಾ ನಂಬಿದರೂ ಬೇಕೆಂದೇ ಅಪಾಯಕಾರಿ ಅಣ್ವಸ್ತ್ರಗಳಿವೆ ಎಂದು ಹೇಳಿ ಇರಾಕನ್ನು ಪುಡಿಗಟ್ಟಿದ. ಇಂದಿಗೂ ಅಲ್ಲಿ ಸಾವಿರಾರು ನಿರಪರಾಧಿ ಜನರು ಸಾಯುತ್ತಲೇ ಇದ್ದಾರೆ. ಲಾಡೆನಿನ ಬೇಟೆಗಾಗಿ ಇಡೀ ಅಫ್ಘಾನಿಸ್ತಾನವನ್ನು ಧ್ವಂಸ ಮಾಡಿದ.

ತನ್ನ ಪರಮ ಮಿತ್ರ ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರನ್ನೇ ತನ್ನ ದೇಶಕ್ಕೆ ಬಂದಾಗ ಸತ್ಕರಿಸದಷ್ಟು ನಮ್ಮ ಪ್ರಧಾನಿಗಳನ್ನು ಸತ್ಕರಿಸಿ, ಹೊಗಳಿ ತನ್ನ ಬೇಳೆಯನ್ನು ಬೇಯಿಸಿಕೊಂಡ ಅಮೆರಿಕಾದ ವಂಚನೆಯ ಧೋರಣೆಯನ್ನು, ಕಪಟನೀತಿಯನ್ನು ಸೆಪ್ಟೆಂಬರ್ ತಿಂಗಳ 'ಹೊಸತು' ಪತ್ರಿಕೆಯ ಸಂಪಾದಕೀಯದಲ್ಲಿ ಜಿ. ರಾಮಕೃಷ್ಣರು ಬಹಳ ಸಮರ್ಥವಾಗಿ ಪ್ರತಿಪಾದಿಸಿದ್ದಾರೆ. ಅವರಿಗೆ ಅಭಿನಂದನೆಗಳು ಸಲ್ಲಬೇಕು.

*ಬೆಂಗಳೂರು-೯೦* **ಎಂ. ವಿ. ಭಟ್**

'ಹೊಸತು' ಸಮಕಾಲೀನ ಸಂದರ್ಭದ ಸೈದ್ಧಾಂತಿಕ ಮತ್ತು ತಾತ್ವಿಕ ಬದ್ಧತೆಯೊಂದಿಗೆ ಗುರುತಿಸಿಕೊಂಡಿರುವ ಅಪರೂಪದ ಮಾಸ ಪತ್ರಿಕೆ. ತತ್ಕಾರಣವಾಗಿ ಗುಲಬರ್ಗಾದಲ್ಲಿ ನಾವು ಐವತ್ತು-ಅರುವತ್ತು ಜನರು ಪ್ರಗತಿಪರ ಆಲೋಚನೆಯುಳ್ಳವರು ಸಮಾನ ಸಮಾಜದ ಕನಸು ಕಟ್ಟಿಕೊಂಡಿರುವ ಗೆಳೆಯರು ಪತ್ರಿಕೆಯನ್ನು ತಪ್ಪದೇ ಅದು ಪ್ರಾರಂಭವಾದಾಗಿನಿಂದ ಓದುತ್ತಿದ್ದೇವೆ. ಪತ್ರಿಕೆಯ ನಡೆಯನ್ನು ಅದರ ಸೈದ್ಧಾಂತಿಕ ಬದ್ಧತೆಯನ್ನು ಕರಾರುವಾಕ್ಕಾಗಿ ಗಮನಿಸುತ್ತಿದ್ದೇವೆ. ಇತ್ತೀಚಿನ ಕಳೆದ ಕೆಲವು ತಿಂಗಳಿಂದ ಪತ್ರಿಕೆ ಎಲ್ಲೋ ಒಂದು ಕಡೆ ದಿಕ್ಕು ತಪ್ಪುತ್ತಿರುವಂತೆ ನಮಗಾದರೂ ಭಾಸವಾಗುತ್ತಿದೆ. ಅದಕ್ಕೆ ಪುರಾವೆಯೆಂಬಂತೆ 'ಈ ತಿಂಗಳು' ಅಂಕಣದಲ್ಲಿ ಜಿ. ರಾಮಕೃಷ್ಣರವರು ದಿವಂಗತ ಹೊ. ವೆ. ಶೇಷಾದ್ರಿಯನ್ನು ಕುರಿತು ಬರೆದ ಮಾತುಗಳನ್ನೇ ಗಮನಿಸಬಹುದು. ಒಬ್ಬ ವ್ಯಕ್ತಿಯಾಗಿ ಶೇಷಾದ್ರಿಯ ಸಾವು ಒಂದು ಸಾವೇ ಸರಿ. ಆದರೆ ಅವರನ್ನು ಚಿರಸ್ಮರಣೀಯರು ಎಂಬಂತೆ ಬಿಂಬಿಸುವುದಿದೆಯಲ್ಲ, ಇದು ಆಘಾತಕಾರಿ ಅಲ್ಲವೆ ? ಶೇಷಾದ್ರಿ ಆರ್. ಎಸ್. ಎಸ್. ನ ಕಟ್ಟಾಳು. ಆರ್. ಎಸ್. ಎಸ್. ಎಂಬುದೇ ಜನವಿರೋಧಿ. ಎಂತಲೇ ಶೇಷಾದ್ರಿ ಜನವಿರೋಧಿ ಪ್ರತಿಪಾದಕರು. ಜಿ. ರಾಮಕೃಷ್ಣ ಶೇಷಾದ್ರಿಯವರ ಬಗ್ಗೆ "ಅವರು ನಂಬಿದ್ದ ತತ್ವಗಳಿಗೆ ಸ್ಥಿರವಾಗಿ ಬದ್ಧರಾಗಿದ್ದುದು ಶೇಷಾದ್ರಿಯವರ ಹಿರಿಮೆ. ಅವರಿಗೆ ಯೋಗ್ಯ ಗೌರವ ತೋರುವುದರಲ್ಲಿ 'ಹೊಸತು' ಹಿಂದುಳಿಯುವುದಿಲ್ಲ" ಎಂದು ಬರೆಯುತ್ತಾರೆ. ಶೇಷಾದ್ರಿ ತಾವು ನಂಬಿದ್ದ ವರ್ಣ ವ್ಯವಸ್ಥೆ ಪೋಷಿತ ಜನವಿರೋಧಿ ಸಿದ್ಧಾಂತಗಳಿಗೆ ಖಂಡಿತ ಬದ್ಧರಾಗಿದ್ದರು. ಅಂತೆಯೇ ಒಬ್ಬ ಕೊಲೆಗಡುಕನೂ ಕೂಡ ತಾನು ನಂಬಿದ ಹಿಂಸೆಗೆ ಬದ್ಧನಾಗಿಯೇ ಇರುತ್ತಾನೆ. ಹೀಗೆಂದು ಕೊಲೆಗಡುಕನ




ಬದ್ಧತೆಯನ್ನು ಗೌರವಿಸಬೇಕೆ ? ಹಾಗಾದರೆ ಶೇಷಾದ್ರಿಯ ಬದ್ಧತೆಯನ್ನು ಸ್ಮರಿಸಿಕೊಳ್ಳಬೇಕೆಂಬ ಜಿ. ರಾಮಕೃಷ್ಣರ ಇರಾದೆಯಾದರೂ ಏನು ಎಂಬುದನ್ನು ಸ್ಪಷ್ಟಪಡಿಸಬೇಕು. ಇಲ್ಲವಾದರೆ ನಾಥೂರಾಮ ಗೋಡ್ಸೆ, ವೀರಪ್ಪನ್, ಅಸಂಖ್ಯ ಭಯೋತ್ಪಾದಕರನ್ನು ಆದರ್ಶಶೀಲರೆಂದು ಗೌರವಿಸಬೇಕು. ಏಕೆಂದರೆ, ಅವರೆಲ್ಲರೂ ತಾವು ನಂಬಿದ್ದ ಸಿದ್ಧಾಂತಗಳಿಗೆ ಯಾವತ್ತೂ ಬದ್ಧರಾದವರು.

ಪತ್ರಿಕೆಯ ಖಾಯಂ ಓದುಗರಾಗಿರುವ ನಮಗಂತೂ ಪತ್ರಿಕೆಯ ಇಂಥ ವರಸೆ ಬೇಸರ ತರಿಸುತ್ತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಸೈದ್ಧಾಂತಿಕ ಗೊಂದಲಗಳನ್ನು ಸೃಷ್ಟಿಸುತ್ತಿದೆ. ದಯವಿಟ್ಟು ಇಂಥ 'ಇಬ್ಬಂದಿತನ' ಪತ್ರಿಕೆಗೆ ಶೋಭಿಸದು ಎಂದು ನಾವಾದರೂ ನಮ್ರವಾಗಿ ಸೂಚಿಸಬಯಸುತ್ತೇವೆ.

*ಗುಲಬರ್ಗಾ* **'ಹೊಸತು' ಓದುಗರ ಪರವಾಗಿ**
**ಡಾ॥ ಮೀನಾಕ್ಷಿ ಬಾಳಿ, ಎ. ಎಸ್. ಕೋದಂಡರಾಮ**

ಬುದ್ಧನ ಮುಖಪುಟ ಹೊತ್ತ ಸೆಪ್ಟೆಂಬರ್ ತಿಂಗಳ ಸಂಚಿಕೆ ಬಹಳ ಮುದ್ದಾಗಿತ್ತು. ಸಂಪಾದಕೀಯ ಅರ್ಥ ಗರ್ಭಿತ. ಪ್ರಶಾಂತಮಯಿ ಶಾಂತಾದೇವಿ ಮಾಳವಾಡರ ವಿಚಾರ ಸಮಯೋಚಿತವಾಗಿತ್ತು. ಇಲೆಕ್ಷನ್ ಇಲೆಕ್ಷನ್... ಕಲೆಕ್ಷನ್ ತುಂಬಾ ನಗು ಬರಿಸಿತು. 'ನನ್ನ ಅಂಗಳ ನನ್ನ ಮರ' ಕವನ ಚೆನ್ನಾಗಿತ್ತು. ಪ್ರಾಯಶ್ಚಿತ್ತ 'ಮಾಡಿದ್ದುಣ್ಣೋ ಮಹರಾಯ' ಎಂಬ ಗಾದೆಯನ್ನು ನೆನಪಿಗೆ ತರಿಸಿತು. ದಾಂಪತ್ಯ ವಿರಸಕ್ಕೆ ಕಾರಣ, ಪರಿಹಾರ, ತುಂಬಾ ಉಪಯುಕ್ತ ಮಾಹಿತಿ. ನಾ. ದಿವಾಕರ ಅವರ 'ಭಾಷೆ-ಚಿತ್ರರಂಗ ರಾಜಕೀಯ' ಲೇಖನ ಇಂದಿನ ಪರಿಸ್ಥಿತಿಗೆ ಹಿಡಿದ ಕೈಗನ್ನಡಿಯಂತಿದೆ.

*ಕೆಂಚನಹಳ್ಳಿ* **ಕೆಂಚನಹಳ್ಳಿ ಜಯಣ್ಣ**

'ಮೂಢನಂಬಿಕೆಗಳು v/s ವೈಜ್ಞಾನಿಕ ಮನೋಭಾವ' ಎಂಬ ಲೇಖನವು ತುಂಬಾ ಮಾರ್ಮಿಕವಾಗಿ ಮೂಡಿ ಬಂದಿದೆ. ವೈಜ್ಞಾನಿಕ ಮನೋಭಾವದಿಂದ ನಾವು ಜ್ಯೋತಿಷವನ್ನು ತಿಳಿದುಕೊಳ್ಳುವುದಕ್ಕೂ (ನೋಡುವುದಕ್ಕೂ), ಅವೈಜ್ಞಾನಿಕ ಭವಿಷ್ಯಶಾಸ್ತ್ರ ಎಂದು ಕರೆಸಿಕೊಳ್ಳುವ ಅಂದ್ರೆ ವ್ಯಾಪಾರಿ ಮನೋಭಾವವನ್ನು ಹೊಂದಿರುವ ಜೋತಿಷ ಶಾಸ್ತ್ರ ನೋಡುವುದಕ್ಕೂ ಎರಡರಲ್ಲಿ ಯಾವುದು ಸೂಕ್ತ ಎಂಬ ವಿಷಯವನ್ನು ಪ್ರೊ॥ ಬಿ. ವಿ. ವೀರಭದ್ರಪ್ಪನವರು ತುಂಬಾ ಸ್ವಾರಸ್ಯಕರ ಹಾಗೂ ಅರ್ಥಪೂರ್ಣವಾಗಿ ಬರೆದಿದ್ದಾರೆ.

*ಲಕ್ಷ್ಮೇಶ್ವರ* **ಕೆ. ಎಸ್. ಬಾಳೇಶ್ವರಮಠ**

ಸಂಚಿಕೆ ನಿಜಕ್ಕೂ ಅದ್ಭುತವಾಗಿದೆ. ಈಗಿರುವ ವಿಷಯಗಳ ಜತೆಗೆ ವಿಜ್ಞಾನ, ಸಾಮಾನ್ಯಜ್ಞಾನ, 'ಹೊಸತು ಪದಚಿಗುರು' (ಪದಬಂಧ)ಗಳಂತಹ ಅಂಕಣಗಳನ್ನು ಆರಂಭಿಸಿರಿ ಎಂದು ಅನನ್ಯ ಅರಿಕೆ, ಕೋರಿಕೆ ಜತೆಗೆ

---

### 'ಎಂ. ವಿ. ಚಕ್ರಪಾಣಿ ಸಮಗ್ರ ಸಾಹಿತ್ಯ' ಆಸಕ್ತರ ಗಮನಕ್ಕೆ

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯ ರಾಷ್ಟ್ರೋತ್ಥಾನ ವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿದ್ದ ಎಂ. ವಿ. ಚಕ್ರಪಾಣಿ (ಎಂ. ವೆಂಕಟಕೃಷ್ಣ) ಕವಿಯಾಗಿ, ಸಾಹಿತಿಯಾಗಿ, ಒಳ್ಳೆಯ ಭಾಷಣಕಾರರಾಗಿ ಸಾಹಿತ್ಯಾಸಕ್ತರ ಮನಗೆದ್ದವರು. ಎರಡು ವರ್ಷಗಳ ಹಿಂದೆ ಅವರು ಅಕಾಲಿಕ ಮೃತ್ಯುವಿಗೀಡಾಗಿದ್ದು ದುರದೃಷ್ಟಕರ. ಅವರ ಸಾಹಿತ್ಯಿಕ ಸಾಧನೆಗಳನ್ನು ಸಮಗ್ರ ಸಂಪುಟವೊಂದರಲ್ಲಿ ಸಂಕಲಿಸುವ ಯೋಜನೆಯನ್ನು ರೂಪಿಸಿದ್ದೇವೆ. ಸಹೃದಯಿ ಓದುಗರು ಶ್ರೀ ಎಂ. ವಿ. ಚಕ್ರಪಾಣಿಯವರ ಬರಹಗಳ (ಕನ್ನಡ ಹಾಗೂ ಇಂಗ್ಲಿಷ್) ಪ್ರತಿಗಳನ್ನು ಹೊಂದಿದ್ದರೆ ಅವುಗಳ ಯಥಾಪ್ರತಿಯನ್ನು ನಮಗೆ ಕಳುಹಿಸಿದಲ್ಲಿ ಉಪಕಾರವಾಗುತ್ತದೆ.

**ಅನಂತ ಹುದೆಂಗಜೆ**
'ಮಂಜುವಾಣಿ' ಕಾರ್ಯಾಲಯ
ಉಜಿರೆ - ೫೭೪ ೨೪೦, ಬೆಳ್ತಂಗಡಿ ತಾಲೂಕು, ದ. ಕ.
ದೂರವಾಣಿ : ೦೮೨೫೬ - ೨೩೭೬೫೯

---

ಆಗ್ರಹವೂ ಕೂಡ. 'ತಿಳಿವು' ಅಂಕಣದಲ್ಲಿ ಜಿ. ಶ್ರೀನಿವಾಸರಾಜು ಅವರ ಕನ್ನಡ ಕುರಿತಾದ 'ನಮ್ಮ ಭಾಷೆ' ಓದಿದೆ. ಚೆನ್ನಾಗಿದೆ. ಅದರ ಜತೆಗೆ ಮೂಲಾಕ್ಷರಗಳ 'ಉಚ್ಚಾರಣೆ' ಕುರಿತು ತಿಳಿಸಿದ್ದರೆ ಸೂಕ್ತವೆನಿಸುತ್ತಿತ್ತು.

*ಶಿರಹಟ್ಟಿ* **ಶಿರಹಟ್ಟಿ ಮಾಧವ**

ಈ ಬಾರಿ ಹಲವು ಉತ್ತಮ ಬರಹಗಳು ಮನ ಸೆಳೆದವು. ಡಾ|| ಎಚ್. ಚಂದ್ರಶೇಖರ್ ಅವರ ಪ್ರಶಾಂತಮಯಿ ಶಾಂತಾದೇವಿ ಮಾಳವಾಡ ಕುರಿತ ಲೇಖನ ತುಂಬ ಇಷ್ಟವಾಯಿತು. 'ಶಾಂತಾದೇವಿ' ಅವರ ಸಂಪೂರ್ಣ ಪರಿಚಯ, ಕೃತಿಗಳು, ಅವರಿಗೆ ಸಂದ ಬಿರುದುಗಳ ಸರಮಾಲೆ ಓದಿ ಖುಷಿ ಆಯಿತು.

ಪ್ರೊ|| ಬಿ. ವಿ. ವೀರಭದ್ರಪ್ಪ ಅವರ ಅದ್ಭುತ ಲೇಖನ 'ಮೂಢನಂಬಿಕೆಗಳು v/s ವೈಜ್ಞಾನಿಕ ಮನೋಭಾವ' ಚಿಂತನೆಗೆ ತೊಡಗಿಸಿತು. ಈ ಆಧುನಿಕ ಯುಗದಲ್ಲೂ ಮೂಢನಂಬಿಕೆ ಎಂಬ ಭೂತ ಎಲ್ಲರಲ್ಲೂ ಮನೆಮಾಡಿದೆ. ಸಾಂಪ್ರದಾಯಿಕ ವ್ಯವಸ್ಥೆಯಲ್ಲೂ ಮೂಢನಂಬಿಕೆ ತನ್ನ ತಲೆ ತೂರಿಸಿದೆ. ನಂಬಿಕೆ ಇರಬೇಕು ಮೂಢನಂಬಿಕೆ ಇರಬಾರದು. ಕಠಿಣ ಶ್ರಮದ ಮುಂದೆ ಮೂಢನಂಬಿಕೆ ತನ್ನ ಸ್ಥಾನ ಕಳೆದುಕೊಳ್ಳುತ್ತದೆ. ಉತ್ತಮ ಬರಹ. ವಂದನೆಗಳು.

*ಶಿವಮೊಗ್ಗ* **ಪಿ. ಗೋವಿಂದರಾಜು**

**ಪರಾವಲಂಬನೆಯ ಅರ್ಥವಿಹೀನತೆ**

ಪ್ರಕೃತಿಯನ್ನು ಅರಿತು ತನ್ನ ಇತಿಮಿತಿಗಳನ್ನು ಗ್ರಹಿಸಿ ಕೊಂಡು ಸಮಗ್ರ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿ ಕೊಂಡು ಕ್ರಿಯಾಶೀಲತೆ ಬದುಕು ಎಂಬುದನ್ನು ಮನವರಿಕೆ ಮಾಡಿಕೊಳ್ಳುವ ಜೀವ ವಿಧಾನದ ಬಗ್ಗೆ ಮೂಡಿ ಬಂದಿರುವ ಈ ಲೇಖನ ವ್ಯಕ್ತಿತ್ವ ವಿಕಾಸಕ್ಕೆ ಅನುವು ಮಾಡಿಕೊಟ್ಟಿದೆ. ಜಾಗತೀಕರಣ, ನಗರೀಕರಣ ಹಾಗೂ ಸಮಾಜೀಕರಣಗಳಿಂದಾಗಿ ಇಂದು ಮಾನವ ಒಟ್ಟಾರೆಯಾಗಿ ಪರಾವಲಂಬಿಯಾಗಿದ್ದು, ಸ್ವಾವಲಂಬನೆ ಎಂಬ ಸ್ವತಂತ್ರ ಬದುಕಿನಿಂದ ವಿಮುಖನಾಗಿದ್ದಾನೆ. ಸಂಪಾದನೆಗಿಂತ ಮೊದಲು ಖರ್ಚು ಮಾಡಿ ಸುಖ ಅನುಭವಿಸುವ ಸವಲತ್ತುಗಳು, ವಿದ್ಯೆಗಾಗಿ ಸಾಲ ಮಾಡಿ ಸ್ವಾತಂತ್ರ್ಯ ಮತ್ತು ಸೃಜನಾತ್ಮಕ ಬದುಕನ್ನು ಅಡವಿಟ್ಟು ಬಹುರಾಷ್ಟ್ರೀಯ ಸಂಸ್ಥೆಗಳಲ್ಲಿ ಗುಲಾಮರಾಗುವ ಜೀವನಕ್ರಮವು ಇಂದು ಅತ್ಯಂತ ಆಕರ್ಷಕವೂ ಅವಶ್ಯವೂ ಆಗಿ ಕಂಡು ಬಂದಿರುವುದರಿಂದ ಸ್ವಾವಲಂಬನೆ ಎಂಬುದು ಭಾರತೀಯ ಜೀವನಕ್ರಮದಂತೆ, ಸವಕಲು, ಮೂಢತನ ಹಾಗೂ ಮೂಢನಂಬಿಕೆಯಂತಾಗುತ್ತಿದೆ. ಸಮಾಜದ ಸಮಗ್ರ ಬೆಳವಣಿಗೆಯಲ್ಲಿ ತನ್ನನ್ನು ತೊಡಗಿಸಿಕೊಂಡು ಪ್ರಗತಿಯ ಒಟ್ಟಾರೆ ಪ್ರಯೋಜನವನ್ನು ಅನುಭವಿಸುವ ಸಮಾಜದ ಅಂಶವಾದಾಗ ಮಾನವ ಸ್ವಾವಲಂಬನೆಯ ಯಶಸ್ಸಿನ ದಾರಿಯಲ್ಲಿ ಸಾಗುತ್ತಿರುವುದು ಖಚಿತವಾಗುತ್ತದೆ.

*ಬೆಂಗಳೂರು* **ನರೇಂದ್ರ ಸಿರಕಜೆ**

ಸೆಪ್ಟೆಂಬರ್ ಮಾಹೆಯ 'ಹೊಸತು'ವಿನಲ್ಲಿ 'ಚೌತಿ ಚಂದ್ರನ ವಿಶೇಷ' ಲೇಖನ ಓದಿದೆ. ''ಚಂದ್ರನನ್ನು ನೋಡುವುದರಿಂದ ಉಂಟಾಗುವ ದೋಷಕ್ಕೆ ಪರಿಹಾರವೂ ಇದೆಯಲ್ಲವೆ? ಬಿದಿಗೆ ಚಂದ್ರನನ್ನು ಮೊದಲೇ

> **ಮೂಲ**
>
> ಲೋಕಾಯುಕ್ತರೆಂದಂತೆ
> ಭ್ರಷ್ಟಾಚಾರದ ಮೂಲ
> ವಿಧಾನಸೌಧವೊ ?
> ಅಥವಾ ವಿಧಾನಸೌಧದ
> ಮೂಲ ಭ್ರಷ್ಟಾಚಾರವೊ ?
> ಬೀಜ ವೃಕ್ಷ ನ್ಯಾಯ !
>
> – ಸಿ. ಪಿ. ಕೆ.

ನೋಡಿದರಾಯ್ತು'' ಎಂದಿದ್ದಾರೆ ಡಾ|| ಶೈಲಜಾ. ಚೌತಿಯ ಚಂದ್ರನನ್ನು ಏಕೆ ನೋಡಬಾರದು ? ಇದಕ್ಕೆ ವೈಜ್ಞಾನಿಕ ಕಾರಣಗಳಿವೆಯೆ? ಹಾಗಿಲ್ಲದ ಮೇಲೆ ಶೈಲಜಾ ರವರು ದೋಷ ಪರಿಹಾರದ ಮಾತನ್ನು ಏಕೆ ಆಡಿದರು ? ಒಂದು ವೇಳೆ ಚೌತಿ ಚಂದ್ರನನ್ನು ನೋಡಿದರೆ ತೊಂದರೆಯಾಗುವುದಿದ್ದರೆ ದಯವಿಟ್ಟು ತಿಳಿಸಿ. ಜನರಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸಬೇಕಾದ ಸಂಸ್ಥೆಯವರೇ ಹೀಗೆ ತುಂಬು ವ್ಯಾಖ್ಯಾನಿಸುವುದು ಸರಿಯಲ್ಲ.

*ಶಿವಮೊಗ್ಗ* **ಎಂ. ನವೀನ್ ಕುಮಾರ್**

[ಡಾ|| ಶೈಲಜಾ ಅವರ ವಾಕ್ಯಗಳಲ್ಲಿರುವ ವ್ಯಂಗ್ಯವನ್ನು ಗಮನಿಸಿದರೆ ಇಂತಹ ಪ್ರತಿಕ್ರಿಯೆ ಸಕಾರಣವಾಗಿಲ್ಲವೆಂದು ಅರಿವಾಗುತ್ತದೆಯಲ್ಲವೆ ? – **ಸಂಪಾದಕ** ]

**ಹೀಗೊಂದು ಪ್ರಸಂಗ**

ನಾನು ೧೯೪೪-೪೫ರಲ್ಲಿ ವಿಶ್ವೇಶ್ವರಪುರದಲ್ಲಿದ್ದ ಬೆಂಗಳೂರು ಪ್ರೌಢಶಾಲೆಯಲ್ಲಿ ಓದುತ್ತಿದ್ದೆ. ಅದು ಇಂಗ್ಲಿಷ್ ಮಾಧ್ಯಮದ ಪಾಠಶಾಲೆ. ನನ್ನ ತರಗತಿಗೆ ಶ್ರೀಮಾನ್ ಜಿ. ವೆಂಕಟಸುಬ್ಬಯ್ಯನವರು ತರಗತಿಯ ಉಸ್ತುವಾರಿ ಉಪಾಧ್ಯಾಯರು ಮತ್ತು ಇಂಗ್ಲಿಷ್ ಮೇಷ್ಟ್ರು. ಒಂದು ಸಲ ಇಂಗ್ಲಿಷಿನಲ್ಲಿ ತರಗತಿಯ ಉಸ್ತುವಾರಿ ಗುರುಗಳ ಬಗ್ಗೆ ಒಂದು ಪ್ರಬಂಧವನ್ನು ಬರೆಯಲು ಕೊಟ್ಟಿದ್ದರು. ನಾನು ನಮ್ಮ ತರಗತಿಯ ಗುರುಗಳಿಗೆ ವೈಯಕ್ತಿಕವಾಗಿ ಪ್ರಶಂಸೆ ಮತ್ತು ಗೌರವಗಳನ್ನು ಪ್ರಬಂಧ ದಲ್ಲಿ ಸಲ್ಲಿಸಿದ್ದೆ. ಮಾರನೇ ದಿನ ನನ್ನ ಪ್ರಬಂಧವನ್ನು ಶ್ರೀಮಾನ್ ವೆಂಕಟಸುಬ್ಬಯ್ಯನವರು ತರಗತಿಯಲ್ಲಿ ಓದಿದರು. ತರಗತಿಗೆ ತರಗತಿಯೇ ಬಿದ್ದು ಬಿದ್ದು ನಕ್ಕಿತ್ತು. ನಾನೂ ನಕ್ಕಿದ್ದೆ. ಕಾರಣ ಗುರುಗಳಿಗೆ ಸಲ್ಲಬೇಕಾದ ಪ್ರಶಂಸೆ, ಮರ್ಯಾದೆಗಳೆಲ್ಲವನ್ನೂ ಗುರುಪತ್ನಿಯವರಿಗೆ ಸಲ್ಲಿಸಿದ್ದೆ. ಅಂದರೆ Mr. ಎನ್ನುವ ಬದಲಿಗೆ Mrs. ಎನ್ನುವುದನ್ನು ಗುರುಗಳ ಹೆಸರಿಗೆ ಲಗತ್ತಿಸಿದ್ದೆ.

ನಮ್ಮ ಮನೆಗೆ ಬರುತ್ತಿದ್ದ ಲಕೋಟೆಗಳ ಮೇಲೆ ನಮ್ಮ ತಂದೆಯವರ ಹೆಸರಿನಲ್ಲಿ ಬರುತ್ತಿದ್ದದ್ದರಲ್ಲಿ ಎರಡೂ ರೀತಿಯ (ಅಂದರೆ) Mr. ಕೆಲವು ಸಲ, Mrs. ಕೆಲವು ಸಲ ಬಳಕೆಯಾಗುತ್ತಿದ್ದುದನ್ನು ನಾನು ಗಮನಿಸಿದ್ದೆ. Mrs. ಎಂಬುದು Mr. ಎಂಬುದರ ಗೌರವಾನ್ವಿತ ದೇಶೀಯ ಭಾಷಾಂತರ, ಅದು ಮಹಾರಾಜೇಶ್ರೀ ಎಂಬ ದೇಶೀ ಗೌರವ ಪದದ ಸಂಕ್ಷಿಪ್ತ ಪದ ಎಂದು ತಿಳಿದಿದ್ದೆ. ಈ ಪತ್ರಗಳು ನಮ್ಮ ತಾಯಿಯವರಿಗೆ ಬರುತ್ತಿದ್ದ ಪತ್ರಗಳು ಎಂದು ನನಗೆ ಗೊತ್ತಿದ್ದಿಲ್ಲ.

*ಬೆಂಗಳೂರು* **ಎಂ. ಬಾಲಸುಂದರ್**

**ಹೊ. ವೆ. ಶೇಷಾದ್ರಿ**

ಮಾನ್ಯ ಶೇಷಾದ್ರಿಯವರ ನಿಧನದ ಬಗ್ಗೆ ಸಂಪಾದಕರು ಕುಹಕವಾಡುವ ರೀತಿಯಲ್ಲಿ ಬರೆಯುವುದರ ಬದಲು ಏನೂ ಬರೆಯದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಅವರಿಗೆ 'ಯೋಗ್ಯ' ಗೌರವ ನೀಡುವುದಾಗಿ ಹೇಳುತ್ತ ಅಗೌರವ ತೋರಿದ್ದಾರೆ ಮತ್ತು ಸಂಬಂಧಿಕರಿಗಾಗಿ ಪ್ರಭಾವ ಬೀರಿದ್ದರು ಎಂದು ಸೂಚಿಸಿದ್ದಾರೆ. ಜೊತೆಗೆ ಅವರ ನಂಬಿಕೆಗಳ ಬಗ್ಗೆ ಲಘುವಾಗಿ ಪ್ರಸ್ತಾಪಿಸಿದ್ದಾರೆ. ಇದು ಮನಸ್ಸಿಗೆ ನೋವುಂಟುಮಾಡುವ ವಿಚಾರ.

*ಹಾಸನ* **ಬಿ. ಎಲ್. ಲಕ್ಷ್ಮೀಶ**




## ವಿಶೇಷ ಸಂಚಿಕೆ – ಜನವರಿ ೨೦೦೬

'ಹೊಸತು' ಜನವರಿ ೨೦೦೬ರ ವಾರ್ಷಿಕ ಸಂಚಿಕೆಯಲ್ಲಿ ನಿಮ್ಮ ಅಭಿಪ್ರಾಯ ವನ್ನು ಓದುಗರೊಂದಿಗೆ ಹಂಚಿಕೊಳ್ಳಬಯಸುತ್ತೀರಾ ? ಹಾಗಿದ್ದರೆ ಐನೂರು ಪದಗಳ ಮಿತಿಯಲ್ಲಿ ಬರೆದು ನವೆಂಬರ್ ೧೦ರೊಳಗಾಗಿ ನಮಗೆ ಕಳಿಸಿಕೊಡಿ.

ವಿಷಯ : **ಸಾರ್ವಜನಿಕ ಸೇವಾಕ್ಷೇತ್ರವನ್ನು ಸುಧಾರಿಸುವ ಬಗೆ.**

ಖಾಸಗಿ ಎಲ್ಲ ರಮ್ಯವೆಂಬ ಭ್ರಾಂತಿ ಈಗ ಕಳಚಿಹೋಗಿದೆ. ಶಿಕ್ಷಣ, ಆರೋಗ್ಯ, ಸಾರಿಗೆ, ಉದ್ಯಮ, ಇತ್ಯಾದಿಗಳಲ್ಲಿ ಖಾಸಗಿ ಕ್ಷೇತ್ರವು ದುಬಾರಿ ಮಾತ್ರವಲ್ಲ, ಕಳಪೆಯದೂ ಆಗಿದೆ. ಸಾಮಾನ್ಯರಿಗಂತೂ ಅದು ಎಟುಕುವಂತಿಲ್ಲ. ಸಾರ್ವಜನಿಕ ಸೇವಾಕ್ಷೇತ್ರವು ಭ್ರಷ್ಟವಾಗಿ ಇರುವುದು ಜನರಿಗೆ ದೊಡ್ಡ ಮೋಸವಾಗಿದೆ, ಅನಾನುಕೂಲಕರವಾಗಿದೆ. ಇದು ಅಗಾಧವಾದ ವಂಚನೆ. ಜನಸಾಮಾನ್ಯರನ್ನು ಬೆಂಕಿಗೆ ಹಾಕುವಂತಹ ದೌರ್ಜನ್ಯ ಇದಾಗಿದೆ. ಇದನ್ನು ಸುಧಾರಿಸದ ಸರ್ಕಾರ ಜನವಿರೋಧಿ ಸರ್ಕಾರ. ಆದರೆ ಇದರಲ್ಲಿ ಸಾರ್ವಜನಿಕರ ಪಾಲು ಎಷ್ಟರಮಟ್ಟಿನದು ? ಜವಾಬ್ದಾರಿ ಎಷ್ಟು? ಲೋಕಾಯುಕ್ತವನ್ನೋ ಸರ್ಕಾರಿ ಅಧಿಕಾರಿಗಳನ್ನೋ ತೆಗಳುತ್ತಾ ಕೂತರೆ ಆದೀತೆ ? ಹಾಗಿದ್ದರೆ ಸುಧಾರಿಸುವ ಬಗೆ ಯಾವುದು ? ನಾವು ಚಳುವಳಿ ನಡೆಸಬಹುದೆ ಮತ್ತು ಹೇಗೆ ?

ದಯವಿಟ್ಟು ಬರೆಯಿರಿ, ಆಯ್ದ ಐದು ಲೇಖನಗಳನ್ನು ಪ್ರಕಟಿಸಲಾಗುತ್ತದೆ.

– ಸಂಪಾದಕ

# ವೃತ್ತಿಪರ ಕಾಲೇಜುಗಳಲ್ಲಿ ಮೀಸಲಾತಿ – ನ್ಯಾಯಾಲಯ ಏನು ಹೇಳುತ್ತದೆ ?

ಅನುದಾನರಹಿತ ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳ ಪ್ರವೇಶ ಪ್ರಕ್ರಿಯೆಗಳಲ್ಲಿ ಹಸ್ತಕ್ಷೇಪ ನಡೆಸಲು ಸರಕಾರಕ್ಕೆ ಹಕ್ಕಿಲ್ಲ – ಎಂದು ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪು, ಉಳ್ಳವರ ಪರವಾದ ತೀರ್ಪಾಗಿದ್ದು ಸಾಮಾನ್ಯ ಜನರಲ್ಲಿ ಸಾಕಷ್ಟು ಗೊಂದಲಕ್ಕೆ ಕಾರಣವಾಗಿದೆ.
ಶ್ರೀಮಂತರೊಂದಿಗೆ ಸ್ಪರ್ಧಿಸಲು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿ, ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸಬೇಕೆಂಬ ಸಾಮಾನ್ಯರ ಕನಸು ನನಸಾಗಲು ಹೇಗೆ ಸಾಧ್ಯ ?
ಇಂಥ ಪರಿಸ್ಥಿತಿ ಉಂಟಾಗಲು ಏನು ಕಾರಣ ?
ಇದಕ್ಕೆ ಪರಿಹಾರವಿದೆಯೆ ?
ಇದರಿಂದ ಉಳ್ಳವರು – ಇಲ್ಲದವರ ನಡುವಣ ಕಂದರ ಮತ್ತಷ್ಟು ಹೆಚ್ಚಾಗಬಹುದೆ ?
ಈ ದಿಶೆಯಲ್ಲಿ ಚಿಂತನೆ ನಡೆಸಿದ ಒಂದೆರಡು ಲೇಖನಗಳನ್ನು 'ಹೊಸತು' ಪ್ರಕಟಿಸುತ್ತಿದೆ.

ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ನಮ್ಮ ದೇಶದ ಆಡಳಿತದ ಮೂರು ಬೇರೆ-ಬೇರೆ ಅಂಗಗಳು. ಕೆಲವು ದೇಶಗಳಲ್ಲಿ ಮೂರೂ ಅಂಗಗಳು ಅಥವಾ ಎರಡು ಅಂಗಗಳು ಒಬ್ಬನೇ ವ್ಯಕ್ತಿಯ ಅಥವಾ ಸಂಸ್ಥೆಯ ಕೈಯಲ್ಲಿ ಕೇಂದ್ರಿತವಾಗಿರುತ್ತವೆ. ನಮ್ಮ ದೇಶದ ಈ ಮೂರು ಅಂಗಗಳು ಪ್ರತ್ಯೇಕ ಘಟಕಗಳಾಗಿದ್ದು ತಮ್ಮ ತಮ್ಮ ವಿಶಿಷ್ಟ ಕಾರ್ಯಗಳನ್ನು ನೆರವೇರಿಸುತ್ತಿದ್ದರೂ, ಅದರೊಂದಿಗೆ ಒಂದನ್ನೊಂದು ನಿಯಂತ್ರಿಸುವ ಕಾರ್ಯವನ್ನು ಮಾಡುತ್ತವೆ. ಈ ಮೂರೂ ಅಂಗಗಳ ಪಾತ್ರವನ್ನು ನಿರ್ಧರಿಸುವುದು ಭಾರತದ ಸಂವಿಧಾನ, ಅದು ಎಲ್ಲಕ್ಕೂ ಮೀರಿದ ಕಾನೂನು. ಆದರೆ ಕಾರ್ಯಾಂಗ, ಶಾಸಕಾಂಗ ನಿರ್ವಹಿಸಿದ ಕಾರ್ಯಗಳು ಸಂವೈಧಾನಿಕವಾಗಿವೆಯೇ, ಇಲ್ಲವೇ ಎನ್ನುವುದನ್ನು ನಿರ್ಧರಿಸುವುದು, ಸಂದಿಗ್ಧತೆ ಇದ್ದಲ್ಲಿ ಅದನ್ನು ಅರ್ಥೈಸುವುದು ನ್ಯಾಯಾಂಗದ ಕಾರ್ಯವಾಗಿರುವುದರಿಂದ ಸಹಜವಾಗಿಯೇ ಆ ಅಧಿಕಾರ ನ್ಯಾಯಾಂಗಕ್ಕೆ ಹೆಚ್ಚಿನ ಅಧಿಕಾರವನ್ನು, ಸ್ಥಾನವನ್ನು ನೀಡುತ್ತದೆ. ಈ ಬಗ್ಗೆ ಉಳಿದೆರಡು ಅಂಗಗಳಿಗೆ ಎಷ್ಟೇ ಅಸಮಾಧಾನವಿದ್ದರೂ ಅವು ಸಂಘರ್ಷದ ಹಾದಿ ಹಿಡಿಯುವುದರಿಂದ ಉಪಯೋಗವಿಲ್ಲ.

ಆಡಳಿತದಲ್ಲಿ ಕಾರ್ಯ ನೀತಿಯನ್ನು (ಪಾಲಿಸಿ) ರೂಪಿಸುವುದು ಸರ್ಕಾರದ, ಶಾಸಕಾಂಗದ ಕಾರ್ಯ, ಅದನ್ನು ಜಾರಿಗೊಳಿಸುವುದು ಕಾರ್ಯಾಂಗದ ಕರ್ತವ್ಯ. ಅದು ಸಂವಿಧಾನಬಾಹಿರವಾಗಿದೆ ಎಂದು, ತಮ್ಮ ಮೂಲಭೂತ ಹಕ್ಕಿಗೆ ಚ್ಯುತಿ ಉಂಟು ಮಾಡುತ್ತದೆ ಎಂದು ಪ್ರಜೆಗಳು ಯಾರಾದರೂ ನ್ಯಾಯಾಲಯದಲ್ಲಿ ಪ್ರಶ್ನಿಸಿದಾಗ, ಈಗಿರುವ ಸಂವಿಧಾನದ ಚೌಕಟ್ಟಿನಲ್ಲಿ ನ್ಯಾಯಾಲಯ (ಉಚ್ಚ ನ್ಯಾಯಾಲಯ/ಸರ್ವೋಚ್ಚ ನ್ಯಾಯಾಲಯ) ಅದನ್ನು ನಿರ್ಧರಿಸಬೇಕಾಗುತ್ತದೆ. ಸಂವಿಧಾನ/ಮೂಲಭೂತ ಹಕ್ಕಿನ ಉಲ್ಲಂಘನೆಯಾಗಿದ್ದಲ್ಲಿ ಅಂತಹ ಕಾನೂನನ್ನು, ಕ್ರಮವನ್ನು ಸಂವಿಧಾನ ಬಾಹಿರವೆಂದು ರದ್ದುಗೊಳಿಸಬೇಕಾಗುತ್ತದೆ. ಇಲ್ಲಿ ನ್ಯಾಯಾಲಯಕ್ಕೆ ಸರ್ಕಾರಕ್ಕಿರುವಂತೆ (ಆಡಳಿತದಲ್ಲಿ ಇರುವ ರಾಜಕೀಯ ಪಕ್ಷ) ತನ್ನದೇ ಆದ ಕಾರ್ಯನೀತಿ ಇರುವುದಿಲ್ಲ. ಎಷ್ಟೇ ಉತ್ತಮ ಕಾರ್ಯನೀತಿ ಇದ್ದರೂ ಅದು ಸಂವಿಧಾನಕ್ಕೆ ವಿರುದ್ಧವಾಗಿರಲು ಅವಕಾಶವಿರುವುದಿಲ್ಲ. ಹಾಗಾಗಿ ಎಷ್ಟೋ ಬಾರಿ ಸರ್ಕಾರಗಳು ಮುಂದಿನ ಚುನಾವಣೆ, ತಮ್ಮ ಜನಪ್ರಿಯತೆಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಕಾನೂನು ಮಾಡಿದಾಗ, ಕ್ರಮ ಕೈಗೊಂಡಾಗ, ಸರ್ಕಾರದ ಅಸಮಾಧಾನಕ್ಕೆ, ಶಾಸಕರ ಕೋಪಕ್ಕೆ, ಜನತೆಯ ಟೀಕೆಗೆ ಅಂಜದೇ ತಮ್ಮ ಕರ್ತವ್ಯ ನಿರ್ವಹಿಸಬೇಕಾದ ಪರಿಸ್ಥಿತಿ ನ್ಯಾಯಾಲಯಕ್ಕೆ ಬರುತ್ತದೆ. ಕೆಲವೊಮ್ಮೆ ಸರ್ಕಾರಗಳು ತಾವಿರುವ ಸಂದಿಗ್ಧ ಪರಿಸ್ಥಿತಿಯಿಂದ ಹೊರಬರಲು, ಜನತೆಯನ್ನು ತೃಪ್ತಿಪಡಿಸಲು ಕಾನೂನನ್ನು/ನಿಯಮವನ್ನು ಮಾಡಿ ತಮ್ಮ ಕೈತೊಳೆದುಕೊಂಡು, ನ್ಯಾಯಾಲಯವನ್ನು 'ಬಲಿಪಶು'ವಾಗಿ ಮಾಡಿ ಜನತೆಯ ಅಸಮಾಧಾನವನ್ನು ನ್ಯಾಯಾಂಗದ ಮೇಲೆ ತಿರುಗಿಸುವ ಉದಾಹರಣೆಗಳೂ ಸಾಕಷ್ಟಿವೆ. ನ್ಯಾಯಾಲಯಕ್ಕೆ ಇದರ ಅರಿವಿದ್ದರೂ ಅದು ಪರಿಣಾಮಕ್ಕೆ ಬೆದರದೇ ತನ್ನ ಕರ್ತವ್ಯ ನಿರ್ವಹಿಸಬೇಕಾಗುತ್ತದೆ. ಸರ್ಕಾರ, ರಾಜಕೀಯ ಪಕ್ಷಗಳು ನ್ಯಾಯಾಲಯವನ್ನು ತಮ್ಮ ರಾಜಕೀಯದ ದಾಳವಾಗಿ ಉಪಯೋಗಿಸುವುದನ್ನು ಬಿಟ್ಟು, ಧೈರ್ಯವಾಗಿ ಜನರ ಎದುರು ಸತ್ಯ ಪರಿಸ್ಥಿತಿಯನ್ನು ಇಟ್ಟು, ಪರಿಸ್ಥಿತಿಯನ್ನು ಎದುರಿಸಲು, ತನ್ನ ಕಾರ್ಯನೀತಿಯನ್ನು ಜಾರಿಗೆ ತರಲು ಕಾನೂನುಬದ್ಧ/ಸಂವಿಧಾನಬದ್ಧ ಮಾರ್ಗವನ್ನು ಹುಡುಕಲು ನಿಷ್ಠೆಯಿಂದ ಪ್ರಯತ್ನಿಸ ಬೇಕು, ಆಗ ಮಾರ್ಗ ಸಿಗುತ್ತದೆ. ನ್ಯಾಯಾಲಯವನ್ನು ಬೈದು ತನ್ನ ಪ್ರತಿಷ್ಠೆ ಉಳಿಸಿಕೊಳ್ಳಲು ಪ್ರಯತ್ನಿಸುವುದಕ್ಕಿಂತ ಈ ಮಾರ್ಗ ಉಚಿತವಾದುದು.



ನ್ಯಾಯಾಲಯ ತನ್ನ ತೀರ್ಪನ್ನು ಕೊಡುವಾಗ ಅದಕ್ಕೆ ಕಾರಣವನ್ನು ಕೊಟ್ಟಿರುತ್ತದೆ. ಯಾವ ಅಂಶಗಳು ಕಾನೂನಿಗೆ/ಸಂವಿಧಾನಕ್ಕೆ ವಿರುದ್ಧವಾಗಿದೆ ಎಂದು ತಿಳಿಸಿರುತ್ತದೆ. ಆ ಕಾರಣಕ್ಕಾಗಿ ಕಾರ್ಯನೀತಿ, ಕಾನೂನನ್ನು ರದ್ದು ಗೊಳಿಸಿರುತ್ತದೆ. ಯಾವುದು, ಏಕೆ ಕಾನೂನು ಬಾಹಿರ, ಸಂವಿಧಾನ ಬಾಹಿರ ಎಂದು ಹೇಳಿರುತ್ತದೆ. ಹಾಗಾಗಿ ನ್ಯಾಯಾಲಯ ಎತ್ತಿ ತೋರಿಸಿರುವ ದೋಷ ಪೂರಿತ ಅಂಶಗಳನ್ನು ಸರಿಪಡಿಸಿ ಪುನಃ ಕಾನೂನನ್ನು/ನಿಯಮವನ್ನು ಮಾಡಲು ಅವಕಾಶವಿರುತ್ತದೆ. ಆ ಅಧಿಕಾರ ಸರ್ಕಾರಕ್ಕೆ/ಶಾಸಕಾಂಗಕ್ಕೆ ಇರುತ್ತದೆ. ಬೇಕಿದ್ದಲ್ಲಿ ಸಂವಿಧಾನದ ತಿದ್ದುಪಡಿಯನ್ನು ಕೂಡ ಮಾಡುವ ಅಧಿಕಾರ ಪಾರ್ಲಿಮೆಂಟಿಗೆ ಇದೆ. (ಮೂಲಭೂತ ಅಂಶಗಳನ್ನು ಹೊರತುಪಡಿಸಿ).

ಈ ಹಿನ್ನೆಲೆಯಲ್ಲಿ, ಇತ್ತೀಚಿಗೆ ಸರ್ವೋಚ್ಚ ನ್ಯಾಯಾಲಯ ವೃತ್ತಿಪರ ಕಾಲೇಜುಗಳಲ್ಲಿ ಮೀಸಲಾತಿಯ ನೀತಿಯನ್ನು ಜಾರಿಗೊಳಿಸುವ ಬಗ್ಗೆ ನೀಡಿದ ತೀರ್ಪನ್ನು (ಪಿ. ವಿ. ಇನಾಂದರ್ - ವಿರುದ್ಧ- ಮಹಾರಾಷ್ಟ್ರ ರಾಜ್ಯ) ಅದಕ್ಕೆ ನಮ್ಮ ರಾಜಕೀಯ ಪಕ್ಷಗಳು, ಶಾಸಕರು, ಜನತೆ ತೋರಿಸಿದ ಪ್ರತಿಕ್ರಿಯೆಯನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ನ್ಯಾಯಾಲಯ ತನ್ನ ಕರ್ತವ್ಯವನ್ನು ನಿರ್ವಹಿಸಿದೆ. ಈಗ ಸರ್ಕಾರ, ಶಾಸಕಾಂಗ ತಮ್ಮ ಪಾಲಿನ ಕಾರ್ಯವನ್ನು ನಿರ್ವಹಿಸಬೇಕಾಗುತ್ತದೆ. ಮೀಸಲಾತಿಯನ್ನು ವೃತ್ತಿಪರ ಕಾಲೇಜುಗಳಲ್ಲಿ ಜಾರಿಗೆ ತರಬೇಕೆಂಬುದು ಅವರ ಗುರಿಯಾಗಿದ್ದಲ್ಲಿ ಅದಕ್ಕೆ ಸಂವಿಧಾನದ ಚೌಕಟ್ಟಿನಲ್ಲಿ ಉತ್ತರವನ್ನು ಕಂಡುಕೊಳ್ಳಬೇಕು. ಇಲ್ಲವೇ ಸಂವಿಧಾನವನ್ನು ತಿದ್ದುಪಡಿ ಮಾಡಬೇಕು. ನ್ಯಾಯಾಧೀಶರನ್ನು ನ್ಯಾಯಾಲಯವನ್ನು ಟೀಕಿಸಿ, ಸಂಘರ್ಷ ಉಂಟುಮಾಡಿದರೆ ಗುರಿ ತಲುಪಲು ಸಾಧ್ಯವಿಲ್ಲ.

ಈ ಪರಿಸ್ಥಿತಿ ತಲುಪಲು ನಮ್ಮ ಸರ್ಕಾರಗಳೇ ಮುಖ್ಯ ಕಾರಣ. ದುರ್ಬಲ ವರ್ಗದವರಿಗೆ, ಹಿಂದುಳಿದವರಿಗೆ ಸಮಾನವಾಗಿ ಶಿಕ್ಷಣ ಅವಕಾಶ ಕೊಡಲು ಸರ್ಕಾರ ಸಾಕಷ್ಟು ಉತ್ತಮ ಮಟ್ಟದ ಶಾಲಾ-ಕಾಲೇಜುಗಳನ್ನು ಸ್ಥಾಪಿಸಿದ್ದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳು ಈ ಪ್ರಮಾಣದಲ್ಲಿ ಬರಲು ಅವಕಾಶವಾಗುತ್ತಿರಲಿಲ್ಲ, ಶಿಕ್ಷಣ ಇಷ್ಟು ದುಬಾರಿಯಾಗುತ್ತಿರಲಿಲ್ಲ. ದುರ್ಬಲರು-ಹಿಂದುಳಿದವರು ಶಿಕ್ಷಣ ವಂಚಿತರಾಗುತ್ತಿರಲಿಲ್ಲ. ಇತ್ತೀಚಿನ ಹಲವಾರು ವರ್ಷಗಳಲ್ಲಿ ಸರ್ಕಾರ ವೃತ್ತಿಪರ ಕಾಲೇಜುಗಳನ್ನು ತಾನೇ ತೆರೆಯದೇ ಖಾಸಗಿಯವರಿಗೆ ಸಂಪೂರ್ಣವಾಗಿ ಅದನ್ನು ಬಿಟ್ಟುಕೊಟ್ಟಿದೆ. ಅದರಲ್ಲೂ ರಾಜಕೀಯವಾಗಿ ಪ್ರಭಾವಿಗಳಾಗಿರುವ ವ್ಯಕ್ತಿಗಳಿಗೆ, ಮಠಗಳಿಗೆ ಬಿಟ್ಟುಕೊಟ್ಟು ನಿಸ್ಸಹಾಯಕವಾಗಿ ನಿಂತಿದೆ. ಅವುಗಳನ್ನು ರಾಜಕೀಯ ಪ್ರಭಾವ ವಲಯಗಳಾಗಿ ಬೆಳೆಯಲು ಅವಕಾಶಕೊಟ್ಟಿದೆ, ಸರ್ಕಾರಗಳನ್ನು ಅವು ನಿಯಂತ್ರಿಸುವಂತಾಗಿದೆ. ಹಾಗಾಗಿ ಸರ್ಕಾರಗಳು ಒಂದು ಕಡೆ ಓಟಿಗಾಗಿ ಮೀಸಲಾತಿಯ ಮಂತ್ರ ಜಪಿಸುತ್ತಾ, ಇನ್ನೊಂದು ಕಡೆ ರಾಜಕೀಯ ಪ್ರಭಾವ, ಹಣದ ಬೆಂಬಲಕ್ಕಾಗಿ ಈ ಖಾಸಗಿ ವಲಯಗಳ ಮೇಲೆ ಅವಲಂಬಿತವಾಗಿ, ತಮ್ಮ ಜವಾಬ್ದಾರಿಯಿಂದ ಹೊರಬರಲು, ಜನತೆಯ ಕಣ್ಣಿಗೆ ಮಣ್ಣೆರಚಲು ಯಾವುದೋ ಒಂದು ಕಾನೂನು/ನಿಯಮವನ್ನು ಸಂದರ್ಭಕ್ಕೆ ಹೊಸೆದು (ಅದು ನ್ಯಾಯಾಲಯದಲ್ಲಿ ನಿಲ್ಲುವುದಿಲ್ಲ ಎಂದು ತಿಳಿದೂ) ನ್ಯಾಯಾಲಯದ ಮೇಲೆ ಎಲ್ಲಾ ತಪ್ಪನ್ನು ಹೊರಿಸುತ್ತಿವೆ.

ಖಾಸಗಿ ಕ್ಷೇತ್ರದಲ್ಲಿ ಸರ್ಕಾರ ಎಷ್ಟರಮಟ್ಟಿಗೆ ಹಸ್ತಕ್ಷೇಪ ಮಾಡಬಹುದು, ತನ್ನ ಮೀಸಲಾತಿ ನೀತಿಯನ್ನು ಜಾರಿಗೊಳಿಸಬಹುದು ಎನ್ನುವುದು ಕೇವಲ ಖಾಸಗಿ ಶಿಕ್ಷಣ ಕ್ಷೇತ್ರಕ್ಕಲ್ಲ, ಖಾಸಗಿ ಉದ್ಯಮ ಕ್ಷೇತ್ರಕ್ಕೂ ಮುಂದೆ ಅನ್ವಯಿಸಬೇಕಾಗಿ ಬರುವುದರಿಂದ ಇದು ಮಹತ್ವದ ಪ್ರಶ್ನೆಯಾಗಿದೆ. ಖಾಸಗೀಕರಣ, ಜಾಗತೀಕರಣ ಮತ್ತು ಉದಾರೀಕರಣದ ಹಿನ್ನೆಲೆಯಲ್ಲಿ, ಮುಕ್ತ ಮಾರುಕಟ್ಟೆ, ವಿದೇಶಿ ಬಂಡವಾಳ ಹೂಡಿಕೆಯ ಸಂದರ್ಭದಲ್ಲಿ ಸರ್ಕಾರದ ಹಸ್ತಕ್ಷೇಪ ಸೀಮಿತವಾಗಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ತನ್ನ ಕೆಲವೊಂದು ಕಾಳಜಿಗಳನ್ನು ಉಳಿಸಿಕೊಳ್ಳಲು, ತಮ್ಮ ಸಾಮಾಜಿಕ ಜವಾಬ್ದಾರಿಗಳನ್ನು ನಿರ್ವಹಿಸಲು ಸರ್ಕಾರಗಳು ತಮ್ಮದೇ ಆದ ಕಾರ್ಯಕ್ಷೇತ್ರವನ್ನು ರೂಪಿಸಿಕೊಳ್ಳಬೇಕಾಗುತ್ತದೆ.

ವೃತ್ತಿಪರ ಶಿಕ್ಷಣದಲ್ಲಿ ತನ್ನ ಮೀಸಲಾತಿ ನೀತಿಯ ಜಾರಿಗೆ ಸರ್ಕಾರ ಕೂಡಲೇ ಪ್ರತಿ ಜಿಲ್ಲೆಯಲ್ಲಿ ಸರ್ಕಾರಿ ವೃತ್ತಿಪರ ಕಾಲೇಜುಗಳನ್ನು ಆರಂಭಿಸಬೇಕು. ಸಾಧ್ಯವಾಗದಿದ್ದಲ್ಲಿ ಖಾಸಗಿ ಸಂಸ್ಥೆಯ ಪಾಲುದಾರಿಕೆಯೊಂದಿಗೆ ಆರಂಭಿಸಬೇಕು. ಸರ್ಕಾರದಿಂದ ಅನುದಾನ, ಮತ್ತಿತರ ಯಾವುದೇ ಸಹಾಯ ಪಡೆಯದ ವೃತ್ತಿಪರ ಶಿಕ್ಷಣ ಸಂಸ್ಥೆಗಳು ಲಾಭಕ್ಕಾಗಿ ಇರದೇ, ಮೆರಿಟ್ ಆಧಾರಿತ ವಿದ್ಯಾರ್ಥಿಗಳಿಗೆ ಉತ್ತಮ ಮಟ್ಟದ ಶಿಕ್ಷಣ ಕೊಡುವಂತೆ ಮಾಡಲು ಸರ್ವೋಚ್ಚ ನ್ಯಾಯಾಲಯ ಹೇಳಿರುವಂತೆ ನಿಬಂಧನೆಗಳನ್ನು ರೂಪಿಸಬೇಕು. ಶಿಕ್ಷಣ ಸಂಸ್ಥೆ ಸ್ಥಾಪಿಸಿ, ನಡೆಸುವ ವೃತ್ತಿ ಕೈಗೊಳ್ಳುವ ಮೂಲಭೂತ ಹಕ್ಕು ಎಲ್ಲರಿಗೂ ಇದೆ ಎಂದು ಸರ್ವೋಚ್ಚ ನ್ಯಾಯಾಲಯ ಈ ತೀರ್ಪಿನಲ್ಲಿ ಘೋಷಿಸಿದೆ. ಎಲ್ಲಿಯವರೆಗೆ ಸರ್ಕಾರದಿಂದ ಅನುದಾನ, ಭೂಮಿ ಮತ್ತಿತರ ನೆರವು ಪಡೆಯದೇ ಅದನ್ನು ನಡೆಸುತ್ತಾರೆಯೋ ಅಲ್ಲಿಯವರೆಗೆ ಖಾಸಗಿ ಶಿಕ್ಷಣ ಸಂಸ್ಥೆಗೆ ತನಗೆ ಬೇಕಾದಂತೆ ಅದನ್ನು ನಡೆಸುವ ಹಕ್ಕಿರುತ್ತದೆ. ಆದರೆ, ಉಪಜೀವನಕ್ಕಾಗಿ ಹೊರತು ಉದ್ದಿಮೆಯಂತೆ ಲಾಭಕ್ಕಾಗಿಯಲ್ಲ ಹಾಗೂ ಅದರಲ್ಲಿ ಪ್ರವೇಶ ಪಡೆಯಲು ಮೆರಿಟ್ ಆಧಾರದ ಮೇಲೆ ಎಲ್ಲರಿಗೂ ಸಮಾನ ಅವಕಾಶವಿರಬೇಕು, ಇರುವಂತೆ ಸರ್ಕಾರ ನೋಡಿಕೊಳ್ಳಬೇಕು, ಇದು ತೀರ್ಪಿನ ಸಾರಾಂಶ. ನನ್ನ ಅಭಿಪ್ರಾಯದಲ್ಲಿ ಸರ್ಕಾರಗಳು ಹೋಟೆಲ್, ಸಾಬೂನಿನ ಕಾರ್ಖಾನೆ, ಸಕ್ಕರೆ ಕಾರ್ಖಾನೆ – ಹೀಗೆ ಖಾಸಗಿಯವರಿಗೇ ಬಿಡಬಹುದಾದ ಕ್ಷೇತ್ರಗಳಲ್ಲಿ ಕೈ ಹಾಕದೇ, ಶಿಕ್ಷಣ-ಆರೋಗ್ಯದಂತಹ ಮೂಲಭೂತ ವಿಷಯಗಳಿಗೆ ತನ್ನ ಹಣ-ಶಕ್ತಿ-ಗಮನವನ್ನು ಕೇಂದ್ರೀಕರಿಸಿ, ಖಾಸಗಿ ಕ್ಷೇತ್ರದೊಂದಿಗೆ ಕೈಜೋಡಿಸಿ ಅಥವಾ ಅದಕ್ಕೆ ಸ್ಪರ್ಧಿಯಾಗಿ ಉತ್ತಮ ಸೇವೆಯನ್ನು ಜನತೆಗೆ ಒದಗಿಸಲು ಮನಸ್ಸು ಮಾಡಿದಲ್ಲಿ ಇಂತಹ ಪರಿಸ್ಥಿತಿಯಿಂದ ಹೊರ ಬರಬಹುದು. ಖಾಸಗಿ ಕ್ಷೇತ್ರವನ್ನೂ ಸರ್ಕಾರದ ಸಹಯೋಗವಿಲ್ಲದೆ ಬೆಳೆಯುವಂತೆ, ಅದರಿಂದ ಸಮಾಜಕ್ಕೆ ಉತ್ತಮ ಮಟ್ಟದ ಸೇವೆ ದೊರೆಯುವಂತೆ ಮಾಡಬಹುದು. ಸಮಾಜದ ಎಲ್ಲಾ ವರ್ಗದವರನ್ನು ಇಂತಹ ವ್ಯವಸ್ಥೆ ತಲುಪಲು ಸಾಧ್ಯವಾಗಬಹುದು.

❑ ಹೇಮಲತಾ ಮಹಿಷಿ, ವಕೀಲರು, ಬೆಂಗಳೂರು

# ವೃತ್ತಿಪರ ಶಿಕ್ಷಣ ಸಂಸ್ಥೆಗಳ ಪರವಾದ ಸರ್ವೋಚ್ಚ ನ್ಯಾಯಾಲಯದ ತೀರ್ಪು– ಶ್ರೀಮಂತರ ಪರ ಹಾಗೂ ಬಡವರ ವಿರುದ್ಧದ ತೀರ್ಪು

"ಯಾರಿಗೆ ಬಂತು, ಎಲ್ಲಿಗೆ ಬಂತು; ನಲವತ್ತೇಳರ ಸ್ವಾತಂತ್ರ್ಯ...!?!"

ಆಗಸ್ಟ್ ೧೨ರಂದು ಭಾರತದ ಸರ್ವೋಚ್ಚ ನ್ಯಾಯಾಲಯದ ಏಳು ನ್ಯಾಯಾಧೀಶರ ಪೀಠ – ಅನುದಾನ ರಹಿತ ಖಾಸಗಿ ವೃತ್ತಿಪರ ಶಿಕ್ಷಣ ಕಾಲೇಜುಗಳ ಆಡಳಿತ ಮಂಡಳಿಗಳ ಪರವಾಗಿ ನೀಡಿರುವ ತೀರ್ಪು – ನಮ್ಮ ದೇಶದ ನ್ಯಾಯಾಲಯ ವ್ಯವಸ್ಥೆ 'ನಿಜಕ್ಕೂ' ಯಾವ ವರ್ಗದ ಹಿತಾಸಕ್ತಿಯನ್ನು ಎತ್ತಿಹಿಡಿಯುತ್ತಿದೆ – ಎಂದು ಅರ್ಥ ಮಾಡಿಕೊಳ್ಳುವುದಕ್ಕೆ ಒದಗಿ ಬಂದಿರುವ ಸ್ಪಷ್ಟ ನಿದರ್ಶನ. "ಸಾರ್ವಜನಿಕ ನಿಧಿಗಳಿಂದ ಯಾವುದೇ ರೀತಿಯ ಹಣಕಾಸು ನೆರವು ಪಡೆಯದೆ ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಮತ್ತು ಅವುಗಳ ಆಡಳಿತ ನಿರ್ವಹಿಸುವ ಮೂಲಭೂತ ಹಕ್ಕನ್ನು ಈ ಸುಪ್ರೀಂ ಕೋರ್ಟ್ ತೀರ್ಪು ಎತ್ತಿ ಹಿಡಿದಿದೆ. ಅದರಲ್ಲಿ ಯಾವುದೇ ತಪ್ಪಿಲ್ಲ" – ಎಂದು ಕನ್ನಡಪ್ರಭದಲ್ಲಿ ಎಂ. ರಾಮಾಜೋಯಿಸ್ ಮತ್ತು ಉದಯವಾಣಿಯಲ್ಲಿ ಶಂಕರ ಖಂಡೇರಿ – ಅವರಂತಹವರು ಈ ತೀರ್ಪು ನೀಡಿದ ಮಾನ್ಯ ಆರ್. ಸಿ. ಲಹೋಟಿ ಮತ್ತು ಅವರ ಜತೆಗಿನ ಆರು ನ್ಯಾಯಾಧೀಶರ ನ್ಯಾಯಪ್ರಜ್ಞೆಗೆ ಶಹಬ್ಬಾಸ್ ಕೂಡಾ ಕೊಟ್ಟಿದ್ದಾರೆ. ಈ 'ಇಡೀ' ಟಿ.ಎಂ.ಎ. ಪೈ ಮೊಕದ್ದಮೆಯ ಪ್ರಕ್ರಿಯೆಯ ಹಿಂದೆ ಎಷ್ಟೆಲ್ಲಾ ಹಣ, ಪ್ರಭಾವ ಕೆಲಸ ಮಾಡಿರಬಹುದು – ಎನ್ನುವ ಅಂಶ ಇಲ್ಲಿ ಚರ್ಚೆಗೆ ಯೋಗ್ಯವಲ್ಲ ಎಂದಿಟ್ಟುಕೊಂಡರೂ, ೧೯೪೭ರಲ್ಲಿ ಭಾರತಕ್ಕೆ ಸಿಕ್ಕಿದ ಸ್ವಾತಂತ್ರ್ಯ ನಿಜಕ್ಕೂ ಶ್ರೀಮಂತರಿಗೆ ಬಡವರನ್ನು ಶೋಷಿಸಲು ಸಿಕ್ಕಿದ ಸ್ವಾತಂತ್ರ್ಯ ಎಂದು ಈ ಪ್ರಕರಣದ ಆಧಾರದಲ್ಲಿ ಧಾರಾಳವಾಗಿ ಹೇಳಬಹುದು.

ಸ್ವಾತಂತ್ರ್ಯ ಲಭಿಸಿದ ಪ್ರಾರಂಭದಲ್ಲಿ ರಷ್ಯಾದ ಸೋವಿಯತ್ ಯೂನಿಯನ್ ಇನ್ನೂ ಪ್ರಬಲವಾಗಿ ಕಾರ್ಯ ನಿರ್ವಹಿಸುತ್ತಿದ್ದುದರಿಂದ ನಮ್ಮ ದೇಶದ ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಸ್ವಲ್ಪವಾದರೂ 'ಸಮಾಜವಾದ' ಇತ್ತು. ಬ್ಯಾಂಕುಗಳು ರಾಷ್ಟ್ರೀಕರಣಗೊಂಡವು; ರಾಜ ಮಹಾರಾಜರ ಐಶಾರಾಮ ಜೀವನಕ್ಕೆ ಬಡ ಬೋರೇಗೌಡನ ಕಿಸೆಯಿಂದ ಹೋಗುತ್ತಿದ್ದ 'ರಾಜಧನ' ಪದ್ಧತಿ ರದ್ದಾಯಿತು; 'ಉಳುವವನೇ ಹೊಲದೊಡೆಯ,' ಕಾನೂನು ಜಾರಿಗೆ ಬಂತು... – ಹೀಗೆ ಕೆಲವಾದರೂ ಬಡವರ ಪರವಾದ ಕಾರ್ಯಕ್ರಮಗಳು ಅನುಷ್ಠಾನಕ್ಕೆ ಬಂದವು.

ತೊಂಬತ್ತರ ದಶಕದಲ್ಲಿ ರಷ್ಯಾದ ಸೋವಿಯತ್ ಯೂನಿಯನ್ ಬಿದ್ದು ಹೋದ ಮೇಲೆ - ಪ್ರಪಂಚದಾದ್ಯಂತ ಎಲ್ಲಾ ಆರ್ಥಿಕ, ರಾಜಕೀಯ ನೀತಿಗಳೂ ಉಳ್ಳವರ ಪರ ಆಗುತ್ತಿವೆ. ಬಡವರ ಹಸಿದ ಹೊಟ್ಟೆಗೆ ಹೊಡೆದು ಶ್ರೀಮಂತರಿಗೆ ಸಮೃದ್ಧ ಊಟ ಬಡಿಸುವ – ಜಾಗತಿಕ ಬಂಡವಾಳಶಾಹಿ ನೀತಿ ತಾನೇ ತಾನಾಗಿ ಮೆರೆಯತೊಡಗಿದೆ. ಈಗ ಪ್ರಕಟವಾಗಿರುವ ಸುಪ್ರೀಂ ಕೋರ್ಟ್ ತೀರ್ಪು ಕೂಡಾ ಇದೇ ಬಂಡವಾಳಶಾಹಿ ದಬ್ಬಾಳಿಕೆಯ ಸ್ಪಷ್ಟ ನಿದರ್ಶನ. ಸರಕಾರೀ ನೌಕರರಿಗೆ ಚಳುವಳಿ ನಡೆಸುವ ಹಕ್ಕಿಲ್ಲ - ಎನ್ನುವ ತೀರ್ಪು ಇತ್ತಾಗಲೂ, ಸರ್ದಾರ್ ಸರೋವರ್ ಚಳುವಳಿ ನಿರತರ ವಿರುದ್ಧ ತೀರ್ಪು ಇತ್ತಾಗಲೂ, ಅರುಂಧತಿ ರಾಯ್‌ರನ್ನು ಒಂದು ದಿನ ಜೈಲಿಗೆ ಕಳುಹಿಸಿದಾಗಲೂ ವ್ಯಕ್ತವಾದದ್ದು ಇದೇ ಬಂಡವಾಳಶಾಹಿಯ ದಬ್ಬಾಳಿಕೆ.

ಇತ್ತೀಚೆಗೆ ಹರ‍್ಯಾಣದ ಗುರ್‌ಗಾಂವ್‌ನ ಹೊಂಡಾ ಕಾರ್ಖಾನೆಯ ಕಾರ್ಮಿಕರನ್ನು ಪೊಲೀಸರು ನಿರ್ದಯವಾಗಿ ಹೊಡೆದು, ಬಡಿದು ಹಿಂಸಿಸಿದ ಘಟನೆ ಕೂಡ ಇದೇ ನೀತಿಯನ್ನು ಪ್ರತಿಬಿಂಬಿಸುತ್ತದೆ.

ನಮ್ಮ ದೇಶದ ನ್ಯಾಯಾಲಯ, ಪೊಲೀಸರು, ಸೈನಿಕರು, ಅಧಿಕಾರಿಗಳು – ಎಲ್ಲ ಒಟ್ಟಾಗಿ – ಸಂರಕ್ಷಿಸುತ್ತಿರುವುದು ಶ್ರೀಮಂತ ವರ್ಗದ ಹಿತಾಸಕ್ತಿಯನ್ನೇ ಹೊರತು, ಬಹುಸಂಖ್ಯಾತ ಬಡವರ ವರ್ಗ ಹಿತಾಸಕ್ತಿಯನ್ನು ಖಂಡಿತಾ ಅಲ್ಲ – ಎಂದು ಮೇಲೆ ಸೂಚಿಸಲ್ಪಟ್ಟ ಪ್ರಕರಣಗಳು ಸಾಬೀತುಪಡಿಸುತ್ತಿಲ್ಲವೇ ?

ಸರ್ದಾರ್ ಸರೋವರ ಪ್ರದೇಶ ಆದಿವಾಸಿಗಳಿಗಾಗಲೀ, ಹರ‍್ಯಾಣಾದ ಗುರ್‌ಗಾಂವ್‌ನ

ಹೋಂಡಾ ಕಂಪನಿಯ ಕಾರ್ಮಿಕರಿಗಾಗಲೀ, ಕುದುರೆಮುಖ ಅರಣ್ಯ ಪ್ರದೇಶದ ಆದಿವಾಸಿಗಳಿಗಾಗಲೀ, ಕರ್ನಾಟಕದ ಬಹುಸಂಖ್ಯಾತ ಬಡ ವಿದ್ಯಾರ್ಥಿಗಳಿಗಾಗಲೀ, ನ್ಯಾಯಾಲಯಗಳಲ್ಲಿ ವಕೀಲರನ್ನಿಟ್ಟು, ಲಕ್ಷಗಟ್ಟಲೆ ಖರ್ಚು ಮಾಡಿ ನ್ಯಾಯಕ್ಕಾಗಿ ಹೋರಾಡಲು ಸಾಧ್ಯವೇ ? ...ಶ್ರೀಮಂತ ಬಂಡವಾಳಶಾಹಿ ಆಡಳಿತ ಮಂಡಳಿಗಳಂತೆ...? ತರ್ಕ ಎಷ್ಟು ಸರಳವಾಗಿದೆ ನೋಡಿ. ಕಾಮೆಡ್ ಕೆ-ಯ ಸದಸ್ಯರಾದ ಶ್ರೀಮಂತ ಆಡಳಿತ ಮಂಡಳಿಗಳ ಸಂವಿಧಾನಬದ್ಧ ಹಕ್ಕನ್ನು ಎತ್ತಿ ಹಿಡಿಯುವ ಉತ್ಸಾಹದಲ್ಲಿ ಆರ್. ಸಿ. ಲಹೋಟಿ ಮತ್ತು ಅವರ ಜೊತೆಗಿನ ಆರು ಜನ ಸುಪ್ರೀಂ ಕೋರ್ಟ್‌ನ ನ್ಯಾಯಾಧೀಶರುಗಳು ಬಡವರ ಬದುಕುವ ಹಕ್ಕನ್ನು ಯಾವುದೇ ಅಪರಾಧ ಪ್ರಜ್ಞೆ ಇಲ್ಲದೆ ಕಸಿದುಕೊಂಡಿದ್ದಾರೆ. ಸಿಇಟಿ ಮತ್ತು ಸೀಟು ಹಂಚಿಕೆಯ ಮೀಸಲಾತಿ ಸೌಲಭ್ಯ ಇದ್ದಾಗಲೂ – ನಮ್ಮ ಶ್ರೀಮಂತರ ಪರವಾದ ಸರಕಾರ – ನಿಗದಿಪಡಿಸಿದ ಶುಲ್ಕ ಎಷ್ಟು ದುಬಾರಿ ಆಗಿತ್ತೆಂದರೆ, ಬಡವರು ಬಿಡಿ, ಮಧ್ಯಮ ವರ್ಗದವರಿಗೂ ವೈದ್ಯಕೀಯ, ಇಂಜಿನಿಯರಿಂಗ್ ಶಿಕ್ಷಣ – ಗಗನ ಕುಸುಮವಾಗಿತ್ತು. ಈಗ ಖಾಸಗೀ ಆಡಳಿತ ಮಂಡಳಿಗಳಿಗೆ - ಸರಕಾರದ ನಿಯಮಾವಳಿಗಳ ಮತ್ತು ಸಾಮಾಜಿಕ ನ್ಯಾಯದ ನಿಯಂತ್ರಣವೇ ಇಲ್ಲ ಎಂದರೆ ಅವರು ಆಡಿದ್ದೇ ಆಟವಾಗುತ್ತದೆ. ಎಷ್ಟು ಬೇಕಾದರೂ ಶುಲ್ಕ ನಿಗದಿಪಡಿಸಬಹುದು! ಎಷ್ಟು ಬೇಕಾದರೂ ಸ್ವಜಾತಿ/ಸ್ವಜನ ಪಕ್ಷಪಾತವೆಸಗ ಬಹುದು. ಇದೆಂತಹ ವಿಪರ್ಯಾಸ!

ಹಾಗೆ ಲಕ್ಷಾಂತರ ರೂಪಾಯಿ ಖರ್ಚು ಮಾಡಿ, ವೈದ್ಯರೂ, ತಂತ್ರಜ್ಞರೂ ಆಗುವ ಶ್ರೀಮಂತ ಹಿನ್ನೆಲೆಯ ವಿದ್ಯಾರ್ಥಿಗಳಿಂದ ಭವಿಷ್ಯದಲ್ಲಿ ಎಂತಹ 'ಸೇವೆ'ಯನ್ನು ನಿರೀಕ್ಷಿಸಬಹುದು ? ಪ್ರತಿಭಾವಂತ ಬಡ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ಪಡೆಯುವುದು ಹೇಗೆ ಸಾಧ್ಯ ?

* * *

ಸಾರ್ವಜನಿಕ ನಿಧಿಯಿಂದ ಯಾವುದೇ ರೀತಿಯ ಹಣಕಾಸಿನ ನೆರವನ್ನು ಈ ಖಾಸಗಿ ಆಡಳಿತ ಮಂಡಳಿಗಳು ಪಡೆದಿಲ್ಲ ಎನ್ನುವ ವಾದ ಹುರುಳಿಲ್ಲದ್ದು; ಬಂಡವಾಳಶಾಹಿ ವ್ಯವಸ್ಥೆಯ ದುರಹಂಕಾರದ್ದು!

ಮೊದಲನೆಯದಾಗಿ, ಅಂತಹ ಆಡಳಿತ ಮಂಡಳಿಗಳಿಗೆ ವೃತ್ತಿಪರ ಶಿಕ್ಷಣ ಸಂಸ್ಥೆ ಆರಂಭಿಸಲು ಅವಕಾಶ ಸಿಕ್ಕಿದ್ದೇ ಅವುಗಳು ಭಾಷಾ ಅಲ್ಪ ಸಂಖ್ಯಾತರು, ಮತೀಯ ಅಲ್ಪ ಸಂಖ್ಯಾತರು, ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿದವರು, ಹಿಂದುಳಿದ ಪ್ರದೇಶದವರು – ಮುಂತಾದ ನಮ್ಮ ಸಂವಿಧಾನ ಕೊಡಮಾಡಿದ ವಿಶೇಷ ರಿಯಾಯಿತಿಯಿಂದಾಗಿ. ಆದ್ದರಿಂದ ಅವರು ಸಂವಿಧಾನದ ಮೂಲ ಆಶಯವಾದ ಸಾಮಾಜಿಕ ನ್ಯಾಯಕ್ಕೆ ಬದ್ಧರಾಗಿರಬೇಕು.

ಅಲ್ಲದೆ, ಈ ದೇಶದಲ್ಲಿದ್ದುಕೊಂಡು ಇಲ್ಲಿನ ನೆಲ, ಜಲ, ಪ್ರಾಕೃತಿಕ ಸಂಪತ್ತು ಮತ್ತು ಮಾನವ ಸಂಪತ್ತು – ಉಪಯೋಗಿಸಿಕೊಂಡೇ ಅವರು ತಮ್ಮ ಉದ್ಯಮದಲ್ಲಿ ಕೋಟಿಗಟ್ಟಲೆ ಲಾಭ ಗಳಿಸಿರುವುದು. ಅವರ ಲಾಭ ಗಳಿಕೆಯ ಹಿಂದೆ ಈ ನೆಲದ ದುಡಿಯುವ ವರ್ಗದ ಜನರ ಬೆವರಿನ ಋಣ ಇದೆ; ದುಡಿತದ ಸಂಸ್ಕೃತಿ ಇದೆ. ಅವರು ಸರಿಯಾಗಿ ಆದಾಯ ತೆರಿಗೆ ಕಟ್ಟಿದ್ದರೆ ಅವರಿಗೆ ಅಷ್ಟು ಸಂಪತ್ತು ಶೇಖರಿಸಲು ಹೇಗೆ ಸಾಧ್ಯವಾಗುತ್ತಿತ್ತು? ಆದ್ದರಿಂದ ಅವರ ಹಣದಲ್ಲಿ ಕಪ್ಪು ಹಣ ಎಷ್ಟು? ಬಿಳಿ ಎಷ್ಟು? ಈ ವಾಸ್ತವಾಂಶಗಳನ್ನೆಲ್ಲ ಮರೆತುಬಿಟ್ಟು – ''ನಮ್ಮ ಬಂಡವಾಳ; ನಮ್ಮ ಸಂಸ್ಥೆ'' ಎಂದು ಸಮಾಜ ಕಲ್ಯಾಣದ ಕಾಯ್ದೆಗಳನ್ನೆಲ್ಲಾ ಬದಿಗೊತ್ತಿ – ಅವರು ಸಂಸ್ಥೆ ನಡೆಸಲಿಕ್ಕೆ ಆಗುವುದಿಲ್ಲ ಮತ್ತು ಬಡಜನರ ಓಟಿನಿಂದ ಆರಿಸಿಬಂದು ಅಧಿಕಾರ ಹಿಡಿದಿರುವ ಸರಕಾರಗಳು ಹಾಗೆ ಶ್ರೀಮಂತ ಆಡಳಿತ ಮಂಡಳಿಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬಾರದು. ಅಂತಹ ಸಂಸ್ಥೆಗಳು ನಡೆಸುವ ಆಸ್ಪತ್ರೆಗಳಲ್ಲಿ ರೋಗಿಗಳ ದರೋಡೆಯೂ ಅತಿಯಾಗಿರುತ್ತದೆ. ಲಾಭಗಳಿಸುವುದೇ ಮೂಲ ಉದ್ದೇಶವಾಗಿರುವ ಖಾಸಗಿ ಆಡಳಿತ ಮಂಡಳಿಗಳಿಂದ ನಾವು ಸಾಮಾಜಿಕ ನ್ಯಾಯ ನಿರೀಕ್ಷಿಸುವುದೇ ಅಸಂಬದ್ಧ.

ಈ ತೀರ್ಪಿನಲ್ಲಿರುವ ದೊಡ್ಡ ತಮಾಷೆಯೆಂದರೆ, ಅಂತಹ ಆಡಳಿತ ಮಂಡಳಿಗಳು ಕ್ಯಾಪಿಟೇಶನ್ ಶುಲ್ಕ ಸಂಗ್ರಹಿಸದಂತೆ ತೀರ್ಪು ನಿರ್ಬಂಧ ಹಾಕಿದೆ! ಇದೊಂದು ದೊಡ್ಡ ತಮಾಷೆ. ಯಾಕೆಂದರೆ ಕರ್ನಾಟಕದಲ್ಲಿರುವ ಎಲ್ಲಾ ಖಾಸಗಿ ಆಡಳಿತ ಮಂಡಳಿಗಳು ವೃತ್ತಿಪರ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವುದೇ ಜನಸೇವೆಗಾಗಿ ಅಲ್ಲ, ಈ ಕೋಟಿಗಟ್ಟಲೆ ಕ್ಯಾಪಿಟೇಶನ್ ಶುಲ್ಕದ ದುರಾಸೆಯಿಂದ. ವಿವಿಧ ಜಾತಿ, ಮತಗಳ ಮುಖಂಡರುಗಳು ಈ 'ಕ್ಯಾಪಿಟೇಶನ್ ಶುಲ್ಕ'ದ ಆಕರ್ಷಣೆಯಿಂದಲೇ ವೃತ್ತಿಪರ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿರುವುದು ಎನ್ನುವ ಸತ್ಯ ಒಂದು ಸಣ್ಣ ಮಗುವಿಗೂ ಅರ್ಥವಾಗುವಂತಹದ್ದು. ಆದರೆ ಸುಪ್ರೀಂ ಕೋರ್ಟ್ ತೀರ್ಪು ಹೇಳುತ್ತದೆ – ಆ ಸಂಸ್ಥೆಗಳು ಕ್ಯಾಪಿಟೇಶನ್ ಶುಲ್ಕ ಸಂಗ್ರಹಿಸಬಾರದು! ಆದರೆ ಶುಲ್ಕ ತಮಗೆ ಬೇಕಾದಷ್ಟು ಸಂಗ್ರಹಿಸಬಹುದು. ಪ್ರವೇಶ ಯಾರಿಗಾದರೂ ನೀಡಬಹುದು! ಎಂತಹ ಬಡಜನ ವಿರೋಧೀ ನಿಲುವು ಇದು! ಈಗಾಗಲೇ ಅಸ್ತಿತ್ವದಲ್ಲಿರುವ ನಿಷೇಧವನ್ನು ಯಾಕೆ ಜಾರಿಗೊಳಿಸುತ್ತಿಲ್ಲ? ಎಲ್ಲ ನಾಟಕ!

ಇನ್ನೊಂದು ಅಪಾಯವೆಂದರೆ, ಜಾತಿ, ಮತಗಳ ಒಡೆತನದಲ್ಲಿ ನಡೆಸಲ್ಪಡುತ್ತಿರುವ ಈ ವೃತ್ತಿ ಶಿಕ್ಷಣ ಸಂಸ್ಥೆಗಳಿಂದಾಗಿಯೇ ಜಾತೀಯತೆ, ಮತೀಯತೆಗಳು ಉಲ್ಬಣಿಸಿ, ಕೋಮು ಸೌಹಾರ್ದದ ವಾತಾವರಣ ಹದಗೆಡುತ್ತಿದೆ.

ಈ ಎಲ್ಲಾ ಕಾರಣಗಳಿಗಾಗಿ – ನನ್ನ ಸ್ಪಷ್ಟ ಅಭಿಪ್ರಾಯ ಏನೆಂದರೆ - ಅನುದಾನರಹಿತ ಖಾಸಗಿ ವೃತ್ತಿಪರ ಶಿಕ್ಷಣ ಸಂಸ್ಥೆಗಳ ಮೇಲೆ ಜನಪ್ರಿಯ ಸರಕಾರಗಳ ನಿಯಂತ್ರಣ ಇರಲೇಬೇಕು. ಅದಕ್ಕೆ ಸಂಬಂಧಪಟ್ಟ ಶಾಸನವನ್ನು ಕೂಡಲೇ ಜಾರಿಗೆ ತರಬೇಕು. ಉನ್ನತ ಶಿಕ್ಷಣದ ಜವಾಬ್ದಾರಿಯನ್ನು ಬಂಡವಾಳಶಾಹಿಗಳಿಗೆ ಬಿಟ್ಟುಕೊಟ್ಟು, ಸರಕಾರಗಳು ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳಬಾರದು. ಅದಕ್ಕಿಂತಲೂ ಮುಖ್ಯವಾಗಿ – ವೈದ್ಯಕೀಯ, ಇಂಜಿನಿಯರಿಂಗ್‌ನಂತಹ ಪ್ರಮುಖ ಸಮಾಜ ಸೇವಾ ರಂಗಗಳನ್ನು ಸರಕಾರವೇ ವಹಿಸಿಕೊಂಡು, ಎಲ್ಲಾ ವೃತ್ತಿಪರ ಶಿಕ್ಷಣ ಸಂಸ್ಥೆಗಳನ್ನೂ ತಾನೇ ನಡೆಸಿ, ಸಮಾಜದ ಎಲ್ಲಾ ವರ್ಗದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಮತ್ತು ಜನಸಾಮಾನ್ಯರಿಗೆ ನ್ಯಾಯ ಒದಗಿಸಬೇಕು. ಆಗ ಮಾತ್ರ ನಮ್ಮ ದೇಶದಲ್ಲಿ ನಿಜವಾದ ಪ್ರಜಾಪ್ರಭುತ್ವ ನೆಲೆಗೊಳ್ಳುವಂತಾಗುತ್ತದೆ.

## ಸೃಜನೆ ಸೂರ್ಯ

ಆಸೆ ಗಾಳಿಪಟ ಹಾರಲು ಹೊರಟರೆ
ಬಯಕೆ ಬಾಲಂಗೋಚಿ ಇರುವುದೇನೇ!
ಮನ ಬಾನಂತೆ ವಿಶಾಲವಾದರೆ –
ಕಾಲು ಕುದುರೆಯಂತೆ ಓಡುವುದೇ!

ತನು ಹೆಂಚಾಗಿ ವಾಂಛೆಯ ಒಲೆ ಉರಿಯೇ
ಕಾಮನೆ ಭಾವನೆ ಕುದಿಯುವುದೇ!

ಈ ಶರೀರ ರಥದಲಿ ಮಿಂಚು ಸಂಚರಿಸೆ
ಮೋಹದ ಬಿರುಮಳೆ ಸುರಿಯುವುದೇ!

ಎಲ್ಲಿಯದೋ ಆಸೆ ಎಲ್ಲಿಯದೋ ಬಯಕೆ
ದೇಹವೇ ಅದಕೆ ಸಿರಿಭೂಮಿಕೆ!

ಕಲ್ಪನೆ ರೆಕ್ಕೆಯಿಕ್ಕಿ ಸೃಜನೆ ವಿಹಾರಿ
ಹೃದಯಾಂಬರದಲಿ ಸೃಷ್ಟಿ ರವಿ!



ಡಾ॥ ದೊಡ್ಡರಂಗೇಗೌಡ, ೧೪೦, ೩ನೇ ಮುಖ್ಯರಸ್ತೆ, ಕತ್ತರಿಗುಪ್ಪೆ (ಪೂರ್ವ), ೪ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ಶ್ರೀಮಂತರಿಗೆ ಮಾತ್ರವಲ್ಲ ಬಡವರಿಗೂ ಕೈಗೆಟುಕುವ ಶುಲ್ಕದಲ್ಲಿ ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣ ಲಭಿಸಿದಂತಾಗುತ್ತದೆ.

❑ **ಪ್ರೊ॥ ಎಸ್. ಹಯವದನ ಉಪಾಧ್ಯ**, ಅಧ್ಯಕ್ಷರು
ಅಮುಕ್ತ ಮಂಗಳೂರು, ವಿಜಯ ಕಾಲೇಜು ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ

# ವೃತ್ತಿಪರ ಶಿಕ್ಷಣ : ಸುಪ್ರೀಮ್ ಕೋರ್ಟ್ ತೀರ್ಪು ಗೊಂದಲ – ಪರಿಹಾರ

ಇತ್ತೀಚಿನ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಸಾರಾಂಶ ಇಷ್ಟೇ. ಅನುದಾನ ರಹಿತ ಕಾಲೇಜಿನಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿ ಪ್ರಕ್ರಿಯೆಯಲ್ಲಿ ಸರಕಾರಕ್ಕೆ ಹಸ್ತಕ್ಷೇಪ ಮಾಡುವ ಅಧಿಕಾರ ಇಲ್ಲ. ಯಾವುದೇ ಮೀಸಲಾತಿ ನಿಯಮಗಳು ಅನ್ವಯವಾಗುವುದಿಲ್ಲ. ಅಂದರೆ ಖಾಸಗಿ ಕಾಲೇಜುಗಳು ತಮಗೆ ಇಷ್ಟ ಬಂದಂತೆ ಪ್ರವೇಶ ನೀಡಬಹುದು ಎನ್ನುವ ಅರ್ಥ ಅಲ್ಲ. ಪ್ರವೇಶಾತಿ ಪ್ರಕ್ರಿಯೆಯಲ್ಲಿ ನಿರ್ದಿಷ್ಟ ನಿಯಮಾವಳಿಗಳನ್ನು ಅನುಸರಿಸ ಬೇಕು. ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ ಮಾತ್ರ ಪ್ರವೇಶ ನೀಡಬೇಕು. ಈ ತೀರ್ಪು ಸಮಾಜದಲ್ಲಿ ಕೋಲಾಹಲವನ್ನೇ ಉಂಟುಮಾಡಿದೆ. ಅನೇಕ ರಾಜಕೀಯ ಪಕ್ಷಗಳಿಗೆ, ಸಂಘ ಸಂಸ್ಥೆಗಳಿಗೆ ಹೊಸ ಕಾರ್ಯಕ್ರಮ, ಹುರುಪು ತಂದಿದ್ದರೂ ಪೋಷಕರಿಗೆ ಸ್ವಾಭಾವಿಕ ವಾಗಿ ತೀವ್ರ ಆತಂಕ ಮೂಡಿದೆ. ಅಂದರೆ, ಸರಕಾರದ ಬೆಂಬಲವಿಲ್ಲದ, ಮೇಲ್ವಿಚಾರಣೆ ಇಲ್ಲದ ವ್ಯವಸ್ಥೆ ಬಗ್ಗೆ ಸಮಾಜಕ್ಕೆ ಅಷ್ಟು ನಂಬಿಕೆ ಇಲ್ಲ ಎನ್ನುವುದನ್ನು ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಸೂಕ್ಷ್ಮವಾಗಿ ಗಮನಿಸಬೇಕು.

ನ್ಯಾಯಾಲಯದ ತೀರ್ಪಿನ ವಿಮರ್ಶೆ, ಪರಿಹಾರದ ಚರ್ಚೆಗೆ ಮೊದಲು ಉನ್ನತ ಶಿಕ್ಷಣ ವ್ಯಾಪ್ತಿ, ಸ್ವರೂಪ, ವೃತ್ತಿ ಶಿಕ್ಷಣದ ಬೆಳವಣಿಗೆಗಳ ಬಗ್ಗೆ ವಿಚಾರ ಮಾಡಬೇಕಾಗಿದೆ. ಉನ್ನತ ಶಿಕ್ಷಣ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗೆ ಅತೀ ಅಗತ್ಯ ಎನ್ನುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಉನ್ನತ ಶಿಕ್ಷಣವನ್ನು ಜ್ಞಾನ ಸಂಪಾದನೆ ದೃಷ್ಟಿಯಿಂದ ನೋಡಬೇಕೇ ಹೊರತು ಕೇವಲ ಉದ್ಯೋಗದ ದೃಷ್ಟಿಯಿಂದ ನೋಡಬಾರದು ಎನ್ನುವ ತರ್ಕದ ಆಧಾರದ ಮೇಲೆ ಸಾಮಾನ್ಯ ಉನ್ನತ ಶಿಕ್ಷಣವನ್ನು ರೂಪಿಸುವುದರಲ್ಲಿ ಎಲ್ಲೋ ಲೋಪವಾಗಿದೆ. ಶಿಕ್ಷಣ ಮತ್ತು ವೃತ್ತಿಯನ್ನು ಬೇರ್ಪಡಿಸಲು ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ. ಇದನ್ನು ಅರ್ಥ ಮಾಡಿಕೊಳ್ಳುವಲ್ಲಿ ನಮ್ಮ ಶಿಕ್ಷಣ ತಜ್ಞರು, ನೀತಿ ನಿರೂಪಕರು ಎಡವಿದ್ದಾರೆ. ಇಂಜಿನಿಯರಿಂಗ್, ವೈದ್ಯಕೀಯ, ಆಡಳಿತ ವ್ಯವಹಾರ ಪದವಿಗಳು ಮಾತ್ರ ಉದ್ಯೋಗ ದೊರಕಿಸಿಕೊಡಬಹುದು ಎನ್ನುವ ಭಾವನೆ ಬೆಳೆದು ಇಂದು ಉನ್ನತ ಶಿಕ್ಷಣ ಎಂದರೆ ವೃತ್ತಿ ಶಿಕ್ಷಣ ಎನ್ನುವ ಭ್ರಮೆ ಮೂಡಿದೆ. ಸಾಮಾನ್ಯ ಶಿಕ್ಷಣಕ್ಕೆ ವೆಚ್ಚವನ್ನು ಭರಿಸುವ ಶುಲ್ಕ ನೀಡಲು ತಯಾರಿಲ್ಲದ ಪೋಷಕರು ವೃತ್ತಿ ಶಿಕ್ಷಣದ ಹೆಸರಿನಲ್ಲಿ ಎಷ್ಟಾದರೂ ಶುಲ್ಕವನ್ನು ನೀಡಲು ತಯಾರಾಗಿದ್ದೆ ಇಂದಿನ ಅನೇಕ ಅವಾಂತರಗಳಿಗೆ ಕಾರಣವಾಗಿದೆ. ಈ ಅವಕಾಶವನ್ನು ಉಪಯೋಗಿಸಿಕೊಂಡು ಸರಕಾರ ಉನ್ನತ ಶಿಕ್ಷಣದ ಖಾಸಗೀಕರಣಕ್ಕೆ ಹೆಚ್ಚಿನ ಒಲವು ನೀಡಿತು. ಜಾಗತೀಕರಣದ ಅಬ್ಬರ ಪ್ರಾರಂಭವಾಗುವುದಕ್ಕಿಂತ ಮೊದಲೇ ಈ ಪ್ರಕ್ರಿಯೆ ನಮ್ಮ ರಾಜ್ಯದಲ್ಲಿ ಶುರುವಾಗಿದ್ದನ್ನು ನಾವು ಗಮನಿಸಬೇಕು. ಇಡೀ ದೇಶಕ್ಕೆ ಕ್ಯಾಪಿಟೇಶನ್ ಶುಲ್ಕದ ಆಧಾರದಲ್ಲಿ ವೃತ್ತಿ ಶಿಕ್ಷಣವನ್ನು ಪ್ರಾರಂಭಿಸುವ ಮೇಲ್ಪಂಕ್ತಿ ಹಾಕಿಕೊಟ್ಟಿರುವ ಹೆಗ್ಗಳಿಕೆ ನಮ್ಮ ರಾಜ್ಯದ್ದು! ಶಿಕ್ಷಣದ ಹೆಸರಿನಲ್ಲಿ ವ್ಯಾಪಾರ ಹಾಗೂ ಸಮಾಜ ಸೇವೆ ಎರಡೂ ಸಾಧ್ಯ ಎನ್ನುವ ಅರಿವು ನಮ್ಮ ರಾಜಕಾರಣಿಗಳಿಗೆ, ಮಠಾಧೀಶರಿಗೆ ಮತ್ತು ಜಾತಿ ವರ್ಗಗಳ ನೇತಾರರಿಗೆ ಮೂಡಿದ್ದು ಹೀಗೆ. ಸರಿ, ಪ್ರಾರಂಭವಾಯಿತು ಇಂಜನಿಯರಿಂಗ್, ವೈದ್ಯಕೀಯ ಕಾಲೇಜುಗಳ ಸ್ಫೋಟ. ಈಗ ಪ್ರತಿಯೊಂದು ರಾಜ್ಯದಲ್ಲಿಯೂ ಇಂತಹ ಶಿಕ್ಷಣ ಸಂಸ್ಥೆಗಳ ಸಂಖ್ಯೆಯನ್ನು ಗಮನಿಸಿದರೆ ದಿಗ್ಭ್ರಮೆಯಾಗುತ್ತದೆ. ಅತೀ ಹೆಚ್ಚಿನ ಕಾಲೇಜುಗಳು ರಾಜಕಾರಣಿಗಳ, ಜಾತಿ ವರ್ಗಗಳ ನೇತಾರರ ಒಡೆತನದಲ್ಲಿದೆಯೆನ್ನುವುದು ಗಮನಾರ್ಹ. ಹೀಗಾಗಿ ಪ್ರವೇಶಾತಿ, ಅರ್ಹತಾ ನಿಯಮಾವಳಿಗಳಲ್ಲಿ ಸಡಿಲಿಕೆ ಆರಂಭವಾಯಿತು. ಎಷ್ಟರಮಟ್ಟಿಗೆ ಎಂದರೆ ಕೇವಲ ಶೇ. ೩೫ ಅಂಕ ಗಳಿಸಿದರೂ ಪ್ರವೇಶ ನೀಡಲಾಯಿತು. ಸಾಮಾನ್ಯ ಪ್ರವೇಶ ಪರೀಕ್ಷೆ (ಸಿಇಟಿ) ಒಂದು ಉತ್ತಮ ಕ್ರಮ ಎನ್ನಿಸಿದರೂ ಕ್ರಮೇಣ ಸರಕಾರ ನಿಯಂತ್ರಣ ಕಳೆದುಕೊಂಡಿರುವುದು ಸ್ಪಷ್ಟ. ವಿವಾದ ಪ್ರಾರಂಭವಾಗಿದ್ದೂ ನಮ್ಮ ರಾಜ್ಯದಲ್ಲೇ. ಟಿ.ಎಂ.ಎ. ಪೈ ಪ್ರತಿಷ್ಠಾನ ಪ್ರವೇಶಾತಿ ವಿವಾದದಲ್ಲಿ ಸುಪ್ರೀಂ ಕೋರ್ಟ್‌ನ ಪೂರ್ಣ ಪೀಠದ ತೀರ್ಪಿನಿಂದ ಕಾನೂನು ಸಮರ ಪ್ರಾರಂಭವಾಯಿತು.

ನ್ಯಾಯಾಲಯದ ತೀರ್ಪನ್ನು ವಿಮರ್ಶೆ ಮಾಡುವ ಹಕ್ಕು ನಮಗಿದೆ. ಅನೇಕ ವಿಷಯಗಳಲ್ಲಿ ನ್ಯಾಯಾಲಯ ನ್ಯಾಯ ಕ್ರಿಯಾಶೀಲತೆಯನ್ನು ತೋರಿರುವುದರಿಂದ ಈ ಮೊಕದ್ದಮೆಯಲ್ಲಿ ಬಹಳಷ್ಟು ಭರವಸೆ ಇಡಲಾಗಿತ್ತು. ಮೇಲಾಗಿ ಖಾಸಗಿ ಕಾಲೇಜುಗಳು ಸರಕಾರದಿಂದ ರಿಯಾಯಿತಿ ರೂಪದಲ್ಲಿ ತಮ್ಮ ಶಿಕ್ಷಣ ಸಂಸ್ಥೆಗಳಿಗೆ ಸವಲತ್ತುಗಳನ್ನು ಪಡೆದಿರುವುದರಿಂದ ಒಂದಲ್ಲ ಒಂದು ರೀತಿ ಸರಕಾರದ ನಿಯಂತ್ರಣವನ್ನು ನ್ಯಾಯಾಲಯ ಒಪ್ಪಿಕೊಳ್ಳಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ ನಿರಾಸೆ ಆಗಿದೆ. ಟಿ.ಎಂ.ಎ. ಪೈ ಪ್ರತಿಷ್ಠಾನ ಕೇಸಿನಿಂದ ಪ್ರಾರಂಭಿಸಿ ಇತ್ತೀಚಿನವರೆಗೆ ನ್ಯಾಯಾಲಯದ ನಿರ್ಧಾರಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ, ಸರಕಾರದಿಂದ ಸವಲತ್ತುಗಳನ್ನು ಪಡೆಯದ ಖಾಸಗಿ ಕಾಲೇಜುಗಳ ಮೇಲೆ, ಅಲ್ಪ ಸಂಖ್ಯಾತ ಕಾಲೇಜುಗಳ ಮೇಲೆ ಸರಕಾರಕ್ಕೆ ನಿಯಂತ್ರಣ ಮಾಡುವ ಹಕ್ಕಿಲ್ಲ ಎಂದು ಅಭಿಪ್ರಾಯಪಟ್ಟಿರುವುದು ಈಗ ದೃಢಪಟ್ಟಿದೆ. ಟಿ.ಎಂ.ಎ. ಪೈ ತೀರ್ಪಿನಿಂದ ಉದ್ಭವಿಸಿದ ಗೊಂದಲಗಳನ್ನು ನಿವಾರಿಸಲು ಇಸ್ಲಾಮಿಕ್ ಅಕಾಡೆಮಿ ಕೇಸಿನಲ್ಲಿ ೭ ನ್ಯಾಯಾಧೀಶರ ಪೀಠ ರಚಿಸಲಾಯಿತು. ಆದರೂ ಗೊಂದಲ ಮುಂದುವರೆದಿದ್ದರಿಂದ ಈಗ ೧೧ ನ್ಯಾಯಾಧೀಶರ ಪೂರ್ಣಪೀಠ ಈ ತೀರ್ಪು ನೀಡಿದೆ.

ನ್ಯಾಯಾಲಯದ ತೀರ್ಪಿನ ಮುಖ್ಯ ಅಂಶಗಳು ಎಂದರೆ ಅನುದಾನ ರಹಿತ ಕಾಲೇಜುಗಳ ಪ್ರವೇಶಾತಿ ಪ್ರಕ್ರಿಯೆಯಲ್ಲಿ ಸರಕಾರಕ್ಕೆ ಹಸ್ತಕ್ಷೇಪ ಮಾಡುವ ಹಕ್ಕಿಲ್ಲ. ಆದರೆ ಪ್ರವೇಶಾತಿ ಅರ್ಹತೆ ಆಧಾರದ ಮೇಲೆ, ಪಾರದರ್ಶಕತೆಯಿಂದ ನಡೆಯಬೇಕು. ಸೂಕ್ತ ವ್ಯವಸ್ಥೆ ಆಗುವವರೆಗೆ ಸಾಮಾನ್ಯ ಪ್ರವೇಶ (ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ) ಮೂಲಕ ಪ್ರವೇಶಾತಿ ನೀಡಬೇಕು. ಶಿಕ್ಷಣವನ್ನು ಸೇವೆಯೆಂದು ಪರಿಗಣಿಸಬೇಕೇ ಹೊರತಾಗಿ ಲಾಭಕೋರತನ ಮಾಡಬಾರದು. ಆದರೆ ಬೆಳವಣಿಗೆ, ಅಭಿವೃದ್ಧಿ ದೃಷ್ಟಿಯಿಂದ ಲಾಭ ಮಾಡಲು ಅನಿವಾಸಿ ಭಾರತೀಯರಿಗೆ ಶೇ. ೧೫ ಸೀಟನ್ನು ಮೀಸಲಿಡಬಹುದು. ಈ ತೀರ್ಪನ್ನು ವಿಮರ್ಶಿಸಿದಾಗ ಹೆಚ್ಚಾಗಿ ತಾಂತ್ರಿಕ ಕಾರಣಗಳಿಂದ ನಿರ್ಣಯ ಮಾಡಲಾಗಿದೆ ಎಂದು ನನ್ನ ಭಾವನೆ. ಲಾಭಕೋರತನ ಮತ್ತು ಲಾಭ ಮಾಡುವುದರ ಮಧ್ಯೆ ವ್ಯತ್ಯಾಸ ನಿರ್ಧರಿಸುವವರು ಯಾರು ಎನ್ನುವುದು ಮುಖ್ಯ ಪ್ರಶ್ನೆ. ಶಿಕ್ಷಣವನ್ನು ಸೇವೆಯೆಂದು ಪರಿಗಣಿಸಬೇಕು ಎದು ಹೇಳಿರುವುದು ಸರಿ. ಆದರೆ ವಾಸ್ತವ ಪರಿಸ್ಥಿತಿ ಏನು ? ವೃತ್ತಿ ಶಿಕ್ಷಣದ ಕೆಲವು ಪದವಿ ಹಾಗೂ ಸ್ನಾತಕೋತ್ತರ ಪದವಿಗಳಿಗೆ ವ್ಯಾಪಾರ ನಡೆಯುತ್ತಿರುವುದು ಸತ್ಯ. ಅಂತಹ ಪದವಿಗಳಿಗೆ ವಿಧಿಸುತ್ತಿರುವ ಶುಲ್ಕದ ಪ್ರಮಾಣವನ್ನು (೨೦ ಲಕ್ಷ, ೪೦ ಲಕ್ಷ ಹೀಗೆ) ಸಾಮಾನ್ಯದವರು ನಂಬಲೂ ಕೂಡ ಸಾಧ್ಯವಿಲ್ಲ. ಇತ್ತೀಚೆಗೆ ಮಹಾರಾಷ್ಟ್ರ ರಾಜ್ಯದಲ್ಲಿ ಖಾಸಗಿ ಕಾಲೇಜುಗಳ ಮೇಲೆ ಧಾಳಿ ನಡೆಸಿದಾಗ ಲೆಕ್ಕ ನೀಡಲು ಆಗದ ಕೆಲವು ಕೋಟಿ ರೂಪಾಯಿಗಳನ್ನು ವಶಪಡಿಸಿಕೊಂಡಿರುವುದು ಏನನ್ನು ಸೂಚಿಸುತ್ತದೆ ? ಖಾಸಗಿ ಕಾಲೇಜುಗಳ ಶಿಕ್ಷಕರ ಸ್ಥಿತಿ ಗತಿ ಶೋಚನೀಯ. ಅವರು ನಡೆಸುವ ಪ್ರವೇಶ ಪರೀಕ್ಷೆಗಳ ವಿಶ್ವಾಸಾರ್ಹತೆ ತುಂಬಾ ಕಡಿಮೆ. ಸರಕಾರದ ನಿಯಂತ್ರಣವಿಲ್ಲದಿದ್ದರೆ ಶೋಷಣೆ ಖಂಡಿತಾ ಮುಂದುವರೆಯುತ್ತದೆ.

ನಮ್ಮ ದೇಶದ ಸಾಮಾಜಿಕ, ಆರ್ಥಿಕ ಸ್ಥಿತಿ ಗತಿಯನ್ನು ಅವಲೋಕಿಸಿದಾಗ ಮೀಸಲಾತಿ ಇನ್ನು ಕೆಲವು ವರ್ಷ ಅನಿವಾರ್ಯ ಎನ್ನುವುದು ವಿವಾದಾತೀತ. ಹಾಗೆಯೇ ಪಟ್ಟಣ, ಗ್ರಾಮೀಣ ಪ್ರದೇಶಗಳ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳನ್ನು ಅನೇಕ ಸವಲತ್ತುಗಳನ್ನು ಪಡೆದಿರುವ ಪಟ್ಟಣ ಪ್ರದೇಶದ ವಿದ್ಯಾರ್ಥಿಗಳಿಗೆ ಸಮಾನವಾಗಿ ನೋಡುವ ಕ್ರಮ ಸರಿಯಲ್ಲ. ಎಲ್ಲಾ ವರ್ಗಗಳಲ್ಲಿಯೂ ಬಡವರಿದ್ದಾರೆ.

ಸಾಮಾಜಿಕ ನ್ಯಾಯ ದೊರಕಬೇಕಾದರೆ ರಾಷ್ಟ್ರಮಟ್ಟದಲ್ಲಿ ಕಾಯಿದೆ ರಚಿಸುವುದು ಅಗತ್ಯವಾಗಿದೆ. ಈ ನಡುವೆ ಉನ್ನತ ಶಿಕ್ಷಣ ನೀತಿಯನ್ನು ಮತ್ತೊಮ್ಮೆ ಪರಾಮರ್ಶಿಸಬೇಕಾಗಿದೆ. ಸಂಪೂರ್ಣವಾಗಿ ಶಿಕ್ಷಣೋದ್ಯಮಿಗಳ ವಶಕ್ಕೆ ಶಿಕ್ಷಣವನ್ನು ಒಪ್ಪಿಸುವುದು ಸರಿಯಲ್ಲ. ಉನ್ನತ ಶಿಕ್ಷಣವನ್ನು ಪುನರ್‌ರಚಿಸಿ ಎಲ್ಲಾ ರೀತಿಯ ಶಿಕ್ಷಣದಲ್ಲಿ ವೃತ್ತಿ ಪರತೆಯನ್ನು ಹೆಚ್ಚಿಸಿ ಸಮಾಜದ ನಂಬಿಕೆ ಗಳಿಸುವ ಸವಾಲು ನಮ್ಮ ಮುಂದಿದೆ. ಇಲ್ಲಿ ಶಿಕ್ಷಕರ ಪಾತ್ರ ದೊಡ್ಡದು. ಅಲ್ಲದೆ ಅನುದಾನ ವ್ಯವಸ್ಥೆ ಸರಕಾರ ಹಾಗೂ ಖಾಸಗಿ ರಂಗದ ಪಾಲುದಾರಿಕೆಗೆ ಅತ್ಯುತ್ತಮ ಉದಾಹರಣೆ. ಉನ್ನತ ಶಿಕ್ಷಣವನ್ನು ನಾನ್-ಮೆರಿಟ್ ವಸ್ತು ಎಂದು ಪರಿಗಣಿಸುವ ಮೂರ್ಖತನ ತೋರಬಾರದು. ಆರ್ಥಿಕ ನೀತಿಯನ್ನು ಉನ್ನತ ಶಿಕ್ಷಣ ಮಟ್ಟಿಗಾದರೂ ಪುನರ್‌ರೂಪಿಸಿ ಯಾವುದಾದರೂ ಒಂದು ರೀತಿಯಲ್ಲಿ ಗ್ರಾಂಟ್- ಇನ್- ಏಡ್ ವ್ಯವಸ್ಥೆಯನ್ನು ತಂದರೆ ಮಾತ್ರ ಸರಕಾರದಿಂದ ನ್ಯಾಯ ದೊರಕಿಸಲು ಸಾಧ್ಯ. ಕೇವಲ ಕಾನೂನನ್ನು ರಚಿಸುವುದರಿಂದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲ. ಸರಕಾರದ ಸಹಾಯ ಪಡೆಯದ ಸಂಸ್ಥೆ ಮೇಲೆ ನಿಯಂತ್ರಣ ಪಡೆಯುವುದು ನೈತಿಕವಾಗಿಯೂ ಕಷ್ಟಸಾಧ್ಯ. ಕಾನೂನನ್ನು ಪಾಸು ಮಾಡಿದರೂ ಅದನ್ನು ಅನುಷ್ಠಾನ ಗೊಳಿಸುವಲ್ಲಿ ರಾಜಕಾರಣಿಗಳು, ಪ್ರತಿಷ್ಠಿತರು ರಾಜಕೀಯ ಇಚ್ಛಾಶಕ್ತಿಯನ್ನು ತೋರಬೇಕು.

❑ **ಪ್ರೊ॥ ಎ. ಎಂ. ನರಹರಿ**, ಅಧ್ಯಕ್ಷರು, ರಾಜ್ಯ ವಿವಿ ಹಾಗೂ ಕಾಲೇಜು
ಅಧ್ಯಾಪಕ ಸಂಘಟನೆಗಳ ಒಕ್ಕೂಟ (ರಿ) ಡೀನ್, ವಾಣಿಜ್ಯ ವಿಭಾಗ,
ಸಂತ ಅಲೋಶಿಯಸ್ ಕಾಲೇಜು, ಮಂಗಳೂರು

# ವೃತ್ತಿ ಶಿಕ್ಷಣ ವ್ಯಾಪಾರೀಕರಣ

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಸಹಸ್ರಾರು ವರ್ಷಗಳಿಂದ ಅಕ್ಷರಜ್ಞಾನದಿಂದಲೇ ಹೊರಗಿಡಲ್ಪಟ್ಟಿದ್ದ ಶೇಕಡ ೯೫ ಶೂದ್ರಾತಿ ಶೂದ್ರರೇ ಇರುವ ಸನ್ನಿವೇಶದಲ್ಲಿ ಶಿಕ್ಷಣದ ಅವಕಾಶ ಎಲ್ಲರಿಗೂ ಸಿಕ್ಕಿದರೆ ಅಮೃತ ಸಿಕ್ಕಂತೆ, ಎಲ್ಲಾ ಸಾಮಾಜಿಕ ಮತ್ತು ಆರ್ಥಿಕ ಸಂಕೋಲೆಗಳಿಂದ ಬಿಡುಗಡೆ ಆದಂತೆ; ನರಕದಿಂದ ಸಮಾಜಕ್ಕೆ ಬಂದಂತೆ ಎಂದು ಹಾತೊರೆಯುತ್ತಿರುವ ಇಂದಿನ ಸಂದರ್ಭದಲ್ಲಿ ಈ ವರ್ಗಗಳಿಗೆ ವೃತ್ತಿ ಶಿಕ್ಷಣಕ್ಕೆ ಅವಕಾಶ ಸಿಕ್ಕಿದರಂತೂ ಅಂಬರವೇದಿ ಕೈಗೆಟಕುವಷ್ಟು ಉತ್ಸಾಹ ಬರುತ್ತದೆ. ವೃತ್ತಿ ಶಿಕ್ಷಣ ಶೂದ್ರರ ಪಾಲಿಗೆ ಗಗನಕುಸುಮವಾಗಿ ಉಳಿದಂತಹ ಇಂತಹ ಶಿಕ್ಷಣ ಕ್ರಾಂತಿಗೆ ನಾಂದಿ ಹಾಡಿದ್ದು ಕರ್ನಾಟಕದ ಸಾಮಾನ್ಯ ಪರೀಕ್ಷೆಯ ವ್ಯವಸ್ಥೆ. ಪವಾಡ ಸದೃಶವಾದ ಇದರ ಬೆಳವಣಿಗೆಯನ್ನು ನೋಡಿ ನೆರೆಯ ರಾಜ್ಯಗಳೂ ಇದನ್ನು ಅನುಕರಿಸಿದವು, ಅದು ಇಡೀ ರಾಷ್ಟ್ರಕ್ಕೆ ಮಾದರಿಯಾಯಿತು. ಅಷ್ಟೇ ಏಕೆ, ಹೊರ ರಾಷ್ಟ್ರಗಳ, ಅದರಲ್ಲೂ ಸಾಂಸ್ಕೃತಿಕ ಕ್ರಾಂತಿಯ ಬೀಡಾದ ಚೀನಾ ಸಹ ಇದನ್ನು ಅನುಸರಿಸಲು ಮುಂದಾಯಿತು. ಇದೊಂದು ಶೈಕ್ಷಣಿಕ ಯಾತ್ರೆಯಾಗಿ ಬೆಂಗಳೂರಿನಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಬರೆಯಲು ಬರುವ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಭಾರತ ಸರ್ಕಾರ ಪ್ರತಿವರ್ಷವೂ ವಿಶೇಷ ರೈಲುಗಳ ವ್ಯವಸ್ಥೆ ಮಾಡಿತ್ತು. ಅದಕ್ಕಾಗಿ ವಿಶೇಷವಾದ ಭದ್ರತಾ ವ್ಯವಸ್ಥೆಯನ್ನು ಅಳವಡಿಸಿತ್ತು.

ಕರ್ನಾಟಕದಲ್ಲಿ ಸುಮಾರು ನಾಲ್ಕು ದಶಕಗಳ ಹಿಂದೆ ವೈದ್ಯಕೀಯ ಶಿಕ್ಷಣವನ್ನು ಅರ್ಹತೆಯ ಮೇಲಲ್ಲದೆ ಹಣ ಸುರಿಯುವ ಶ್ರೀಮಂತ ವಿದ್ಯಾರ್ಥಿಗಳಿಗೆ ಮಾರುವ ವೈದ್ಯಕೀಯ ಕಾಲೇಜುಗಳು ಪ್ರಾರಂಭವಾಗುವುದರ ಮೂಲಕ ಅನಾವರಣಗೊಂಡ ಶಿಕ್ಷಣದ ವ್ಯಾಪಾರೀಕರಣ ದಿನೇ ದಿನೇ ಬಂಡವಾಳಕ್ಕೆ ಎಷ್ಟು ಮಹತ್ವ ಕೊಟ್ಟಿತೆಂದರೆ ದುಡ್ಡು ಕೊಟ್ಟರೆ ಶಿಕ್ಷಣ ಮಾತ್ರವಲ್ಲ, ವೈದ್ಯಕೀಯ, ದಂತ ವೈದ್ಯಕೀಯ ಮತ್ತು ತಾಂತ್ರಿಕ ಪದವಿಗಳೂ ಸಹ ಮಾರಾಟಕ್ಕೆ ದೊರಕುವಂಥ ಸ್ಥಿತಿ ಮುಟ್ಟಿತು. ಕಾಲೇಜಿಗೆ ಹೋಗದ ವಿದ್ಯಾರ್ಥಿಗಳು, ಪರೀಕ್ಷೆಯನ್ನೇ ಬರೆಯದ ವಿದ್ಯಾರ್ಥಿಗಳು ವೈದ್ಯಕೀಯ ಪದವಿ ಪಡೆದು ವಿದೇಶಗಳಿಗೆ ತೆರಳಿದಾಗ ಅಷ್ಟೇನೂ ಗಾಬರಿಯಾಗದಿದ್ದರೂ ಮತ್ತಷ್ಟು ಜನ ನಮ್ಮ ಕಣ್ಣ ಮುಂದೆಯೇ ವೈದ್ಯಕೀಯ ವೃತ್ತಿಯನ್ನು ಪ್ರಾರಂಭಿಸಿದಾಗ ಇಡೀ ಸಮಾಜ ಬೆಚ್ಚಿಬಿದ್ದಿತು. ಈ ಸಂದಿಗ್ಧತೆಯಲ್ಲಿ ವೃತ್ತಿ ಶಿಕ್ಷಣದ ಪ್ರವೇಶಾವಕಾಶಗಳ ನಿಯಂತ್ರಣಕ್ಕೆ ಮತ್ತು ಅಕ್ರಮವಾಗಿ ಹಣದ ಹೊಳೆ ಹರಿಸಿ ಖರೀದಿಸುವ ಪದವಿಗಳನ್ನು ನಿಯಂತ್ರಿಸುವ ಅವಶ್ಯಕತೆಯ ಬಗ್ಗೆ ಬಲವಾದ ಸಾರ್ವಜನಿಕ ಅಭಿಪ್ರಾಯ ರೂಪಿತವಾಯಿತು.

ರಾಜ್ಯದಲ್ಲಿ ಕ್ಯಾಪಿಟೇಶನ್ ಶುಲ್ಕದ ಆಧಾರದ ಮೇಲೆ ವೃತ್ತಿ ಶಿಕ್ಷಣಕ್ಕೆ ಪ್ರವೇಶಾವಕಾಶ ನೀಡುವುದು ಸರ್ವವ್ಯಾಪಿಯಾಗಿ ಇರುವ ಈ ಹಿನ್ನೆಲೆಯಲ್ಲಿ, ದುಡ್ಡಿನ ಆಧಾರದ ಮೇಲೆ ನೀಡುವ ಪ್ರವೇಶಾವಕಾಶವು ಶಿಕ್ಷಣದ ವ್ಯಾಪಾರೀಕರಣಕ್ಕೆ ಪ್ರಮುಖ ಕಾರಣವಾಗಿರುವುದರಿಂದ ಹಾಗೂ ಖಾಸಗೀ ಶಿಕ್ಷಣ ಸಂಸ್ಥೆಗಳು ಶೈಕ್ಷಣಿಕ ಮೌಲ್ಯಗಳನ್ನು ಗಾಳಿಗೆ ತೂರಿದ್ದರಿಂದ ಮತ್ತು ಶಿಕ್ಷಣದ ಗುಣಮಟ್ಟ ಕುಸಿಯುತ್ತಿರುವಾಗ ಸಾರ್ವಜನಿಕ ಹಿತದೃಷ್ಟಿಯಿಂದ ಬಂಡವಾಳದ ಮೇಲೆ ಪ್ರವೇಶಾವಕಾಶ ನೀಡುವ ದುಷ್ಟ ಪದ್ಧತಿಯನ್ನು ನಿವಾರಣೆ ಮಾಡುವ ಸಲುವಾಗಿ ೧೯೮೪ರಲ್ಲಿ ಕರ್ನಾಟಕದ ಶಾಸಕಾಂಗ, ಈ ವೃತ್ತಿ ಶಿಕ್ಷಣದ ಪ್ರವೇಶಗಳನ್ನು ನಿಯಂತ್ರಿಸಲು ಕರ್ನಾಟಕ ಶಿಕ್ಷಣ ಸಂಸ್ಥೆಗಳ (ಕ್ಯಾಪಿಟೇಶನ್ ಶುಲ್ಕ ನಿಷೇಧ) ಅಧಿನಿಯಮ (೧೯೮೪)ವನ್ನು ರಚಿಸಿತು. ಈ ಅಧಿನಿಯಮದಡಿ ಕರ್ನಾಟಕ ರಾಜ್ಯದಲ್ಲಿನ ಎಲ್ಲಾ ಶಿಕ್ಷಣ ಸಂಸ್ಥೆಗಳು ಮಾಡಿಕೊಳ್ಳುವ ದಾಖಲಾತಿಗಳನ್ನು ಮತ್ತು ವಿದ್ಯಾರ್ಥಿಗಳಿಂದ ಆ ಸಂಬಂಧವಾಗಿ ಪಡೆಯುವ ಬಂಡವಾಳ ಶುಲ್ಕವನ್ನು ನಿಯಂತ್ರಿಸಲು ಸಮರ್ಪಕವಾದ ನೀತಿಯನ್ನು ರೂಪಿಸಲಾಯಿತು. ಈ ಅಧಿನಿಯಮವು ಕೇಂದ್ರ ಸರ್ಕಾರದ ಕಾಯ್ದೆಯನ್ನು ಮೀರಿ ಜಾರಿಯಲ್ಲಿರಬೇಕಾದಂತಹ ಅವಶ್ಯಕತೆಯನ್ನು ಮನಗಂಡು ಈ ಅಧಿನಿಯಮಕ್ಕೆ ಮಾನ್ಯ ರಾಷ್ಟ್ರಾಧ್ಯಕ್ಷರ ಅಂಕಿತವನ್ನೂ ಸಹ ಪಡೆಯಲಾಯಿತು. ಈ ಕಾನೂನು ಬಂದದ್ದೇ ತಡ ಇದರ ವಿರುದ್ಧ ಬಂಡವಾಳಶಾಹಿ ಖಾಸಗಿ ಶಿಕ್ಷಣ ಸಂಸ್ಥೆಗಳ ಆಡಳಿತ ಮಂಡಳಿಯವರು ಮೊಕದ್ದಮೆಗಳ ಸಮರವನ್ನೇ ಸಾರಿ ತಮ್ಮ ಕಬಂಧ ಬಾಹುಗಳಿಂದ ಇಡೀ ಶೈಕ್ಷಣಿಕ ವ್ಯವಸ್ಥೆಯನ್ನೇ ತಲ್ಲಣಗೊಳಿಸಲು ಪ್ರಯತ್ನಿಸಿದರು. ಈ ಸಂಬಂಧ ಹೂಡಿರುವ ಮೊಕದ್ದಮೆಗಳು, ಹೊರಬಂದಿರುವ ತೀರ್ಪುಗಳು, ತತ್‌ಪರಿಣಾಮ ಆಗಿರುವ ಬೆಳವಣಿಗೆಗಳನ್ನು ಉಲ್ಲೇಖಿಸುತ್ತಾ ಹೋದರೆ ಒಂದು ಬೃಹತ್ ಗ್ರಂಥವನ್ನೇ ರಚಿಸಬಹುದಾಗಿದೆ. ಆ ಬಗ್ಗೆ ವಿವರವಾದ ಚರ್ಚೆ ಇಲ್ಲಿ ಮಾಡದೆ ಇಂದು ಉದ್ಭವಿಸಿರುವ ಪರಿಸ್ಥಿತಿಗೆ ನೇರವಾಗಿ ಗಮನ ನೀಡಲು ಇತ್ತೀಚೆಗೆ ಮಾನ್ಯ ನ್ಯಾಯಾಲಯಗಳು ನೀಡಿರುವ ತೀರ್ಪುಗಳ ಒಂದು ಪಕ್ಷಿನೋಟವನ್ನು ಮಾತ್ರ ಪ್ರಸ್ತುತಪಡಿಸಲಾಗಿದೆ.

೧೯೯೨ರ ಜುಲೈ ತಿಂಗಳಲ್ಲಿ ಸರ್ವೋಚ್ಚ ನ್ಯಾಯಾಲಯವು 'ಮೋಹಿನಿ ಜೈನ್' ಮೊಕದ್ದಮೆಯಲ್ಲಿ ನೀಡಿದ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶ ನೀಡಿದೆ.

೧. ಕ್ಯಾಪಿಟೇಶನ್ ಶುಲ್ಕ ಪಡೆದು ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವುದು ಸಂವಿಧಾನ ಬಾಹಿರ.
೨. ಬಂಡವಾಳ ಶುಲ್ಕ ನೀಡದ ವಿದ್ಯಾರ್ಥಿಗಳಿಗೆ ಆ ಕಾರಣದಿಂದಾಗಿ ವೃತ್ತಿ ಶಿಕ್ಷಣಕ್ಕೆ ಪ್ರವೇಶಾವಕಾಶ ನಿರಾಕರಿಸುವುದು ವಿದ್ಯಾರ್ಥಿಯ ಶೈಕ್ಷಣಿಕ ಹಕ್ಕಿನ ಉಲ್ಲಂಘನೆ.
೩. ವಿದ್ಯಾರ್ಥಿಯ ಶೈಕ್ಷಣಿಕ ಹಕ್ಕು, ಮೂಲಭೂತ ಹಕ್ಕು.

ಈ ತೀರ್ಪಿನ ವಿರುದ್ಧ ದೊಡ್ಡ ಸಮರವನ್ನೇ ಸಾರಿದ ಖಾಸಗಿ ಶಿಕ್ಷಣ ಸಂಸ್ಥೆಗಳು ಕೇವಲ ಆರು ತಿಂಗಳೊಳಗೆ ಸರ್ವೋಚ್ಚ ನ್ಯಾಯಾಲಯದಿಂದ ಮತ್ತೊಂದು ತೀರ್ಪನ್ನು ಪಡೆಯುವಲ್ಲಿ ಯಶಸ್ವಿಯಾದವು. ಅದೇ 'ಉನ್ನಿಕೃಷ್ಣನ್' ಮೊಕದ್ದಮೆಯ ತೀರ್ಪು. ನ್ಯಾಯಾಲಯವು ಖಾಸಗಿ ಶಿಕ್ಷಣ ಸಂಸ್ಥೆಗಳು ಸಾರ್ವಜನಿಕ ಸೇವೆಯಲ್ಲಿರುವುದರಿಂದ ನ್ಯಾಯಯುತವಾಗಿ ಸಮಾನತೆಯ ಆಧಾರದ ಮೇಲೆ ಶಿಕ್ಷಣ ಸಂಸ್ಥೆಗಳನ್ನು ನಡೆಸಿಕೊಂಡು ಹೋಗಬೇಕೆಂದು ಸೂಚಿಸುತ್ತಾ ಈ ದಿಶೆಯಲ್ಲಿ ಒಂದು ಹೊಸ ನೀತಿಯನ್ನೇ ರೂಪಿಸಿ ಅದರಂತೆ ಪ್ರವೇಶಾವಕಾಶಗಳನ್ನು ನಿಯಂತ್ರಿಸಬೇಕೆಂದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಅಪ್ಪಣೆ ನೀಡಿತು. ಈ ಶಿಕ್ಷಣ ನೀತಿಯನ್ನು ವೃತ್ತಿಪರ ಶಿಕ್ಷಣ ಸಂಸ್ಥೆಗಳಿಗೆ ಮಾತ್ರ ಸೀಮಿತಗೊಳಿಸಿ ಆದೇಶ ಹೊರಡಿಸಿತು. ನ್ಯಾಯಾಲಯವು ಈ ತೀರ್ಪಿನಲ್ಲಿ ಎಲ್ಲಾ ಖಾಸಗಿ ಶಿಕ್ಷಣ ಸಂಸ್ಥೆಗಳ ಪ್ರವೇಶಾವಕಾಶಗಳಲ್ಲಿ ಶೇಕಡಾ ೫೦ ದಾಖಲಾತಿಗಳನ್ನು ಶುಲ್ಕರಹಿತ ದಾಖಲಾತಿಗಳೆಂದು ಘೋಷಿಸಿ ಇನ್ನುಳಿದವನ್ನು ಶುಲ್ಕಸಹಿತ ದಾಖಲಾತಿಗಳೆಂದು ಘೋಷಿಸಿತು. ಅಲ್ಲದೆ ಈ ಎರಡು ವರ್ಗಗಳಲ್ಲೂ ಕೂಡ ಎಲ್ಲಾ ದಾಖಲಾತಿಗಳನ್ನು ಶೈಕ್ಷಣಿಕ ಅರ್ಹತೆಯ ಆಧಾರದ ಮೇಲೆ ಮಾತ್ರ ಸಂವಿಧಾನ ಬದ್ಧವಾಗಿ ಮೀಸಲಾತಿ ಕೊಡಬಹುದಾದ ವರ್ಗಗಳ ('ಪರಿಶಿಷ್ಟ ಜಾತಿ', 'ಪರಿಶಿಷ್ಟ ಪಂಗಡ' ಮತ್ತು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು) ದಾಖಲಾತಿಗೆ ಅವಕಾಶ ಮಾಡಿ ಕೊಡಬೇಕೆಂದು ತಿಳಿಸಿ ಆ ಮೂಲಕ ಸಾಮಾಜಿಕ ನ್ಯಾಯವನ್ನು ಅಳವಡಿಸಿ ಆದೇಶ ನೀಡಿತು. ಈ ತೀರ್ಪಿನನ್ವಯವೇ ಕರ್ನಾಟಕದಲ್ಲಿ ಇಡೀ ವಿಶ್ವಕ್ಕೇ ಮಾದರಿಯಾದ 'ಸಾಮಾನ್ಯ ಪ್ರವೇಶ ಪರೀಕ್ಷೆ' (C E T) ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು.

ಈ ತೀರ್ಪು ಬಂದನಂತರ ಹಲವಾರು ಪ್ರಯತ್ನಗಳ ಮೂಲಕ ಖಾಸಗಿ ಶಿಕ್ಷಣ ಸಂಸ್ಥೆಗಳು ಶುಲ್ಕ ಸಹಿತ ಪ್ರವೇಶಾವಕಾಶಗಳಲ್ಲಿ ಶೇಕಡ ೧೫ರಷ್ಟು ಪ್ರವೇಶಗಳನ್ನು ಅನಿವಾಸಿ ಭಾರತೀಯರಿಗೆ ಕೊಡಬಹುದಾದ ಅವಕಾಶವನ್ನು ಗಿಟ್ಟಿಸಿಕೊಳ್ಳುವಲ್ಲಿ ಯಶಸ್ವಿಯಾದವು. ಈ ಅನಿವಾಸಿ ಭಾರತೀಯರಿಗೆ ನೀಡಿದಂತಹ ಪ್ರವೇಶಾವಕಾಶಗಳು ಕಟ್ಟುನಿಟ್ಟಾಗಿ ಶೈಕ್ಷಣಿಕ ಅರ್ಹತೆ ಮತ್ತು ಸಾಮಾಜಿಕ ನ್ಯಾಯದ ಆಧಾರದ ಮೇಲೆ ನಡೆಯಬೇಕಿದ್ದ ಪ್ರವೇಶಾವಕಾಶಗಳ ಮಾರಾಟಕ್ಕೆ ನಾಂದಿಯಾಯಿತು. ಯಾವ ಸರ್ಕಾರಗಳು ಈ ವ್ಯವಸ್ಥೆಯನ್ನು ಉಳಿಸಿ ಪೋಷಿಸಿಕೊಂಡು ಹೋಗಬೇಕಿತ್ತೋ ಅದೇ ಸರ್ಕಾರಗಳು ಸರ್ವೋಚ್ಚ ನ್ಯಾಯಾಲಯದ ಮುಂದೆ ಈ ತೀರ್ಪೇ ಸರಿಯಿಲ್ಲ, ಇದನ್ನು ರದ್ದುಪಡಿಸಿ ಎಂದು ಕೇಳಿಕೊಂಡ ಪ್ರತಿಫಲವಾಗಿಯೇ ೨೦೦೨ರಲ್ಲಿ ನೀಡಿದ ಟಿ.ಎಂ.ಎ. ಪೈ ಮೊಕದ್ದಮೆಯ ತೀರ್ಪು. ಆಗಿನ ಕರ್ನಾಟಕ ಸರ್ಕಾರದ ಪರವಾಗಿ ಹಾಗೂ ಕೇಂದ್ರ ಸರ್ಕಾರದ ಪರವಾಗಿ ವಾದಿಸಿದ ವಕೀಲರು ಹೇಳಿಕೆ ನೀಡಿ 'ಉನ್ನಿಕೃಷ್ಣನ್' ಮೊಕದ್ದಮೆಯ ನೀತಿಯ ಮೇಲೆ ರೂಪಿಸಿದ ಪ್ರತಿಭೆ ಮತ್ತು ನ್ಯಾಯಯುತವಾದ ವ್ಯವಸ್ಥೆಯನ್ನೇ ರದ್ದುಮಾಡಲು ಅವಕಾಶ ಮಾಡಿಕೊಟ್ಟರು. ಹನ್ನೊಂದು ಸದಸ್ಯರ ನ್ಯಾಯಪೀಠವು ಕೊಟ್ಟ ಈ ತೀರ್ಪು ಇಂದು ರಾಷ್ಟ್ರದ ಲಕ್ಷಾಂತರ ಪ್ರತಿಭಾವಂತ ವಿದ್ಯಾರ್ಥಿಗಳ ಭವಿಷ್ಯವನ್ನು ಸಮಾಧಿ ಮಾಡಲು ಹೊಸ ಅವತಾರವಾಗಿ ಪರಿಣಮಿಸಿತು.

ಈ ತೀರ್ಪಿನ ಅನ್ವಯ ಈ ರಾಷ್ಟ್ರದ ನಾಗರಿಕರಿಗೆ ಒಂದು ವೈದ್ಯಕೀಯ ಕಾಲೇಜು ಸ್ಥಾಪಿಸುವ ಹಕ್ಕು ಮೂಲಭೂತ ಹಕ್ಕೇ ಹೊರತು ಅಂತಹ ವೃತ್ತಿಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದು ಮೂಲಭೂತ ಹಕ್ಕಲ್ಲ. ಈ ತೀರ್ಪಿನ ಸ್ಪಷ್ಟೀಕರಣ ನೀಡುವ ಮತ್ತೆರಡು ಪ್ರಯತ್ನಗಳೇ ಐದು ಜನ ನ್ಯಾಯಮೂರ್ತಿಗಳ ಪೀಠದ 'ಇಸ್ಲಾಮಿಕ್ ಅಕಾಡೆಮಿ' ಮತ್ತು ಕಳೆದ ತಿಂಗಳು ನೀಡಿದ ಏಳು ಜನ ನ್ಯಾಯಮೂರ್ತಿಗಳ ಪೀಠದ ಇನಾಂದಾರ ಮೊಕದ್ದಮೆಗಳ ತೀರ್ಪುಗಳು. ಈ ಮೂರು ತೀರ್ಪುಗಳ ಒಟ್ಟಾರೆ ಸಾರಾಂಶವೆಂದರೆ ಇವುಗಳಿಂದಾಗಿ ಶುಲ್ಕರಹಿತವಾದ ಪ್ರವೇಶಾವಕಾಶಗಳು ಇಲ್ಲದಂತಾಗಿ ಸಾಮಾಜಿಕ ನ್ಯಾಯ ಸಂಪೂರ್ಣ ರದ್ದಾಗಿದೆ. ಪರ್ಯಾಯವಾಗಿ ವಿದೇಶಿಯರಿಗೆ, ಅನಿವಾಸಿ ಭಾರತೀಯರಿಗೆ, ಹಣವಂತರಿಗೆ, ಬಂಡವಾಳಶಾಹಿಗಳಿಗೆ ಇವು ವರದಾನವಾಗಿ ಪರಿಣಮಿಸಿವೆ. ಈ ತೀರ್ಪುಗಳನ್ನು ನೀಡುವಾಗ ಸರ್ವೋಚ್ಚ ನ್ಯಾಯಾಲಯವು ಅನುಸರಿಸಿರುವ ಮಾನದಂಡಗಳು ಈ ದಿನ ಎಲ್ಲೆಡೆ ಚರ್ಚೆಗೊಳಗಾಗಿವೆ. ಈ ಹಿನ್ನೆಲೆಯಲ್ಲಿ ಈ ತೀರ್ಪುಗಳಿಂದ ಉದ್ಭವಿಸಿರುವ ಪ್ರಶ್ನೆಗಳ ಒಂದು ಪಕ್ಷಿನೋಟ ಇಲ್ಲಿದೆ.

ಮೊಟ್ಟಮೊದಲನೆಯದಾಗಿ, ಅನಿವಾಸಿ ಭಾರತೀಯರಿಗೆ ನೀಡಿರುವ ಶೇಕಡ ೧೫ ಮೀಸಲಾತಿ ಸಂವಿಧಾನ ವಿರೋಧಿ ಮೀಸಲಾತಿಯಾಗಿದೆ. ಸಂವಿಧಾನ ದತ್ತವಾಗಿ ಮೀಸಲಾತಿಯನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಹಾಗೂ ಹೆಣ್ಣು ಮಕ್ಕಳಿಗೆ ಕೊಡಬಹುದು. ಅಂತಹ ಮೀಸಲಾತಿಯನ್ನು ಅನಿವಾಸಿ ಭಾರತೀಯರ ಹೆಸರಿನಲ್ಲಿ

ಕೊಡುವುದಕ್ಕೆ ಸಂವಿಧಾನದಲ್ಲಿ ಯಾವುದೇ ಅವಕಾಶವಿಲ್ಲ. ಅಲ್ಲದೆ ಭಾರತೀಯರ ಹಿತಾಸಕ್ತಿಗೆ ವಿರುದ್ಧವಾಗಿ ವಿದೇಶಿಯರಿಗೆ ಕೊಡುವ ಯಾವುದೇ ಸವಲತ್ತು ರಾಷ್ಟ್ರವಿರೋಧಿ ಕಾರ್ಯಕ್ರಮ ವಾಗುತ್ತದೆ. ಈ ಮೀಸಲಾತಿಗೆ ಸರ್ವೋಚ್ಚ ನ್ಯಾಯಾಲಯವು ಯಾವುದೇ ಸಂವಿಧಾನಾತ್ಮಕ ಮಾನದಂಡವನ್ನು ಅನುಸರಿಸದೆ ಬಂಡವಾಳಶಾಹಿಗೆ ಬೆಳ್ಳಿತಟ್ಟೆಯಮೇಲಿಟ್ಟು ನೀಡಿರುವ ಮೀಸಲಾತಿ ಆಗಿದೆ. ಆಡಂ ಸ್ಮಿತ್ ಸಹ ಇಂತಹ ವಿಚಿತ್ರ ಮಟ್ಟದಲ್ಲಿ ಬಂಡವಾಳಶಾಹಿಗೆ ಬೆಂಬಲಿಗನಾಗುತ್ತಿರಲಿಲ್ಲವೇನೋ! ರಾಷ್ಟ್ರದಲ್ಲಿ ಆರ್ಥಿಕ ಉದಾರೀಕರಣ / ಖಾಸಗೀಕರಣ ಪ್ರಕ್ರಿಯೆಯು ಅನಾವರಣಗೊಂಡಾಗ ಮನಮೋಹನ್ ಸಿಂಗ್ - ಪಿ. ವಿ. ನರಸಿಂಹರಾವ್ ಜೋಡಿಯೂ ಈ ಮಟ್ಟಕ್ಕೆ ಖಾಸಗೀಕರಣವನ್ನು ಕೊಂಡೊಯ್ದಿರಲಿಲ್ಲ. ಇದು ಸ್ಪಷ್ಟವಾಗಿ ಸಂವಿಧಾನದ ಉಲ್ಲಂಘನೆಯಾಗಿದೆ.

ಈಗಾಗಲೇ ತಿಳಿಸಿರುವಂತೆ ಸರ್ಕಾರಿ ಕೋಟಾ ಅನುಪಾತದಡಿಯಲ್ಲಿ ತುಂಬುತ್ತಿದ್ದ ಶೇಕಡಾ ೫೦ರಷ್ಟು ಪ್ರವೇಶಾವಕಾಶಗಳನ್ನು ಈ ತೀರ್ಪಿನಲ್ಲಿ ಸಂವಿಧಾನಬಾಹಿರ ಎಂದು ಘೋಷಿಸಲಾಗಿದೆ. ಆ ರೀತಿ ಅನೂರ್ಜಿತಗೊಳಿಸಲು ನೀಡಿರುವ ಕಾರಣವೆಂದರೆ ಸರ್ಕಾರಿ ಕೋಟಾ ಎಂದರೆ ಪ್ರವೇಶಾವಕಾಶಗಳು ರಾಷ್ಟ್ರೀಕರಣವಾದಂತೆ ಎಂದು ಹೇಳಲಾಗಿದೆ. ಎಲ್ಲರಿಗೂ ತಿಳಿದಂತೆ ರಾಷ್ಟ್ರೀಕರಣ ಒಂದು ಗಂಭೀರ ಸ್ವರೂಪದ ವಿಚಾರ. ರಾಷ್ಟ್ರೀಕರಣ ದಂತಹ ಯಾವುದೇ ವಿಷಯಗಳಲ್ಲಿ ಖಾಸಗಿ ಕಾಲೇಜುಗಳು ಮೂಗುತೂರಿಸುವ ಅವಕಾಶವಿರುವುದಿಲ್ಲ. ಅಷ್ಟೆ ಅಲ್ಲ, ರಾಷ್ಟ್ರೀಕರಣದಿಂದ ಆಗುವ ಲಾಭವೆಲ್ಲಾ ಸರ್ಕಾರದ್ದೇ ಹೊರತು ಖಾಸಗೀ ಶಿಕ್ಷಣ ಸಂಸ್ಥೆಗಳದ್ದಲ್ಲ.

ಟಿ.ಎಂ.ಎ.ಪೈ ಮೊಕದ್ದಮೆಯ ತೀರ್ಪಿನಲ್ಲಿ ಈಗಾಗಲೇ ಹೇಳಿರುವಂತೆ ಎಲ್ಲಾ ಪ್ರವೇಶಾ ವಕಾಶಗಳಿಗೂ ಸಮಾನ ಶುಲ್ಕ ವಿಧಿಸುತ್ತಿರುವಾಗ ಮತ್ತು ಅಂತಹ ಶುಲ್ಕವನ್ನು ಖಾಸಗಿ ಶಿಕ್ಷಣ ಸಂಸ್ಥೆಗಳೇ ತೀರ್ಮಾನಿಸುತ್ತಿರುವಾಗ ಸರ್ಕಾರದ ಕೋಟಾದಲ್ಲಿ ಬರುವ ಪ್ರತಿಭಾನ್ವಿತ ವಿದ್ಯಾರ್ಥಿಯೂ ಸಹ ಅದೇ ಶುಲ್ಕವನ್ನು ಖಾಸಗಿ ಶಿಕ್ಷಣ ಸಂಸ್ಥೆಗೆ ಕೊಡಬೇಕಾಗುತ್ತದೆ. ಸರ್ಕಾರದ ಕೋಟಾದಲ್ಲಿ ಬರುವ ವಿದ್ಯಾರ್ಥಿಗಳ ಅರ್ಹತೆಯನ್ನು ಮಾತ್ರ ಸರ್ಕಾರ ನಿಗದಿ ಪಡಿಸಿದ ಮಾನದಂಡದ ಆಧಾರದ ಮೇಲೆ ಅಳೆಯಲಾಗುತ್ತದೆಯೇ ಹೊರತು ವಿದ್ಯಾರ್ಥಿ ಗಳೇನೂ ಸರ್ಕಾರಿ ವಿದ್ಯಾರ್ಥಿಗಳಲ್ಲ. ಹಾಗೂ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಆಡಳಿತ ಮಂಡಳಿಯ ಕೋಟಾದಲ್ಲಿಯೂ ಪ್ರವೇಶ ಪಡೆಯಲು ಅರ್ಹತೆ ಪಡೆಯಲು ಅವಕಾಶವಿರುತ್ತದೆ. ಹಾಗಾಗಿ ಖಾಸಗಿ ಸಂಸ್ಥೆಗಳಲ್ಲಿ ಸರ್ಕಾರಿ ಕೋಟಾ ಇರುವುದನ್ನು ರಾಷ್ಟ್ರೀಕರಣ ಎಂದು ಅರ್ಥೈಸುವುದು ಸರಿಯಲ್ಲ. ಇದರ ಆಧಾರದ ಮೇಲೆ ಸರ್ಕಾರಿ ಕೋಟಾ ಅನೂರ್ಜಿತಗೊಳಿಸಿರುವುದರಿಂದಾಗಿ ವಿದ್ಯಾರ್ಥಿಗಳ ಪ್ರತಿಭೆ ಹಾಗೂ ಶ್ರೀ ಸಾಮಾನ್ಯನ ಭವಿಷ್ಯದ ಮೇಲೆ ಚಪ್ಪಡಿಕಲ್ಲು ಎಳೆದಂತಾಗಿದೆ.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ನೀಡಿರುವ ಮೀಸಲಾತಿ ಮೇಲೆ ನ್ಯಾಯಾಂಗ ತನ್ನ ಇನ್ನೊಂದು ಗದಾಪ್ರಹಾರವನ್ನು ನಡೆಸಿರುವುದು ಇಲ್ಲಿ ಉಲ್ಲೇಖನೀಯ. ಕಳೆದ ವರ್ಷಗಳಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಬರೆದ ವಿದ್ಯಾರ್ಥಿಗಳ ಪೈಕಿ ಸುಮಾರು ೫೦ ಸಾವಿರಕ್ಕೂ ಹೆಚ್ಚು ಅರ್ಹತೆ ಪಡೆದ ವಿದ್ಯಾರ್ಥಿಗಳು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ, ಕನ್ನಡ ಮಾಧ್ಯಮದಲ್ಲಿ ಕಲಿತಿರುವ ಅಥವಾ ಗ್ರಾಮೀಣ ಅಭ್ಯರ್ಥಿಗಳು. ಸರ್ವೋಚ್ಚ ನ್ಯಾಯಾಲಯ ತನ್ನ ಅತೀವ ಅಧಿಕಾರ ಬಲದಿಂದ ಒಂದೇ ಏಟಿಗೆ ಈ ಎಲ್ಲಾ ಮುಗ್ಧ ಕುಸುಮಗಳ ಭವಿಷ್ಯವನ್ನು ಚಿವುಟಿಹಾಕಿ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿ ಸಲ್ಲ ಎಂದು ಹೇಳುವ ಮುಖಾಂತರ ಅವರ ಆಶಾಜ್ಯೋತಿಯನ್ನು ಆರಿಸಿಬಿಟ್ಟಿದೆ. ದುರಂತವೆಂದರೆ, ಇನಾಂದಾರ್ ಮೊಕದ್ದಮೆಯ ತೀರ್ಪಿನಲ್ಲಿ ಮೀಸಲಾತಿ ನೀತಿಯನ್ನು ಅತ್ಯಂತ ಪ್ರಮುಖವಾದ ಸಂವಿಧಾನದ ಪರಿಚ್ಛೇದಗಳ ಒರೆಗಲ್ಲಿಗೆ ಹಚ್ಚುವುದಿರಲಿ, ಆ ಪರಿಚ್ಛೇದಗಳ ಉಲ್ಲೇಖವೇ ಇಲ್ಲ. ಉದಾಹರಣೆಗೆ ಪರಿಚ್ಛೇದ ೧೫(೪)ರಲ್ಲಿ ಸಂವಿಧಾನವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಏಳಿಗೆಗಾಗಿ ಸರ್ಕಾರ ಯಾವುದೇ ವಿಶೇಷ ಪ್ರವದಾನಗಳನ್ನು ಮಾಡ ಬಹುದೆಂದು ಮೂಲಭೂತ ಹಕ್ಕುಗಳ ಅಧ್ಯಾಯದಲ್ಲೇ ಉಲ್ಲೇಖಿಸಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ಪರಿಚ್ಛೇದ ಕೇವಲ ಸರ್ಕಾರಿ ಶಾಲಾ ಕಾಲೇಜುಗಳಿಗೆ ಮಾತ್ರ ಮೀಸಲಾಗಿಲ್ಲ; ಇದು ಖಾಸಗಿ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಹಾಗೆಯೇ ಪರಿಚ್ಛೇದ ೪೬ರ ಪ್ರಕಾರ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ವಿದ್ಯಾರ್ಥಿಗಷ್ಟೇ ಏಕೆ, ಎಲ್ಲಾ ಬಡ ವಿದ್ಯಾರ್ಥಿಗಳ ವಿದ್ಯಾಭಿವೃದ್ಧಿಗೆ ವಿಶೇಷ ವ್ಯವಸ್ಥೆ ಮಾಡುವುದು ಸರ್ಕಾರದ ಮೂಲಭೂತ ಕರ್ತವ್ಯವಾಗಿರುತ್ತದೆ. ಈ ರೀತಿ ಮೀಸಲಾತಿ ಅನೂರ್ಜಿತಗೊಳಿಸಿರುವುದು ಒಂದು ಘೋರ ಸಾಮಾಜಿಕ ಅನ್ಯಾಯ.




ಈ ತೀರ್ಪಿನ ನೇರ ಪರಿಣಾಮವೆಂದರೆ, ಈ ರಾಷ್ಟ್ರದಲ್ಲಿ, ಒಬ್ಬ ಪ್ರತಿಭಾವಂತ ವಿದ್ಯಾರ್ಥಿಗೆ ತಾನೇ ವೃತ್ತಿಪರ ಶಿಕ್ಷಣ ಸಂಸ್ಥೆಯೊಂದನ್ನು ಪ್ರಾರಂಭಿಸಿ ಅದನ್ನು ನಡೆಸುವುದಕ್ಕೆ ಮೂಲಭೂತ ಹಕ್ಕಿದೆಯೇ ಹೊರತು ಅವನಿಗೆ ಶಿಕ್ಷಣವನ್ನು ಪಡೆಯುವ ಮೂಲಭೂತ ಹಕ್ಕು ಇಲ್ಲ!

ಇದಲ್ಲದೆ ಇತ್ತೀಚಿನವರೆಗೂ ಕನ್ನಡ ಮಾಧ್ಯಮ ವಿದ್ಯಾರ್ಥಿಗಳಿಗೂ ಸಹ ಮೀಸಲಾತಿ ದೊರೆಯುತ್ತಿತ್ತು. ಇಷ್ಟೊಂದು ಸಮರ್ಥವಾಗಿ ನಡೆಯುತ್ತಿದ್ದ ಸಾಮಾಜಿಕ ನ್ಯಾಯದ ವ್ಯವಸ್ಥೆ ಇಂದು ನುಚ್ಚುನೂರಾಗಿದೆ. ಪ್ರಮುಖವಾಗಿ ಈ ಅಂಶದ ಸಮರ್ಥನೆಗಾಗಿ ಎರಡು ಕಾರಣಗಳನ್ನು ತೀರ್ಪಿನಲ್ಲಿ ಹೇಳಲಾಗಿದೆ. ಮೊದಲನೆಯದಾಗಿ, ಪರಿಚ್ಛೇದ ೪೨ನ್ನು ಉಲ್ಲೇಖಿಸಲಾಗಿದೆ. ಅದರಂತೆ ಇದೊಂದು ಸರ್ವೋಚ್ಚ ನ್ಯಾಯಾಲಯಕ್ಕೆ ಸಂಪೂರ್ಣ ನ್ಯಾಯ ಒದಗಿಸಲು ಕೊಟ್ಟ ಅಪರೂಪದ ಅಧಿಕಾರವಾಗಿದೆ. ಬಡ ವಿದ್ಯಾರ್ಥಿಗಳಿಗೆ, ಅದರಲ್ಲೂ ದಲಿತ ವಿದ್ಯಾರ್ಥಿಗಳ ಸಾಮಾಜಿಕ ನ್ಯಾಯ ಕಿತ್ತುಕೊಳ್ಳುವುದು ನ್ಯಾಯವೇ ? ಬಂಡವಾಳಶಾಹಿಗಳಿಗೆ ಸ್ವಾಯತ್ತತೆ ಕೊಡುವುದು ಅದರಲ್ಲೂ ಅನಿವಾಸಿ ಭಾರತೀಯರಿಗಾಗಿ ಮೀಸಲಾತಿಯೂ ಒಂದು ನ್ಯಾಯವೆ...? ಈ ಪ್ರಶ್ನೆಗಳಿಗೆ ಸಂಸತ್ತೇ ಉತ್ತರ ಹೇಳಬೇಕಾಗಿದೆ.

ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ವೃತ್ತಿಪರ ಕಾಲೇಜುಗಳನ್ನು ತೆರೆಯಲು ಸರಕಾರ ಅನುಮತಿ ನೀಡಿರುವ ಸಂದರ್ಭದಲ್ಲಿ ಅವುಗಳು ವಿದ್ಯಾರ್ಥಿಗಳನ್ನು ಅರ್ಹತೆಯ ಆಧಾರದ ಮೇಲೆ ದಾಖಲು ಮಾಡಿಕೊಳ್ಳಬೇಕೆಂದು ನಿರ್ಬಂಧವನ್ನು ವಿಧಿಸಿಲ್ಲ. ಬಂಡವಾಳಕ್ಕೆ ಆದ್ಯತೆ, ಜಾತಿ ಮತಗಳಿಗೆ ಮಣೆ ಹಾಕುವುದು, ಮಠಗಳಿಗೆ ಅನುಕೂಲ ಮಾಡಿಕೊಡಲೋಸುಗ ಅನೇಕ ಕಾಲೇಜುಗಳನ್ನು ನೀಡಿದ್ದಾಗಿದೆ. ಕರ್ನಾಟಕದಲ್ಲಂತೂ ಬಹುತೇಕ ಎಲ್ಲಾ ಕಾಲೇಜುಗಳೂ ಒಂದಲ್ಲಾ ಒಂದು ಜಾತಿಯ ಸಂಸ್ಥೆಗೆ ಸೇರಿವೆ. ಹಾಗಾಗಿ ಅರ್ಹತೆ ಮತ್ತು ಸಾಮಾಜಿಕ ನ್ಯಾಯಕ್ಕೆ ಬದಲಾಗಿ ಜಾತೀಯತೆಯು ಪ್ರವೇಶಾವಕಾಶಗಳಲ್ಲಿ ತಾಂಡವವಾಡಿದರೆ ಆಶ್ಚರ್ಯಪಡಬೇಕಾಗಿಲ್ಲ.

ಸರ್ವೋಚ್ಚ ನ್ಯಾಯಾಲಯವು ಇತ್ತೀಚಿನ ತನ್ನ ತೀರ್ಪಿನಲ್ಲಿ ಖಾಸಗೀ ಕಾಲೇಜುಗಳಲ್ಲಿ ಸರ್ಕಾರಿ ಕೋಟಾ ಸಲ್ಲ ಎಂದು ತೀರ್ಪು ನೀಡಿ, ಅದನ್ನು ಸಮರ್ಥಿಸಿಕೊಳ್ಳಲು ಇದುವರೆವಿಗೂ ಭಾರತದಲ್ಲಿ ವೃತ್ತಿಶಿಕ್ಷಣದ ಪ್ರವೇಶ ಪ್ರಕ್ರಿಯೆಯನ್ನು ನಿಯಂತ್ರಿಸುವ ಯಾವುದೇ ಕೇಂದ್ರೀಯ ಶಾಸನವೂ ಇಲ್ಲವಾದುದರಿಂದ ಖಾಸಗಿ ಶಿಕ್ಷಣಸಂಸ್ಥೆಗಳಲ್ಲಿ ಸರ್ಕಾರಿ ಕೋಟಾ ನಿಗದಿ ಪಡಿಸುವುದು ಸರಿಯಲ್ಲ ಎಂಬ ಕಾರಣವನ್ನು ಮುಂದಿಟ್ಟಿದೆ. ಒಂದು ಅಂಗದ ಕಾರ್ಯಕ್ಷೇತ್ರಕ್ಕೆ ಇನ್ನೊಂದು ಅಂಗ ಕೈ ಹಾಕುವುದು ಸಂವಿಧಾನದ ಸೀಮೋಲ್ಲಂಘನೆಯಾಗುತ್ತದೆ. ಮೂರು ಅಂಗಗಳೂ ಸಂವಿಧಾನದ ಶಿಶುಗಳಾದ್ದರಿಂದ ಸಂವಿಧಾನಕ್ಕೆ ಅಪಚಾರವೆಸಗುವಂತೆ ನಡೆದುಕೊಳ್ಳಬಾರದು. ಒಂದು ಅಂಗದ ವೈಫಲ್ಯ ಇನ್ನೊಂದು ಅಂಗಕ್ಕೆ ಬಲ ಕೊಡುವುದಿಲ್ಲ.

ಇದೊಂದು ವಿತಂಡವಾದವೂ ಹೌದು. ಉಳಿದೆರಡು ಅಂಗಗಳೂ ಇದೇ ಸಮರ್ಥನೆ ಯನ್ನು ಬಳಸಿಕೊಂಡು ನ್ಯಾಯಾಂಗ ಕ್ಷೇತ್ರಕ್ಕೆ ಕೈ ಹಾಕಿದರೆ ಅರಾಜಕತೆಯುಂಟಾಗುತ್ತದೆ. ಉದಾಹರಣೆಗೆ, ನ್ಯಾಯಾಲಯವು ತಮಿಳುನಾಡು ಮತ್ತು ಕರ್ನಾಟಕದ ಮೀಸಲಾತಿ (ಶೇ. ೬೯) ಪ್ರಕರಣವನ್ನು ಒಂದು ದಶಕ ಕಳೆದರೂ ಬಗೆಹರಿಸದಿರುವುದನ್ನು ಕಾರ್ಯಾಂಗ ಅಥವಾ ಶಾಸಕಾಂಗ ಬಳಸಿಕೊಂಡು ಅದೇ ತೀರ್ಪು ನೀಡ ಬಹುದೆ ? ನ್ಯಾಯಾಧೀಶರ ನೇಮಕಾತಿಯಲ್ಲಿ ಆಗಬಹುದಾದ ವಿಳಂಬವನ್ನು ಬಳಸಿಕೊಂಡು ಕಾರ್ಯಾಂಗವು ತಾನೇ ಅವರನ್ನು ಆಯ್ಕೆ ಮಾಡಿ ನೇಮಕ ಮಾಡಬಹುದೆ ? ಈ ಪ್ರಶ್ನೆಗಳಿಗೂ ಸಂಸತ್ತು ಉತ್ತರ ಕಂಡುಕೊಳ್ಳಬೇಕಿದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸಂವಿಧಾನವನ್ನು ಸಮಗ್ರವಾಗಿ ತಿದ್ದುಪಡಿಮಾಡಿ ಮುಂದೆಂದೂ ನ್ಯಾಯಾಂಗವು ಲಕ್ಷ್ಮಣರೇಖೆಯನ್ನು ದಾಟದಂತೆ ಮಾಡುವುದಲ್ಲದೆ ಸರ್ಕಾರಿ ಕೋಟಾ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಒಂದು ಹೊಸ ಕಾನೂನನ್ನು ರಚಿಸಿ 'ಉನ್ನಿಕೃಷ್ಣನ್ ಮೊಕದ್ದಮೆ' ತೀರ್ಪಿನ ನಂತರ ಬಂದ ಸಿ.ಇ.ಟಿ. ವ್ಯವಸ್ಥೆಯನ್ನು ಪುನಃ ಜಾರಿಗೆ ತರುವುದೊಂದೇ ಉಳಿದಿರುವ ದಾರಿ; ಈ ಉದ್ದೇಶಕ್ಕಾಗಿಯೇ ಸಂಸತ್ತಿನ ಒಂದು ವಿಶೇಷ ಸಭೆ ಕರೆದು ಸಮರೋಪಾದಿಯಲ್ಲಿ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಜನಾಭಿಪ್ರಾಯವನ್ನು ರೂಪಿಸುವುದೇ ನಮ್ಮ ಗುರಿಯಾಗಬೇಕು.

❑ **ಪ್ರೊ॥ ರವಿವರ್ಮ ಕುಮಾರ್**, ಹಿರಿಯ ನ್ಯಾಯವಾದಿಗಳು, ನಂ. ೩೭
೨ನೇ ಮುಖ್ಯರಸ್ತೆ, ವಯ್ಯಾಲಿಕಾವಲ್ ಎಕ್ಸ್‌ಟೆನ್ಷನ್, ಬೆಂಗಳೂರು-೩



# ಈ ಪದ್ಯ ಶುರು ಮಾಡುವ ಮೊದಲು ಒಂದು ನಿಮಿಷ ಮೌನ

ಮೂಲ : ಇಮ್ಯಾನ್ಯುಯೆಲ್ ಒರ್ಟಿಜ್

ನಾನು ಈ ಪದ್ಯ ಶುರು ಮಾಡುವ ಮೊದಲು,

ಕಳೆದ ಸೆಪ್ಟೆಂಬರ್ ೧೧ರಂದು ವಿಶ್ವ ವ್ಯಾಪಾರ ಕೇಂದ್ರ ಹಾಗೂ ಪೆಂಟಗನ್‌ನಲ್ಲಿ ತಮ್ಮ ಪ್ರಾಣ ಕಳೆದುಕೊಂಡವರ ಗೌರವಾರ್ಥವಾಗಿ ನೀವೆಲ್ಲರೂ ಕೂಡ ನನ್ನೊಂದಿಗೆ ಒಂದು ನಿಮಿಷ ಮೌನ ವಹಿಸಬೇಕೆಂದು ನಾನು ನಿಮ್ಮೆಲ್ಲರನ್ನೂ ಕೇಳಿಕೊಳ್ಳುತ್ತೇನೆ.

ಜೊತೆಗೆ ಚಿತ್ರಹಿಂಸೆ, ಜೈಲು ಶಿಕ್ಷೆಗೆ ಗುರಿಯಾಗಿ ಕಾಣೆಯಾದವರ, ಮಾನಭಂಗಕ್ಕೆ ತುತ್ತಾದವರ ಹಾಗೂ ಆಫ್ಘಾನಿಸ್ತಾನ ಮತ್ತು ಅಮೆರಿಕಾ ಎರಡೂ ದೇಶಗಳಲ್ಲಿ ವಿಮಾನ ದಾಳಿಗಳಿಗೆ ಬಲಿಯಾದವರ ಸ್ಮರಣಾರ್ಥವಾಗಿ ನೀವೆಲ್ಲರೂ ನನ್ನೊಂದಿಗೆ ಒಂದು ನಿಮಿಷ ಮೌನ ವಹಿಸಬೇಕೆಂದು ನಾನು ನಿಮ್ಮೆಲ್ಲರನ್ನೂ ಕೇಳಿಕೊಳ್ಳಲು ಇಚ್ಛಿಸುತ್ತೇನೆ.

ಮತ್ತೆ ನಾನು ಇನ್ನೂ ಒಂದು ವಿಷಯ ಸೇರಿಸಬಹುದೆಂದಾದರೆ...

ಅಮೆರಿಕಾ ಬೆಂಬಲಿತ ಇಸ್ರೇಲಿ ಪಡೆಗಳು ದಶಕಗಳ ಕಾಲ ದೇಶವನ್ನಾಕ್ರಮಿಸಿಕೊಂಡು ಬಲಿ ತೆಗೆದುಕೊಂಡ ಸಾವಿರ ಸಾವಿರ ಪ್ಯಾಲಿಸ್ತೀನಿಯರ ನೆನಪಿಗೆ ಒಂದು ಇಡೀ ದಿನ ಮೌನ. ಇರಾಕಿನಲ್ಲಿ ಹನ್ನೊಂದು ವರ್ಷದಿಂದ ಅಮೆರಿಕಾ ಹಾಕಿರುವ ನಿರ್ಬಂಧಗಳಿಂದಾಗಿ ಹಸಿವು ಹಾಗೂ ಪೌಷ್ಟಿಕಾಂಶ ಕೊರತೆಯಿಂದ ಸತ್ತ ಒಂದೂವರೆ ಮಿಲಿಯನ್ ಇರಾಕಿ ಜನರ, ಹೆಚ್ಚಿನ ಸಂಖ್ಯೆಯಲ್ಲಿ ಸತ್ತ ಅವರ ಮಕ್ಕಳ ನೆನಪಿಗಾಗಿ ಆರು ತಿಂಗಳ ಮೌನ.

ನಾನು ಈ ಪದ್ಯ ಶುರು ಮಾಡುವ ಮೊದಲು, ದಕ್ಷಿಣ ಆಫ್ರಿಕಾದಲ್ಲಿ ಜನಾಂಗೀಯ ಸರ್ಕಾರದಡಿ ಗೃಹ ಸುಭದ್ರತೆಯಿಂದಾಗಿ ತಮ್ಮ ಸ್ವಂತ ತಾಯ್ನಾಡಿನಲ್ಲೇ ಪರಕೀಯರಂತೆ ಬದುಕಿದ ಕಪ್ಪು ಜನರಿಗಾಗಿ ಎರಡು ತಿಂಗಳ ಮೌನ.

ಹಿರೋಶಿಮಾ ನಾಗಸಾಕಿಗಳಲ್ಲಿ ಸಾವು ಮಳೆಯಂತೆರಗಿ ಪ್ರತಿಯೊಂದು ಪದರ ಕಾಂಕ್ರೀಟು, ಸ್ಟೀಲು,ಭೂಮಿ ಹಾಗೂ ಜನರ ಮೈ ಚರ್ಮದ ಮೇಲೆ ಬಿದ್ದು ಎಲ್ಲಾದರ ಪದರಗಳನ್ನು ಒಂದೂ ಬಿಡದಂತೆ ಎಲ್ಲವನ್ನೂ ಸಿಪ್ಪೆ ಸುಲಿದಂತೆ ಸುಲಿದ ನಂತರವೂ ಜೀವಂತವೆಂಬಂತೆ ಬದುಕಿ ಉಳಿದವರಿಗಾಗಿ ಒಂಭತ್ತು ತಿಂಗಳ ಮೌನ.

ಒಂದು ವರ್ಷದ ಮೌನ ವಿಯತ್ನಾಮಿನಲ್ಲಿ ಮಡಿದ ಮಿಲಿಯಾಂತರ ಜನರಿಗಾಗಿ - ಅಲ್ಲಿನ ಜನ - ಅವರು ಯುದ್ಧದಲ್ಲಿ ಮಡಿದವರಂತೂ ಅಲ್ಲ, ಆ ಸುಡುವ ಇಂಧನದ ವಾಸನೆಯ ಪರಿಚಯ ಇರುವ, ತಮ್ಮ ನೆಂಟರ ಮೂಳೆಗಳು ಅದರಲ್ಲಿ ಹೂತಿರುವ ಪರಿಚಯವಿರುವ, ಅದರಲ್ಲೇ ಹುಟ್ಟಿದ ಮಕ್ಕಳ ಪರಿಚಯವಿರುವವರಿಗಾಗಿ ಈ ಮೌನ.

ಕಂಬೋಡಿಯಾ ಹಾಗೂ ಲಾಒಸ್‌ಗಳಲ್ಲಿ ಒಂದು ಗೋಪ್ಯ ಯುದ್ಧದಲ್ಲಿ ಮಡಿದವರಿಗಾಗಿ ಒಂದು ವರ್ಷ ಮೌನ.... ಶ್‌ಶ್‌ಶ್‌ಶ್‌ಶ್‌ಶ್‌ಶ್‌...

ಏನೂ ಹೇಳಬೇಡಿ... ಅವರು ಸತ್ತಿದ್ದಾರೆಂದು ಅವರಿಗೆ
ಗೊತ್ತಾಗುವುದು ನಮಗಿಷ್ಟವಿಲ್ಲ

ಕೊಲಂಬಿಯಾದಲ್ಲಿ ದಶಕಗಳಿಂದ ಸಾಯುತ್ತಾ ಬಂದವರಿಗಾಗಿ, ಒಂದರ ಮೇಲೊಂದು ಪೇರಿಸಲ್ಪಟ್ಟು ಹಿಂದೊಮ್ಮೆ ಬದುಕಿದ್ದವರನ್ನು ಪ್ರತಿನಿಧಿಸಿದ ಹೆಸರುವೆತ್ತ ಹೆಣಗಳನ್ನು ಹಾಗೂ ಈಗ ನಮ್ಮ ನಾಲಿಗೆಯಿಂದ ಅವರ ಹೆಸರು ಕೂಡ ಜಾರಿಕೊಂಡು ಹೋದವರಿಗಾಗಿ ಎರಡು ತಿಂಗಳ ಮೌನ.

ನಾನು ಈ ಪದ್ಯ ಶುರು ಮಾಡುವ ಮೊದಲು,

ತಮ್ಮ ಜೀವಿತಾವಧಿಯಲ್ಲಿ ಒಂದು ಕ್ಷಣ ಶಾಂತಿಯನ್ನೂ ಕಂಡರಿಯದ ಎಲ್ ಸಾಲ್ವಡಾರ್‌ಗಾಗಿ ಒಂದು ಘಂಟೆಯ ಮೌನ...

ನಿಕರಾಗುವಾಗಾಗಿ ಒಂದು ಮಧ್ಯಾಹ್ನದ ಮೌನ...

ಗ್ವಾಟೆಮಾಲಾಗಾಗಿ ಎರಡು ದಿನದ ಮೌನ...

ಅಕ್ಟೀಲು ಹಾಗೂ ಚಿಯಾಪಾಸ್‌ಗಳಲ್ಲಿ ಮಡಿದ ೪೫ ಜನರಿಗಾಗಿ ೪೫ ಸೆಕೆಂಡುಗಳ ಮೌನ.

ಆಕಾಶದಲ್ಲಿ ಯಾವುದೇ ಕಟ್ಟಡವೂ ತೂರದಷ್ಟು ಆಳದಲ್ಲಿ ಸಮುದ್ರದಲ್ಲಿ ಹೂತು ಇನ್ನು ಸಿಗಲಾರದ ಗೋರಿಗಳಲ್ಲಿ ಹುದುಗಿ ಹೋಗಿರುವ ಅವರ ಡಿಎನ್‌ಎ ಅಥವಾ ಹಲ್ಲುಗಳ ಮೂಲಕ ಅವರ ಪಳೆಯುಳಿಕೆಯ ಗುರುತು ಹಚ್ಚಲು ಡಿಎನ್‌ಎ ಅಥವಾ ದಂತ ಪರೀಕ್ಷೆ ಯಾಗಲು ಅವರ ಅವಶೇಷಗಳೂ ಉಳಿದಿಲ್ಲವೋ... ಅಂತಹ ನೂರಾರು ಮಿಲಿಯನ್ ಆಫ್ರಿಕನ್ನರಿಗಾಗಿ ೨೫ ವರ್ಷಗಳ ಮೌನ.

ಹಾಗೂ ದಕ್ಷಿಣ, ಉತ್ತರ, ಪೂರ್ವ, ಪಶ್ಚಿಮಗಳಲ್ಲಿ ಉದ್ದದ ಸಿಕಮೋರ್ ವೃಕ್ಷಗಳಿಗೆ ಕಟ್ಟಿ ನೇಣು ಹಾಕಲ್ಪಟ್ಟವರಿಗಾಗಿ

೧೦೦ ವರ್ಷದ ಮೌನ...

ಪೈನ್ ರಿಟ್ಜ್, ವೂಂಡೆಡ್ ನೀ, ಸ್ಯಾಂಡ್ ಕ್ರೀಕ್, ಫಾಲನ್ ಟಿಂಬರ್ ಅಥವಾ ಟ್ರೈಲ್ ಆಫ್ ಟಿಯರ್ಸ್ ಎಂದು ಪೋಸ್ಟ್ ಕಾರ್ಡುಗಳಲ್ಲಿ ಸುಂದರವಾಗಿ ಚಿತ್ರಿತವಾದಂತಹ ಪರಿಪೂರ್ಣ ಜಾಗಗಳಲ್ಲಿ ತಮ್ಮಿಂದ ತಮ್ಮ ಭೂಮಿ ಹಾಗೂ ಬದುಕನ್ನು ಕಸಿದುಕೊಳ್ಳಲಾದ, ಪೂರ್ಣವಾಗಿ ಭೂಮಿಯ ಈ ಅರ್ಧಬದಿಯ ನೂರಾರು ಮಿಲಿಯಾಂತರ ಸ್ವದೇಶಿ ಜನರಿಗಾಗಿ.

ಈಗ ಈ ಹೆಸರುಗಳು ನಮ್ಮ ಪ್ರಜ್ಞೆಯ ರೆಫ್ರಿಜರೇಟರುಗಳಲ್ಲಿ ಅರ್ಥಹೀನ ಅಯಸ್ಕಾಂತ ಕವಿತೆಗಳಾಗಿ ಕುಗ್ಗಿ ಹೋಗಿವೆ...

ಹಾಗಾಗಿ ನಿಮಗೆ ಒಂದು ನಿಮಿಷದ ಮೌನ ಬೇಕಲ್ಲವೇ ?

ಹಾಗು ನಮ್ಮ ಬಾಯಿಂದ ನಮ್ಮ ನಾಲಿಗೆಗಳು ಕಸಿದುಕೊಳ್ಳಲಾಗಿ

ನಮ್ಮ ಕಣ್ಣುಗಳು ಕೊಂಡಿಗಳಿಂದ ಮುಚ್ಚಿಹೋಗಿ

ನಾವೆಲ್ಲಾ ಮಾತಿಲ್ಲದವರಾಗಿಬಿಟ್ಟಿದ್ದೇವೆ

ಒಂದು ಕ್ಷಣದ ಮೌನ

ಹಾಗೂ ಎಲ್ಲಾ ಕವಿಗಳೂ ತಮ್ಮ ಗೋರಿಗಳಲ್ಲಿ ಮಲಗಿಸಲ್ಪಟ್ಟಿದ್ದಾರೆ

ಮತ್ತು ನಗಾರಿಗಳು ಧೂಳಿನಲ್ಲಿ ಲೀನವಾಗಿ ಹೋಗುತ್ತಿವೆ.

ನಾನು ಈ ಪದ್ಯ ಶುರು ಮಾಡುವ ಮೊದಲು

ನಿಮಗೆ ಒಂದು ಕ್ಷಣ ಮೌನ ಬೇಕು

ಪ್ರಪಂಚ ಇನ್ನೆಂದೂ ಹಿಂದಿನಂತಿರಲಾರದೇನೋ ಎಂಬಂತೆ ನೀವು ಈಗ ಶೋಕ ವ್ಯಕ್ತಪಡಿಸುತ್ತಿದ್ದೀರಿ.

ಹಾಗೂ ಉಳಿದ ನಾವೆಲ್ಲ ಅದು ಮತ್ತೆ ಹಿಂದಿನಂತಿರ ಕೂಡದೆಂದೂ, ಯಾವತ್ತಿಗೂ ಇಷ್ಟು ದಿನ ಇದ್ದಂತಿರ ಕೂಡದೆಂದೂ ಬೆಟ್ಟದಷ್ಟು ಆಸೆ ಇಟ್ಟುಕೊಂಡಿದ್ದೇವೆ.

ಏಕೆಂದರೆ ಇದು ೯-೧೧ರ ಪದ್ಯವಲ್ಲ.

ಇದು ೯/೧೦ರ ಪದ್ಯ

೯/೯ರ ಪದ್ಯ

೯/೮ರ ಪದ್ಯ

೯/೭ರ ಪದ್ಯ

ಇದು ೧೪೯೨ರ ಪದ್ಯ

ಇಂತಹ ಪದ್ಯಗಳನ್ನು ಬರೆಯುವಂತೆ ಮಾಡುವ ಕಾರಣಗಳಿಗಾಗಿ ಈ ಪದ್ಯ ಹಾಗೂ ಇದು ೯/೧೧ರ ಪದ್ಯವೆಂದಾದರೆ, ಆಗ

ಇದು ಚಿಲಿಗಾಗಿ ೧೯೭೧ರ ಸೆಪ್ಟೆಂಬರ್ ೧೧ರ ಪದ್ಯ

ಇದು ದಕ್ಷಿಣ ಆಫ್ರಿಕಾದ ಸ್ಟೀವನ್ ಬಿಕೋಗಾಗಿ ೧೯೭೭ರ ಸೆಪ್ಟೆಂಬರ್ ೧೨ರ ಪದ್ಯ

ಇದು ನ್ಯೂಯಾರ್ಕಿನ ಆಟ್ಟಿಕಾ ಸೆರೆಮನೆಯ ಸಹೋದರರಿಗಾಗಿ ೧೯೭೧ರ ಸೆಪ್ಟೆಂಬರ್ ೧೩ರ ಪದ್ಯ

ಇದು ಸೊಮಾಲಿಯಾಗಾಗಿ ೧೯೯೨ರ ಸೆಪ್ಟೆಂಬರ್ ೧೪ರ ಪದ್ಯ

ಇದು ೧೯೭೧ರ ಚಿಲಿಗಾಗಿ ಸೆಪ್ಟೆಂಬರ್ ೧೧ರ ಪದ್ಯ

ಬೂದಿಯಾಗಿ ಭೂಮಿಗೆ ಬೀಳುವ ಪ್ರತಿಯೊಂದು

ದಿನಾಂಕಕ್ಕಾಗಿ ಈ ಪದ್ಯ

ಎಂದಿಗೂ ಹೇಳದೇ ಹೋದ

ಇತಿಹಾಸವು ಪಠ್ಯಪುಸ್ತಕಗಳಲ್ಲಿ ಬರೆಯಲಿಚ್ಛಿಸದ ೧೧೦ ಕಥೆಗಳಿಗಾಗಿ ಈ ಪದ್ಯ

ಸಿಎನ್‌ಎನ್, ಬಿಬಿಸಿ, ದಿ ನ್ಯೂಯಾರ್ಕ್ ಟೈಮ್ಸ್ ಹಾಗೂ ನ್ಯೂಸ್ ವೀಕ್‌ಗಳು ಕಡೆಗಾಣಿಸಿದ ೧೧೦ ಕಥೆಗಳಿಗಾಗಿ ಈ ಪದ್ಯ

ಈ ಕಾರ್ಯಕ್ರಮದಲ್ಲಿ ಅಡಚಣೆಯುಂಟುಮಾಡುವುದಕ್ಕಾಗಿ ಈ ಪದ್ಯ

ಮತ್ತೆ ಇನ್ನೂ ನಿಮಗೆ ನಿಮ್ಮ ಸತ್ತವರಿಗಾಗಿ ಒಂದು ಕ್ಷಣದ ಮೌನ ಬೇಕೇ ?

ನಾವು ನಿಮಗೆ ಆಜೀವನ ಶೂನ್ಯವನ್ನು ಕೊಡಬಹುದು.

ಹೆಸರಿಲ್ಲದ ಗೋರಿಗಳು

ಕಳೆದುಹೋದ ಭಾಷೆಗಳು

ಬುಡಸಮೇತ ಕೀಳಲಾದ ಮರಗಳೂ ಇತಿಹಾಸಗಳೂ

ಹೇಳಹೆಸರಿಲ್ಲದ ಮಕ್ಕಳ ಕಂಗಳಲ್ಲಿರುವ ಸತ್ತವರ ನೋಟಗಳು

ನಾನು ಈ ಪದ್ಯ ಶುರು ಮಾಡುವ ಮೊದಲು ನಾವು ಶಾಶ್ವತವಾಗಿ ಮೌನವಾಗಿರಬಹುದು

ಅಥವಾ ಹಸಿವೆಯಿಂದ ಇರುವಷ್ಟು ಕಾಲ

ನಮ್ಮನ್ನು ಧೂಳು ಮುಚ್ಚಿಹಾಕುವಷ್ಟು ಕಾಲ

ಮೌನವಾಗಿರಬಹುದು

ಮತ್ತಿನ್ನೂ ಕೂಡ ನೀವು ನಮ್ಮ ಮೌನವನ್ನು ಬಯಸುವಿರಿ.

ನಿಮಗೆ ಒಂದು ಕ್ಷಣ ಮೌನ ಬೇಕೆಂದಾದರೆ

ಆಗ ತೈಲದ ಕೊಳವೆಗಳನ್ನು ಮುಚ್ಚಿಹಾಕಿ

ಎಲ್ಲಾ ಎಂಜಿನ್ನುಗಳನ್ನೂ ನಿಲ್ಲಿಸಿ, ಟಿ.ವಿಗಳನ್ನೂ ಆರಿಸಿಬಿಡಿ




ಎಲ್ಲಾ ಸಮುದ್ರಯಾನದ ಹಡಗುಗಳನ್ನೂ ಮುಳುಗಿಸಿ

ಬಂಡವಾಳ ಪೇಟೆಯ ಷೇರು ಮಾರುಕಟ್ಟೆಗಳು ಕುಸಿಯುವಂತೆ ಮಾಡಿ

ಎಲ್ಲಾ ಡೇರೆ ದೀಪಗಳನ್ನೂ ಆರಿಸಿಬಿಡಿ

ತುರ್ತು ಸಂದೇಶಗಳನ್ನು ಅಳಿಸಿಹಾಕಿ –

ಎಲ್ಲಾ ರೈಲುಗಳನ್ನೂ, ಹಗುರ ರೈಲು ಪ್ರಯಾಣವನ್ನೂ, ಲಘು ರೈಲು ಸಾಗಣೆಗಳನ್ನೂ ಹಳಿ ತಪ್ಪಿಸಿ

ನಿಮಗೆ ಒಂದು ಕ್ಷಣ ಮೌನ ಬೇಕೆಂದಾದರೆ

ಟೇಕೋ ಬೆಲ್‌ನ ಕಿಟಕಿಯ ಮೂಲಕ ಒಂದು ಇಟ್ಟಿಗೆಯನ್ನು ಬಿಸಾಡಿ

ಹಾಗೂ

ತಮ್ಮ ದಿನಗೂಲಿಯನ್ನು ಕಳೆದುಕೊಂಡ ಕಾರ್ಮಿಕರಿಗೆ ಸಂಬಳ ನೀಡಿ

ಹೆಂಡದ ಅಂಗಡಿಗಳನ್ನು ಧ್ವಂಸ ಮಾಡಿ

ಎಲ್ಲಾ ಪಟ್ಟಣದ ಮನೆಗಳನ್ನೂ, ಶ್ವೇತಭವನಗಳನ್ನೂ, ಸೆರೆಮನೆಗಳನ್ನೂ ಮೇಲಂತಸ್ತಿನಲ್ಲಿರುವ ಮನೆಗಳನ್ನೂ ಸುಖಜೀವಿಗಳನ್ನೂ ನಾಶಮಾಡಿ

ನಿಮಗೆ ಒಂದು ಕ್ಷಣ ಮೌನ ಬೇಕೆಂದಾದರೆ

ಸೂಪರ್ ಬೌಲ್ ಸಂಡೇಯಂದು

ಜುಲೈ ನಾಲ್ಕರಂದು

ಡೇಟನ್ನರ ೧೩ ಘಂಟೆ ಮಾರಾಟದಂದು

ಅದನ್ನು ತೆಗೆದುಕೊಳ್ಳಿ

ಅಥವಾ ನನ್ನ ಸುಂದರ ಜನರು ಸೇರಿರುವ ಕೋಣೆ ತುಂಬಾ ನಿಮ್ಮ ಬಿಳಿಯ ಪಾಪಪ್ರಜ್ಞೆ

ನಿಮ್ಮನ್ನು ಮುಂದಿನ ಬಾರಿ ಕಾಡಿದಾಗ

ನಿಮಗೆ ಒಂದು ಕ್ಷಣ ಮೌನ ಬೇಕು.

ಹಾಗಾದರೆ

ನಾನು ಈ ಪದ್ಯ ಶುರು ಮಾಡುವ ಮೊದಲು

ಈಗಲೇ ಆ ಮೌನವನ್ನು ವಹಿಸಿಕೊಳ್ಳಿ.

ಇಲ್ಲಿ ನನ್ನ ಧ್ವನಿಯ ಮಾರುದನಿಯಲ್ಲಿ ಗಡಿಯಾರದ

ಎರಡನೇ ಮುಳ್ಳಿನ ಎತ್ತರದ ಸೈನಿಕ ಹೆಜ್ಜೆಗಳಲ್ಲಿ

ಒಂದನ್ನೊಂದು ತಬ್ಬಿಕೊಂಡಿರುವ ಹೆಣಗಳ ಮಧ್ಯೆ ಇರುವ ಜಾಗದಲ್ಲಿ

ಇದೋ ನಿಮ್ಮ ಮೌನವಿದೆ.

ಅದನ್ನು ವಹಿಸಿಕೊಳ್ಳಿ.

ಆದರೆ ಅದನ್ನು ಪೂರ್ತಿಯಾಗಿ ತೆಗೆದುಕೊಳ್ಳಿ

ಸಾಲು ಬಿಟ್ಟು ಮಧ್ಯೆ ನುಗ್ಗಬೇಡಿ.

ಅಪರಾಧದ ಆರಂಭವಾದೆಡೆ ನಿಮ್ಮ ಮೌನಕ್ಕೂ ಕೂಡ ನಾಂದಿಯಾಗಲಿ

ಆದರೆ ಇಂದು ರಾತ್ರಿಯೆಲ್ಲಾ ನಾವು ಮಾತ್ರ

ನಮ್ಮ ಮೃತರಿಗಾಗಿ ಹಾಡು ಹಾಡುತ್ತಾ ಇರುತ್ತೇವೆ.

ಅನುವಾದ : ಸುಚೇತಾ ಪೈ ಜವಳಿ
ನಂ. ೬೬, ಶಾಂಡಿಲ್ಯ ಅಪಾರ್ಟ್‌ಮೆಂಟ್
೭ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ಜಾತಿ ನಿರಾಕರಣೆಯೋ ಅಥವಾ ನವೀಕರಣವೋ ?

ಡಾ|| ಸುಧಾ ಸೀತಾರಾಮನ್

ಇತ್ತೀಚೆಗೆ 'ಹಿಂದುಳಿದ' ಜಾತಿಗಳ ಆಯೋಗಗಳ ಜೊತೆಗೆ 'ಹಿಂದುಳಿದ' ಜಾತಿಗಳ ವಿವಿಧ ಸಂಸ್ಥೆಗಳು ಕೈಗೆತ್ತಿಕೊಂಡಿರುವ ಜಾತಿ ಗಣತಿ ಸ್ವಾಗತಾರ್ಹ ವಿಚಾರ. ಎಲ್ಲರಿಗೂ ತಿಳಿದಹಾಗೆ ಜಾತಿ ಸಂಸ್ಥೆಗಳು ಸ್ಥಾಪಿತವಾಗಲು ಮುಖ್ಯ ಕಾರಣ – ಸರ್ಕಾರ ನೇಮಿಸುವ ಹಿಂದುಳಿದ ಆಯೋಗಗಳ ಬಗೆಗಿನ ಅಸಮಾಧಾನ, ಪ್ರತ್ಯೇಕವಾಗಿ ತಮ್ಮ ಹಿಂದುಳಿಯುವಿಕೆಯನ್ನು ನಿರ್ಧರಿಸುವಲ್ಲಿ ಬಳಸುವ ಮಾನದಂಡಗಳು ಸಮರ್ಪಕವಾಗಿ ತಮ್ಮನ್ನು ಚಿತ್ರಿಸುವುದಿಲ್ಲ ಎನ್ನುವ ಕಾರಣಕ್ಕಾಗಿ. ಸರ್ಕಾರಿ ಮಾಹಿತಿಗೆ ಇರುವ ಅಧಿಕೃತತೆ ಸಂಸ್ಥೆಗಳು ಒದಗಿಸುವ ಮಾಹಿತಿಗೆ ಇಲ್ಲವಾದರೂ, ಜಾತಿಗಳ ನಡುವಿನ ಅಸಮಾನತೆ ಊಹಾ-ಪೋಹಗಳ ಮೇಲೆ ನಿಲ್ಲದೇ, ವಸ್ತುನಿಷ್ಠ ಅಂಶಗಳಿಂದ ಕೂಡಿರುತ್ತವೆ. ಆದರೆ, ಮುಖ್ಯವಾಗಿ ಲಭ್ಯವಿಲ್ಲದೇ ಇರುವ ಮಾಹಿತಿ ಎಂದರೆ ಮೇಲು ಜಾತಿಗಳ ಸ್ಥಿತಿ-ಗತಿಗಳ ಬಗೆಗೆ. 'ಮೇಲು' ಜಾತಿಗಳ ಮಾಹಿತಿಯ ಆಧಾರದ ಮೇಲೆ ಮಾತ್ರವೇ ಮಾಡಲಾಗುತ್ತಿರುವ ಜಾತಿ ಗಣತಿಯನ್ನು ತುಲನಾತ್ಮಕ ವಾದ ಅಧ್ಯಯನಕ್ಕೆ ಒಳಪಡಿಸಬಹುದು. ಈ ಕೊರತೆಯನ್ನು, ಸ್ವಲ್ಪಮಟ್ಟಿಗೆ, ರಾಷ್ಟ್ರೀಯ ಸರ್ವೇಕ್ಷಣ ನಮೂನೆ ಮಾಹಿತಿ ನಿವಾರಿಸಬಹುದು ಎನ್ನಬಹುದಾದರೂ ಇತ್ತೀಚೆಗಷ್ಟೇ ಅದನ್ನು ಆರಂಭಿಸಲಾಗಿದೆ. ಈ ಎಲ್ಲಾ ಕಾರಣಗಳಿಂದಲೂ ಮಾಹಿತಿ ಸಂಗ್ರಹಣೆ ಅಂಕಿ-ಅಂಶದ್ದಾಗಿರಲಿ, ಜನಾಂಗೀಯ ಅಧ್ಯಯನವಾಗಲಿ ಅದರ ವಿಶ್ಲೇಷಣೆಯ ಅಗತ್ಯವಿದೆ.

ಬಹುತೇಕ ಸಮಾಜಶಾಸ್ತ್ರಜ್ಞರು ಜಾತಿ ಮಾಹಿತಿಯನ್ನು ಜನಗಣತಿಯಲ್ಲಿ ಸೇರಿಸುವ ಪ್ರಯತ್ನದಲ್ಲಿ ಹೆಚ್ಚಿನ ಮುತುವರ್ಜಿ ವಹಿಸಿಲ್ಲ. ಸಮಾಜಶಾಸ್ತ್ರಜ್ಞರ ಈ ನಿಲುವು ಏಕಕಾಲಕ್ಕೆ ಗೊಂದಲ ಮತ್ತು ವೈರುಧ್ಯಾತ್ಮಕ ಧೋರಣೆಯನ್ನು ಸೂಚಿಸುವಂತಿದೆ. ಸಮಾಜಶಾಸ್ತ್ರದ ಮುಖ್ಯ ಕಾಳಜಿಯ ಕ್ಷೇತ್ರ ಜಾತಿಯಾಗಿದ್ದರೂ, ಇದರ ಬಗ್ಗೆ ನಮಗೆ ಮಾಹಿತಿಯ ಮತ್ತು ಅಧ್ಯಯನಗಳ ಅವಶ್ಯಕತೆಯನ್ನು ಗಮನಿಸದೆ, ಅದಕ್ಕೆ ಪೂರಕವಾಗಿ ಕಾರ್ಯಶೀಲರಾಗದೆ, ತಾವು ಕುಳಿತುಕೊಂಡಿರುವ ಕೊಂಬೆಯನ್ನು ತಾವೇ ಕಡಿದುಕೊಂಡಂತಾಗಿಬಿಟ್ಟಿದೆ ಸಮಾಜಶಾಸ್ತ್ರದ ಪರಿಸ್ಥಿತಿ.

೯೦ರ ದಶಕದ ಮಂಡಲ್ ವರದಿ ನಂತರ, ಭಾರತ ಸರ್ಕಾರದ ೨೦೦೧ರ ಜನಗಣತಿ ಜಾತಿಯ ಮಾಹಿತಿಯನ್ನು ಸಂಗ್ರಹಿಸಲು / ಒಳಗೊಳ್ಳಲು ಸಾಧ್ಯವೆಂದು ತಿಳಿಸಿದ್ದಾಗ್ಯೂ, ಅದನ್ನು ಅವಾಸ್ತವಿಕವೆಂದು ಬಗೆಯಲಾಯಿತು. ಯಾವುದೇ ಪರ್ಯಾಯವನ್ನು ಸೂಚಿಸದೆ, ಸಮಾಜಶಾಸ್ತ್ರಜ್ಞರು ತಾಳುವಂತಹ ದ್ವಂದ್ವಾತ್ಮಕ ನಿಲುವನ್ನು ಸೂಕ್ಷ್ಮವಾಗಿ ಗಮನಿಸಿದರೆ, ನಮಗೆ ತಿಳಿದು ಬರುವುದೇನೆಂದರೆ, ಜಾತಿ ಅಸಮಾನತೆಯ ಬಗೆಗಿನ ಅಧ್ಯಯನಗಳಿಗೆ ಇರುವಂತಹ ನಿಜವಾದ ಸಮಸ್ಯೆ ಮಾಹಿತಿಯ ಕೊರತೆ ಮಾತ್ರವಲ್ಲ, ಬದಲಾಗಿ ಜಾತಿಯನ್ನು ಹೇಗೆ ಅರ್ಥೈಸಬೇಕು ಎನ್ನುವ ಬಗೆಗಿನ ಇನ್ನೂ ಆಳವಾಗಿರುವಂತಹ ಬೇರೆಯದೇ ಆದ ಸಮಸ್ಯೆ. ಇದನ್ನು ಕುರಿತಂತೆ ಅಧ್ಯಯನಗಳ ಅವಶ್ಯಕತೆ ಇದೆ.

**ಜಾತಿ ಮಾತು - ಪೊಲಿಟಿಕಲಿ ಇನ್‌ಕರೆಕ್ಟ್**

ನಾನು ಮೇಲುಜಾತಿ ಮತ್ತು ಮೇಲುವರ್ಗಕ್ಕೆ ಸೇರಿರುವಂತಹ ಮಹಿಳೆಯಾಗಿದ್ದೇನೆ. ಬೆಂಗಳೂರಿನ ಸರ್ಕಾರಿ ಕಲಾ ಕಾಲೇಜಿನಲ್ಲಿ ಅಂದರೆ, ಬಹುಪಾಲು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳಿಂದ, ಗ್ರಾಮೀಣ ಪ್ರದೇಶಗಳಿಂದ ಮತ್ತು ಅನಕ್ಷರಸ್ಥ ಕುಟುಂಬಗಳಿಂದ ಬಂದ ವಿದ್ಯಾರ್ಥಿಗಳು ತುಂಬಿರುವಂತಹ ಕಾಲೇಜಿನಲ್ಲಿ ನಾನು ಉಪನ್ಯಾಸಕಿಯಾಗಿದ್ದೇನೆ. ಕಳೆದ ಹತ್ತು ವರ್ಷಗಳಿಂದ ನನ್ನ ವೃತ್ತಿಜೀವನದಲ್ಲಿ ಮೂಲಭೂತ ಪ್ರಶ್ನೆಯೊಂದನ್ನು ವಿದ್ಯಾರ್ಥಿಗಳಿಗೆ ಕೇಳುತ್ತಲೇ ಇದ್ದೀನಿ, ಅದೇನೆಂದರೆ – ಜಾತಿಯೆಂದರೇನು ? ನಿಮ್ಮ ಅನುಭವಕ್ಕೆ ಅದು ಬಂದಿದೆಯೇ? ಜಾತಿ ಅಸ್ತಿತ್ವದಲ್ಲಿದೆಯೇ ? ಮೀಸಲಾತಿ ಸಮರ್ಥನೀಯವೇ ? ಹೆಚ್ಚು ಕಡಿಮೆ ವಾಕ್ಸಂಪ್ರದಾಯದಂತೆ, ಇದಕ್ಕೆ ವಿಧಿವತ್ತಾಗಿ ಸಿದ್ಧ ಉತ್ತರಗಳನ್ನು ವಿದ್ಯಾರ್ಥಿಗಳು ನೀಡುತ್ತಲೇ ಬಂದಿದ್ದಾರೆ. ಅದೇನೆಂದರೆ, ''ಹೂಂ, ಜಾತಿ ಇನ್ನೂ ಅಸ್ತಿತ್ವದಲ್ಲಿದೆ. ಆದರೆ ನಗರ ಪ್ರದೇಶದಲ್ಲಲ್ಲ, ಗ್ರಾಮೀಣ ಪ್ರದೇಶದಲ್ಲಿ'' ಅದಕ್ಕೆ ನಾನು - ''ಸರಿ, ಅಲ್ಲೇ ಆಗಲಿ ಅದು ಹೇಗೆ ಕಾಣಿಸುತ್ತದೆ?'' ಎಂದು ಕೇಳಿದಾಗ – ''ಒಂದು ನಂಬಿಕೆಯಾಗಿ, ಒಂದು ಧಾರ್ಮಿಕ ಆಚರಣೆಯಾಗಿ'' ಎಂಬ ಉತ್ತರ ತಟ್ಟನೆ ಬರುತ್ತದೆ. ಒಟ್ಟಾರೆ ಹೇಳುವುದಾದರೆ, ಜಾತಿ ಅಸ್ತಿತ್ವದಲ್ಲಿರುವುದು ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಅದು ಕಾಣಿಸಿಕೊಳ್ಳುವುದು, ಸಂಪ್ರದಾಯಗಳು, ಧಾರ್ಮಿಕ ಆಚರಣೆಗಳು ಮತ್ತು ರೂಢಿಗಳಲ್ಲಿ. ಒಟ್ಟಾರೆಯಾಗಿ ಹೇಳುವುದಾದರೆ, ಜಾತಿ ಅವರ ಅನುಭವಕ್ಕೆ ದೂರವಾಗಿರುವಂತಹ ಒಂದು ಪರಿಕಲ್ಪನೆಯಾಗಿದೆ ಎಂದು ತೋರುತ್ತದೆ.

ಮೇಲುಜಾತಿ ಮಹಿಳೆ ಆಗಿರುವುದರಿಂದ ಕೌಟುಂಬಿಕ ಜಗತ್ತಿನಲ್ಲಿ ನನಗೆ ಜಾತಿಯ ಬಗೆಗೆ ಮತ್ತೊಂದು ರೀತಿಯ ಅನುಭವ ಆಗಿದೆ. ನನ್ನ ಸಂಬಂಧಿಕರೆಲ್ಲ ಮೇಲುಜಾತಿಗೆ ಸೇರಿದವರಾಗಿದ್ದು, ೫೦-೬೦ರ ದಶಕಗಳಲ್ಲಿ ವಸಾಹತುಶಾಹಿ ಆಧುನಿಕತೆ ಒದಗಿಸಿಕೊಟ್ಟಿರುವ ಎಲ್ಲ ಅವಕಾಶಗಳನ್ನು ಸಂಪೂರ್ಣವಾಗಿ ಪಡೆದುಕೊಂಡು, ೯೦ರ ದಶಕದ ನಂತರ ಐಟಿ, ಬಿಟಿ ವಲಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರಾಗಿದ್ದಾರೆ. ಜಾತಿಯ ಬಗ್ಗೆ ಎಷ್ಟೋ ಬಾರಿ ಅವರ ಅಭಿಪ್ರಾಯ ಕೇಳಲು ಪ್ರಯತ್ನಿಸಿದಾಗ – ''ಇಲ್ಲಪ್ಪ, ನಮ್ಮಲ್ಲಿ ಅಂತರ್ಜಾತಿ ವಿವಾಹಗಳು ಸಾಕಷ್ಟಾಗಿವೆ ಅಲ್ವಾ. ಸುಮಾರು ಜನ ಚಿಕನ್ ತಿನ್ನಲು ಶುರು ಮಾಡಿದ್ದಾರೆ'' ಎಂದು ತಕ್ಷಣ ಪ್ರತಿಕ್ರಿಯಿಸುತ್ತಾರೆ. ಅಂದರೆ, ಜಾತಿ ಇದೆ ಎನ್ನುವುದಕ್ಕೆ ಇವರುಗಳು ಗುರುತಿಸಿರುವ ಪ್ರಮಾಣವೇನೆಂದರೆ, ಆಹಾರ ಪದ್ಧತಿ/ಪಂಕ್ತಿ ಊಟ ಮತ್ತು ಅಂತರ್ಜಾತಿ ವಿವಾಹ. ಈ ಎರಡಕ್ಕೂ ಸೈ ಎನ್ನುವ ಬ್ರಾಹ್ಮಣ ಸಮುದಾಯದವರು ಈಗ ಜಾತಿ ಎಲ್ಲಿದೆ, ಇಲ್ಲವೇ ಇಲ್ಲವೆಂದು ವಾದಿಸುತ್ತಾರೆ. ಮುಖ್ಯವಾಗಿ ವರ್ಣ ವ್ಯವಸ್ಥೆಯ ಅಂಚಿನಲ್ಲಿರುವ – ಶೂದ್ರಾತಿಶೂದ್ರ ಮತ್ತು 'ಉತ್ತುಂಗ' ದಲ್ಲಿರುವ ಬ್ರಾಹ್ಮಣ ಜಾತಿಗಳ, ಜಾತಿ ಬಗೆಗಿನ ನಿರ್ವಚನಗಳು ಒಂದೇ ಆಗಿದೆ ಎನ್ನುವುದು ಗಮನಿಸಬೇಕಾದ ಅಂಶ.

ಇಂದಿನ ಸಂದರ್ಭದಲ್ಲಿ ಜಾತಿ ಏಕೆ ನಮ್ಮ ಅನುಭವಕ್ಕೆ ದೂರವಾಗಿರುವಂತಹ ಪರಿಕಲ್ಪನೆಯಾಗಿ ತೋರುತ್ತದೆ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ ನಿರಾಕರಣೆಯ ಉತ್ತರ ದೊರೆಯುವ ಈ ಪ್ರಕ್ರಿಯೆಯನ್ನು ಹೇಗೆ ಅರ್ಥೈಸಬೇಕು ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಲೇಬೇಕಾಗಿದೆ. ಏಕೆ ಜಾತಿಯನ್ನು ನಿರಾಕರಣೆಯ ಮೂಲಕ ನಾವು ತಿಳಿಯುತ್ತೇವೆ ? ಏಕೆ ಜಾತಿಯ ಬಗೆಗೆ ಚರ್ಚೆ ಮಾಡುವುದು, ಯಾರಿಗಾದರೂ ಮುಜುಗರಗೊಳಿಸುವಂತಹ, ನಾಚಿಕೆ ಉಂಟುಮಾಡುವ, ಇರುಸು-ಮುರುಸು ತರುವಂತಹ ವಿಚಾರವಾಗಿ ಉಳಿದಿದೆ ಎಂಬುದನ್ನು ನಾವು ಅರಿತುಕೊಳ್ಳಬೇಕಾಗಿದೆ. ಸಾರ್ವಜನಿಕವಾಗಿ ಜಾತಿ ಬಗೆಗೆ ಮಾತನಾಡುವುದು ರಾಜಕೀಯವಾಗಿ ದೋಷಪೂರ್ಣವಾಗಿಹೋಗಿದೆ ಏಕೆ? ಮೇಲುಜಾತಿಯವರು ತಾವು ಜಾತ್ಯತೀತರಾಗಿದ್ದೇವೆ ಎಂದು ಆರೋಪಿಸಿಕೊಂಡು, ಯಾವಾಗಲೂ ತಾವು ಜಾತಿಯನ್ನು ಆಚರಣೆಯಲ್ಲಿ ಪಾಲನೆ

ಇಂದಿನ ಸಂದರ್ಭದಲ್ಲಿ ಜಾತಿ ಏಕೆ ನಮ್ಮ ಅನುಭವಕ್ಕೆ ದೂರವಾಗಿರುವಂತಹ ಪರಿಕಲ್ಪನೆಯಾಗಿ ತೋರುತ್ತದೆ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ ನಿರಾಕರಣೆಯ ಉತ್ತರ ದೊರೆಯುವ ಈ ಪ್ರಕ್ರಿಯೆಯನ್ನು ಹೇಗೆ ಅರ್ಥೈಸಬೇಕು ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಲೇಬೇಕಾಗಿದೆ. ಏಕೆ ಜಾತಿಯನ್ನು ನಿರಾಕರಣೆಯ ಮೂಲಕ ನಾವು ತಿಳಿಯುತ್ತೇವೆ? ಏಕೆ ಜಾತಿಯ ಬಗೆಗೆ ಚರ್ಚೆ ಮಾಡುವುದು, ಯಾರಿಗಾದರೂ ಮುಜುಗರಗೊಳಿಸುವಂತಹ, ನಾಚಿಕೆ ಉಂಟುಮಾಡುವ, ಇರುಸು-ಮುರುಸು ತರುವಂತಹ ವಿಚಾರವಾಗಿ ಉಳಿದಿದೆ ಎಂಬುದನ್ನು ನಾವು ಅರಿತುಕೊಳ್ಳಬೇಕಾಗಿದೆ. ಸಾರ್ವಜನಿಕವಾಗಿ ಜಾತಿ ಬಗೆಗೆ ಮಾತನಾಡುವುದು ರಾಜಕೀಯವಾಗಿ ದೋಷಪೂರ್ಣವಾಗಿಹೋಗಿದೆ ಏಕೆ? ಮೇಲುಜಾತಿಯವರು ತಾವು ಜಾತ್ಯತೀತರಾಗಿದ್ದೇವೆ ಎಂದು ಆರೋಪಿಸಿಕೊಂಡು, ಯಾವಾಗಲೂ ತಾವು ಜಾತಿಯನ್ನು ಆಚರಣೆಯಲ್ಲಿ ಪಾಲನೆ ಮಾಡುತ್ತಿಲ್ಲವೆಂದು ವಾದಿಸುತ್ತಾರೆ, ಏಕೆ? ಜಾತಿ ಅನುಭವ ವ್ಯಕ್ತಿನಿಷ್ಠ ಅನುಭವವಲ್ಲವೆಂಬುದೇ ಅವರ ವಾದ, ಏಕೆ ?

ಮಾಡುತ್ತಿಲ್ಲವೆಂದು ವಾದಿಸುತ್ತಾರೆ, ಏಕೆ ? ಜಾತಿ ಅನುಭವ ವ್ಯಕ್ತಿನಿಷ್ಠ ಅನುಭವವಲ್ಲವೆಂಬುದೇ ಅವರ ವಾದ, ಏಕೆ ?

ಕಳೆದ ಮೂರು ಅಥವಾ ನಾಲ್ಕು ದಶಕಗಳಲ್ಲಿ ನಡೆದ ರಾಜಕೀಯ ಘಟನಾವಳಿಗಳನ್ನು ಗಮನಿಸಿ ನೋಡಿದಾಗ ತಿಳಿಯುವುದೇನೆಂದರೆ, ಸಾರ್ವಜನಿಕ ವಲಯದಲ್ಲಿ ಜಾತಿಯ ಹೆಸರಿನಲ್ಲಿ ಸಾಕಷ್ಟು ಸಂವಾದಗಳು, ಚರ್ಚೆಗಳು, ಎಷ್ಟೋ ಬಾರಿ ಪ್ರಕ್ರಿಯೆಗಳು ಹಿಂಸೆಯ ರೂಪ ಕೂಡ ತಳೆದಿವೆ. ಆ ನಿಟ್ಟಿನಲ್ಲಿ ಕರ್ನಾಟಕದ ಕಂಬಾಲಪಲ್ಲಿ, ಆಂಧ್ರದ ಚುಂಡೂರು ಅಥವಾ ರಾಷ್ಟ್ರವ್ಯಾಪಿ ನಡೆದ ಮಂಡಲ್ ಪ್ರತಿಭಟನೆ ಉದಾಹರಣೆಗಳಾಗಿ ನಿಲ್ಲುತ್ತವೆ. ಮಂಡಲ್ ಆಯೋಗವನ್ನು ಜಾರಿಗೆ ತರಲು ನಿರ್ಧರಿಸಿದ ವಿ. ಪಿ. ಸಿಂಗ್ ಸರ್ಕಾರ ಜಾತಿ ಮೀಸಲಾತಿ ಮತ್ತು ಧಾರ್ಮಿಕ ತೀವ್ರವಾದದ ಕಾರಣದಿಂದ ೧೯೯೦ರ ರಾಜಕೀಯ ಸಂದಿಗ್ಧತೆಯನ್ನು ಎದುರಿಸಬೇಕಾಯಿತು. ಜಾತಿ ನಮ್ಮ ಅನುಭವಕ್ಕೆ ದೂರವಾದಾಗ ಇಷ್ಟು ತೀವ್ರವಾಗಿ ಏಕೆ ಪ್ರತಿಕ್ರಿಯೆಸುತ್ತೇವೆ ? ಚುಂಡೂರು ಮತ್ತು ಕಂಬಾಲಪಲ್ಲಿಗಳಲ್ಲಿ 'ಮೇಲು' ಜಾತಿಗಳು, 'ಕೆಳ' ಜಾತಿಗಳ ಮೇಲೆ ಅಷ್ಟು ದಾರುಣವಾಗಿ ಏಕೆ ವರ್ತಿಸಿದವು ? ಮಂಡಲ್ ಆಯೋಗದ ವಿರುದ್ಧ ಏಕೆ ಪ್ರತಿಭಟನೆಗಳು ನಿಲ್ಲಲೇ ಇಲ್ಲ ?

೨೦ನೇ ಶತಮಾನದಲ್ಲಿ ಜಾತಿ ನಿರ್ವಚನಗಳಲ್ಲಿ, 'ಕೆಳ' ಜಾತಿಗಳ 'ಸಮಾನತೆ' ಮತ್ತು 'ಸ್ವಾತಂತ್ರ್ಯ' ಎಂಬ ಪರಿಕಲ್ಪನೆಯಡಿಯಲ್ಲಿ ಹೋರಾಡಲು ನಿರ್ಧರಿಸಿದ ಕೂಡಲೆ, 'ಮೇಲು' ಜಾತಿಗಳ ಸ್ವತ್ತಾಗಿದ್ದ, ವಸಾಹತು ಆಧುನೀಕರಣದಿಂದ ದೊರಕಿದ ಸವಲತ್ತುಗಳು ಮತ್ತು ಲಾಭವನ್ನು ಪಡೆದುಕೊಂಡ ನಂತರದ ಕಾಲಘಟ್ಟದಲ್ಲಿ ಆಧುನಿಕತೆಯನ್ನು ವಿಮರ್ಶಾತ್ಮಕವಾಗಿ ಅಳೆಯುವುದು ಶುರುವಾಗಿರುವ ಸಂಗತಿ ನಾವು ಇಲ್ಲಿ ತಿಳಿಯಬೇಕು. ಇಂದಿನ ಭಾರತದ ಎಲ್ಲಾ ಸಮಸ್ಯೆಗಳಿಗೆ ಪಾಶ್ಚಾತ್ಯ ದೇಶಗಳಿಂದ ಬಂದ ವಿಚಾರಗಳ ಪ್ರಯುಕ್ತ ರೂಪುಗೊಂಡ ವ್ಯವಸ್ಥೆಗಳ ಹಿನ್ನೆಲೆಯಲ್ಲಿ ಆಧುನೀಕರಣವನ್ನು ದೂಷಿಸುವುದೊಂದು ವಾಡಿಕೆಯಾಗಿಬಿಟ್ಟಿದೆ ಎಂದು ಆರೋಪಿಸಲಾಗುತ್ತಿದೆ. ಹೀಗಾಗಿ, 'ಮೇಲ್ಜಾತಿ'ಗಳ ನಿರ್ವಚನಗಳಲ್ಲಿ 'ಸಾಮರ್ಥ್ಯ' ಮತ್ತು 'ಪ್ರತಿಭೆ'ಯನ್ನು ಜಾತಿ ಬಗೆಗಿನ ವಾದಗಳಲ್ಲಿ ಮುನ್ನೆಲೆಗೆ ತರಲಾಗಿದೆ. ಅದೇ ಸಮಯದಲ್ಲಿ ದಲಿತ ಸಮುದಾಯಗಳು, 'ಮೇಲು' ಜಾತಿಗಳು ಜಾತ್ಯತೀತವಾಗಿರುವುವು ಎಂಬ ಸಮರ್ಥನೆಯನ್ನು ವಿರೋಧಿಸಿ ಆಚರಣೆಯಲ್ಲಿ 'ಮೇಲು' ಜಾತಿಗಳ ಪಾಲನೆ ಮಾಡುತ್ತಿದ್ದು, ಜಾತಿಯನ್ನು ಇನ್ನೂ ಬಲ ಪಡಿಸಿದ್ದಾರೆಂದು ಆರೋಪಿಸುತ್ತಾರೆ. ಇದರ ಪ್ರತ್ಯುತ್ತರವೇನೋ ಎನ್ನುವ ರೀತಿಯಲ್ಲಿ ದಲಿತ ಸಮುದಾಯಗಳು ಇನ್ನೊಂದು ಬಗೆಯ ಜಾತ್ಯತೀತತೆಯನ್ನು ಸಮರ್ಥಿಸುತ್ತಿರುವಾಗಲೇ ಅವರ 'ಬಲಿಪಶುತ್ವದ' ಕಾರಣಗಳ ದುರುಪಯೋಗವಾಗುತ್ತಿದೆ ಎಂಬ ವಾದ ಕೂಡಾ ಇದೆ. ಭಾರತದಲ್ಲಿ ಆಗುತ್ತಿರುವ ಇಂದಿನ ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಗಳಿಂದ ಮಧ್ಯಮವರ್ಗವು ಜಾಗತೀಕರಣಗೊಂಡ ಕಾರಣದಿಂದ, ಈಗಾಗಲೇ ಸೃಷ್ಟಿಯಾಗಿರುವಂತಹ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಸಮಾನತೆಗಳು ಇನ್ನೂ ತೀವ್ರವಾಗಿ ಉಲ್ಬಣಗೊಂಡಿವೆ.

**ಜಾತಿ ಅಧ್ಯಯನಗಳು ನಿರ್ಲಕ್ಷಿಸಿದ್ದು...**

ಈ ಒಟ್ಟಾರೆ ಪ್ರತಿಭೆಯನ್ನು ಹೇಗೆ ಅರ್ಥೈಸಬಹುದು ? ಹಾಗಾದರೆ ಜಾತಿ ಎಂಬುದು ಒಂದು ಚಾರಿತ್ರಿಕ ಕಾಲಘಟ್ಟದಲ್ಲಿ ಅರ್ಥೈಸಬಹುದಾದ ಸಂದರ್ಭಕ್ಕೆ ತಕ್ಕಂತೆ ನವೀಕರಣಗೊಳ್ಳುವ ಒಂದು ರಚನೆಯೇ ? ಅಥವಾ, ಎಲ್ಲ ಕಾಲಕ್ಕೂ ಸಲ್ಲುವ ಮತ್ತು ಎಲ್ಲಾ ಸಂದರ್ಭಗಳಲ್ಲೂ ಒಂದು ನಿರ್ದಿಷ್ಟ ರೂಪು-ರೇಷೆಯನ್ನು ವ್ಯಕ್ತಪಡಿಸುವ ರಚನೆಯೇ ? ಜಾತಿ ಹೇಗೆ 'ಮುಂದುವರಿಯುತ್ತಿದೆ ಅಥವಾ ಬದಲಾಗುತ್ತಿದೆ' ಎಂಬ ಪ್ರಶ್ನೆ ಇಲ್ಲಿ ಮುಖ್ಯವಾಗುತ್ತದೆ. ಈ ಪ್ರಶ್ನೆ ಸಮಾಜ ಶಾಸ್ತ್ರಕ್ಕೆ ಹೊಸದೇನೂ ಅಲ್ಲ. ಕೆಲವರು ಹೇಳುವಂತೆ ಭಾರತವನ್ನು ಅರ್ಥ ಮಾಡಿಕೊಳ್ಳಲು ಜಾತಿ ಒಂದು ಉಪಯುಕ್ತ ತಾಣ. ಜಾತಿ ಅಧ್ಯಯನಗಳನ್ನು ತಮ್ಮದಾಗಿಸಿಕೊಂಡಿರುವ ಸಮಾಜ ಶಾಸ್ತ್ರದ ಈ ಹಕ್ಕನ್ನು ಸಮಾಜ ವಿಜ್ಞಾನಿಗಳು ನಿರಾಕರಿಸಿಯೂ ಇಲ್ಲ. ಈ ಪ್ರಶ್ನೆ ಅತಿ ಗಂಭೀರವಾದುದೂ ಕೂಡ. ಏಕೆಂದರೆ, ಕಳೆದ ದಶಕಗಳಲ್ಲಿ ಜಾತಿ ಹೇಗೆ ಬದಲಾಗಿದೆ ಎಂಬುದನ್ನು ಅರ್ಥೈಸಿಕೊಳ್ಳಲು, ಜಾತಿ ಹಿಂದೆ ಹೇಗಿತ್ತು ಎಂಬುದನ್ನು ಅರಿತುಕೊಳ್ಳಬೇಕಾಗುತ್ತದೆ. ಜಾತಿಯ ನಿರ್ಮಾಣದಲ್ಲಿ ವಸಾಹತುಶಾಹಿಯ ಪಾತ್ರ ಏನು ? ವಸಾಹತುಪೂರ್ವ ಸಂದರ್ಭದಲ್ಲಿ (ಜಾತಿ) ಪರಿಸ್ಥಿತಿ ಹೇಗಿತ್ತು ?

ಜಾತಿ ಬಗೆಗೆ ಜನಗಣತಿಯಿಂದ ಪಡೆಯಬಹುದಾದ ಮಾಹಿತಿಯ ಜೊತೆಗೆ ಬೇರೆಯದೇ ಆದ ಅಧ್ಯಯನಗಳ ಅವಶ್ಯಕತೆಯೂ ಇದೆ. ಜನಗಣತಿಯಲ್ಲಿ ಪಡೆಯಬಹುದಾದ ಮಾಹಿತಿಯ ಹಿನ್ನೆಲೆಯಲ್ಲಿ ಜಾತಿ ಎಂದರೇನು ? ಮತ್ತು ಅದರ ಸಿದ್ಧಾಂತವೇನು ? ಎನ್ನುವುದರ ತಿಳಿವಳಿಕೆ ಅಡಗಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಬಹಳಷ್ಟು ಸಮಾಜಶಾಸ್ತ್ರೀಯ ಅಧ್ಯಯನಗಳು ಜಾತಿಯನ್ನು ವಾಸ್ತವದ ಜಗತ್ತಿನಿಂದ ದೂರವಿರಿಸಿ, ಒಂದು ಸೈದ್ಧಾಂತಿಕ ನೆಲೆಯಲ್ಲಿಟ್ಟು, ಅಸಮಾನತೆಗಳು ನವೀಕರಣಗೊಳ್ಳುತ್ತಿರುವ ರಾಜಕೀಯ ಪ್ರಕ್ರಿಯೆಗಳಿಂದ ದೂರವಿರಿಸಿ, ಧಾರ್ಮಿಕ ಆಚರಣೆಗಳು, ಸಿದ್ಧಾಂತಗಳು ಮತ್ತು ನಂಬಿಕೆಯನ್ನು ಒಂದು ಸಿದ್ಧ ಚೌಕಟ್ಟಿನಲ್ಲಿಟ್ಟುಬಿಟ್ಟಿವೆ. ಇದಕ್ಕೆ ಕಾರಣ ರಾಜಕೀಯಾತ್ಮಕ ಮತ್ತು ವಾಸ್ತವಿಕ ಅಂಶಗಳಿಂದ ಜಾತಿಯನ್ನು ದೂರವಿಟ್ಟಿರುವುದೇ ಆಗಿದೆ. ಇದರಿಂದಾಗಿ ಮೌಲ್ಯಗಳ ಮೇಲೆ ಒತ್ತು ಅಧಿಕವಾಗಿ, ಗುಂಪುಗಳ ಆಸಕ್ತಿಗಳನ್ನು ಗಮನಕ್ಕೆ ತೆಗೆದುಕೊಂಡಿರುವುದಿಲ್ಲ. ಹೀಗಾಗಿ ಸಮಾಜಶಾಸ್ತ್ರ ಮತ್ತು ಸಾಮಾಜಿಕ ಮಾನವಶಾಸ್ತ್ರಗಳು, ಜಾತಿ ಬಗೆಗಿನ ಅಧ್ಯಯನಗಳಲ್ಲಿ ಧಾರ್ಮಿಕ ಪಠ್ಯಗಳು, ಶುದ್ಧ ಮತ್ತು ಅಶುದ್ಧತೆಯ ಮೇಲೆ ನಿಂತಿರುವ ಧಾರ್ಮಿಕ ಸ್ಥಾನಮಾನ, ಮದುವೆಯ ನಿಯಮ, ಆಚಾರ ಮತ್ತು ಆಹಾರ ಸೇವನೆಯ ಪದ್ಧತಿಗಳನ್ನು ಗಣನೆಗೆ ತೆಗೆದುಕೊಂಡು ಸ್ಪರ್ಧಾತ್ಮಕ ಜಾತಿ ರಾಜಕೀಯಗಳಿಂದ ದೂರ ಸರಿಯುವ ಮನೋಭಾವವನ್ನು ವ್ಯಕ್ತಪಡಿಸಿವೆ.

ಜಾತಿ ವ್ಯವಸ್ಥೆಯ ಬಗ್ಗೆ ಡ್ಯುಮೊಂಟ್ ಅವರ ಸೈದ್ಧಾಂತಿಕ ನಿರೂಪಣೆಯೇ ಭಾಗಶಃ ಸೂಕ್ಷ್ಮತೆಯಿಂದ ಕೂಡಿರುವಂತಹದ್ದು. ಲೂಯಿ ಡ್ಯೂಮೊಂಟ್‌ರ ಜಾತಿ ಸಿದ್ಧಾಂತದ ಪ್ರಮುಖ ಅಂಶವೇನೆಂದರೆ, ಪುರೋಹಿತ ಬ್ರಾಹ್ಮಣ ಕ್ಷತ್ರಿಯನಾದ ರಾಜನನ್ನು ಕೆಳಸ್ತರದಲ್ಲಿಟ್ಟಿರುವುದು. ಅಂದರೆ, ಅಧಿಕ ಸೆಕ್ಯುಲರ್ ಶಕ್ತಿಯನ್ನು ಹೊಂದಿರುವಂತಹ ರಾಜನು ಬ್ರಾಹ್ಮಣನಿಂದ ರೂಪಿತಗೊಂಡು ಧಾರ್ಮಿಕವಾಗಿ ಅತೀ ಶ್ರೇಷ್ಠವೆಂದು ಪರಿಗಣಿತವಾಗಿರುವ ಧಾರ್ಮಿಕ ಕಟ್ಟಳೆಗಳ ಪರಿಣಾಮವಾಗಿ ಬ್ರಾಹ್ಮಣರ ಅಧೀನದಲ್ಲಿರುವುದು. ಇದರರ್ಥ ಈ ಜಾತಿ ವ್ಯವಸ್ಥೆಯಲ್ಲಿರುವ ಶ್ರೇಣೀಕರಣ ಅಸಮಾನತೆಯನ್ನು ಸಂಪೂರ್ಣವಾಗಿ ಸಾಪೇಕ್ಷಗೊಳಪಡಿಸುತ್ತದೆ. ಶ್ರೇಣೀಕರಣವೆಂದರೇನೆ ಅಸಮಾನತೆ. ಸಮಾಜಶಾಸ್ತ್ರೀಯ ಅಧ್ಯಯನ

ಗಳು ಜಾತಿಯನ್ನು ಒಂದು ವ್ಯವಸ್ಥೆಯಾಗಿ ಪರಿಗಣಿಸಿ, ಈ ವ್ಯವಸ್ಥೆಯಲ್ಲಿ ಎಲ್ಲರೂ ಎಲ್ಲರಿಗೆ ಅಸಮಾನರೆಂದೂ ಮತ್ತು ಪ್ರತಿಯೊಂದು ಗುಂಪುಗಳನ್ನು ಮೇಲು ಅಥವಾ ಕೀಳಾಗಿ ಎಂಬಂತೆ ವಿಭಾಗಿಸಿರುವುದನ್ನು ನಾವು ಕಾಣಬಹುದು. ಈ ಶೈಲಿಯ ಅರ್ಥೈಸುವಿಕೆ, ಅಸಮಾನತೆಯಲ್ಲಿ ತೀಕ್ಷ್ಣವಾದಂತಹ ಒಂದು ಸೀಮಾರೇಖೆ ಇಲ್ಲದೆ ಕಣ್ಮರೆಯಾಗಿ ಇರುವಂತೆ ಕಾಣಿಸುತ್ತದೆ. ಈ ತರಹದ ತಾರ್ಕಿಕತೆ, ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಜಾತಿ ಬಗೆಗಿನ ಅಧ್ಯಯನಗಳ ವಿಚಾರ ಧಾರೆಯನ್ನು ದೃಢಪಡಿಸಿ ಜಾತಿ ಒಂದು ಕೊಡು-ಕೊಳ್ಳುವಿಕೆಯ ಆಧಾರದಲ್ಲಿ ನಿಂತಿರುವಂತಹ ಅನುಸಂಧಾನದ ವ್ಯವಸ್ಥೆಯೆಂದು ಸ್ಪಷ್ಟಪಡಿಸುವುದು. ಜಾತಿ ವ್ಯವಸ್ಥೆಯೊಳಗೆ ಇರುವ ಪ್ರತಿಯೊಂದು ಜಾತಿಯು ಈ ಮೂಲಭೂತ ಶ್ರೇಣೀಕರಣವನ್ನು ಒಪ್ಪಿ ಮತ್ತು ಅದರಲ್ಲಿ ತಮ್ಮ ತಮ್ಮ ಸ್ಥಾನವನ್ನು ಗುರುತಿಸುವುದರ ಮೂಲಕ ಸಂಘರ್ಷಣಾತ್ಮಕ ವ್ಯತ್ಯಾಸ ಸನ್ನಿವೇಶಗಳಿಂದ ದೂರ ವಿರುತ್ತದೆ. ಈಗಾಗಲೇ ನಮಗೆ ತಿಳಿದಿರುವ ಹಾಗೆ ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ ತಾವು ಮೇಲು ಎಂದು ಭಾವಿಸುವ, ತಮಗೆ ಎತ್ತರದ ಸ್ಥಾನವನ್ನು ಆರೋಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಬಹಳಷ್ಟು ಜಾತಿ ಮೂಲವನ್ನು ತಿಳಿಯಪಡಿಸುವ ಪುರಾಣ/ಕಥೆಗಳನ್ನು ನಾವು ಗಮನಿಸಬಹುದು. ಪರಿಕಲ್ಪನಾತ್ಮಕವಾಗಿ ಮತ್ತು ಕ್ರಿಯಾತ್ಮಕವಾಗಿ ನೋಡುವುದಾದರೆ, ಒಂದು ಜಾತಿಯನ್ನು ಇನ್ನೊಂದು ಜಾತಿಗೆ ಹೋಲಿಸಿದರೆಂದು ಒಂದೇ ತೆರನಾಗಿದ್ದರೂ ಒಟ್ಟಾರೆಯಾಗಿ ಜಾತಿಗಳ ಕಾರ್ಯಾತ್ಮಕವಾಗಿ ಭಿನ್ನವಾಗಿದ್ದು, ಪರಸ್ಪರ ಪೂರಕವಾಗಿರುತ್ತವೆ. ವೃತ್ತಿಗಳ ಆಧಾರದ ಮೇಲೆ ಜಾತಿಗಳನ್ನು ವರ್ಗೀಕರಣ ಮಾಡಿರುವುದು ಮತ್ತು ತನ್ಮೂಲಕ ಜಾತಿಯನ್ನು ವಿವರಿಸುವ ಪ್ರಕ್ರಿಯೆ ಇವು ಇದಕ್ಕೆ ಅತ್ಯುತ್ತಮ ಉದಾಹರಣೆ. ಈ ರೀತಿಯಲ್ಲಿ ಜಾತಿಯನ್ನು ವಿವರಿಸುವಂತಹ ಶ್ರೇಷ್ಠ ಮಾದರಿ ಜಾತಿಗಳಿದ್ದರೂ, ಈ ಪರಂಪರಾನುಗತ ಮಾದರಿಗಳು ಮುಂದಿನ ಜಾತಿ ಅಧ್ಯಯನಗಳ ಮೇಲೆ ದೊಡ್ಡ ಪ್ರಭಾವವನ್ನು ಬೀರಿವೆ.

ಡ್ಯೂಮೊಂಟ್‌ನ ಭಾರತೀಯ ಜಾತಿಗಳ ಬಗೆಗಿನ ದೃಷ್ಟಿಕೋನವು, ಜಾತಿ ಅಸಮಾನತೆಯ ರಾಜಕೀಯ ಆಯಾಮಗಳನ್ನು ನಿರ್ಲಕ್ಷಿಸಿದೆ. ಇದಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡಂತಹ, ಎಂ. ಎನ್. ಶ್ರೀನಿವಾಸರ ಕ್ಷೇತ್ರ ದೃಷ್ಟಿ ಅಧ್ಯಯನಗಳು, ಈ ಕೊರತೆಯನ್ನು ಸರಿ ಮಾಡುವ ಪ್ರಯತ್ನವನ್ನು ಮಾಡಿವೆ. ಎಂ. ಎನ್. ಶ್ರೀನಿವಾಸ್ ಸೃಷ್ಟಿಸಿದ ಪರಿಕಲ್ಪನೆಗಳಾದ – ಸಂಸ್ಕೃತಾನುಕರಣ, 'ಪ್ರಬಲ ಜಾತಿ' ಮತ್ತು 'ವೋಟ್ ಬ್ಯಾಂಕ್' ಪರಿಕಲ್ಪನೆಗಳು ಜನಸಾಮಾನ್ಯರ ಜಾತಿ ಬಗೆಗಿನ ರಾಜಕೀಯ ಧೋರಣೆಗಳಿಗೆ ಸಂಬಂಧಿಸಿ ಬಿಡಿಸಲಾಗದಂತಹ ಒಂದು ಸಂಬಂಧವನ್ನು ನಿರೂಪಿಸುತ್ತದೆ. ಎಂ. ಎನ್. ಶ್ರೀನಿವಾಸರ ೬೦ ಮತ್ತು ೭೦ರ ದಶಕದ ಕ್ಷೇತ್ರ ಅಧ್ಯಯನಗಳು ಜಾತಿ ಬಗೆಗಿನ ವಾಸ್ತವದಲ್ಲಿರುವ, ಜಾತಿ ಸಂಬಂಧಗಳು ಮತ್ತು ಆಯಾಮಗಳು, ಮತ್ತದಕ್ಕೆ ಎದುರು-ಬದಿರಾಗಿ ವರ್ಗ ಮತ್ತು ಅಧಿಕಾರ, ಅಲ್ಲದೆ ಪ್ರತ್ಯೇಕವಾಗಿ ಪ್ರಾಂತೀಯ ಭಾವನೆಗಳ ಹಿನ್ನೆಲೆಯಲ್ಲಿ ಹೆಣೆದುಕೊಂಡ ವಿಚಾರಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸುತ್ತವೆ. ಆದರೂ ಈ ಅಧ್ಯಯನಗಳು ಕ್ಷೇತ್ರ ದೃಷ್ಟಿಯ ಮಿತಿಗಳಿಂದ ಅತೀತವಾಗೇನೂ ಉಳಿದಿಲ್ಲ. ಕ್ಷೇತ್ರ ಅಧ್ಯಯನದ ಮಿತಿಯ ಕಾರಣಗಳಿಂದ ಒಬ್ಬ ಅಧ್ಯಯನಕಾರ ಸಹಭಾಗಿ ಅವಲೋಕನದ ಮೂಲಕ ಒದಗಿಸುವಂತಹ ಮಾಹಿತಿ, ಆ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿದ್ದು, ಸಮಗ್ರ ಭಾರತೀಯ ಮಹತ್ ದೃಷ್ಟಿಕೋನಕ್ಕೆ ಅನ್ವಯವಾಗುವುದಿಲ್ಲ. ಮೇಲೆ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಬಹಳಷ್ಟು ಸಮಾಜಶಾಸ್ತ್ರಜ್ಞರು ಜನಗಣತಿಗೆ ಸಂಬಂಧಿಸಿದಂತೆ ಬೃಹತ್ ಮಾಹಿತಿ ಉತ್ಪಾದನೆಯ ಬಗ್ಗೆ ತಮ್ಮ ಅನುಮಾನಗಳನ್ನು ವ್ಯಕ್ತಪಡಿಸಿದ್ದಾರೆ. ಆದರೆ, ಬಹುತೇಕ ಸಮಾಜಶಾಸ್ತ್ರಜ್ಞರು, ಈ ಬೃಹತ್ ಮಾಹಿತಿ ಸಂಗ್ರಹಣೆಯನ್ನು ಪರಾಮರ್ಶಿಸದೆ ವಿರೋಧಿಸುತ್ತಾರೆ. ವ್ಯವಸ್ಥಿತವಾದ ದತ್ತಾಂಶ ಸಂಗ್ರಹಣೆಯನ್ನು ವಿರೋಧಿಸುವವರೂ ಇದ್ದಾರೆ. ಉದಾಹರಣೆಗೆ, ಮಂಡಲ್ ಕಮಿಷನ್ ವರದಿ ಬಂದ ಮೇಲೆ, ಸಮಾಜಶಾಸ್ತ್ರಜ್ಞರ ವಿಮರ್ಶೆ ಏನಾಗಿತ್ತೆಂದರೆ, ಮಂಡಲ್ ಕಮಿಷನ್ ವರದಿ ಆಧರಿಸಿರುವ ಅಂಕಿ-ಅಂಶಗಳು ಸರಿಯಾದುದಲ್ಲ ಮತ್ತು ಅದನ್ನು ಸಂಪಾದಿಸಿರುವ ಕಾರ್ಯ ವೈಖರಿಯಲ್ಲೂ ಸಮಸ್ಯೆಗಳಿವೆ ಎಂಬುದು. ಆದಾಗ್ಯೂ, ಹಲವು ಸಮಾಜಶಾಸ್ತ್ರಜ್ಞರು, ಈ ಆಯೋಗಗಳ ದತ್ತಾಂಶ ಪರಿಮಾಣವನ್ನು ಹೇಗೆ ನಿಖರಗೊಳಿಸಬಹುದಾಗಿತ್ತು/ಸುಧಾರಿಸಬಹುದಾಗಿತ್ತು, ಅದನ್ನು ಇರುವಂತಹ ಪರಿಸ್ಥಿತಿಗಳಲ್ಲಿಯೆ ಹೇಗೆ ಕ್ರಿಯಾತ್ಮಕವಾಗಿ ಬಳಸಲು ಸಾಧ್ಯವಿತ್ತು ಎಂಬ ಅಂಶಗಳ ಬಗ್ಗೆ ಜವಾಬ್ದಾರಿಯುತವಾದ ನಿಲುವನ್ನೇನೂ ತಾಳಲಿಲ್ಲ.

**ಜಾತಿ ಗಣತಿಯ ಕೆಲವು ಪ್ರಯತ್ನಗಳು**

ಜಾತಿಯನ್ನು ರಾಜಕೀಯವಾಗಿ ವಿಶ್ಲೇಷಿಸಿದ ಕೆಲವು ಸಮಾಜಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಜಾತಿ ಆಧುನಿಕತೆಯ ಮತ್ತು ವಸಾಹತುಶಾಹಿ ವ್ಯವಸ್ಥೆಯ ಒಂದು ಆವಿಷ್ಕರಣ ಎಂದು ಗ್ರಹಿಸಲಾಗಿದೆ. ಈ ಅಭಿಪ್ರಾಯಗಳ ಸಾರಾಂಶ ಇಷ್ಟೇ: ವಸಾಹತುಶಾಹಿ ಪ್ರಭುತ್ವದ ಅಡಿಯಲ್ಲಿ ಜಾರಿಗೆ ತಂದ ಯೋಜನೆಗಳಲ್ಲಿ ಮುಖ್ಯವಾದುದೆಂದರೆ – ಜನಗಣತಿ. ಜನಗಣತಿಯ ಅಡಿಯಲ್ಲಿ ಜನಸಂಖ್ಯೆಯನ್ನು ವಿವಿಧ ರೀತಿಯಲ್ಲಿ ಅಳೆಯುವ, ದಾಖಲಿಸುವ ಮತ್ತು ವರ್ಗೀಕರಿಸುವ ಪ್ರಯತ್ನ ಗಂಭೀರ ಪರಿಣಾಮಗಳಿಗೆ ಎಡೆ ಮಾಡಿಕೊಟ್ಟಿತು. ಈ ವಾದವನ್ನು ನಾವು ಒಪ್ಪುವುದೇ ಆದರೆ ಜಾತಿ ಪದ್ಧತಿ ವಸಾಹತು ಪೂರ್ವ ಯುಗದಲ್ಲಿ ಇರಲಿಲ್ಲವೇ? ಚಾರಿತ್ರಿಕವಾಗಿ ಭಾರತೀಯ ಸಮಾಜದ ನಿರ್ಮಿತಿ ಓರಿಯೆಂಟಲಿಸ್ಟರ ಕಣ್ಣಲ್ಲಿ ಬದಲಾವಣೆಗೆ ನಿಲುಕದ, ಕಾಲಾತೀತವಾದ ಒಂದು ಸಮಾಜವಾಗಿತ್ತು.

ವಿದೇಶೀ ಸಮಾಜಶಾಸ್ತ್ರಜ್ಞರು ಜಾತಿ ಮತ್ತು ಧರ್ಮ ಎಂಬೆರಡು ಮುಖ್ಯ ಪರಿಕಲ್ಪನಾತ್ಮಕ ಸಾಧನಗಳ ಮೂಲಕ ಭಾರತೀಯ ಸಮಾಜವನ್ನು ಸಾಂಖ್ಯಿಕವಾಗಿ ವಿವರಿಸಲು ಬಳಸಿದರು. ಈ ತರಹದ ಸಾಂಖ್ಯಿಕವಾದಂತಹ ವರ್ಗೀಕರಣವು ಭಾರತದಲ್ಲಿ ಬೇರೆ ಬೇರೆ ರಾಜಕೀಯ ಸಂಚಲನದ ಮೂಲಕ ಪ್ರಭುತ್ವದಲ್ಲಿ ಪ್ರಾತಿನಿಧಿತ್ವ ಪಡೆಯಬಹುದಾದಂತಹ ವ್ಯವಸ್ಥೆಯ ಹುಟ್ಟಿಗೆ ಎಡೆ ಮಾಡಿಕೊಟ್ಟು ಅದರಲ್ಲಿ ಜಾತಿ ಮತ್ತು ಧರ್ಮವನ್ನು ಒಂದೇ ವೇದಿಕೆಯಡಿಯಲ್ಲಿ ತರಬಹುದು ಎಂಬ ಒಂದು ವಿಚಾರವನ್ನು ಹುಟ್ಟುಹಾಕಿತು. ಇದರ ಪರಿಣಾಮವಾಗಿ ಜಾತಿಯನ್ನು ಕಾನೂನುಬದ್ಧವಾದೊಂದು ಗುರುತಾಗಿ ನೋಡುವ ಸಂದಿಗ್ಧತೆಯಿಂದ ಹೊರಬಂದು, ಪ್ರತಿಯೊಬ್ಬ ವ್ಯಕ್ತಿಯೂ ಯಾವುದರಲ್ಲಾದರೂ 'ಸೇರಿರಬೇಕು' ಅಥವಾ 'ಸೇರಿರಬಾರದು' ಎಂಬಂತೆ ಎರಡೇ ಆಯ್ಕೆಗಳಿಗೆ ಸೀಮಿತಗೊಳಿಸಲಾಯಿತು. ಹೀಗಾಗಿ ಅದು ಬೇರೊಂದು ವ್ಯವಸ್ಥೆಯ ರೂಪು ಪಡೆಯಿತು. ಅಂದರೆ ಜಾತಿಗಳು ವಿಭಜಿತವಾಗಿದ್ದು, ಒಂದು ವಿಂಗಡಿತ ವ್ಯವಸ್ಥೆಯಾಗಿದ್ದು, ಜಾತಿಗಳ ಗುರುತಿಸುವಿಕೆ ಯಾವಾಗಲೂ ಸಾಪೇಕ್ಷವಾಗಿದ್ದು, ಕೊನೆಗೊಂದು ವ್ಯವಸ್ಥಿತಗೊಂಡು ಒಂದು ಸ್ವಯಂಪೂರ್ಣ ಜಾತಿಯ ಸ್ವರೂಪವನ್ನು ಪಡೆದುಕೊಂಡಿತು. ಧರ್ಮಪಾಲ್ ಅವರು ತಮ್ಮ ಅಪ್ರಕಟಿತ ಲೇಖನವೊಂದರಲ್ಲಿ ಸದರಿ ವಿಚಾರಕ್ಕೆ ಸಂಬಂಧಿಸಿದಂತೆ ಹೀಗೆ ಹೇಳುತ್ತಾರೆ: ೧೯೧೧ರ ಜನಗಣತಿಯಲ್ಲಿ ಧರ್ಮ ಮತ್ತು ಧಾರ್ಮಿಕ ಪಂಗಡಗಳು ಭಾರತದಲ್ಲಿರುವ ಸಾಮಾಜಿಕ ವರ್ಗೀಕರಣಗಳ ಬಗ್ಗೆ ವಿವರವಾದ ದಾಖಲೆಯ ಪಟ್ಟಿ ಜಾತಿ ಎನ್ನುವುದರಡಿಯಲ್ಲಿಯೆ ಆಗಿ ಬಂದಿವೆ. ೧೮೯೧ರಲ್ಲಿ ಪಂಜಾಬ್‌ನಲ್ಲಿ ಜಾತಿಯ ಅನುಸೂಚಿ ಪಟ್ಟಿ ಮಾಡಿದಾಗ ಒಂದು ಲಕ್ಷ ಜಾತಿಗಳನ್ನು ಗುರುತಿಸಲಾಯಿತು. ಈ ಅಂಕಿ-ಅಂಶಗಳು ಉತ್ತರಪ್ರದೇಶದಲ್ಲಿ ೫೪,೦೦೦, ಮದ್ರಾಸ್ ಪ್ರಾಂತ್ಯದಲ್ಲಿ ೩೦,೦೦೦ ಮತ್ತು ಹೈದರಾಬಾದ್ ಪ್ರಾಂತ್ಯದಲ್ಲಿ ೫೦೦೦ ಎಂದು ದಾಖಲಿಸಲಾಗಿದೆ. ದಾಖಲಾಗಿರುವ ೪೦ಲಕ್ಷ ಮುಸಲ್ಮಾನ, ಹಿಂದೂ, ಸಿಖ್ ಮತ್ತು ಜಾಟ್ ಜಾತಿಗಳಲ್ಲಿ ೧೧,೦೦೦ ಜಾಟ್ ಪ್ರಕಾರಗಳಿವೆ. ಅದು ಎಲ್ಲಾ ಧಾರ್ಮಿಕ ಪಂಥಗಳಲ್ಲೂ ಹಂಚಿಹೋಗಿವೆ. ಮದ್ರಾಸ್ ಪ್ರಾಂತ್ಯದಲ್ಲಿ 'ಪರೆಯರ್' ಜಾತಿಗಳಲ್ಲಿ ೩೫೦ ವಿವಿಧ ವಿಭಾಗಗಳಿದ್ದು, ೩೬೫ ವಿವಿಧ 'ಪಳ್ಳಿ' ಜಾತಿಗಳಿದ್ದವು. ಇದನ್ನು ಯಾವುದೋ ಒಂದು ರೀತಿಯಲ್ಲಿ ನವೀಕರಿಸಲು ಪ್ರಯತ್ನಿಸಲಾಯಿತು. ಪಂಜಾಬ್‌ನಲ್ಲಿ ೧೯೧೧ರಲ್ಲಿ – ೫೦,೦೦೦ ಜಾತಿಗಳನ್ನು ಗುರುತಿಸಿದರೆ, ಅದರಲ್ಲಿ ಜಾಟ್ ಜಾತಿಯ ೪,೪೦೦ ಉಪವಿಭಾಗಗಳನ್ನು ಗುರುತಿಸಲಾಗಿದೆ. ಇಷ್ಟು ಸಂಖ್ಯೆಯ ನಿರ್ವಹಣೆ ದುಸ್ತರವಾಗಿ, ಆಧುನಿಕ ಕಾಲದಲ್ಲಿ ಈ ವರ್ಗಗಳ ಸಂಖ್ಯೆ ಕ್ಷೀಣಿಸಿವೆ ಎಂದು ಹೇಳಬಹುದಾದರೂ, ಯಾವುದಾದರೂ ಪ್ರಾಂತ್ಯದಲ್ಲಿ ನಾವು ಹಲವಾರು ಜಾತಿ/ಉಪಜಾತಿಗಳನ್ನು ಈಗಲೂ ಗುರುತಿಸಬಹುದು. ಪ್ರಾಂತ್ಯಗಳು/ರಾಜ್ಯಗಳ ನಡುವಿನ ಮತ್ತು ಇಡೀ ರಾಷ್ಟ್ರಮಟ್ಟದ ಜಾತಿಗಳನ್ನು ಒಟ್ಟುಗೂಡಿಸಿ ಮಾತನಾಡುವುದು ದುಸ್ತರ ಕಾರ್ಯವಾಗಿದೆ.

ವಸಾಹತುಶಾಹಿ ಕಾಲದಲ್ಲಿ ಸಮುದಾಯಗಳ ನಡುವಿನ ಸೀಮಾರೇಖೆಗಳು ಸ್ಪಷ್ಟವಾಗಿ ಇಲ್ಲದಿರುವಂತಹ/ಅಸ್ಪಷ್ಟವಾದಂತಹ (fuzzy) 'ಸಮುದಾಯ ಪ್ರಜ್ಞೆಯು', ಸಮುದಾಯಗಳನ್ನು, 'ವರ್ಗೀಕರಣ ಮಾಡಬಹುದಾದಂತಹ ಸಮುದಾಯಗಳು' ಎಂಬ ಪ್ರಮುಖವಾದೊಂದು ಸ್ಥಿತ್ಯಂತರಕ್ಕೆ ಕಾರಣವಾಯಿತು. ಈ ರೀತಿ ಸಮುದಾಯಗಳನ್ನು ವರ್ಗೀಕರಿಸಿ ವಿವರಗಳನ್ನು ನಮೂದಿಸಬಹುದು ಎಂಬ ಚಿಂತನಾಕ್ರಮ ಚಾಲ್ತಿಗೆ ಬಂತು. ಸಮೂಹಗಳ ನಡುವೆ ಸೀಮಾರೇಖೆಗಳು ಹಿಂದೆ ಸ್ಪಷ್ಟವಾಗಿ ಇರಲಿಲ್ಲವೆಂದು ಹೇಳುವುದಾದರೆ, ಒಬ್ಬ ವ್ಯಕ್ತಿಯಲ್ಲಿರುವ ವ್ಯಕ್ತಿಪ್ರಜ್ಞೆ ಸಮುದಾಯ ಪ್ರಜ್ಞೆಯೊಂದಿಗೆ ಸಂಮಿಳಿತಗೊಂಡಿರಲಿಲ್ಲ. ಕೋಹೆನ್‌ರವರ ಪ್ರಕಾರ ''ಸಮುದಾಯವೆಂಬುದು ಸದಸ್ಯರ ಸ್ವಪ್ರಜ್ಞೆಯ ಎಲ್ಲಾ ಪದರಗಳನ್ನು ಪ್ರತಿನಿಧಿಸುತ್ತಾ ನಿರೂಪಿತವಾಗುವಂತೇನೂ ಇರಲಿಲ್ಲ. ಎರಡನೆಯದಾಗಿ, ಸಾಮಾಜಿಕ ಅಂತರ್‌ಕ್ರಿಯೆಗಳ ಉದ್ದೇಶಕ್ಕಾಗಿ ನಿರ್ದಿಷ್ಟವಾಗಿ ಸಮುದಾಯವನ್ನು ವ್ಯಾಖ್ಯಾನಿಸಬಹುದಾಗಿದ್ದು, ಅದು ಎಷ್ಟು ಜನರು ಈ ಜಗತ್ತಿನಲ್ಲಿ ಇರುವರೆಂದು ತನ್ನ ಸದಸ್ಯರಿಗೆ ಕೇಳಬೇಕಾಗಿರಲಿಲ್ಲ. ವಸಾಹತುಶಾಹಿ ದೃಢವಾಗಿ ಕಾಲೂರಿದ ನಂತರ, ಚಾರಿತ್ರಿಕವಾಗಿ ಈ ದೇಶವನ್ನು ಆಳಬೇಕಾಗಿರುವುದು ವಿಧಿಲಿಖಿತವೆಂಬಂತೆ, ೧೯ನೆಯ ಶತಮಾನದ

ದ್ವಿತೀಯಾರ್ಧದ ಆಳ್ವಿಕೆಯ ಕಾಲದಲ್ಲಿ ಕಲ್ಪಿಸಿಕೊಂಡು ಒಂದು ಪರಕೀಯ ಜನಸಮುದಾಯವನ್ನು ಹತೋಟಿಗೆ ತರಲು ನಿರ್ದಿಷ್ಟವಾಗಿ ವಿವಿಧ ಸಮುದಾಯಗಳ ಎಣಿಕೆಯನ್ನು ಆರಂಭಿಸಿತು.'' **ಜಾತಿಯು ಇಂತಹ ಸ್ವರೂಪ ಹೊಂದಲು ಸಂಸ್ಕೃತಾನುಕರಣ, ಆಧುನಿಕ ಪ್ರಭುತ್ವ ಮತ್ತು ಜನಗಣತಿಗಳು ಹೆಚ್ಚಿನ ದೇಣಿಗೆ ನೀಡಿವೆ.** ಸ್ಪಷ್ಟವಾಗಿ ಹೇಳುವುದಾದರೆ, 'ಅಬ್ರಾಹ್ಮಣ' ಮತ್ತು 'ಕೆಳ' ಜಾತಿಗಳಲ್ಲಿ ಕೀಳರಿಮೆಯ ಬಲಪಡಿಸುವಿಕೆಯನ್ನು ವಸಾಹತುಶಾಹಿ ಸಂಕೇತಿಸುತ್ತದೆ.

ಹೀಗಾಗಿ, ಭಾರತೀಯ ಸಂಸ್ಕೃತಿ ಕುರಿತ ತಪ್ಪು ಗ್ರಹಿಕೆಗಳನ್ನು ಅಳಿಸಿಹಾಕುವ ಜೊತೆಗೇ ಯಾವ ಚಿಂತನಾ ಕ್ರಮಗಳು ವಸಾಹತುಶಾಹಿ ಶಕ್ತಿಗಳನ್ನು ಅದುಮಿಟ್ಟಿದ್ದಾವೋ ಅವುಗಳನ್ನು ಮರುಶೋಧಿಸುವುದು ವಸಾಹತೋತ್ತರ ಸಂದರ್ಭದಲ್ಲಿ ಸಮಾಜಶಾಸ್ತ್ರಜ್ಞರ ಮುಖ್ಯ ಕೆಲಸವಾಗಿದೆ ಎನ್ನುವುದಂತೂ ಸ್ಪಷ್ಟ. ಅದರಲ್ಲೂ ಬ್ರಾಹ್ಮಣೇತರರು ಮತ್ತು ದಲಿತರು ತಮ್ಮದೇ ಆದ ಶ್ರೀಮಂತ ಸಂಸ್ಕೃತಿಯನ್ನು ಹೊಂದಿದ್ದು, ಇಂತಹ ಒಂದು ಚಾರಿತ್ರಿಕ ಸಂದರ್ಭದಲ್ಲಿ, ಅದರ ಸಾಂದ್ರತೆ ತಾತ್ವಿಕತೆಯ ಹಿನ್ನೆಲೆಯಲ್ಲಿ, ತಮ್ಮ ಜಾತಿ ಪುರಾಣಗಳಲ್ಲಿ, ಉಗಮದ ಕಥೆಗಳಲ್ಲಿ ಜಾತಿಯನ್ನು ಹೇಗೆ ಅರ್ಥೈಸಿದ್ದಾರೆ ಎನ್ನುವುದರ ಬಗೆಗಿನ ಸಮಾಜಶಾಸ್ತ್ರೀಯ ಅಧ್ಯಯನಗಳು ಜರುಗಬೇಕಿದೆ.

**ಜಾತಿ ಜನಗಣತಿಗೆ ಎದುರಾದ ಸಮಸ್ಯೆಗಳು**

ವಸಾಹತು ಹಿನ್ನೆಲೆಯ ಕಾರಣದಿಂದಾಗಿ ಭಾರತಕ್ಕೆ ಬಂದ ಸಮಾಜಶಾಸ್ತ್ರ ಮತ್ತು ಸಮಾಜ ಶಾಸ್ತ್ರಜ್ಞರ ಕೆಲಸ ಸಮಾಜವನ್ನು ಬದಲಾಯಿಸುವುದು ಎಂದಾದರೆ ೧೯೪೧ರ ನಂತರದ ಜನಗಣತಿಯಲ್ಲಿ ಜಾತಿ ಮಾಹಿತಿಯನ್ನು ಸಂಗ್ರಹಣೆ ಮಾಡದಿರುವ ಸರ್ಕಾರದ ನಿರ್ಧಾರ ಸಮಂಜಸವೇ ಅಲ್ಲವೇ, ಸಮಾಜಶಾಸ್ತ್ರಜ್ಞರು ಸಾಮಾಜಿಕ ಬದಲಾವಣೆಯಲ್ಲಿ ಭಾಗವಹಿಸ ಬೇಕೆ ಬೇಡವೇ ಎನ್ನುವ ಪ್ರಶ್ನೆಗಳು ಮುಖ್ಯವಾಗುತ್ತವೆ. ಜನಗಣತಿಯಲ್ಲಿ ಜಾತಿಯ ಬಗೆಗಿನ ಮಾಹಿತಿ ಸಂಗ್ರಹಣೆ ಆಗಲೇಬೇಕು ಎನ್ನುವ ಬಗ್ಗೆ ಎರಡು ಮಾತಿಲ್ಲ. ಜಾತಿಗಳು ಮತ್ತು ಅವುಗಳ ನಡುವಿನ ಸಂಬಂಧ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಡೆಯುತ್ತಿರುವ ಜಾತಿಯ ಬಗೆಗಿನ ವಿವಾದಗಳು ೫೦ ವರ್ಷಗಳ ನಂತರ ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ಇರಬೇಕೆ ಬೇಡವೇ ಅಥವಾ ಕೆಳಜಾತಿಗಳ ಮೇಲೆ ನಡೆಯುತ್ತಿರುವ ಹಿಂಸೆ, ಅತ್ಯಾಚಾರಗಳು, ಏನೇ ಇರಬಹುದು, ಅವೆಲ್ಲದರ ಬಗ್ಗೆ ಕೂಲಂಕಷವಾಗಿ ಚರ್ಚಿಸ ಬೇಕಾದ ನಿಟ್ಟಿನಲ್ಲಿ ಈ ಮಾಹಿತಿಯು ಅತ್ಯವಶ್ಯಕವಾಗಿದೆ. ಆದರೆ, ಸಮಾಜಶಾಸ್ತ್ರಜ್ಞರಲ್ಲಿ ಈ ವಿಚಾರದ ಬಗ್ಗೆ ಒಮ್ಮತವಿಲ್ಲ. ಜನಗಣತಿಯಲ್ಲಿ ಜಾತಿ ಬೇಡ ಎನ್ನುವವರ ವಾದವನ್ನು ಇಲ್ಲಿ ಗಮನಿಸೋಣ. ಬೇಡ ಎನ್ನುವವರನ್ನು ಮೂರು ವಿಭಾಗಗಳಾಗಿ ವರ್ಗೀಕರಿಸಬಹುದು – ವೈಧಾನಿಕ ಕಾರಣಗಳ ಹಿನ್ನೆಲೆಯಲ್ಲಿ ಇರುವವರು, ವ್ಯಾವಹಾರಿಕ ಕಾರಣಗಳ ಹಿನ್ನೆಲೆಯಲ್ಲಿ ಇರುವವರು ಹಾಗೂ ಮಾಹಿತಿ ಸಂಗ್ರಹಣೆಯ ನೈತಿಕ ಜವಾಬ್ದಾರಿಯ ಹಿನ್ನೆಲೆ ಇರುವವರು.

ವೈಧಾನಿಕ ಕಾರಣಗಳಿಗಾಗಿ ಜಾತಿಯನ್ನು ದಾಖಲಿಸುವುದು ಕಠಿಣ ಎಂದು ಹೇಳುವವರ ವಾದ ಹೀಗಿದೆ : ಭಾರತದಲ್ಲಿ ಬಹುಜಾತಿಯ ಅಸ್ತಿತ್ವವಿದೆ. ಹಾಗೆಂದರೆ, ನಿಮ್ಮ ಜಾತಿಯನ್ನು ಗುರುತಿಸಿ / ಹೆಸರಿಸಿ ಎಂದು ಯಾರಾದರೂ ಕೇಳಿದಾಗ, ಸಂದರ್ಭಕ್ಕನುಸಾರವಾಗಿ ಹಲವು ರೀತಿಯಲ್ಲಿ ಉತ್ತರಗಳು ದೊರೆಯುತ್ತವೆ. ಜಾತಿಯನ್ನು ಸಂದರ್ಭಕ್ಕನುಸಾರವಾಗಿ 'ವರ್ಣ/ ಹಿಂದೂ' ಎಂದು ಉಲ್ಲೇಖಿಸಬಹುದು. ಭಾರತದಲ್ಲಿ ಇರುವ ಎಲ್ಲಾ ಜಾತಿಗಳನ್ನು ಹೆಸರಿಸುವುದೇ ಒಂದು ಬೃಹದಾಕಾರವಾದ ಸಮಸ್ಯೆ. ಏನೇ ಇರಲಿ, ಅದಕ್ಕೆ ಅಡಚಣೆಯಿದೆ ಎಂಬುದು ನಿಜವಾದರೂ ಜಾತಿಯನ್ನು ದಾಖಲಿಸುವುದು ಆಗಲೇಬೇಕಾದ ಕೆಲಸ. ಜನಗಣತಿ ಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ಸಮಾಜ ವಿಜ್ಞಾನಿಗಳು ಮಾಹಿತಿ ಸಂಗ್ರಹಣೆಯಲ್ಲಿರುವ ಸಮಸ್ಯೆಗಳನ್ನು ಎದುರಿಸಲು ಹಲವಾರು ತೆರನಾದ ಮಾರ್ಗ ಮತ್ತು ಪರಿಕರಗಳನ್ನು ಪರಿಹಾರಾರ್ಥವಾಗಿ ಹುಡುಕಿದ್ದಾರೆ. ನಮಗೆಲ್ಲ ಗೊತ್ತಿರುವ ಹಾಗೆ ಈಗಾಗಲೇ ೨೦೦೦ದ ಜನಗಣತಿಯ ಆಯುಕ್ತರು ರಾಷ್ಟ್ರಮಟ್ಟದ ಜನಗಣತಿಯಲ್ಲಿ ಜಾತಿಯನ್ನು ದಾಖಲಿಸುವುದೇ / ಇಲ್ಲವೇ ಎಂಬ ಸಂವಾದ ಕುರಿತಂತೆ ದಾಖಲಿಸುವುದು ಸಾಧ್ಯವೆಂದೂ ಆ ನಿಟ್ಟಿನಲ್ಲಿ ಮಾಹಿತಿ ಸಂಗ್ರಹಣೆ ಮಾಡಲು ತಾವು ತಯಾರಿರುವುದಾಗಿಯೂ ಪದೇ ಪದೇ ಪುನರುಚ್ಚರಿಸಿದ್ದಾರೆ. ಸಂಗ್ರಹಣೆ ಮಾಡಿರುವಂತಹ ಮಾಹಿತಿಯ ಸತ್ಯಾಸತ್ಯತೆಗಳ ಬಗ್ಗೆ ವ್ಯಕ್ತಪಡಿಸಿರುವಂತಹ ಕೆಲವು ಸಂಶಯಗಳನ್ನು ಕೂಡಾ ಪರಿಹರಿಸಿಕೊಳ್ಳಲು ಕಾರ್ಯತಂತ್ರಗಳನ್ನು ರೂಪಿಸ ಬಹುದು ಎಂಬ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಈ ವಿಚಾರದಲ್ಲಿ, ಒಂದು ಊಹಾತ್ಮಕ ಪ್ರಶ್ನೆಯನ್ನು (ಅಂದರೆ ಇಡೀ ಭಾರತಕ್ಕೆ ಅನ್ವಯಿಸುವ ಒಂದು ಮಾದರಿಯನ್ನು ಗುರುತಿಸುವ ಸಮಸ್ಯೆ) ಎದುರಿಗಿಟ್ಟುಕೊಂಡು ಸಮಸ್ಯೆಯನ್ನು ಚರ್ಚಿಸುವುದು, ಅದನ್ನು ಪರಿಹರಿಸುವ ಒಂದು ವಿಧಾನವೆನಿಸಿಕೊಳ್ಳುವುದಿಲ್ಲ.

ಎರಡನೆಯದು, ಮುಂದಿಡಲಾಗಿರುವ ವೈಧಾನಿಕ ಕಾರಣಗಳ ಹಿಂದೆ ವ್ಯಾವಹಾರಿಕ ಮತ್ತು ರಾಜಕೀಯ ಕಾರಣಗಳು ಸ್ಪಷ್ಟವಾಗಿ ಇವೆ ಎನ್ನುವಂತಹದ್ದು. ಅದೇನೆಂದರೆ, ಸಾಮಾಜಿಕ, ವೈಜ್ಞಾನಿಕ ಮಾಹಿತಿ ಸಂಗ್ರಹಣೆಗೂ ಮತ್ತು ಜನಗಣತಿಯಲ್ಲಿರುವಂತಹ ಮಾಹಿತಿ ಸಂಗ್ರಹಣೆಗೂ ಇರುವ ಮುಖ್ಯ ವ್ಯತ್ಯಾಸವೇನೆಂದರೆ, ಜನಗಣತಿಯು ಪ್ರಭುತ್ವ ಕೈಗೊಳ್ಳುವಂತಹ ಒಂದು ಕಾರ್ಯಾಚರಣೆ. ಹೀಗಾಗಿ ಜನಗಣತಿಯಲ್ಲಿ ದಾಖಲಾಗಿರುವ ಮಾಹಿತಿ ಒಂದು ಅಧಿಕೃತತೆ ಮತ್ತು ಅಧಿಕೃತ ಮಾನ್ಯತೆಯನ್ನು ಹೊಂದಿರುತ್ತದೆ. ಹಿಂದುಳಿದ ವರ್ಗಗಳು ಈಗ ನಡೆಸುತ್ತಿರುವ ಗಣತಿ ಅಧಿಕೃತತೆಯ ಸಮಸ್ಯೆಯನ್ನು ಭವಿಷ್ಯದಲ್ಲಿ ಎದುರಿಸಬಹುದು. ವಾಸ್ತವವನ್ನು ಪ್ರತಿಬಿಂಬಿಸುವುದು ಮತ್ತು ಆ ಮಾಹಿತಿಗೆ ಅಧಿ ಕೃತತೆಯನ್ನು ನೀಡುವ ಈ ಪ್ರಕ್ರಿಯೆ, ತದನಂತರದ ವ್ಯಾಪಕವಾದ ಸಾಮಾಜಿಕ ಬಿಕ್ಕಟ್ಟುಗಳಿಗೆ ಎಡೆಮಾಡಿಕೊಡಬಹುದು. ಇಲ್ಲವೇ ಈಗಾಗಲೇ ಇರುವಂತಹ ಅಂತರ್ಜಾತಿ ವಿವಾಹ ಸಂಘರ್ಷಗಳು ಹೆಚ್ಚಬಹುದು ಎಂಬುದು ಕೆಲವರ ಅಭಿಪ್ರಾಯ. ಆದರೆ, ಜನ ಗಣತಿಯಲ್ಲದೆಯೇ ಕಳೆದ ೫೦ ವರ್ಷಗಳಲ್ಲಿ (ಎಸ್. ಸಿ/ಎಸ್.ಟಿ ಜಾತಿಗಳಿಗೆ ಸಂಬಂಧಿ) ಸಾಕಷ್ಟು ಗಲಭೆಗಳು ನಡೆಸಿವೆ. ಈ ಬಗೆಯ ದಾಖಲಾತಿಯಾದರೆ ಹೀಗಾಗಬಹುದು ಎಂಬ ತರ್ಕವನ್ನು ಮುಂದಿಟ್ಟುಕೊಂಡು, ತದನಂತರದ ಪರಿಣಾಮಗಳನ್ನು ಎದುರಿಸಲು ಅಣಿಯಾಗುವುದಲ್ಲದೇ, ಆ ಕಾರಣಕ್ಕೆ ಜಾತಿ ಜನಗಣತಿಯನ್ನು ಮಾಡದಿರುವುದು ಸರಿಯೆನಿಸದು. ಅಧಿಕಾರಯುತ ಮತ್ತು ವಿವರವಾದ ಮಾಹಿತಿ ನೀಡುವುದರ ಮೂಲಕ ದೋಷಪೂರ್ಣ ಭವಿಷ್ಯದ ಅಂದಾಜು ಮತ್ತು ಅದರಿಂದಾಗಬಹುದಾದ ದುಷ್ಪರಿಣಾಮ ಗಳನ್ನು ತಡೆಯಬಹುದಾಗಿದೆ. ಏನೇ ಸ್ವಹಿತಾಸಕ್ತಿ ಇದ್ದರೂ ಜನಗಣತಿಯಿಂದ ಯಾವ ಸಾಮಾಜಿಕ ವರ್ಗವೂ ಯಾವುದೇ ತೆರನಾದ ಪ್ರಯೋಜನವನ್ನೂ ಪಡೆಯಲಾಗುವುದಿಲ್ಲ. ಒಂದು ಸಾಮಾಜಿಕ ಚಳುವಳಿಯ ಮೂಲಕ ಪ್ರಭುತ್ವದ ಮೇಲೆ ಮತ್ತು ರಾಜಕೀಯ ಪಕ್ಷಗಳ ಮೇಲೆ ಒತ್ತಡ ತರುವುದರ ಮೂಲಕವೇ ಕೆಳಜಾತಿಯವರು ತಮ್ಮ ಆಗ್ರಹಗಳನ್ನು ಈಡೇರಿಸಿಕೊಳ್ಳಲು ಸಾಧ್ಯ. ಜಾತಿ ಸಂಘಟನೆಗಳು ಬಲವಾಗಿದ್ದು, ಜನಪ್ರಿಯವಾಗಿದ್ದು ಈ ತರಹದ ಪರಿಣಾಮಗಳನ್ನು ತರಲು ಯಶಸ್ವಿಯಾಗಬಹುದಾದರೆ, ಈ ಪ್ರಕ್ರಿಯೆಯನ್ನು ನಾವು ಪರಿಗಣಿಸಲೇಬೇಕಾಗುತ್ತದೆ. ಜನಗಣತಿಯಲ್ಲಿ ಮಾಹಿತಿ ಸಂಗ್ರಹಣೆಯು ಎಷ್ಟೇ ಅಸಮರ್ಪಕವಾಗಿದ್ದರೂ, ಸಾಮಾಜಿಕ ಯೋಜನೆಗಳನ್ನು ರೂಪಿಸುವಲ್ಲಿ, ಸಾಮಾಜಿಕ ಸನ್ನಿವೇಶಗಳನ್ನು ಎದುರಿಸುವಲ್ಲಿ ಅದು ಮೊದಲ ಹೆಜ್ಜೆಯಾಗಿದೆ.

ಜಾತಿಯನ್ನು ದಾಖಲಿಸುವಲ್ಲಿ ನೈತಿಕತೆ ಬಹು ಮುಖ್ಯವೆನಿಸುತ್ತದೆ. ಸಮಾಜಶಾಸ್ತ್ರಜ್ಞರು ನಂಬಿರುವಂತಹ ಒಂದು ಮುಖ್ಯ ಆದರ್ಶ – ಜಾತಿಯನ್ನು ನಿರ್ಮೂಲನೆ ಮಾಡುವುದು ಇದಕ್ಕೆ ಹಿನ್ನೆಲೆಯಾಗಿ ಕೆಲಸ ಮಾಡಿದೆ. ಈಗಾಗಲೇ ಬಹಳಷ್ಟು ಜನ ಸಮಾಜಶಾಸ್ತ್ರಜ್ಞರು ಬೇರೆ ಬೇರೆ ರೀತಿಯಲ್ಲಿ ಅಧ್ಯಯನಗಳ ಮೂಲಕ ನಮ್ಮ ಮುಂದೆ ಇಟ್ಟಿರುವ ಅಭಿಪ್ರಾಯ ಏನೆಂದರೆ, ಜನಗಣತಿಯು ಚಲನಶೀಲವಾಗಿರುವಂತಹ ಸಮುದಾಯಗಳನ್ನು ದಾಖಲಿಸುವುದರ ಮೂಲಕ ಖಚಿತತೆಯನ್ನು ಪಡೆದು ಜಡವಾಗುತ್ತದೆ. ಆದರೆ, ಸಮಾಜಶಾಸ್ತ್ರಜ್ಞರು ಮರೆಯುವಂತಹ ಒಂದು ಮುಖ್ಯ ಅಂಶವೇನೆಂದರೆ, ಯಾವುದನ್ನು ನಾವು ನಿರ್ಮೂಲನೆ ಮಾಡಬೇಕೆಂದಿರುವೆವೋ ಅದನ್ನು ನಿಖರವಾಗಿ ಅಳೆಯುವಂತಹುದ್ದು ಮುಖ್ಯ ಎಂಬುದು. ಜನಗಣತಿ ಮಾಹಿತಿ ಸಂಗ್ರಹಣೆಯು, ಜಾತಿ ಮತ್ತು ಆರ್ಥಿಕ ಅಸಮಾನತೆಗಳ ಬಗ್ಗೆ ನೇರ ಮಾಹಿತಿ ಒದಗಿಸಿಕೊಡದಿದ್ದರೂ ಸ್ಪಷ್ಟವಾಗಿ ಉಲ್ಲೇಖಿಸುವ ಒಂದು ಅಂಶವಾಗಿ ವರ್ತಿಸುತ್ತದೆ. ಕೊನೆಯದಾಗಿ ಜಾತಿಗಳ ನಡುವಿನ ಅಸಮಾನತೆಗಳ ಬಗ್ಗೆ ಹೇಳುವುದಾದರೆ, ಮೇಲ್ಜಾತಿಗಳಿಂದ ಬಂದಂತಹ ವ್ಯಕ್ತಿಗಳು ತಮ್ಮ ಜಾತಿ ಗುರುತನ್ನು ಪರಿತ್ಯಜಿಸಲು/ದಮನಿಸಲು ಮುಂದಾದರೆ, ಇದೇ ರೀತಿಯ ಪ್ರತಿಕ್ರಿಯೆಗಳನ್ನು ಕೆಳಜಾತಿಗಳಿಂದಲೂ ನಿರೀಕ್ಷಿಸುವುದು ಸರಿಯಲ್ಲ. ದಮನಿತ ಜಾತಿಗಳು ಅಥವಾ ಜಾತಿ ವ್ಯವಸ್ಥೆಯಿಂದ ವಂಚಿತರಾಗಿರುವಂತಹ ಜಾತಿಗಳು ಪ್ರಬಲವಾದ ಧನಾತ್ಮಕ ಜಾತಿ ಗುರುತನ್ನು ಬೆಳೆಸಿಕೊಳ್ಳುವಲ್ಲಿ ಮುಂದಾಗುತ್ತಾರೆ ಎಂಬುದು ಚಾರಿತ್ರಿಕವಾಗಿ ನಮ್ಮೆಲ್ಲರ ಅರಿವಿಗೆ ಬಂದ, ನಾವೆಲ್ಲರೂ ಬೆಂಬಲಿಸಬೇಕಾದ ಒಂದು ವಿಚಾರವಾಗಿದೆ.

ಹೀಗಾಗಿ ಜಾತಿಯನ್ನು ದಾಖಲಿಸಬಾರದೆಂದು ಮುಂದಿಡುವಂತಹ ವಾದಗಳು ತರ್ಕ ಬದ್ಧವಲ್ಲ. ವೈಯಕ್ತಿಕವಾಗಿ ಹೇಳುವುದಾದರೆ, ಜಾತಿಯನ್ನು ದಾಖಲಿಸಬೇಕು ಎಂದು ವಾದಿಸುವವರಲ್ಲಿ ನಾನೂ ಒಬ್ಬಳು. ಆದರೂ ದಾಖಲಿಸುವ ಪ್ರಕ್ರಿಯೆ ಕಠಿಣ ಮತ್ತು ಸಂಕೀರ್ಣ ಎಂಬುದೂ ನಿಜ. ಅದರಲ್ಲೂ ಸರ್ಕಾರೇತರ ಸಂಸ್ಥೆಗಳು ಕೈಗೆತ್ತಿಕೊಂಡಿರುವ ಈ ಕೆಲಸ ಎಷ್ಟರ ಮಟ್ಟಿಗೆ ಅಧಿಕೃತತೆ ಪಡೆಯುತ್ತದೆ ಎನ್ನುವುದು ಪ್ರಶ್ನೆಯಾಗಿ ಉಳಿಯಬಹುದು. ಆದರೂ ಮಾಹಿತಿ ಸಂಗ್ರಹಣೆ ಆದ ಕೂಡಲೆ ಅದು ಒಂದು ಸಾಮಾಜಿಕ ಯೋಜನೆಯಾಗಿ ಪರಿವರ್ತಿತವಾಗುವುದಿಲ್ಲ ಎನ್ನುವುದು ನಾವೆಲ್ಲರೂ ಅರ್ಥ ಮಾಡಿಕೊಳ್ಳಬೇಕಾದ ವಿಚಾರ.

**ಡಾ|| ಸುಧಾ ಸೀತಾರಾಮನ್**
ಉಪನ್ಯಾಸಕರು, ಸಮಾಜಶಾಸ್ತ್ರ, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು - ೫೬೦ ೦೦೧

# ನವಿಲುಗಳು

- ಒಂದು -

ನಗುವ ಸಾವಿರ ಕಣ್ಣುಗಳನ್ನು
ಕುಣಿವ ಮಾಯೆಯ ಕ್ಷಣಗಳನ್ನು
ಹಣೆ ಮೇಲೆ ವಿಶ್ವದ ಅನೇಕ ಗುರುತುಗಳನ್ನು
ಹೊತ್ತು ನಡೆಯುತ್ತಿವೆ ನವಿಲುಗಳು
ನಿಂತವರು ನಿಂತಂತೆ, ಬೆರಗೊಂದು ನೋಡಿದಂತೆ
ನರುಗಂಪಿನಲ್ಲಿ ನಡೆಯುತ್ತಿದ್ದಾರೆ.
ಅಖಾಡದಲ್ಲಿ ಅಂಗಾತ ಮಲಗಿರುವ
ನವಿಲುಗರಿಗಳನ್ನು ಕೈಯೊಳಗೆ ತುಂಬಿಸಿಕೊಳ್ಳಲು –
ಹೆಜ್ಜೆಗಳೆಂಬ ಹೆಜ್ಜೆಗಳೊಳಗೆ
ಬಯಲ ಬೆರಗು ರೆಕ್ಕೆಯಲ್ಲಿ
ನಿಗಿನಿಗಿಯ ಕಣ್ಣನ್ನೊತ್ತ ಹಕ್ಕಿ
ನಡೆದು ಬಿಡುತ್ತದೆ ಬಯಲ ಬಾನಿಗೆ
ಬೆರಗು ಬಡಿವ ಬಯಲಿಗೆ



ಬಾಸಿಂಗ ಕಟ್ಟಿ, ಹಕ್ಕಿಗಾನ ಅಕ್ಷತೆ,
ಊರ ಬಾನ ಚಪ್ಪರ, ಹಕ್ಕಿ, ಚಿಟ್ಟೆ, ಆಕಾಶ ತಾರೆ
ಬಣ್ಣ ಬಣ್ಣದ ವಧು-ವರ-

- ಎರಡು -

ರೆಪ್ಪೆಯೊಡೆದ ನವಿಲು ಸುತ್ತ ನೋಡುತ್ತಿದೆ
ಕೊಳ್ಳುವವರು, ಮಾರುವವರ ನಿಲ್ಲದ ವ್ಯಾಪಾರ
ವಕಾಲತ್ತುಗಳಿಗೆ ಸಂಜೆ ಬಿಗಿಯುತ್ತಿದೆ.
ಸುಮ್ಮನೆ ನಡೆದುಬಿಡುತ್ತಿವೆ ಒಂಟಿ ಹೆಜ್ಜೆಗಳು
ಭೂಮಿಯ ತೂಕವನ್ನು ಹೊತ್ತವರಂತೆ –

ಬೂದಿ ಬೆಳಕಿನೊಳಗೊಂದು ಗಳಿಗೆ
ಮೈಕೊಡವಿಕೊಂಡು
ಎದುರು-ಬದುರಾಗಿ, ಮಿಂಚು ಬೆರಗಾಗಿ
ನವಿಲನ್ನು ದಿಟ್ಟಿಸುತ್ತಿದೆ
ಬಗ್ಗಡದ ಬದುಕಲ್ಲಿ ಮುದುಡಿದ ಮಡಿಕೆಗಳ
ಗೆರೆಗಳು ; ಶಬ್ದ - ನಿಶ್ಯಬ್ದದ ಸಾಕಾರ ನಿರೂಪ
ನಕ್ಕು ಬಿಡುವ ಅಭದ್ರ ಕ್ಷಣಗಳು
ಉದುರಿ ಬೇರೆಯಾದ ನವಿಲುಗರಿಗಳು
ಪೊರೆ ಸರಿಸಿ ನಕ್ಕ ಜಾಜಿ ಹೂ.
ಅದರಡಿಯ ಜಾಲಿಮುಳ್ಳು ಕಾಲದೊಗಟಿನ-
ಚಡಪಡಿಕೆಯ ಪಳೆಯುಳಿಕೆಗಳು

ದಾಟದ ಹಗಲು,
ದಾಖಲಾಗುತ್ತ ಹಾದು ಹೋಗುವ
ಮಾಯದ ಬೆಳಕು,
ನನಗೂ-ನಿನಗೂ ನಡುವೆ ಬಚ್ಚಿಟ್ಟ
ಸಿಕ್ಕುಬಲೆಯಡಿಯಲ್ಲಿ
ಒದ್ದಾಡುವ ಮೀನು ಎಲ್ಲವನ್ನು ನೋಡಿ
ನವಿಲು ನಡೆದು ಬಿಡುತ್ತಿದೆ ನಿರ್ವಾಣದ ಹಾದಿಗೆ.

- ಮೂರು -

ನವಿಲು ನಕ್ಕಾಗ
ಜಗವು ನಿದ್ದೆಯ ಸೋಗಿನ ಸೋಜಿಗದಲ್ಲಿರುತ್ತದೆ
ಇಹದ ವ್ಯಾಪಾರ, ವ್ಯವಹಾರದ ವ್ಯವಕಲನದಲ್ಲಿ
ರೆಕ್ಕೆಯುದುರಿಸಿಕೊಂಡು ಬೋಳು ಮರವಾಗುತ್ತೆ,
ಕೊನೆಗೆ ಬಯಲ ಬದುಗಳಂಚಲ್ಲೇ
ನಡೆದು ಬಿಡುತ್ತದೆ.

ಅರ್ಥವಾಗದ ಹಗಲುಗಳು,
ತಿದಿ ಒತ್ತಿ , ಒತ್ತಿ ಗಟ್ಟಿ ಮಾಡಿ ಕೊನೆಗೆ ಹರಳಾದ –
ಗಳಿಗೆಗಳ ನಡುವೆ ಜೀವಾತ್ಮದ ಜಂಗಮ ಕಣ್ಣು
ತೆರೆಯುತ್ತಿದ್ದಾನೆ.

ಬಟಾ ಬಯಲನ್ನು ಅರಸಿ ನಡೆವ ನವಿಲು
ಕಾಲದ ಹಡಗಿನ ಪಯಣದಲ್ಲಿ
ನಿಂತಿರುತ್ತದೆ ಹಾಯಿಯಂತೆ...

**ಲಕ್ಕೂರು ಸಿ. ಆನಂದ**
ಪೊಲೀಸ್ ಠಾಣೆ ಎದುರು, ಲಕ್ಕೂರು ಅಂಚೆ
ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ - ೫೬೩೧೬೦

*೩ನೇ ಪುಟದಿಂದ... (ಈ ತಿಂಗಳು)*

ಇರಿಸಿಕೊಂಡಿದೆ. ಅವರಲ್ಲಿ ಇಲ್ಲದ ಯೋಜನೆಯೆಂದರೆ ಸಮುದ್ರವು ದೊಡ್ಡ ಅಲೆಗಳನ್ನೆಬ್ಬಿಸಿ ನಗರಗಳನ್ನು ನುಚ್ಚುನೂರು ಮಾಡಿದಾಗ ಜನರನ್ನು ರಕ್ಷಿಸುವುದು ಹೇಗೆಂಬುದನ್ನು ಕುರಿತದ್ದು. ಇರಾಕಿಗೆ ಲಕ್ಷ ಸೈನಿಕರನ್ನು ಕಳಿಸಿರುವ ಬುಷ್‌ಗೆ ನ್ಯೂ ಆರ್ಲಿಯನ್ಸ್‌ಗೆ ಕೂಡಲೆ ನಾಲ್ಕು ಸಾವಿರ ಸೈನಿಕರನ್ನು ಕಳಿಸುವ ಶಕ್ತಿ ಇದೆ, ಆದರೆ ಆಹಾರ, ಔಷಧಿ, ಉಡುಪು, ಇತ್ಯಾದಿಗಳನ್ನು ರವಾನಿಸುವುದು ಸಾಧ್ಯವಿಲ್ಲ! ಅಲ್ಲಿ ಸಿಲುಕಿಕೊಂಡಿರುವ ಜನಗಳನ್ನು ಬೇರೆಡೆಗೆ ಕೊಂಡೊಯ್ಯಲು ಆಗದಷ್ಟು ತಂತ್ರಜ್ಞಾನ ಮತ್ತು ವಾಹನಗಳ ಕೊರತೆ ಅಮೆರಿಕಾಕ್ಕಿದೆ ಎಂದರೆ ನಂಬಲಾದೀತೆ !! ಆ ದೇಶದಲ್ಲಿ ಎಲ್ಲಾ ಖಾಸಗಿ. ಖಾಸಗಿಯೆಂದರೆ ಶ್ರೇಷ್ಠ. ಆದ್ದರಿಂದ ಜನರೂ ಖಾಸಗಿಯಾಗಿ ಸಾಯಬೇಕು. ಸರ್ಕಾರವೇನಿದ್ದರೂ ಬೇರೆ ದೇಶಗಳ ಸಂಹಾರಕ್ಕೆ ಮಾತ್ರ ಸೀಮಿತ !! ಅಮೆರಿಕಾದ ಪತ್ರಿಕೆಯೊಂದರಲ್ಲಿ ಒಂದೇ ದಿನ ಎರಡು ಚಿತ್ರಗಳು ಪ್ರಕಟವಾಗಿವೆ; ನೀರಿನಲ್ಲಿ ತೇಲಿಹೋದ ತಮ್ಮ ವಸ್ತುಗಳನ್ನು ಕಷ್ಟಪಟ್ಟು ಹಿಡಿದು ತರುವ ಜನಗಳ ಚಿತ್ರಗಳು ಅವು. ಒಂದರಲ್ಲಿ ಕರಿಯ ನಾಗರಿಕ, ಇನ್ನೊಂದರಲ್ಲಿ ಬಿಳಿಯ. ಆದರೆ ತಲೆಬರಹ ಬೇರೆಬೇರೆ: ಕರಿಯವನು ಇತರರ ವಸ್ತುಗಳನ್ನು ಲೂಟಿ ಮಾಡುತ್ತಿದ್ದಾನೆಂದೂ, ಬಿಳಿಯವನು ತನ್ನವನ್ನು ಸಂಗ್ರಹಿಸಿಕೊಳ್ಳುತ್ತಿದ್ದಾನೆಂದೂ ಬರೆಯಲಾಗಿದೆ. ಅಂದರೆ, ಕರಿಯವನು ಸ್ವಭಾವತಃ ಲೂಟಿ ಕೋರ ಎಂದರ್ಥ. ಛಾಯಾಚಿತ್ರಕಾರನಿಗೆ ವಸ್ತುಗಳು ಕರಿಯವನವಲ್ಲವೆಂದೂ, ಬಿಳಿಯವನು ಇತರರ ವಸ್ತು ಗಳನ್ನು ಸಂಗ್ರಹಿಸಿಕೊಳ್ಳುತ್ತಿಲ್ಲವೆಂದೂ ತಿಳಿದಿದ್ದು ಹೇಗೆ ? ಒಟ್ಟಿನಲ್ಲಿ, ಕರಿಯರೇ ಹೆಚ್ಚಾಗಿದ್ದ ಊರಿನತ್ತ ಬುಷ್ ನಿರ್ಮಮತೆಯಿಂದ ವರ್ತಿಸಿದನೆಂದು ಕೆಲವರ ಟೀಕೆ ಬಂದಿದೆ. ಬುಷ್‌ನ ಬಂಡವಾಳಶಾಹಿ ನೀತಿಯಲ್ಲಿ ಅಂತಹ ಭೇದಭಾವ ಇರುವುದಿಲ್ಲವೆಂದು ಇನ್ನೊಂದು ಅಭಿಪ್ರಾಯವೂ ವ್ಯಕ್ತವಾಗಿದೆ. ಇದಕ್ಕೆ ಭಿನ್ನವಾದ ಅನುಭವ ಶ್ರೀಮಂತ ವಲ್ಲದ ನಮ್ಮ ದೇಶದ್ದು. ಇತ್ತೀಚೆಗೆ ಮಹಾರಾಷ್ಟ್ರದ ರಾಯಘಡ ಜಿಲ್ಲೆಯ ಮಹಾಡ್‌ನ ನಾಗರಿಕರೊಬ್ಬರು ಹೇಳಿದ್ದಿದು. ಅವರ ಮನೆಯಲ್ಲಿ ಆರು ಅಡಿಯಷ್ಟು ನೀರು ತುಂಬಿತ್ತು. ಮಹಾಡಿನ ಕೆಲವು ಮನೆಗಳು ಹತ್ತು - ಹನ್ನೆರಡು ಅಡಿ ನೀರಿನಲ್ಲಿ ಮುಳುಗಿದ್ದುವು. ಕೆಲವು ಮನೆಗಳು ಕೊಚ್ಚಿಹೋದವು. ಆದರೆ ಕೇವಲ ಮೂವತ್ತಾರು ಗಂಟೆಗಳಲ್ಲಿ ಸರ್ಕಾರವು ಪರಿಹಾರ ಒದಗಿಸಿತು. ಮನೆಮನೆಗೂ ಸರ್ಕಾರದ ಮಂದಿ ಬಂದು ಹಣ, ಆಹಾರ, ಬಟ್ಟೆ ವಿತರಣೆ ಮಾಡಿದರು. (ಮಹಾಡಿನ ಈ ನಾಗರಿಕ ತನ್ನ ಪಾಲಿನದನ್ನು ನಿರಾಕರಿಸಿದ, ಏಕೆಂದರೆ ಆತ ಸಾಕಷ್ಟು ಅನುಕೂಲಸ್ಥ). ಜಗತ್ತನ್ನೇ ಆಳುವ ಸರ್ಕಾರ ನ್ಯೂ ಆರ್ಲಿಯನ್ಸ್‌ನಲ್ಲಿ ದಂಗುಬಡಿದು ಕೂತಿತು. ಆದರೆ ಮಾನವ ಹೃದಯವುಳ್ಳ ಬಡ ಮಹಾರಾಷ್ಟ್ರ ಸರ್ಕಾರ ರಾಯಘಡ ಜಿಲ್ಲೆಯಲ್ಲಿ ಜನರ ನೆರವಿಗೆ ನಿಂತಿತು. ಕೊಲ್ಲುವ ನಿಪುಣ ಬುಷ್‌ಗೆ ಹೃದಯ ಶ್ರೀಮಂತಿಕೆ ಎಲ್ಲಿಂದ ಬರಬೇಕು !

# ಸ್ವತಂತ್ರ ಭಾರತ ಒಂದು ಅವಲೋಕನ

ನಮ್ಮ ಈಗಿನ ಸ್ವತಂತ್ರ ಬದುಕಿನ ಆನಂದಕ್ಕೆ ಕಾರಣರಾದ ಮಹನೀಯರಿಗೆ ಕೃತಜ್ಞತೆ ಸಲ್ಲಿಸಲು ಸದವಕಾಶ. ಮಹಾತ್ಮ ಗಾಂಧಿ, ಜವಾಹರ್‌ಲಾಲ್ ನೆಹರು, ತಿಲಕ್, ಸುಭಾಷ್ ಚಂದ್ರ ಬೋಸ್...ರಂತಹ ಅನೇಕ ಉಜ್ವಲ ದೇಶಭಕ್ತ ನಾಯಕರು ಮತ್ತು ಅವರ ಅಸಂಖ್ಯಾತ ನಿಷ್ಠಾವಂತ ಅನುಯಾಯಿಗಳು ಈ ಮಹತ್ಸಾಧನೆಯ ರೂವಾರಿಗಳು. ಈ ಎಲ್ಲಾ ಮಹನೀಯರ, ಮಹಾನ್‌ತ್ಯಾಗ ಮತ್ತು ನಿಸ್ವಾರ್ಥಶ್ರಮದ ಉತ್ಕೃಷ್ಟ ಫಲ ಭಾರತದ ಸ್ವಾತಂತ್ರ್ಯ. ಈ ಅವಿಸ್ಮರಣೀಯರ ಶ್ರೇಷ್ಠ ತ್ಯಾಗದ ಫಲಾನುಭವಿಗಳು ನಾವು, ಅವರಿಗೆ ನಾವು ಸದಾ ಋಣಿ. ಈ ದಿನ ಅವರಿಗೆ ತಲೆಬಾಗಿ ನಮಿಸೋಣ. ಈ ಮಹಾತ್ಯಾಗಿಗಳು ಪ್ರತಿಪಾದಿಸಿದ ಸ್ವಾತಂತ್ರ್ಯದ ಧ್ಯೇಯವಾಕ್ಯ ಜಗತ್ತಿನ ಜೀವನಪಥವಾಗಲಿ. ಉತ್ಕೃಷ್ಟ ಭಾರತ ನಮ್ಮ ಶಪಥವಾಗಲಿ.

❐ **ಕೃಷಿ :** ಬೆಳೆ ವಿಮೆಗಾಗಿ ರೂ. 200 ಕೋಟಿಗಳು, ಬಿತ್ತನೆ ಬೀಜ ವಿತರಣೆಗೆ ರೂ. 60 ಕೋಟಿಗಳು, ಆವರ್ತ ನಿಧಿಗೆ ರೂ. 200 ಕೋಟಿಗಳು, ಕೃಷಿ ಸಂಶೋಧನೆಗೆ ರೂ. 27 ಕೋಟಿಗಳು, ಶೇ. 6ರ ಬಡ್ಡಿ ದರದಲ್ಲಿ ಸಾಲ ನೀಡಲು ರೂ. 80 ಕೋಟಿ ಸಹಾಯಧನ ಒದಗಿಸಲಾಗಿದೆ. ಕೃಷಿ ಸಾಲಗಳ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಸಂಬಂಧ-ರೂ. 950 ಕೋಟಿಗಳನ್ನು ಸಹಕಾರಿ ಸಂಸ್ಥೆಗಳಿಗೆ ಮರು ಪಾವತಿಸಲಾಗಿದೆ. ❐ **ನೀರಾವರಿ :** ನೀರಾವರಿ ಅಭಿವೃದ್ಧಿಗಾಗಿ ರೂ. 3942 ಕೋಟಿಗಳ ದಾಖಲೆ ಹಣವನ್ನು ಪ್ರಸಕ್ತ 2005-06ನೇ ಸಾಲಿನಲ್ಲಿ ಹಂಚಿಕೆ ಮಾಡಲಾಗಿದೆ. ❐ **ಆರೋಗ್ಯ :** ಸ್ತ್ರೀ ಶಕ್ತಿ ತಂಡಗಳ 2.5 ಲಕ್ಷ ಪರಿಶಿಷ್ಟ ಸದಸ್ಯರಿಗೆ ಸಾರ್ವತ್ರಿಕ ವಿಮಾ ಯೋಜನೆಯೊಂದನ್ನು ಜಾರಿಗೊಳಿಸಲಾಗುವುದು. 27 ಜಿಲ್ಲೆಗಳಿಗೆ ತಲಾ ಒದರಂತೆ ಆಂಬುಲೆನ್ಸ್ ಸೌಕರ್ಯ ಹಾಗೂ 39 ಹಿಂದುಳಿದ ತಾಲ್ಲೂಕುಗಳ ವ್ಯಾಪ್ತಿಯ 399 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ 24 ಗಂಟೆಗಳ ನಿರಂತರ ಸೇವೆ ಕಲ್ಪಿಸಲಾಗುವುದು. ❐ **ಶಿಕ್ಷಣ :** ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಮತ್ತು ಸಾಕ್ಷರತೆ ಪ್ರಮಾಣದಲ್ಲಿ ಸುಧಾರಣೆ ತರಲು 4,687 ಪ್ರಾಥಮಿಕ ಹಾಗೂ 2,104 ಪ್ರೌಢಶಾಲಾ ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದೆ. ಚಾಮರಾಜನಗರ ಮತ್ತು ಗುಲ್ಬರ್ಗಾ ಜಿಲ್ಲೆಯ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ಉಪಗ್ರಹದ ನೆರವಿನೊಂದಿಗೆ ದೂರದರ್ಶನ ಹಾಗೂ ರೇಡಿಯೋ ಮೂಲಕ ಮಕ್ಕಳಿಗೆ ಕಲಿಯುವ ಅವಕಾಶ ಕಲ್ಪಿಸಲಾಗಿದೆ. ❐ **ಮೂಲ ಸೌಕರ್ಯ :** ಬೆಂಗಳೂರು ಮಹಾನಗರಕ್ಕೆ ರೂ. 390 ಕೋಟಿಗಳ ಹೈ-ಟೆಕ್ ಸಿಟಿ ಯೋಜನೆ ಮತ್ತು ರೂ. 750 ಕೋಟಿ ವೆಚ್ಚದ ಪೆರಿಫೆರಲ್ ರಿಂಗ್ ರಸ್ತೆ ಯೋಜನೆ ಶೀಘ್ರದಲ್ಲೇ ಅನುಷ್ಠಾನ. ರೂ. 3883 ಕೋಟಿಗಳ ವೆಚ್ಚದಲ್ಲಿ ಕಾವೇರಿ 4ನೇ ಹಂತದ 2ನೇ ಘಟಕದ ಯೋಜನೆಗೆ ಚಾಲನೆ. ❐ **ವಿದ್ಯುತ್ :** ರಾಜೀವ್‌ಗಾಂಧಿ ಗ್ರಾಮೀಣ ವಿದ್ಯುದ್ದೀಕರಣ ಯೋಜನೆಯಡಿ ರೂ. 1026 ಕೋಟಿ ವೆಚ್ಚದಲ್ಲಿ 19 ಲಕ್ಷ ಗ್ರಾಮೀಣ ಕುಟುಂಬಗಳಿಗೆ ವಿದ್ಯುತ್ ಸೌಕರ್ಯ, ಬಡತನ ರೇಖೆಗಿಂತ ಕೆಳಗಿರುವ ಎಲ್ಲಾ ಗ್ರಾಮೀಣ ಕುಟುಂಬಗಳಿಗೆ ಉಚಿತ ವಿದ್ಯುತ್ ಸಂಪರ್ಕ ನೀಡಲು ನಿರ್ಧಾರ. ❐ **ಕೈಗಾರಿಕೆ :** ರೂ. 23,000 ಕೋಟಿಗಳ ಬಂಡವಾಳ ಹೂಡಿಕೆಯ ಒಎನ್‌ಜಿಸಿ ಯೋಜನೆಗೆ ಪ್ರಧಾನಿ ಅನುಮೋದನೆ. ಕೈಗಾರಿಕೆ ವಲಯದಲ್ಲಿ ರೂ 45600 ಕೋಟಿ ಮೌಲ್ಯದ ಬಂಡವಾಳ ಹೂಡಿಕೆಗೆ ರಾಜ್ಯ ಸರ್ಕಾರದ ಅನುಮೋದನೆ. ❐ **ಹೈಕೋರ್ಟ್ ಪೀಠ :** ಧಾರವಾಡ ಮತ್ತು ಗುಲ್ಬರ್ಗಾ ನಗರಗಳಲ್ಲಿ ಹೈಕೋರ್ಟ್ ಸಂಚಾರಿ ಪೀಠಗಳಿಗಾಗಿ ಬಹುದಿನಗಳಿಂದ ಕಾಣುತ್ತಿದ್ದ ಕನಸು ನನಸಾಗುತ್ತಲಿದೆ. **ಸುವರ್ಣ ಕರ್ನಾಟಕ :** 'ಸುವರ್ಣ ಕರ್ನಾಟಕ', 'ಬೃಹತ್ ಕರ್ನಾಟಕ' ಮತ್ತು 'ಕರ್ನಾಟಕ ಗೆಜೆಟಿಯರ್, 'ಸುವರ್ಣ ಪಥ' ಎಂಬ ಮೂರು ಸಂಪುಟಗಳನ್ನು ಸುವರ್ಣ ಕರ್ನಾಟಕದ ವರ್ಷಾಚರಣೆಯ ಸಂದರ್ಭದಲ್ಲಿ ಬಿಡುಗಡೆ ಮಾಡಲಾಗುವುದು.

 ಕರ್ನಾಟಕ ವಾರ್ತೆ

# ಅವಳ ಕೈ ಅಡುಗೆ

ಗುಂಡುರಾವ್ ದೇಸಾಯಿ ಮಸ್ಕಿ



ಅವಳ ಕೈ ಅಡುಗೆ ಅಂದ ಕೂಡಲೇ ಯಾರ ಅಡುಗೆ ವಿಚಾರದ ಬಗ್ಗೆ ಹೇಳಕತಾರ ಅಂತ ನೀವು ಯೋಚಿಸುವುದಕ್ಕೆ ಮುಂಚೆ ನಾನೇ ಹೇಳಿಬಿಟ್ರೆ ಚೆನ್ನಾಗಿರುತ್ತೆ. ಚೆನ್ನಾಗಿರುತ್ತೆ ಅನ್ನೋದಕ್ಕಿಂತ ಸಮಸ್ಯನ ಇರೋಲ್ಲ ಯಾಕಂದ್ರ ನನ್ನವಳು ಯಾರ ಕೈ ಅಡುಗೆ ?... ಯಾರವಳು ?... ಹ್ಯಾಂಗ ಪರಿಚಯ ?... ಏನು ಸಂಬಂಧ ?... ಅಂತ ವಿಚಾರಿಸೋಕೆ ಹತ್ತಿದ್ರೆ, ಅನುಮಾನಪಟಗೊಂಡ್ರೆ ಬಾಳ ತ್ರಾಸ. ಊದೋದು ಕೊಟ್ಟು ಬಾರಿಸೋದು ತೊಗೊಂಡಂಗ ಆಗುತ್ತೆ. ನಂತರ ಅವಳ ಕೋಪನ ತಮಣಿ ಮಾಡೋಕೆ ಮಾಡೋ ಪ್ರಯತ್ನ ಇದೆಯಲ್ಲ... ನಿಮಗೂ ಅನುಭವ ಇರಬೇಕಲ್ಲ... ಅದಕ್ಕೆ ಹೇಳಿ ಬಿಡುತೀನಿ. ಅವಳ ಕೈ ಅಡುಗೆ ಅಂದ್ರ ಯಾರದೂ ಅಲ್ಲ, ನಮ್ಮ ನಮ್ಮ ಮನೆಗಳಲ್ಲಿ ನಮ್ಮ ಹೆಂಡಂದಿರು ಮಾಡೋ ಅಡಿಗಿನ. ''ಅಲ್ಲರಿಽಽ... ನಮ್ಮ ಹೆಂಡ್ರು ಮಾಡೋ ಅಡಿಗೆಯಲ್ಲಿ ಅಂತಹ ವಿಶೇಷ ಏನದರಿ ?'' ಅಂದ್ರಾಽ... ಖಂಡಿತ ಇದೇರಿ. ಪ್ರತಿಯೊಬ್ಬರ ಮನೇಲೂ ಅವರವರ ಹೆಂಡರು ಮಾಡೋ ಅಡಿಗೆಯಲ್ಲಿ ವಿಶೇಷತೆ ಇದ್ದೆ ಇರುತ್ತೆ. ಇರಲಿಕ್ಕೇಬೇಕು. ''ಅಲ್ಲಾ ಸ್ವಾಮಿ ? ನಮ್ಮಾಕೆಗೆ ಅಡಿಗೆನ ಮಾಡೋಕೆ ಬರಲ್ಲ ಅಂದಮೇಲೆ ವಿಶೇಷತೆ ಏನುರಿ ?'' ಅಂತ ಕೆಲವರು ಮನಸಿನ್ಯಾಗ ಪ್ರಶ್ನೆ ಹಾಕಿಕೊಳ್ಳತಾ ಇರಬಹುದು. ''ಅಲ್ರೀ ರಾಯರೆ, ಬರೋಲ್ಲಾ ಅನ್ನೋ ವೀಕನೆಸ್ಸೂ ಅದೇ ನ್ಯೂನತೆ ಇದೆಯಲ್ಲ ಅದರ ವಿಶೇಷರಿ. ಸರಿಯಾಗಿ ಯೋಚಿಸಿ, ತಿಳಿಯುತ್ತೆ.''

ನಿಜ ಹೇಳಿ ಯಾವ ವಿಷಯಕ್ಕೂ ಇರಲಿಕ್ಕಿದ್ದರೂ ಅಡುಗೆ ವಿಷಯದ ಬಗ್ಗೆ ಹೆಚ್ಚಾಗಿ ಮನೆಯಲ್ಲಿ ಜಟಾಪಟಿ ನಡೀತಾನೇ ಇರುತ್ತೆ ತಾನೆ ? ಮನೆಯಾಕೆಯ ಗುಣದ ಜೊತೆ ಕೈ ಗುಣವೂ ಚೆನ್ನಾಗಿದ್ದರೆ ಅಂತಹ ಸಂದರ್ಭಗಳು ಕಡಿಮೆ. ಕಟ್ಟಿಕೊಂಡವಳಿಗೆ ಅಡುಗೆ ಮಾಡೋಕೆ ಬರೋದಿದ್ರಂತೂ ನಿಜಕ್ಕೂ ಹೀ ಈಜ್ ಅನ್‌ಲಕ್ಕಿ. ಅಂತವರ ಮನೆಯಲ್ಲಿ ನಡೆಯುವ ಜಗಳನ ನೋಡಿ, ಕೇಳಿಯೇ ಸವಿಯಬೇಕು ಅಷ್ಟೊಂದು ಸ್ವಾರಸ್ಯಕರವಾಗಿರುತ್ತೆ.

ಪ್ರಾಣಿಗಳಂತಲ್ಲ ಮಾನವ. ಅಡುಗೆ, ಊಟದ ವಿಷಯದಲ್ಲಿ ಬಲು ರಸಿಕ. ಸದಾ ಹೊಸತನ್ನು ಹುಡುಕುವ ಸ್ವಭಾವ ಅವನ್ದು. ಹೀಗಾಗಿ ನೆನಪಿಡದಷ್ಟು ಎಷ್ಟು ಬಗೆಯ ಖಾದ್ಯಗಳು ನಿರ್ಮಾಣಗೊಂಡಿವೆ. ಮದುವೆಗಳ ಅಥವಾ ಯಾವುದೇ ಕಾರ್ಯಕ್ರಮಗಳ ಯಶಸ್ಸು ನಿಂತಿರೋದೇ ಅಲ್ಲಿ ಸಿದ್ಧಪಡಿಸಲಾಗಿರುವ ಅಡಿಗೆ ಮೇಲೆ ಹೊರತು ಆಡಂಬರದ ವೈಭೋಗದ ಮೇಲಲ್ಲ. ಊಟೋಪಚಾರ ಚೆನ್ನಾಗಿದ್ದರೇನೆ ಯಾವುದೇ ಕಾರ್ಯಕ್ರಮಗಳಿಗೆ 'ಎ' ಗ್ರೇಡ್ ಕೊಡತಿನಿ, ಅದೇ ರೀತಿ ಹೊಗಳತಿನಿ ಎಂದ ಮೇಲೆ; ...ಹಾಂ ! ಇರಲಿ ಪ್ರಸ್ತುತ ವಿಷಯಕ್ಕೆ ಬರೋಣ. ಮನೆಯಾಕೆ ಅಡುಗೆ ಚೆನ್ನಾಗಿ ಮಾಡುತ್ತಿದ್ದರೆ ಅದು ಗಂಡನಾದವನಿಗೆ ಹೆಮ್ಮೆಯ ಪ್ರತಿಷ್ಠೆಯ ವಿಷಯ. ''ಅದು ಹ್ಯಾಂಗ್ರಿ ?'' ಅಂದ್ರೇನು...? ಆಕರ್ಷಕವಾಗಿ, ರುಚಿಕಟ್ಟಾಗಿ ಅಡುಗೆ ಮಾಡುವಂತವಳಿದ್ದರೆ ಪಿಕನಿಕ್ಕೊ, ಟೂರ್ ಅಥವಾ ಆಫೀಸಿನಲ್ಲಿ ಸ್ನೇಹಿತರಿಂದ ಒಳ್ಳೆಯ ಸರ್ಟಿಫಿಕೇಟ್ ಗಿಟ್ಟಿಸಿಕೊಳ್ಳಬಹುದು. ಮನೆಗೆ ಅತಿಥಿಗಳಾಗಲಿ, ಸ್ನೇಹಿತರಾಗಲಿ ಬಂದು ಚಿಂತೆ ಪಡಬೇಕಾಗಿಲ್ಲ. ಅದೇ ಕೈಹಿಡಿದಾಕೆಗೆ ಅಡುಗೆ ಬಾರದಿದ್ದರಂತೂ ಮುಜುಗರ ಪಟ್ಟುಕೊಳ್ಳಬಹುದಾದ, ಅವಮಾನವನ್ನು ಅನುಭವಿಸಬೇಕಾದ ಸಂದರ್ಭಗಳು ಬಾರದೆ ಇರವು.

ಅಡುಗೆ ಮಾಡುವುದು ಒಂದು ಕಲೆ. ಎಲ್ಲರಿಗೂ ಸಿದ್ಧಿಸುವಂತದಲ್ಲ ಕಣ್ರೀ. ಎಂತಹ ಕಷ್ಟ ಕೆಲಸವನ್ನಾದರೂ ಕಲಿಯಬಹುದು. ಆದರೆ ಅಡುಗೆ ವಿಷಯ ಹಾಗಲ್ಲ ಇದಕ್ಕೆ ತನ್ನದೆ ಆದ ಜಾಣ್ಮೆ, ಕೌಶಲ್ಯ ಬೇಕು. ಹಿಂದೆ ಹೆಣ್ಣಕ್ಕಳಿಗೆ ಬಾಲ್ಯದಿಂದಲೇ ಅಡುಗೆ ಮಾಡುವ ರೂಢಿ ಬೆಳೆಸುತ್ತಿದ್ದರು. ಕಾರಣ, ಮುಂದೆ ಗಂಡನ ಮನೆಯಲ್ಲಿ ಅಡುಗೆ ಮಾಡುವಲ್ಲಿ ವಿಫಲಳಾದರೆ ಅವಳಿಗೂ ಕಿರುಕುಳ ಹೆತ್ತವರಿಗೂ ಅಪಕೀರ್ತಿ ಎಂಬುದು ಗೊತ್ತಿತ್ತು. ಅದೇ ಅಡುಗೆಯಲ್ಲಿ ಪರ್‌ಫೆಕ್ಟ್ ಇದ್ರಂತೂ ಅವಳು ಅತ್ತೆ ಮಾವಂದಿರ ಮುದ್ದಿನ ಸೊಸೆ. ಅಲ್ಲದೆ ಮದುವೆ, ಮುಂಜಿವಿ, ಜವಳ ಮೊದಲಾದ ಯಾವುದೇ ಶುಭಸಮಾರಂಭಗಳೇ ಇರಲಿ, ಆಗ ಎಂಥ ಬೆಲೆ. ಅಡುಗೆಮನೆಗೆ ಇಂಥವರದ್ದೇ ಆಧಿಪತ್ಯ. ಮಾಡಿ ಮಾಡಿ ಸುಸ್ತಾದರೂ ಪರ್‍ವಾಗಿಲ್ಲ, ಹೊಗಳಿಕೆ ಎಂತಹುದುರಿ ? ಹೊಗಳಿಕೆ ಮುಂದೆ ಎಂತಹ ದಣಿವು ಕೂಡ ತಣ್ಣಗಾಗಿ ಬಿಡುತ್ತೆ ಅಲ್ವೆ ? ಇತ್ತೀಚಿಗೆ, ಚಿಕ್ಕ ಕಾರ್ಯಗಳೇ ಇರಲಿ ಅಂಥವುದಕ್ಕೂ ಸಹಿತ ಅಡುಗೆಯವರನ್ನು ಗೊತ್ತು ಮಾಡುತ್ತಿರುವುದರಿಂದ ಹಿಂದೆ ಚೆನ್ನಾಗಿ ಅಡುಗೆ ಮಾಡುವ ಹೆಣ್ಣು ಮಕ್ಕಳಿಗಿದ್ದ ಬೆಲೆ ಈಗ ಕಡಿಮೆಯಾಗುತ್ತಿದೆ. ಎಲ್ಲರ ನೀವು ಹೋಗಿ ಹೆಂಗಸರ ಗುಣ ಅಂದರ ಅವರು ಮಾಡಿದ ಅಡುಗೆ ರುಚಿ ಬಗ್ಗೆ ಅದು ಹ್ಯಾಂಗರ ಇರಲಿ ಹೊಗಳಬೇಕು. ಹೊಗಳತಾನೆ ಇರಬೇಕು ಅಂದಾಗಲೇ ತಾಟಿನಲ್ಲಿ ನಾಲ್ಕು ಕಡಬೋ, ಮಾಡಿದ ಸಿಹಿಯೋ, ಮಿರ್ಚಿ ಭಜಿಯೋ ಹೆಚ್ಚಿಗೆ ಬೀಳೋದು. ಹಾಂಗ ಕಲ್ಲುಕೂತಂಗ ಕೂತೂ ತಿಂದು ಬಂದ್ರಿ ಅಂದ್ರ ಇನ್ನೊಮ್ಮೆ ಆ ಮನೆಗೆ ಭೇಟಿಕೊಟ್ರೆ ನೀರ ಸಹಿತ ಕುಡ್ಯಾಕ ಸಿಗಲ್ಲ ನೆನಪಿರಲಿ.

ಹೆಣ್ಣು ನೋಡೋಕೆ ಹೋದಾಗ ಬಂದವರಿಗೆ ನಾಷ್ಟ, ಊಟ ಅಥವಾ ಚಹಾವನ್ನು ಅವಳ ಕೈಯಿಂದಲೇ ಮಾಡಿಸಿ ಅವರಿಗೆ ಅಂದರೆ ಬಂದವರಿಗೆ ಕೊಡಿಸೋ ಸಂಪ್ರದಾಯ ಹಿಂದಕ ಇತ್ತು. ಇದರ ಹಿಂದಿನ ಘನ ಉದ್ದೇಶ ಮಗಳು ಮಾಡಿರುವ ತಿಂಡಿ ರುಚಿಯಿಂದಾದರೂ ಮನಸೋಲಲಿ ಎಂದು. ಈಗಿನ ಕನ್ಯಾಪಿತೃಗಳೇನು ಕಮ್ಮಿನ ? ''ಹೋಟಲಿನಿಂದ ತಿಂಡಿ ತರಸೋದು. ಮಗಳು ಮಾಡ್ಯಾಳ ಅಂತ ಸುಳ್ಳು ಹೇಳೋದು'' ಮುಂದ ಮಾಡಿಕೊಂಡವ ಹೊಟ್ಟೆ ಮೇಲೆ ತಣ್ಣನೆ ಬಟ್ಟೆ ಹಾಕಿಕೊಂಡು ನೆನಸಿ ನೆನಸಿಕೊಂಡು ಅಳಬೇಕು ! ಅಲ್ಲವೆ ?... ಬದುಕಿನ್ಯಾಗ ಏನದರಿ, ಎಲ್ಲ ಸುಖಕ್ಕಿಂತ ಸಂಪಾಗಿ ಊಟದ ಸುಖನ ಅನುಭವಿಸೋದು ಇದೆಯಲ್ಲ, ಅದನ್ನ ಪಡುಕೊಂಡು ಬಂದಿರಬೇಕು. ಅಡುಗೆ ಬಲ್ಲ ಹೆಂಡ್ರು ಇದ್ದರೆ, ಯಾರ ಅಪೇಕ್ಷ ಪಡತಾರ್‍ರಿ ಬಾಯಿ ಚಪಲಕ್ಕಿರೋ ಫೈವ್‌ಸ್ಟಾರ್, ಡಿಲಕ್ಸ್ ಹೋಟಲಗಳನ್ನ ! ನಮ್ಮ ಸರ್ವಜ್ಞ ಕವಿಗೆ ಹೆಂಡತಿ ಅಡುಗೆ ರುಚಿ ಗೊತ್ತಿರಲಿಲ್ವೇನೋ ? ''...ಅಯ್ಯೋ ಹೇಗೆ ಗೊತ್ತಾಗಬೇಕುರೀ ಬ್ರಹ್ಮಚಾರಿಗೆ ಅಂದ್ರ ?'' ಗೊತ್ತಿದಿದ್ದರೆ 'ಇಚ್ಚೆಯನರಿತು ನಡಿವ ಸತಿ ಇರಲು' ಅನ್ನೋ ಬದಲು 'ಇಚ್ಚೆಯನರಿತು ಅಡುಗೆ ಮಾಡಿ ಬಡಿಸಬಲ್ಲ ಸತಿ ಇರಲು ಸ್ವರ್ಗಕ್ಕೆ ಕಿಚ್ಚು ಹಚ್ಚೆ'ನ್ನುತ್ತಿದ್ದನೇನೋ ?

ಅಡುಗೆ ಚೆನ್ನಾಗಿ ಬಲ್ಲವಳ ಮುಖಲಕ್ಷಣನ ಬೇರೆ. ಸಾಕ್ಷಾತ್ ಅನ್ನಪೂರ್ಣೇಶ್ವರಿಯ ಕಳೆ ಇರುತ್ತೆ. ಅಡುಗೆ ಮಾಡುವಲ್ಲಿ ಬಡಿಸುವಲ್ಲಿ ಎಂತಹ ಲವಲವಿಕೆ ಅವಳಲ್ಲಿರುತ್ತೆ ! ಮುಖದಲ್ಲಿ ಎಂತ ಮಂದಹಾಸ ಇರುತ್ತೆ ! ಎಷ್ಟು ಸಮಾಧಾನ ತಾಳ್ಮೆ ಅವಳಲ್ಲಿ ! ಹೆಣ್ಣಿಗೆ ಅದು ಮುಖ್ಯ ತಾನೆ ? 'ಅಡಿಗೆ ಹೇಗಾದರೂ ಇರಲಿ, ರುಚಿ ಎಂತಾದರೂ ಇರಲಿ, ಬಡಿಸುವಾಗ ಪ್ರೀತಿ ಇರಲಿ' ಅಂತ ನಮ್ಮ ಹಿರಿಯರು ಏನು ತ್ವಾಡೆ ಹೇಳ್ಯಾರ. 'If there is no love in the kitchen, there is no taste on the table' ಅಂತ ಆಂಗ್ಲ ಗಾದೆ ಕೇಳಿಲ್ಲೆ ? ಇಂಥವರ ಮನೆಗೆ

ಬಂದುಹೋಗುರ ಬಾಳ. ಹಾಗೆ ಸತ್ಕಾರ ಪಡೆದುಕೊಂಡು ಹೋದವರು ಉಂಡ ಅನ್ನದ ಋಣವನ್ನು ಸ್ಮರಿಸದೇ ಇರುತ್ತಾರೆಯೇ? ನಾನು ಬಳ್ಳಾರಿಯ ಉಚಿತ ವಿದ್ಯಾರ್ಥಿನಿಲಯ ದಲ್ಲಿರುವಾಗ ಶಾಂತಮ್ಮ ಅನ್ನೋ ಮುದಿ ಜೀವ ಇರೋ ಮೂವತ್ತು ಜನಕ್ಕೂ ಮೂರು ಹೊತ್ತು ಸ್ವಲ್ಪನೂ ಬೇಸರಿಸಿಕೊಳ್ಳದೆ ಅಡುಗೆ ಮಾಡಿ ಮೇಲೆ ಕೈಯಾರ ಬಡಿಸುತ್ತಿತ್ತು. ಅಷ್ಟೆಲ್ಲಾ ಗಲಾಟೆ ನಾವು ತಿಳಿಯದೆ ಮಾಡುತ್ತಿದ್ದರೂ ಆ ಮಹಾತಾಯಿ ಒಮ್ಮೆಯೂ ಕೋಪಿಸಿಕೊಂಡದ್ದು ನೋಡಲಿಲ್ಲ. ನಿಜಕ್ಕೂ ಇಂಥ ಸಹನೆ, ತಾಳ್ಮೆನ ಮಾತೃಹೃದಯವನ್ನು ಹೆತ್ತ ತಾಯಲ್ಲೂ ನೋಡಿಲ್ಲ. ನನ್ನ ಸಹೋದರಿಯೋರ್ವಳು ಇದ್ದಾಳೆ. ಅವರ ಕೈಯ ಅಡುಗೆಯ ಉಂಡು ಹೊಗಳದವರೆ ಪಾಪಿಗಳು. ಯಾರೆ ಬಂಧುಬಳಗವಾಗಲಿ ಆಕಸ್ಮಾತ್, ನಮ್ಮಕ್ಕನ ಊರಿನ ಮಾರ್ಗದಲ್ಲಿ ಹೋಗುತ್ತಿದ್ದರೆ ಮುದ್ದಾಂ ಅಕ್ಕನ ಮನೆಯಲ್ಲಿ ವಾಸ್ತವ್ಯ ಮಾಡೇ ಹೋಗೋರು. ಅಂಥ ಕೈಗುಣ. ಸತ್ಕಾರದ ಗುಣ ಅವಳದು. ಇನ್ನು ಅಡಿಗೆ ಬಾರದೆ ಇರುವ ಹೆಂಗಸರ ಲಕ್ಷಣನ ಬ್ಯಾರೆ. ಕುಣಿಯೋಕೆ ಬರದವಳು ನೆಲ ಡೊಂಕು ಅಂದ್ಹಂತಲ್ಲ. ಆ ಕೆಟಗೇರಿಗೆ ಸೇರಿದ ಮಂದಿ. ಬಿದ್ರು ಮೀಸೆ ಮಣ್ಣಾಗಿಲ್ಲ ಅಂಬಂಗೆ ನಾದಿ ಹಾಕೋ ಮಂದಿ. ಕೋಪ ಮೂಗಿನ ತುದಿ ಮ್ಯಾಲೆ ಸದಾ ನಲಿದಾಡುತ್ತಿರುತ್ತೆ. ಅಡಿಗೆ ಮನ್ಯಾಗ 'ಧಕ್ಕ ಧಕ್ಕ' ಅಂತ ಪಾತ್ರೆಗಳು ಇಂಥವರ ಕೈಯಾಗ ಒದ್ದಾಡಿ ಸಾಯ್ತಿರತಾವ. ಅತಿಥಿ ಸತ್ಕಾರವೆಂತೂ... ಗಂಡ ಮಕ್ಕಳಿಗೆ ಮಾಡಾಕ ಗೋಳಾಡೋರು ಬಂದವರಿಗೆ ಮಾಡತಾರ!

ಒಮ್ಮೊಮ್ಮೆ ಅವಳು ಅದೆ ಮನೆಯ ಹೆಂಗಸು ಮಾಡುವ ಅಡಿಗೆ ಅವರ ಭಾವನೆಗಳ ಅಭಿವ್ಯಕ್ತಿ ಮಾಧ್ಯಮವಾಗಿ ಕೆಲ ಸಂದರ್ಭದಾಗ ಬಳಕೆಯಾಗುತ್ತದೆ. ಬಹುಶಃ ತಮಗೆಲ್ಲ ಅನುಭವಕ್ಕೆ ಬಂದಿರಲೇಬೇಕು ಅನಕೊಂಡೀನಿ. ಮನೆಯಾಕೆ ಕೋಪಿಸಿಕೊಂಡಾಗ, ಖುಷಿ ಗೊಂಡಾಗ ಅಥವಾ ಅಸಮಾಧಾನಗೊಂಡಾಗ ಅಡಿಗೆ ರುಚಿಯಲ್ಲಿ ಖಂಡಿತ ಬದಲಾವಣೆ ಯಾಗಿರುತ್ತೆ. ಹೌದಲ್ರೀ? ಮನೆಯವಳೊಂದಿಗೆ ಜಗಳಾಡಿದಾಗ ನೋಡಿ, ಮಾಡಿದ ಅಡುಗೆಗೂ ಕೋಪಬಂದಿರೋ ಹಾಗೆ ಕಾಣುತ್ತಿರುತ್ತೆ ಅಲ್ವೇ. ಅತಿ ಉಪ್ಪೋ, ಖಾರಾನೋ ಸಿಹಿಯಾಗಿಯೋ ಆಗಿ ಹಿಂದಿನ ಹೆಣ್ಮಕ್ಕಳು ಗಂಡನಿಗೆ ಮುಖಕೊಟ್ಟು ಮಾತಾಡುವ ಧೈರ್ಯವಿರುತ್ತಿರಲಿಲ್ಲ. ಈಗ ಕಾಲ ಚೇಂಜ್ ಆಗ್ಯಾದ ಬಿಡಿ. ಕೆಲವು ಹೆಣಮಕ್ಕಳು ಗಂಡಂದ್ರಿಗ ಮುಖ ಬಿಟ್ಟು ಮಾತಾಡಸ್ತಾರ. ತಿಳಿದ ಗಂಡನಾಗಿದ್ದರೆ ಅಡುಗೆಯಲ್ಲಿ ಬದಲಾದ ರುಚಿಯಿಂದಲೇ ಅರ್ಥ ಮಾಡಿಕೊಂಡು ಅವಳ ಬೇಡಿಕೆಗೆ ಸ್ಪಂದಿಸುತ್ತಿದ್ದ. ಕೋಪಿಷ್ಠನಾಗಿ ದ್ದರಂತೂ ''ಲೇ ಮುಂಡೆ, ಎಂಥಾ ಕೂಳು ಮಾಡಿದೆ. ನನ್ನ ಕೊಲ್ಲಬೇಕು ಅನಕೊಂಡಿ ಏನು?'' ಅಂತ ಮುಖಕ್ಕೆ ತಾಟನ್ನೇ ಒಗೆಯುವ ಪ್ರಸಂಗಗಳ ಹಿಂದೆ ಇಲ್ಲದಿದ್ದಿಲ್ಲ.

ಮೊದಲೇ ಹೇಳಿದಂತ ಅಡಿಗೆ ಬಲ್ಲ ಮನೆಯೊಡತಿ ಇದ್ರೆ ಅಡುಗೆ ವಿಷಯದಲ್ಲಿ ಸ್ವಾರಸ್ಯಕರ ಜಗಳಾಟ, ಸಂಭಾಷಣೆ ಕಡಿಮೆ. ಆದರೆ ಮನೆಯಾಕೆಗೆ ಅಡಿಗೆ ಬರದಿದ್ದರೆ...? ಅಂತಹ ಮನೆಯಲ್ಲಿ ನೋಡಬೇಕು ರಾಮಾಯಣ, ಮಹಾಭಾರತ ಅಥವಾ ಯಾವುದೇ ಸಿನೆಮಾ ನಾಟಕಗಳನ್ನು ನೋಡೋದೇ ಬೇಕಾಗಿಲ್ಲ. ಇವರ ಜಗಳವೇ ಸಾಕು ಫ್ರೀಯಾಗಿ ಸಮಯವನ್ನು ಎಂಜಾಯ್ ಮಾಡೋಕೆ. ಮಾವನ ಗಂಟನ್ನು ಸುಲಿಗೆ ಮಾಡಿದ್ರಂತೂ ಕಟ್ಟಿ ಕೊಂಡವಳು ಹ್ಯಾಂಗ ಮಾಡಿದ್ರೂ ಅದನ್ನು ಅಮೃತವೆಂದೇ ಸ್ವೀಕರಿಸಬೇಕು. ತಕರಾರು ಎತ್ತಿದರೆ, 'ಕೆಸರಿಗೆ ಕಲ್ಲು ಒಗದು ಮುಖಕ್ಕೆ ಸಿಡಿಸಿಕೊಂಡಂಗ' ಅವಳು ಯೋಗ್ಯತೆ ಬಗ್ಗೆ ಸೀದ ಬುಡಕ್ಕೆ ಕೈ ಹಾಕುವುದು ಖಂಡಿತ. ಹೋಟೆಲ್‌ಗಳ ಉಗಮಕ್ಕೆ ಇತ್ತೀಚಿಗೆ ಎಲ್ಲೆ ಮೀರಿ ಬೆಳೆಯುತ್ತಿರುವುದಕ್ಕೆ ಇಂತ ನತದೃಷ್ಟರಿಗಾಗಿಯೇ ಎಂಬುದು ನನ್ನ ಅಭಿಮತ.

ಕೆಲವು ಹೆಣ್ಣುಮಕ್ಕಳಿಗೆ ಅಡುಗೆ ಮಾಡಲು ಬರುತ್ತಿರದಿದ್ದರೂ ಪ್ರಯತ್ನವಾದಿ ಗಳಾಗಿರತಾರೆ. ಇಂಥವರ ಮನೇಲಿ ನಡಿಯೋ ಸಂಭಾಷಣೆನೇ ಬೇರೆ. ''ರೀ ಇವತ್ತು ಹೊಸ ರುಚಿ ಮಾಡಿನ್ರೀ'' ಎನ್ನೋಳು ಗಂಡ ಬಾಗಿಲಲ್ಲಿ ಎಂಟ್ರಿ ಕೊಟ್ಟ ಕೂಡಲೇ. ''ಯಾಕೆ ಮಾಡಿದಿ ಕಣೆ ಹೊರಗ ಬೇಕಿದ್ದರೆ ಕೇಳಿದ್ದು ತಂದು ಕೊಡುತ್ತಿದ್ದೆನಲ್ಲ. ಶ್ರಾವಣದಾಗ ನೀನು ಮಾಡಿದ ಹೊಸರುಚಿಯ ಉಂಡಿ ತಿಂದು ನಾಲ್ಕು ಹಲ್ಲು ಕಳಕೊಂಡಾಗಿದೆ. ನಿತ್ಯದಂತೆ ಅಡಿಗೆ ಮಾಡಬಾರದೇನೆ?'' ಅನ್ನದಾ ಗಂಡ ಎಂಬ ಪ್ರಾಣಿ. ''ಹೋಗ್ರೀ, ನೀವು ಯಾವಾಗಲೂ ನನ್ನ ಬಗ್ಗೆ ಕಾಮೆಂಟ್ ಮಾಡೋದೆ ಆಯ್ತು. ಅವತ್ತಿನಂತೆ ಅಲ್ಲರಿ, ಇವತ್ತು ಮಾಡಿರೋದು ಸಾಫ್ಟ್ ಫುಡ್.'' ''ಯಾವ ಸಾಫ್ಟ್ ಫುಡ್ ನಿಂದು. ಯುಗಾದಿ ಸಮಯದಾಗ ಹಿಂಗ ಸಾಫ್ಟ್ ಫುಡ್ ಅಂತ ಹೋಳಿಗೆ ತಿನ್ನಿಸಿ ಹೊಟ್ಟೆ ಹಿಡಕೊಂಡು ಒಂದು ವಾರ ಮಲಗೋ ಹಾಗೆ ಮಾಡಲಿಲ್ವೇ?'' ಎಂದರೆ, ''ಇದು ಆ ತರಹದಲ್ಲರಿ ಗಾಜರಕಾ ಹಲ್ವಾ ತಿನ್ನಿರಿ'' ಅಂತ ಒತ್ತಾಯಿಸೋಕೆ ಬರೋಳು. ''ಲೇ ಮೊದಲು ತಿಂದು ನೋಡಿದೇನೆ?'' ಅಂತ ಗಂಡ ಕೇಳಬೇಕು ''ಪತಿಯೇ ಪ್ರತ್ಯಕ್ಷ ದೈವ. ಅಲ್ವೇನ್ರೀ? ನಿಮ್ಮನ್ನ ಬಿಟ್ಟು ಮೊದಲು ನಾನು ಹ್ಯಾಂಗ ತಿನ್ನೋಕಾಗುತ್ತ?'' ಎಂದು ಸ್ಟೈಲ್ ಕೊಡೋಳು. ''ಸ್ವಲ್ಪ ಟೇಸ್ಟ್ ಆದರೂ ನೋಡಬೇಕಾಗಿತ್ತೆ'' ಎಂದು ಕೊಂಕು ನುಡಿದರೆ, ''ರೀ ನೀವು ಯಾವಾಗಲೂ ಹಿಂಗರಿ, ಹೆಸರಿಡೋದೊಂದು ನಿಮ್ಮ ಕೆಲಸ. ಪ್ರೋತ್ಸಾಹನ ನೀಡಲ್ಲ. ನನ್ನ ಮ್ಯಾಲಿ ಪ್ರೀತಿ ಇದ್ದರೆ ತಾನೆ ನೀವು ತಿನ್ನೋದು'' ಅಂತ ಕೋಪಿಸಿಕೊಂಡು ಬಿಡೋಳು. ಹೆಂಡ್ರು ಸಿಟ್ಟಿದ್ರ ಎಲ್ಲಿ ರಾತ್ರೆಲ್ಲ ಏಕಾಂಕಿಯಾಗಿ ಒದ್ದಾಡೋ ಸಮಯ ಬರುತ್ತೆ ಅನ್ನೋ ಸಂಕಟದಾಗ ತಿನ್ನಲೇ ಬೇಕಾದ ಅನಿವಾರ್ಯತೆ ಆ ಗಂಡನಿಗೆ ಬರೋದು. ಹೇಗೋ ತಿಂದಮ್ಯಾಲೆ ಒದ್ದಾಡ ಬೇಕಲ್ಲ? ''ನೋಡೇ, ನಿನ್ನ ಹೊಸರುಚಿ ತಿಂದು ಹೊಟ್ಟೆ ಅಜೀರ್ಣ ಆಗಿದೆ ಕಣೆ'' ಅಂದ್ರೆ, ''ಕಂಡಕಂಡಂಗ ಹೋಟೆಲ್ಲಾಗ ತಿಂದ ಬರತಿರಿ ಹೊಟ್ಟೆ ಕೆಡದ ಏನ ಮಾಡತದರಿ. ಮತ್ತೆ ನನ್ನ ಅಡಿಗೆ ಮ್ಯಾಲೆ ಹರಿಹಾಯ್ತಿರಿ. ಚೆನ್ನಾಗಿದೇರಿ ನಾಟಕ'' ಎಂದು ತನ್ನದೇನು ತಪ್ಪಿಲ್ಲ ಅನ್ನೋ ತರಹ ಜಾರಿಕೊಳ್ಳೋಳು. ಪಾಪ! ಆ ಗಂಡ ಅನ್ನೋ ಪ್ರಾಣಿ ಏನು ತಾನೆ ತಿರುಗಿ ಮಾತಾಡಕಾಗುತ್ತೆ ಹೇಳಿ.

ಇನ್ನೂ ಕೆಲ ಮನೆಯೊಡತಿಯರು ಹ್ಯಾಂಗಿರುತಾರೆ ಅಂದ್ರೆ ತಾವು ಮಾಡೋ ಅಡಿಗೆ ಬಗ್ಗೆ ಸ್ಪಷ್ಟ ಸಮರ್ಥನೆ ಮಾಡಿಕೊಳ್ಳುವವರು ಇರತಾರೆ. ನಮ್ಮ ಪಕ್ಕದ ಮನೆಯವರದು ಅಂತಹುದೇ ಕೇಸು. ಆ ಮನೆಯಲ್ಲಿ ನಡೆಯುವ ನಿತ್ಯ ಸಂಭಾಷಣೆ ನಮ್ಮ ಮನಿಗೆ ಚೆನ್ನಾಗಿಯೇ ಕೇಳುತ್ತಿತ್ತು. ಒಂದು ಸಾರಿ ರಾಯರು ತಮ್ಮ ಹೆಂಡತಿಗೆ ಹೇಳತಾ ಇರೋದು ಕೇಳಿತು. ''ಲೇ, ಆ ದೇಸಾಯಿಯೋರ ಹೆಂಡ್ತಿನ ನೋಡಿಯಾದ್ರೂ, ಸಲಹೆ ಕೇಳಿಯಾದರೂ ನಿನ್ನ ಅಡಿಗೆ ರುಚಿನ ಸುಧಾರಿಸಿಕೊಳ್ಳಬಾರದೇನೇ? ಎಂತಹ ಪುಣ್ಯ ಮಾಡ್ಯರ ದೇಸಾಯೋರು. ನಿತ್ಯ ಅಂತಹ ಮೃಷ್ಟಾನ್ನ ಭೋಜನ ಉಣ್ಣಲಿಕ್ಕೆ.'' ''ಏನು? ದೇಸಾಯೋರದು ಪುಣ್ಯವೇ! ನಿಮ್ಮ ಪುಣ್ಯ ಅನಕೊಳ್ರಿ ನನ್ನ ಕೈಯಾಗಿನ ಅಡುಗೆ ತಿನ್ನೋದಕ್ಕೆ'' ಮಾಮಿಯವರು ಪ್ರತ್ಯುತ್ತರಿಸಿದರು. ''ಏನಂದಿ? ನಿನ್ನ ಕೈಯಾಂದು ಅಡುಗಿ ತಿನ್ನೋದು ಪುಣ್ಯವೇ? ಪ್ರಾರಬ್ಧಕರ್ಮ ಕಣೇ. ನಿನ್ನ ಕಟ್ಟಿಕೊಂಡದಕ'' ರಾಯರಿಂದ ವ್ಯಂಗ್ಯದ ಧ್ವನಿ ಬಂತು. ''ಪುಣ್ಯ ಅಲ್ಲದ ಇನ್ನೇನುರಿ. ಅಲ್ರೀ? ಆ ದೇಸಾಯಿಯವರನ್ನ ಅವರ ಹೆಂಡ್ರನ್ನ ನೋಡೀರೇನು? ಸಣ್ಣ ವಯಸ್ಸಿನ್ಯಾಗ ಹ್ಯಾಂಗ ಆಗ್ಯಾರ. ರುಚಿ ರುಚಿ ಯಾದದ್ದನ್ನು ತಿಂದು ಆನಿ ಹಾಂಗ ಉಬ್ಯಾರ. ಬಿಪಿ, ಶುಗರ್... ಒಂದೇ ಎರಡೇ ಎಲ್ಲವೂ ಅವರ ಮೈಯಾಗ ಸೇರಿಕೊಂಡಾವ. ಆದರ ನಮಗ ಅಂತಹ ಸ್ಥಿತಿ ಬಂದದೇನು? ಎಂದು ಮಾಮಿಯವರಿಂದ ಬಿರುಸಿನ ಉತ್ತರ ಬಂತು. ರಾಯರು ಮತ್ತೆ ಮಾತು ಮುಂದು ವರಿಸಿ ''ಅಲ್ಲ ನೀನು ಹೇಳೋದನ ಸರಿ ಅದ ಆದರೆ ಸ್ವಲ್ಪಾದರೂ ಸ್ವಾದ ಬೇಡವೇನೇ?'' ಅಂತ ಮರುಪ್ರಶ್ನೆ ಹಾಕಿದರು. 'ರೀ ಬದುಕೋದಕ್ಕಾಗಿಯೇ ತಿನ್ನಬೇಕೇ ಹೊರತು ತಿನ್ನುವುದ ಕ್ಕಾಗಿಯೇ ಬದುಕಬಾರದುರಿ' ಎಂದು ಒಂದೇ ಮಾತಿನ್ಯಾಗ ರಾಯರ ಬಾಯಿ ಮುಚ್ಚಿಸಿದ್ದನ್ನು ಕೇಳತಾ ಹೌದಲ್ಲ, ಅವರು ಹೇಳೋದ್ರಲ್ಲಿ ಎಂತಹ ಸತ್ಯದ ಅನಿಸುತ್ತಿತ್ತು. 'ಬಯ್ಯುವ ಹೆಂಡತಿ ಬುದ್ಧಿವಾದ ಹೇಳತಾಳೆ ಜಾಣೆ ಇರತಾಳೆ' ಅನ್ನೋ ಮಾತಿನಲ್ಲಿ ನಂಬಿಕೆ ಇಟ್ಟಂತಹ... ನಮ್ಮ ರಾಯರಂತಹವರು ಅವಳು ಹೇಳಿದ್ದಕ್ಕೆಲ್ಲಾ ತಲೆತೂಗೋರು. ನನ್ನಂತಹ ತಿಂಡಿಪೋತನಿಗೆ ಮಾಮಿಯವರ ಮಾತು ಸತ್ಯ ಅನಿಸಿದರೂ ಪಥ್ಯ ಅನಿಸಲಿಲ್ಲ.

ನೀವು ಏನೇ ಅನ್ನಿ ಬ್ರಾಹ್ಮಣರ ಹೆಣ್ಮಕ್ಕಳು ಅಡಿಗೆ ಮಾಡೋದ್ರಲ್ಲಿ ಭಾಗಶಃ ಇತರ ಹೆಣ್ಮಕ್ಕಳಿಗಿಂತ ಒಂದು ಹೆಜ್ಜೆ ಮುಂದು. ಅದರಲ್ಲಿ ಎತ್ತಿದ ಕೈ. ನೀವು ಒಪ್ತಿರಿಲ್ವೋ? ಅವರಲ್ಲಿ ಅಷ್ಟು ಪಕ್ವತೆ ಬರಬೇಕಾದ್ರೆ ಕಾರಣ ಇಲ್ಲದೆ ಇರುತ್ತೇನ್ರಿ?... ಸರಿ.ಇತರ ಮಂದಿ ಮನ್ಯಾಗ ನೋಡಿ ಗಂಡ ಅಂಬೋ ಪ್ರಾಣಿ ಅಪ್ಪಿ ತಪ್ಪಿಯಾದರೂ ಅಡುಗೆ ಮನೆಯಡೆ ಕಣ್ಣು ಹಾಕತಾದೇನ್ರೀ?... ಹೌದು ಅಲ್ಲ ಎಂಬುದರ ಬಗ್ಗೆ ವಿಚಾರ ಮಾಡತೇನ್ರಿ?... ಒಬ್ಬ ಸಾಹಿತಿಯ ಸಾಹಿತ್ಯಕ್ಕೆ ಸತ್ವ ಬರಬೇಕಾದರೆ ವಿಮರ್ಶಕರು ಬೇಕು ತಾನೆ? ಬ್ರಾಹ್ಮಣ ಮನೆಗಳಲ್ಲಿ ಗಂಡಂದಿರು ಒಳ್ಳೆ ವಿಮರ್ಶಕರು. ಈ ಮನೆ ಗಂಡಸರು ಅಡುಗೆಮನಿ ವಾಸಿಗಳು. ಹೆಂಡ್ರು ಏನೇ ಮಾಡುತಿರಲಿ ಮುಂದೆ ಹಾಜರ್. ಅಂದು ಹಾಂಗಾಯಿತು, ಇದಕ ಇಷ್ಟು ಹಾಕು ಅಂತ ರಿಪಿರಿಪಿ ಮಾಡೋರು. ಅರ್ಥವಾಯಿತಲ್ಲ ಅವರ ಯಶಸ್ಸಿನ ಗುಟ್ಟು. ಈ ಮನೆಯ ಗೃಹಸ್ಥರಿಗೆ ಅಡುಗೆ ಬರೋಲ್ಲ ಅಂದ್ರ ಅವಮಾನಕರದ ಸಂಗತಿ. ಅಂಥವರಿಗೆ ಮೂರು ದಿನ ಹೊರಗಿದ್ದಾಗ ಅವಳಿಂದ ವ್ಯಂಗ್ಯ ತಪ್ಪಿದ್ದಲ್ಲ. ತಿಂಗಳದಾಗಿನ ಮೂರು ದಿನದ ವಿಷಯದಾಗ ಬ್ರಾಹ್ಮಣರ ಹೆಂಗಸರು ದೇವರಿಂದ ಸ್ಪೇಷಲ್ಲಾಗಿ ವರವ ಬೇಡಿರಬೇಕು ಅಲ್ವಾ? ಯಾವ ಹೆಣ್ಣುಮಕ್ಕಳಿಗಿದೆ ಹೇಳಿ ಹಾಯಾಗಿ ಕುಳಿತು ಗಂಡಂದಿರ ಕಡಿಂದ ಅಡುಗೆ ಮಾಡಿಸಿಕೊಂಡು ತಿನ್ನುವ ಭಾಗ್ಯ, ನಿಜವಲ್ಲವೇನ್ರೀ?

---

ಗುಂಡುರಾವ್ ದೇಸಾಯಿ ಮಸ್ಕಿ
ತೇರಿನ ಹತ್ತಿರ, ಮಸ್ಕಿ, ಲಿಂಗಸೂಗೂರು ತಾಲ್ಲೂಕು, ರಾಯಚೂರು ಜಿಲ್ಲೆ - ೫೮೪ ೧೨೪



# ಮಾರಕ ಆಯುಧ ಸ್ಪರ್ಧೆ

ಅಮೆರಿಕಾ ತನಗಿರುವ ಮಿಲಿಟರಿ ಬಲವನ್ನು ಪ್ರದರ್ಶಿಸಿ ಪ್ರಪಂಚಕ್ಕೆಲ್ಲಾ ತಾನೇ ದೊಡ್ಡಣ್ಣ ಎನಿಸಿಕೊಳ್ಳುವ ಪ್ರಯತ್ನದಲ್ಲಿದೆ. ಆಫ್ಘಾನಿಸ್ತಾನದಲ್ಲಿ ತಾಲೀಬಾನರನ್ನು ಬಲಿಹಾಕಿಯಾಯಿತು. ಇರಾಕ್‌ನಲ್ಲಿ ಸದ್ದಾಂ ಹುಸೇನನ್ನು ಸದೆ ಬಡಿದದ್ದಾಯಿತು. ಆದರೆ ಸೆಪ್ಟೆಂಬರ್ ೧೧ರ ಆಘಾತ, ಅಮೆರಿಕವನ್ನು ನಿದ್ದೆ ಮಾಡಲು ಬಿಡುತ್ತಿಲ್ಲ. ಯುದ್ಧಗಳು ಜನಿಸುವುದೇ ಮನುಷ್ಯನ ಮನಸ್ಸಿನಲ್ಲಿ ಎಂಬ ಮಾತೊಂದಿದೆ. ರಾಜಕೀಯ ನಡೆಸುವವರ ಕೈಗೆ ಎಲ್ಲ ಅಧಿಕಾರ ಕೊಟ್ಟು ಜನ ಕೈಕಟ್ಟಿ ಕೂತರೆ ಇಂಥ ಪ್ರಮಾದಗಳು ನಡೆಯುತ್ತಲೇ ಹೋಗುತ್ತವೆ. ಇದರ ಅರಿವು ಅಮೆರಿಕನ್ ಜನಕ್ಕೆ ಇನ್ನೂ ಆಗಿಲ್ಲ. ಅಮೆರಿಕನ್ ಜನತೆ ಹಾಗೂ ಸ್ವಲ್ಪಮಟ್ಟಿಗೆ ಅಭಿವೃದ್ಧಿ ಹೊಂದಿರುವ ಇತರ ರಾಷ್ಟ್ರಗಳ ಜನರು ಭ್ರಮಾಧೀನರಾಗಿದ್ದಾರೆ. ನೂತನ ಆರ್ಥಿಕ ನೀತಿಯ ಫಲವಾಗಿ, ತಮ್ಮ ಆರ್ಥಿಕಾಭಿವೃದ್ಧಿ ಅಬಾಧಿತವಾಗಿ ಬೆಳೆಯುತ್ತಲೇ ಹೋಗುತ್ತದೆ; ಅದರಿಂದಾಗಿ ತಮ್ಮ ಅಭ್ಯುದಯ ಚಿರಂತನವಾಗಿ ಆಗುತ್ತಲೇ ಹೋಗುತ್ತದೆ ಎಂಬುದೇ ಆ ಭ್ರಮೆ. ಆ ರಾಷ್ಟ್ರಗಳ ನಾಯಕರಿಗೆ ರಾಜಕೀಯ ಪುಢಾರಿಗಳಿಗೆ ಸಾಂಘಿಕ ಬಂಡವಾಳಗಾರರಿಗೆ, ಬಂಡವಾಳ ಹೂಡಿಕೆದಾರರಿಗೆ ಈ ಬಗೆಯ ಅಭ್ಯುದಯ ಲಭ್ಯವಾಗುವುದು ಕೇವಲ ಹಿಡಿ ಮಂದಿಗೆ ಮಾತ್ರ ಎಂಬ ಪರಿಜ್ಞಾನವಿಲ್ಲ. ಈ ಅಜ್ಞಾನದ ಫಲವಾಗಿ ಈಗ ವಿಶ್ವದ ಎಲ್ಲೆಡೆಯೂ ಬಡವ -ಬಲ್ಲಿದರ ನಡುವಣ ಕಂದರ ವಿಸ್ತಾರಗೊಳ್ಳುತ್ತಿದೆ. ಈ ಕಂದರವೇ ಭಯೋತ್ಪಾದನೆ ಮೊದಲುಗೊಂಡು ಎಲ್ಲ ಅನಿಷ್ಟಗಳಿಗೂ ಕಾರಣವಾಗಿದೆ. ಈ ಪರಿಸ್ಥಿತಿಯಲ್ಲಿ ಸಂಪತ್ತನ್ನೂ ಗಳಿಸಿಟ್ಟುಕೊಂಡಿರುವವರು ಸತತವಾಗಿ ಬಡವರ ಪ್ರಕೋಪಕ್ಕೆ ಹೆದರಿ ಸಾಯಬೇಕಾದ್ದು ಅನಿವಾರ್ಯವೆನಿಸಿದೆ. ಬಡವರಲ್ಲಿ ಕೆಲವರಾದರೂ ಹೇಗಾದರೂ ಮಾಡಿ, ಈ ಶ್ರೀಮಂತರ ಶ್ರೀಮಂತಿಕೆಯನ್ನು ತಮ್ಮದು ಮಾಡಿಕೊಳ್ಳಬೇಕೆಂದು ಹೊಂಚುಹಾಕುತ್ತಿದ್ದಾರೆ. ಉಳಿದ ಬಹಳಷ್ಟು ಬಡವರು ಅಹನ್ಯಹನಿ ಜೀವನ ಸಾಗಿಸುತ್ತಾ, ಖಾಲಿ ಹೊಟ್ಟೆಯಲ್ಲಿ ದಿನ ನೂಕುವವರಾಗಿದ್ದಾರೆ.

ನಾಳಿನ ಊಟಕ್ಕೆ ಏನು ಗತಿ ಎಂದು ಪರಿತಪಿಸುತ್ತಾ ಬಾಳ್ವೆ ನಡೆಸುವುದು ಒಂದು ಪೀಡೆಯೇ ಸರಿ. ಪಟ್ಟಭದ್ರರು ಈ ಕಡು ಬಡವರಲ್ಲಿ ಧರ್ಮ, ಜಾತಿ, ಸಂಪ್ರದಾಯದ ಹೆಸರಿನಲ್ಲಿ ಮಾನಸಿಕ ಒತ್ತಡ ತಂದು ಅವರ ವಿಚಾರ ಪಲ್ಲಟ ಮಾಡುವುದು ಬಹು ಸುಲಭ. ಹೀಗೆ ಪರಿವರ್ತಿಸಲ್ಪಟ್ಟವರು ಆ ಪಟ್ಟಭದ್ರರಿಗಿಂತ ಹೆಚ್ಚು ದುರಭಿಮಾನಿಗಳಾಗುತ್ತಾರೆ. ಎಲ್ಲ ದೇಶಗಳಲ್ಲೂ ಇಂತಹ ದಾರಿ ತಪ್ಪಿದ, ಗೊಣಗು ಸ್ವಭಾವದ ಯುವಕರು ಕಾಣುವುದು ಬಡವ ಬಲ್ಲಿದ ಎರಡೇ ಬಣಗಳನ್ನು. ಇತರೇ ಬಣಗಳೂ ಉಂಟು ಎಂದು ಅವರು ಭಾವಿಸುವುದೇ ಇಲ್ಲ. ಪ್ರತಿಯೊಂದು ಸಮಸ್ಯೆಗೂ ಮತ್ತೊಂದು ಆಯಾಮ ಉಂಟು ಎಂದು ಭಾವಿಸುವವರ ಮನದಲ್ಲಿ ಹಿಂಸೆ ಮನೆ ಮಾಡುವುದೇ ಇಲ್ಲ. ದಾರಿತಪ್ಪಿದವರು, ಗೊಣಗುಟ್ಟುವವರು, ಅನಕ್ಷರಸ್ಥರು ಇವರೇ ಬಹುಮಟ್ಟಿಗೆ ಭಯೋತ್ಪಾದಕರಾಗುವರು. ಶ್ರೀಮಂತರ ಮನೆಯ ಮಕ್ಕಳು ಭಯೋತ್ಪಾದಕರಾಗುವುದಿಲ್ಲವೆಂದೇನೂ ಅಲ್ಲ. ಆದರೆ ಇವರೆಲ್ಲ ಭಯೋತ್ಪಾದಕರ ನಾಯಕತ್ವ ವಹಿಸಿಕೊಳ್ಳುವವರೇ ಆಗಿರುತ್ತಾರೆ. ಇತರ ಅನುಯಾಯಿಗಳು ಬಹುತೇಕ ಬಡತನದ ಭೀಕರತೆಯನ್ನು ಅನುಭವಿಸಿ ಸಾಕಾಗಿ ಹೋಗಿರುವವರೇ ಆಗಿರುತ್ತಾರೆ. ಯಾವುದೇ ರಾಜ್ಯದ ಅಪರಾಧದ ಗ್ರಾಫನ್ನು ವೀಕ್ಷಿಸಿದರೆ ಈ ವಿಚಾರ ಅನುಭವಕ್ಕೆ ಬರುತ್ತದೆ. ಮುಕ್ತ ಮಾರುಕಟ್ಟೆ ಆರ್ಥಿಕ ನೀತಿ ಬಡವರು ಶ್ರೀಮಂತರನ್ನು ಕಂಡರೆ, ಶ್ರೀಮಂತರು ಬಡವರನ್ನು ಕಂಡರೆ ಹೆದರುವಂತೆ ಮಾಡಿದೆ. ಬಡವ ಬಲ್ಲಿದರ ಅಂತರ ಜಾಸ್ತಿಯಾದಷ್ಟೂ, ಪರಿಸ್ಥಿತಿ ಮತ್ತಷ್ಟು ಭಯಾನಕವಾಗುವುದು.

ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಆರ್ಥಿಕಾಭಿವೃದ್ಧಿಗೆ ಬಡ ರಾಷ್ಟ್ರಗಳು ಬೆಲೆ ತೆರಬೇಕಾಗುತ್ತದೆ. ಗತಕಾಲದ ರಾಜಕೀಯ ವಸತಾಹತು ನೀತಿ ಇಂದಿನ ಆರ್ಥಿಕ ವಸಾಹತುಶಾಹಿ ನೀತಿಗೆ ಎಡೆಮಾಡಿದೆ. ಬ್ರಿಟಿಷರು ತಮ್ಮ ಕಬ್ಬಿನ ಗದ್ದೆಗಳಲ್ಲಿ ದುಡಿಯಲು ನಮ್ಮ ಬಡಜನರನ್ನು ಹಿಂದೆ ಕರೆದುಕೊಂಡುಹೋದಂತೆ ಇಂದು ನಮ್ಮ ವಿದ್ಯಾವಂತ ಯುವಕರನ್ನು ಪಾಶ್ಚಿಮಾತ್ಯರು ತಮಗಾಗಿ ಬೇರೆ ಬೇರೆ ಕ್ಷೇತ್ರಗಳಲ್ಲಿ ದುಡಿಯಲು ಕರೆಸಿಕೊಳ್ಳುತ್ತಿದ್ದಾರೆ. ದುಬಾರಿ ತಂತ್ರಗಳನ್ನು ಹೂಡುವ ಜಾಹಿರಾತುಗಳ ಮುಖಾಂತರ ಕಪಟತನದಿಂದ ಯುವ ಜನಾಂಗವನ್ನು ತಮ್ಮ ಬಲಿಪಶು ಮಾಡಿಕೊಳ್ಳುತ್ತಿದ್ದಾರೆ. ಪ್ರಗತಿ ಹೊಂದಿದ ರಾಷ್ಟ್ರಗಳ ಪ್ರತಿಯೊಂದು ಕಾರ್ಯ ಚಟುವಟಿಕೆಯಲ್ಲೂ ಒಂದು ಬಚ್ಚಿಟ್ಟ ಕಾರ್ಯಸೂಚಿ ಇರುತ್ತದೆ. ಎಂದೋ ಒಂದು ದಿನ ಈ ತಾಂತ್ರಿಕ ರಾಕ್ಷಸ ತಮ್ಮನ್ನೇ ನುಂಗಿಹಾಕಬಹುದು ಎಂಬ ಕಲ್ಪನೆಯೂ ಅವರಿಗಿಲ್ಲ. ತಾಂತ್ರಿಕತೆ ಅಬಾಧಿತವಾಗಿ, ಅಡೆತಡೆ ಇಲ್ಲದೆ ಬೆಳೆಯಿತು. ಆದರ ಫಲವಾಗಿ ಮಾರಕ ಅಸ್ತ್ರಗಳ ಸಂಗ್ರಹ ಆಗತೊಡಗಿತು. ಅವರು ಸಂಗ್ರಹಿಸಿ ಇಟ್ಟಿರುವ ಭಯಾನಕವಾದ ಅಣ್ವಸ್ತ್ರಗಳು ಅವರದೇ ತಲೆ ತಿನ್ನುತ್ತಿವೆ. ಜೈವಿಕ ಅಸ್ತ್ರಗಳ ಯುದ್ಧ ಹಾಗೂ ಅದಕ್ಕಿಂತಲೂ ಘೋರವಾದ ರಾಸಾಯನಿಕ ಅಸ್ತ್ರಗಳ ಯುದ್ಧ, ಈ ಶಸ್ತ್ರಾಸ್ತ್ರಗಳನ್ನು ತಯಾರಿಸಿದ ದೇಶಗಳನ್ನೇ ಆಹುತಿ ತೆಗೆದುಕೊಳ್ಳಲು ಸನ್ನದ್ಧವಾಗುತ್ತಿವೆ.

ಇಡೀ ಅಮೆರಿಕಾ ಆಂಥ್ರಾಕ್ಸ್ ಅಪಾಯದಿಂದ ಆವರಿಸಲ್ಪಟ್ಟಿದೆ. ಚಕ್ರ ಒಂದು ಸುತ್ತು ಪೂರ್ತಿ ಚಲಿಸಿಯಾಗಿದೆ. ಅನಿರ್ಬಂಧಿತ ಮಾರುಕಟ್ಟೆಯ ನೀತಿ ಬಡವರು ಮತ್ತು ಬಲ್ಲಿದರಿಬ್ಬರನ್ನೂ ಸದಾ ಒಬ್ಬರು ಇನ್ನೊಬ್ಬರಿಗೆ ಹೆದರಿ ಸಾಯುವ ಪರಿಸ್ಥಿತಿಯನ್ನು ಉಂಟುಮಾಡಿದೆ. ತೃತೀಯ ವಿಶ್ವದ ರಾಷ್ಟ್ರಗಳ ಬಡವರಿಗೆ ಇಂತಹ ಸಮಾಜ ವಿರೋಧೀ ಗುಂಪುಗಳ ಸಂಪರ್ಕವೇ ಇಲ್ಲದಿದ್ದರೂ ಅಧಿಕ ಪ್ರಮಾಣದ ಜನ, ತಮ್ಮ ಬಡತನದ ಸಲುವಾಗಿ ತಮ್ಮ ಜೀವವನ್ನೇ ಬಲಿಕೊಡಬೇಕಾದ ಅನಿವಾರ್ಯತೆ ಉಂಟಾಗಿದೆ.

ಮೊದಲಲ್ಲಿ ಬಡರಾಷ್ಟ್ರಗಳ ಶೋಷಣೆಯ ಮೂಲಕ ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕತೆ ಹುಲುಸಾಗಿ ಬೆಳೆಯಿತು. ಗತಕಾಲದ ರಾಜಕೀಯ ವಸಾಹತುಶಾಹಿ ನೀತಿಯಿಂದಾಗಿ ಆರ್ಥಿಕ ವಸಾಹತುಶಾಹಿ ಇಂದು ವಿಜೃಂಭಿಸುತ್ತಿದೆ. ಬ್ರಿಟಿಷರು ನಮ್ಮ ಬಡಜನರನ್ನು ತಮ್ಮ ಕಬ್ಬಿನ ಗದ್ದೆಗಳ ಕೆಲಸಕ್ಕೆ ಹಿಂದಿನ ಕಾಲದಲ್ಲಿ ತೊಡಗಿಸಿದರು. ಈಗ ಪಾಶ್ಚಿಮಾತ್ಯ ದೇಶಗಳು ನಮ್ಮ ವಿದ್ಯಾವಂತ ಯುವಕರನ್ನು ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸ ಮಾಡಲು ಕರೆದುಕೊಳ್ಳುತ್ತಿವೆ. ನಂಬಿಸಿ ದ್ರೋಹ ವೆಸಗುವ ಈ ಪ್ರಪಂಚದಲ್ಲಿ ಜನರಿಗೆ ಕೊಳ್ಳುಬಾಕತನದ ಬಗೆಗೆ ಜಾಹಿರಾತುಗಳ ಮೂಲಕ ಎಲ್ಲ ಬಗೆಯ ವಿಕೃತಗೊಳಿಸಿದ ಮಾಹಿತಿಗಳನ್ನು ನೀಡಿ ನಮ್ಮ ಯುವ ಪೀಳಿಗೆಯನ್ನು ತಮ್ಮ ತಂತ್ರಗಳಿಗೆ ಬಲಿಪಶುಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಮುಂದುವರೆದ ರಾಷ್ಟ್ರಗಳ ಪ್ರತಿಯೊಂದು ಕಾರ್ಯ ಚಟುವಟಿಕೆಗೂ ಒಂದು ಮುಚ್ಚುಮರೆಯ ಕಾರ್ಯಸೂಚಿ ಇರುತ್ತದೆ. ಈ ತಾಂತ್ರಿಕತೆಯ ಭೂತ ತಮ್ಮನ್ನು ಒಂದು ದಿನ ಆಹುತಿ ತೆಗೆದುಕೊಳ್ಳುತ್ತದೆ ಎಂಬ ಅರಿವು ಅವರಿಗಿಲ್ಲ. ಹೀಗಾಗಿ ತಾಂತ್ರಿಕತೆ ಅಬಾಧಿತವಾಗಿ ಮುಂದುವರೆಯಿತು. ಇದರ ಫಲವಾಗಿ ಅಣ್ವಸ್ತ್ರಗಳನ್ನು ಒಳಗೊಂಡಂತೆ ಅನೇಕ ವಿಧದ ಅಸ್ತ್ರಗಳನ್ನು ಸಂಗ್ರಹಿಸಿಡುವ ಕೆಲಸ ಆರಂಭವಾಯಿತು. ಇದೇ ಇಂದು ಎಲ್ಲ ರಾಷ್ಟ್ರಗಳ ತಲೆ ತಿನ್ನುವ ಸಮಸ್ಯೆಯಾಗಿ ಪರಿಣಮಿಸಿದೆ. ಜೈವಿಕ ಯುದ್ಧ ಹಾಗೂ ಇದಕ್ಕಿಂತ ಭಯಾನಕವಾದ ರಾಸಾಯನಿಕ ಸಮರ ಇವುಗಳ ಸುತ್ತ ಬೆದರಿಕೆ, ಅವುಗಳನ್ನು ಕಂಡುಹಿಡಿದ ರಾಷ್ಟ್ರಗಳಿಗೆ ಮುಳುವಾಗತೊಡಗಿದೆ. ಇಡೀ ಅಮೆರಿಕಾ ದೇಶ ಈಗ ಆಂಥ್ರಾಕ್ಸ್ ಬೆದರಿಕೆಯಿಂದ ಗಾಬರಿಗೊಂಡಿದೆ.

ಎಚ್. ಎಸ್. ದೊರೆಸ್ವಾಮಿ

ಮುಂದುವರೆದ ರಾಷ್ಟ್ರಗಳು ಶಸ್ತ್ರಾಸ್ತ್ರ ಸಂಗ್ರಹದ ಗೀಳು ಮತ್ತು ಯುದ್ಧ ಹೂಡುವ ತಂತ್ರ ಇವು ಮುಂದೆ ತಮಗೇ ಮುಳುವಾಗುತ್ತವೆ ಎಂಬುದನ್ನು ಇವರು ಊಹಿಸಿರಲಿಕ್ಕಿಲ್ಲ. ಮಾರಕ ಶಸ್ತ್ರಾಸ್ತ್ರಗಳು ಈಗ ಮಾನ್ಯತೆ ಪಡೆದ ರಾಷ್ಟ್ರೀಯ ಸರ್ಕಾರಗಳಿಗೆ ಮಾತ್ರವಲ್ಲದೆ, ಭಿನ್ನಮತ ಹೊಂದಿದ ಜಾತ್ಯಂಧರಿಗೆ ಕೂಡ ಲಭ್ಯವಾಗಲಿದೆ ಎಂಬುದನ್ನೂ ಪಟಿಂಗ ರಾಷ್ಟ್ರಗಳಿಗೂ ತಾಂತ್ರಿಕತೆಯನ್ನು ಒಳ್ಳೆಯದಕ್ಕೆ ಮಾತ್ರವಲ್ಲದೆ ವಿಶ್ವ ನಾಶಕ್ಕೂ ಬಳಸಬಹುದು ಎಂಬ ಅಂಶವನ್ನೂ ಅವರು ಎದುರು ನೋಡಲಿಲ್ಲ. ತಾವು ಬಳಸಿರುವ ತಾಂತ್ರಿಕತೆ ಬಹಳ ಸಂಕೀರ್ಣ ಸ್ವರೂಪದ್ದಾದ್ದರಿಂದ ಇತರ ಸಾಮಾನ್ಯ ರಾಷ್ಟ್ರಗಳು ಅವುಗಳನ್ನು ಅನುಕರಣ ಮಾಡುವ ಸಾಧ್ಯತೆ ಇಲ್ಲವೆಂದೂ ಅವರು ತಿಳಿದುಕೊಂಡಿದ್ದರು. ಅನ್ಯಾಯ ಮಾಡಲು ಹಿಂಜರಿಯದ ತಮ್ಮ ರಾಷ್ಟ್ರವೇ ಭಯೋತ್ಪಾದಕರ ಬುಡಮೇಲು ಮಾಡಲು ಪ್ರಾಕ್ಸಿ ವಾರ್‌ಗೆ ಸುಲಭ ಭೇದ್ಯವೆಂದು ಇತ್ತೀಚೆಗಷ್ಟೆ ಅವರಿಗೆ ಮನವರಿಕೆಯಾಗಿದೆ.

ಈ ಬಲಾಢ್ಯ ದೇಶಗಳಿಗೆ ಆತ್ಮ ನಿರೀಕ್ಷೆಯ ಕಾಲ ಈಗ ಸನ್ನಿಹಿತವಾಗಿದೆ. ರಾಷ್ಟ್ರೀಯ ಸ್ವಪ್ರತಿಷ್ಠೆ, ವ್ಯಕ್ತಿಯ ಸ್ವಪ್ರತಿಷ್ಠೆಯಷ್ಟೇ ಕೆಟ್ಟದ್ದು. ಮುಂದುವರೆದ ರಾಷ್ಟ್ರಗಳು ಇಂದಿನ ಪರಿಸ್ಥಿತಿಯನ್ನು ನಿರ್ವಿಕಾರ ದೃಷ್ಟಿಯಿಂದ ಅಳೆದು-ಸುರಿಯುವ ಮತ್ತು ಆಗಿರುವ ಆಘಾತವನ್ನು ಪ್ರೇಮದಿಂದ ಸಹೃದಯತೆಯಿಂದ ಪರಿಶೀಲಿಸಿ ಅದನ್ನು ಸರಿಪಡಿಸುವ ಆವಶ್ಯಕತೆ ಇದೆ. ಏಸುಕ್ರಿಸ್ತ 'ನಿನ್ನ ಶತ್ರುವನ್ನೂ ಕ್ಷಮಿಸು' ಎಂದು ತಿಳಿಯಹೇಳಿದ್ದಾನೆ. ಆದರೆ ನಮ್ಮ ನಾಯಕರೂ, ಮಾಧ್ಯಮಗಳೂ ಬಳಸುವ ಡಾಂಭಿಕ ಮಾತುಗಳು ಈ ದಿಕ್ಕಿನಲ್ಲಿ ಯೋಚನೆ ಮಾಡುತ್ತಿಲ್ಲ. ವಿಶ್ವದ ಎಲ್ಲೆಡೆ ಇರುವ ವಿಚಾರವಂತರು, ಸೇರಿಗೆ ಸವಾಸೇರು ಎಂಬ ಉನ್ಮಾದದ ಪ್ರತೀಕಾರ ಮನೋಭಾವದ ವಿರುದ್ಧ ತಮ್ಮ ಸೊಲ್ಲೆತ್ತಬೇಕು. ಇಂದಿನ ದಾರುಣ ಪರಿಸ್ಥಿತಿಯನ್ನು ಅವಲೋಕಿಸಿದಲ್ಲಿ, ಬಡವರಲ್ಲಿ ಕಡು ಬಡವರೇ ಕೊನೆಗೆ ಬಲಿಪಶುಗಳಾಗುವವರು ಎಂಬುದು ಶತಃಸಿದ್ಧ. ರಷ್ಯಾ ಮತ್ತು ಅಮೇರಿಕಾ, ಅಫ್ಘಾನಿಸ್ತಾನದಲ್ಲಿ ಈ ದೈತ್ಯಶಕ್ತಿಗಳ ಅಧಿಕಾರ ಹಿಡಿಯುವ ಹೋರಾಟದಲ್ಲಿ ಅಮಾಯಕ ಜನ ಜರ್ಝರಿತವಾದುದನ್ನು ನೋಡಿದ್ದೇವೆ. ಬಹು ಶಕ್ತಿಶಾಲಿ ಎನಿಸಿರುವ ಅಣು ಬಾಂಬು ಇಂದು ನಮಗೆ ಕಳವಳಕಾರಿಯಾಗಿ ಪರಿಣಮಿಸಿದೆ. ಅಫ್ಘಾನಿಸ್ತಾನದಂತಹ ದೃಶ್ಯ ಮನೋಹರವಾದ ರಾಷ್ಟ್ರದ ಶಾಂತಿಪ್ರಿಯ ಜನತೆ ಇಂದು ಕಡು ಬಡತನಕ್ಕೆ, ನಿರಕ್ಷರತೆ, ರೋಗಗಳಿಗೆ ಬಲಿಯಾಗಿದ್ದಾರೆ. ಯುದ್ಧದ ಪರಿಣಾಮವಾಗಿ ಯೋಧ ಗಂಡಂದಿರನ್ನೂ ಕಳೆದುಕೊಂಡ ವಿಧವೆಯರು ಮತ್ತು ಅಸಹಾಯಕರಾದ ಮುಗ್ಧ ಮಕ್ಕಳು ಇವರೇ ಈಗ ಅಲ್ಲಿ ಉಳಿದುಕೊಂಡಿರುವವರು. ಅವರಿಗೆ ಬೇರೆಲ್ಲಾದರೂ ಹೋಗಿ ಜೀವನ ನಿರ್ವಹಿಸಲು ಕೈಯಲ್ಲಿ ಹಣವೂ ಇಲ್ಲ, ಚೈತನ್ಯವೂ ಇಲ್ಲ. ಅಂಥವರಿಗೆ ಈ ದುರ್ಭರ ಪರಿಸ್ಥಿತಿಯಲ್ಲಿ ಬದುಕಿರುವುದಕ್ಕಿಂತ ಸಾಯುವುದೇ ಮೇಲು ಎಂದು ಎನಿಸಿರಲಿಕ್ಕೂ ಸಾಕು. ಯುದ್ಧಕ್ಕೆ ಕಾಲು ಕೆರೆಯುವುದು, ದ್ವೇಷ ಸಾಧಿಸುವುದು, ಭಯೋತ್ಪಾದಕರಾಗುವುದು ಇವೆಲ್ಲ ಸಾಮಾಜಿಕ ಕಾಯಿಲೆಗಳು. ಈ ಕಾಯಿಲೆಗೆ ಪರಿಣಾಮಕಾರಿ ಶಸ್ತ್ರಚಿಕಿತ್ಸೆ ಕೂಡಲೇ ಆಗಬೇಕು. ಹೈಟೆಕ್ ಯುದ್ಧಗಳು ಈ ಕಾಯಿಲೆಯನ್ನು ವಾಸಿ ಮಾಡದು. ಮಾನವನ ಉತ್ಸಾಹವನ್ನು ತನ್ನ ಮತ್ತು ಸಮಾಜದ ಒಳಿತಿಗಾಗಿ ಹಾಗೂ ಎಲ್ಲರ ಅಭ್ಯುದಯಕ್ಕಾಗಿ ಬಳಸುವ ಕ್ರಿಯೆಯನ್ನೇ ಆರೋಗ್ಯ ಎಂದು ಕರೆಯುವುದು. ಆರೋಗ್ಯವನ್ನು ಭೌತಿಕವಾಗಿ, ಮಾನಸಿಕವಾಗಿ, ಸಾಮಾಜಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ನಮ್ಮ ದೌರ್ಬಲ್ಯಗಳನ್ನು ಅರ್ಥ ಮಾಡಿಕೊಳ್ಳುವ ಮೂಲಕ ಕಾಪಾಡಿಕೊಳ್ಳಬಹುದು. ಮನುಷ್ಯನ ಮನಸ್ಸಿನಲ್ಲಿರುವ ದೌರ್ಬಲ್ಯಗಳಾದ ದ್ವೇಷ ಭಾವನೆ, ದುರಾಸೆ, ಅಹಂ, ಒಣ ಹೆಮ್ಮೆ ಇವುಗಳೇ ಮಾನವನ ಮತ್ತು ಅವನಿರುವ ಸಮಾಜದ ಎಲ್ಲ ರೋಗ ರುಜಿನಗಳಿಗೂ ಕಾರಣ. ಸಕಲರಿಗೂ ಕಲ್ಯಾಣವಾಗಬೇಕಾದರೆ ಆಧ್ಯಾತ್ಮಿಕ ನೆಮ್ಮದಿ ಮೊದಲು ಎಲ್ಲರಿಗೂ ದೊರೆಯಬೇಕು. ಇತರರ ಬಗೆಗೆ ಕಾಳಜಿ ವಹಿಸುವುದು ಮತ್ತು ಸರ್ವರ ಹಿತ ಕೋರುವುದೇ ಆಧ್ಯಾತ್ಮದ ತಿರುಳು. ಇವನ್ನು ಎಲ್ಲ ಧರ್ಮಗಳೂ ಪ್ರತಿಪಾದಿಸುತ್ತವೆ.

**ಯುದ್ಧ ಹೂಡುವುದರ ಉದ್ದೇಶ ಖಂಡಿತ ಶಾಂತಿ ನೆಲೆಗೊಳಿಸುವುದಲ್ಲ, ಗೆಲುವನ್ನು ಪಡೆಯುವುದೇ ಯುದ್ಧ ಹೂಡುವುದರ ಪರಮೋದ್ದೇಶ. ರಾಜಕೀಯದವರು ನೌಕರಶಾಹಿ ಹಾಗೂ ಮಾಧ್ಯಮಗಳು ಅಭಿಪ್ರಾಯಪಡುವ ರೀತಿಯಲ್ಲಿಯೇ ಜನಸಾಮಾನ್ಯರು ಶತ್ರುವಿನ ಬಗೆಗೆ ತಮ್ಮ ಅಭಿಪ್ರಾಯವನ್ನು ರೂಪಿಸಿಕೊಳ್ಳುವಂತೆ ಚಿತಾವಣೆ ಮಾಡುವುದು ಸರಿಯಲ್ಲ.**

ಯುದ್ಧ ಹೂಡುವುದರ ಉದ್ದೇಶ ಖಂಡಿತ ಶಾಂತಿ ನೆಲೆಗೊಳಿಸುವುದಲ್ಲ, ಗೆಲುವನ್ನು ಪಡೆಯುವುದೇ ಯುದ್ಧ ಹೂಡುವುದರ ಪರಮೋದ್ದೇಶ. ರಾಜಕೀಯದವರು ನೌಕರಶಾಹಿ ಹಾಗೂ ಮಾಧ್ಯಮಗಳು ಅಭಿಪ್ರಾಯ ಪಡುವ ರೀತಿಯಲ್ಲಿಯೇ ಜನಸಾಮಾನ್ಯರು ಶತ್ರುವಿನ ಬಗೆಗೆ ತಮ್ಮ ಅಭಿಪ್ರಾಯವನ್ನು ರೂಪಿಸಿಕೊಳ್ಳುವಂತೆ ಚಿತಾವಣೆ ಮಾಡುವುದು ಸರಿಯಲ್ಲ. ಅವರಿಗೆ ಸತ್ಯದ ಇನ್ನೊಂದು ಮುಖವನ್ನೂ ಕಾಣುವ ಅವಕಾಶ ಇರಬೇಕು. ನಮ್ಮ ಕಡುವೈರಿಯ ವಿಚಾರದಲ್ಲಿ ನಮ್ಮ ಮನೋಭಾವ ಹೇಗಿರಬೇಕೆಂದು ಆಗಲೇ ನಮಗೆ ಮನವರಿಕೆಯಾಗುವುದು. ಇಂದು ನಮಗೆ ಸತ್ಯವನ್ನು ನುಡಿಯುವ, ನಿರ್ವಿಕಾರವಾಗಿ ವಿಚಾರ ಕೊಡುವ, ತಟಸ್ಥ ಮನೋಭಾವದ ಮಾಧ್ಯಮಗಳ ಅಗತ್ಯವಿದೆ. ಅಂತಹ ಮಾಧ್ಯಮ ಮಾತ್ರ ನಮಗೆ ನಿಜವಾದ ಶಿಕ್ಷಣ ನೀಡಬಲ್ಲದು.

ಮುಂದಿನ ಜನಾಂಗ ಹೆಚ್ಚು ಸಹಿಷ್ಣುಗಳಾಗಬೇಕೆಂದು ನಾವು ಬಯಸುವುದಾದರೆ ಈಗಿನ ಶಿಕ್ಷಣ ಪದ್ಧತಿಯನ್ನು ರೂಢಮೂಲವಾಗಿ ಪರಿವರ್ತಿಸಬೇಕು. ಇಂದಿನ ಮಾಹಿತಿ ಆಧಾರಿತ ಯಥಾಪ್ರತಿ ವಿದ್ಯಾಭ್ಯಾಸ ಪದ್ಧತಿಯಿಂದ ನಮ್ಮ ಚಿಂತನೆಗಳು ಎಲ್ಲ ನಕಾರಾತ್ಮಕ ವಿಚಾರಗಳ ಸಾರಾಂಶವಾಗಿ ಪರಿವರ್ತನೆಗೊಳ್ಳುತ್ತವೆ. ಈ ಪದ್ಧತಿಗೆ ಅರ್ಥಪೂರ್ಣವಾದ ಪರಾಧೀನವಾದ ಅಂತರ್ಬೋಧೆಯ ಆಧಾರಿತವಾದ ಸರ್ವವ್ಯಾಪಕವಾದ ಮಾನವ ಆತ್ಮಗಳ ಆತ್ಮ ಸಾಕ್ಷಾತ್ಕಾರದಲ್ಲಿ ಪರ್ಯವಸಾನವಾಗಬೇಕು. ಶಿಕ್ಷಣ ಮಾನವನಲ್ಲಿ ವಿನಯವನ್ನು ಬೆಳೆಸಲು ಸಹಾಯವಾಗಬೇಕು. ವಿನಯ ಸಂಪನ್ನತೆ ಒಂದು ಅತ್ಯಂತ ದೊಡ್ಡ ಗುಣ. ನಮ್ಮ ಸ್ಪರ್ಧಾತ್ಮಕ ಶಿಕ್ಷಣ ಪದ್ಧತಿ ನಮ್ಮನ್ನು ತೀರಾ ಸಾಮಾನ್ಯರನ್ನಾಗಿ ಮಾಡಿ ನಮ್ಮಲ್ಲಿ ಪರಸ್ಪರ ದ್ವೇಷ, ಹೊಟ್ಟೆಕಿಚ್ಚು ಬೆಳೆಸುತ್ತದೆ. ಶಿಕ್ಷಣ ನಮ್ಮ ಮಕ್ಕಳಿಗೆ ಚೆನ್ನಾಗಿ ಬದುಕುವ ಕುಶಲ ಕಲೆಯನ್ನು ಕಲಿಸಬೇಕು. ಇತರರಿಗಾಗಿ ಬದುಕುವುದನ್ನು ಕಲಿಸಬೇಕು.

ಕೊನೆ ಮೊದಲಿಲ್ಲದೆ ಪ್ರಕೃತಿ ಸಂಪತ್ತನ್ನು ಧ್ವಂಸ ಮಾಡುವುದನ್ನು ಕೈಬಿಡಬೇಕು. ಈಗ ಹಂಚಿಕೊಂಡು ಬಾಳುವ ಕಾಲ ಬಂದಿದೆ. ಇಲ್ಲದವರೊಡನೆ, ವಂಚಿತರಾದವರೊಡನೆ ಹಂಚಿಕೊಂಡು ಬಾಳುವುದನ್ನು ನಾವು ಕಲಿಯಬೇಕು. ನಮ್ಮ ಶತ್ರುಗಳನ್ನೂ ಅರ್ಥ ಮಾಡಿಕೊಳ್ಳುವವಾದರೆ ಅವರನ್ನು ಕ್ಷಮಿಸುವ ಬುದ್ಧಿಯೂ ನಮ್ಮಲ್ಲಿ ಬೆಳೆದೀತು. ಜನ ಸ್ವಾರ್ಥಿಗಳಿರಬಹುದು. ಗಂಡಾಗುಂಡಿಯವರಿರಬಹುದು. ದಬಾದುಬಿಯವರೂ ಇರಬಹುದು. ಅಂಥವರನ್ನೂ ಪ್ರೀತಿಸುವ ಶಕ್ತಿಯನ್ನು ನಿಜವಾದ ಶಿಕ್ಷಣ ನೀಡುತ್ತದೆ. ಈ ಸಂದೇಶವನ್ನು ನಾವು ಯುವ ಪೀಳಿಗೆಗೆ ಮುಟ್ಟಿಸಬೇಕು. ಸೊಮಾಲಿಯದಲ್ಲಿ ಮಕ್ಕಳು ಹಸಿವಿನಿಂದ ಸಾಯುತ್ತಿದ್ದರೂ ಅಮೇರಿಕಾದ ಜನರ ತಿಂದುತೇಗುವ ಮನೋವೃತ್ತಿಗೆ ಅಡೆತಡೆಯೇ ಇಲ್ಲವಾಗಿದೆ. ಮನುಷ್ಯನ ಬದುಕಿನ ಉದ್ದೇಶ ಹಂಚಿ ಬಾಳುವುದು, ಇತರರಿಗಾಗಿ ಬಾಳುವುದು ಆಗಬೇಕು. ಇಂದಿನ ನಮ್ಮ ಮುಂದಿರುವ ತೊಂದರೆಗಳು ನಮ್ಮನ್ನು ನಿಜಸ್ಥಿತಿಯ ಕಡೆಗೆ ನೋಡುವಂತೆ ಮಾಡಿವೆ. ನಾವೀಗ ಸ್ಪರ್ಧಾತ್ಮಕ ಮಾರ್ಗ ಬಿಟ್ಟು ಸಹಕಾರ ಮಾರ್ಗವನ್ನು ಹಿಡಿಯಬೇಕು. ಶಿಕ್ಷಣ ಒಂದು ಕೈಗಾರಿಕೆ ಆಗಬಾರದು. ಈಗಿನ ಶಿಕ್ಷಣ ಪದ್ಧತಿಯ ಗುರಿ ಯುವಕರನ್ನು ಕೈಗಾರಿಕೆಗೆ ಅಣಿ ಮಾಡುವುದೇ ಆಗಿದೆ. ಉದ್ಯೋಗ ತರಬೇತಿ, ಔದ್ಯೋಗಿಕ ಆಧಾರಿತ ಸಂಶೋಧನೆ ಇವೆಲ್ಲ ಅದೇ ಉದ್ದೇಶ



ದಿಂದ ಕೈಗೊಳ್ಳಲಾಗುತ್ತದೆ. ವಿದ್ಯಾಭ್ಯಾಸದ ಮುಖ್ಯ ಗುರಿ, ನಾಗರಿಕರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಸಮಾಜಕ್ಕೆ ಹೊಣೆಗಾರರನ್ನಾಗಿ ಮಾಡುವುದೇ ಆಗಿರಬೇಕು. ಏನೂ ಅರಿಯದ ಮುಗ್ಧ ಮಗುವನ್ನು ತನ್ನ ಸಾಮಾಜಿಕ ಹೊಣೆಗಾರಿಕೆ ಅರಿತ ಯುವಕ ಯುವತಿಯರನ್ನಾಗಿ ಪರಿವರ್ತಿಸುವುದು; ವಿದ್ಯಾರ್ಥಿಯಲ್ಲಿ ಚಾರಿತ್ರ್ಯವನ್ನು ಬೆಳೆಸಿ ಅವನೊಬ್ಬ ಸುಸಂಸ್ಕೃತ ನಾಗರಿಕನಾಗಲು ಅನುವು ಮಾಡುವುದು ಶಿಕ್ಷಣದ ಗುರಿಯಾಗಬೇಕು. ಶಾಲೆ ಕಾಲೇಜುಗಳಲ್ಲಿ ಕಲಿತದ್ದೆಲ್ಲ ಮರೆತುಹೋದರೂ, ಅವನಲ್ಲಿ ಉಳಿಯತಕ್ಕ ಒಂದು ಗುಣವೆಂದರೆ ಅವನ ಸಂಸ್ಕೃತಿ.

ಶಿಕ್ಷಣ ಸಂಪನ್ಮೂಲಗಳಾದ ಗಾಳಿ, ನೀರು, ಭೂಮಿ, ಇವುಗಳನ್ನು ಸಂರಕ್ಷಿಸಬೇಕೆಂಬ ಜ್ಞಾನವನ್ನು ನಮ್ಮಲ್ಲಿ ಉಂಟುಮಾಡಬೇಕು. ನಮ್ಮ ಶತ್ರುವಿನ ಅಭಿಪ್ರಾಯವನ್ನೂ ನಾವು ತಿಳಿಯುವುದು ಹಾಗೂ ಅವನಿಗೆ ನಮ್ಮ ಸಂಸ್ಕೃತಿಯನ್ನು ಮುಟ್ಟಿಸಲೂ ನಾವು ಪಡೆಯುವ ಶಿಕ್ಷಣ ನಮಗೆ ಸಹಾಯ ಮಾಡಬೇಕು. ನಮ್ಮ ಅಭಿಪ್ರಾಯ ಅರ್ಥ ಮಾಡಿಸಲು ದೇಶದ ಸ್ವಸಂಪೂರ್ಣತೆ ನಮ್ಮ ಗುರಿಯಾಗಬೇಕು. ಶ್ರೀಮಂತರು ಬಡವರನ್ನು ಅಗ್ಗದ ಕೂಲಿಗಳನ್ನಾಗಿ ಬಳಸುವುದನ್ನು ಕೈಬಿಡಬೇಕು. ಯಾವುದೇ ವೈಜ್ಞಾನಿಕ ಸಂಶೋಧನೆಯ ಗುರಿ, ಇಡೀ ಮಾನವ ಕುಲದ ಮುನ್ನಡೆಗೆ ಸಹಾಯ ಮಾಡುವುದಾಗಿರಬೇಕು.

ಅಮೆರಿಕಾದ ಅಧ್ಯಕ್ಷ ಬುಷ್ ಅಮೆರಿಕಾದ ಮೇಲೆ ಭಯೋತ್ಪಾದಕರ ಧಾಳಿ ಆದಮೇಲೆ ವೃದ್ಧಾಪ್ಯ ಬಂದಂತೆ



ಕಾಣುತ್ತಾನೆ. ಅಣುಬಾಂಬುಗಳು ಭಯೋತ್ಪಾದಕರಿಗೆ ಲಭ್ಯವಾಗುವುದಾದರೆ, ವಿಶ್ವನಾಶ ಕಟ್ಟಿಟ್ಟ ಗಂಟು. ವಿಜ್ಞಾನದ ಪರಿಕಲ್ಪನೆ ಬದಲಾವಣೆ ಆಗಬೇಕು. ನಮ್ಮ ಆರ್ಥಿಕ ನೀತಿ ಕೊನೆ ಮೊದಲಿಲ್ಲದ ಉಂಡಾಡಿ ಭಟ್ಟರನ್ನಾಗಿ ಮಾಡುವುದನ್ನು ತಪ್ಪಿಸಬೇಕು. ಅಪವ್ಯಯ ಕೊನೆಗೊಂಡು ನೈಸರ್ಗಿಕ ಸಂಪತ್ತನ್ನು ರಕ್ಷಿಸುವುದಕ್ಕೆ ಸಹಾಯಕವಾಗಬೇಕು. ಅಪವ್ಯಯ ಅಂತಿಮವಾಗಿ ಯುದ್ಧದಲ್ಲಿ ಪರ್ಯವಸಾನವಾಗುತ್ತದೆ. ಮಾನವನ ಆವಶ್ಯಕತೆಗಳನ್ನು ಪೂರೈಸಲು ಸಾಕಷ್ಟು ನೈಸರ್ಗಿಕ ಸಂಪತ್ತಿದೆ. ಆದರೆ ಅವನ ದುರಾಸೆ ಪೂರೈಸಲು ನಿಸರ್ಗಕ್ಕೆ ಸಾಧ್ಯವೇ ಇಲ್ಲ. ನಮ್ಮ ಶಿಕ್ಷಣ ಸತ್ಯ ಮತ್ತು ಧರ್ಮಕ್ಕೆ ಒತ್ತು ನೀಡಬೇಕು.

ದ್ವೇಷ ಬುದ್ಧಿಯಿಂದ ಸಾರುವ ಯುದ್ಧ ನಮ್ಮ ಸರ್ವನಾಶ ಮಾಡುವುದು. ಇನ್ನು ಮುಂದೆ ನಡೆಯುವ ಯುದ್ಧವಂತೂ ಮಾಮೂಲಿ ಯುದ್ಧವಾಗಿರದೆ, ಕೂಡಿಟ್ಟುಕೊಂಡಿರುವ ಅಣ್ವಸ್ತ್ರಗಳನ್ನು ರಾಸಾಯನಿಕ ಅಸ್ತ್ರಗಳನ್ನು ಬಳಸುವ ಘೋರ ಯುದ್ಧವಾದೀತು. ನಾವು ಬಿತ್ತಿದ್ದನ್ನೇ ಬೆಳೆಯುತ್ತೇವಷ್ಟೆ. ಈ ಯುದ್ಧದ ಪರಿಣಾಮವಾಗಿ ವಿಶ್ವನಾಶವೇ ಆದರೆ ಆಶ್ಚರ್ಯಪಡಬೇಕಾಗಿಲ್ಲ. ಭಾರತ ಈ ವಿಚಾರದಲ್ಲಿ ಎಚ್ಚರಿಕೆ ನೀಡುವ ಬುದ್ಧಿಮತ್ತೆಯನ್ನು ಹೊಂದಿದೆ. ದ್ವೇಷ ದ್ವೇಷವನ್ನೇ ಬೆಳೆಸೀತು. ಪ್ರೇಮ ಪ್ರೇಮವನ್ನೇ ಬೆಳೆಸೀತು.

ಅಮೆರಿಕಾದ ಜನತೆ ಸೆಪ್ಟೆಂಬರ್ ೧೧ರ ಹಾಹಾಕಾರವನ್ನು ಕಾಲ ಕ್ರಮೇಣ ಮರೆಯಬಹುದು. ಆದರೆ ಆ ಘಟನೆಯಿಂದ ಅಮೆರಿಕಾ ಮೊದಲುಗೊಂಡು ಎಲ್ಲ ರಾಷ್ಟ್ರಗಳೂ ಪಾಠವನ್ನು ಕಲಿಯದಿದ್ದರೆ, ವ್ಯರ್ಥ. ನಾವು ನಮ್ಮ ದುರ್ನಡತೆಯನ್ನು ತಿದ್ದಿಕೊಳ್ಳದಿದ್ದರೆ ಮುಂದಿನ ಜನಾಂಗ ನಮ್ಮನ್ನು ಕ್ಷಮಿಸುವುದಿಲ್ಲ. ವಿಶ್ವದ ಎಲ್ಲ ಪ್ರಜೆಗಳೂ ಅಣ್ಣತಮ್ಮಂದಿರು, ನಾವು ಕಷ್ಟಸುಖಗಳನ್ನು ಹಂಚಿಕೊಂಡು ಬಾಳಬೇಕು. ಯುದ್ಧಗಳು ವಿಶ್ವದ ಯಾವ ಭಾಗದಲ್ಲೂ ಆಗದಂತೆ ನೋಡಿಕೊಳ್ಳಬೇಕು. ಜಾತಿ, ಧರ್ಮ, ರಾಷ್ಟ್ರ, ವರ್ಣ ಮುಂತಾದ ಎಲ್ಲ ಭೇದಗಳನ್ನೂ ಮರೆತು ನಮ್ಮದು ಮಾನವಜಾತಿ, ಮಾನವಕುಲ ಎಂಬ ವಿವೇಕ ನಮ್ಮಲ್ಲಿ ಮೂಡಬೇಕು. ಸೂಕ್ತವಾದ ಶಿಕ್ಷಣದಿಂದ ಮಾತ್ರ ಈ ವಿವೇಕ ನಮ್ಮಲ್ಲಿ ಮೂಡಬಲ್ಲದು.

(ಸಾಧಾರ-ಸಂಗ್ರಹ)

ಎಚ್. ಎಸ್. ದೊರೆಸ್ವಾಮಿ
ನಂ. ೧೫೬೩, ೩೯ನೇ 'ಎಫ್' ಅಡ್ಡರಸ್ತೆ,
'ಟಿ' ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೪೧

## ರಥಬೀದಿಯಲ್ಲೊಂದು ಸುತ್ತು

ಇಲ್ಲಿ
ಅಡಿಗಡಿಗೆ ಸನಾತನದ ಕಮಟು
ಶಂಖ ಜಾಗಟೆ ಭೇರಿ ಗದ್ದಲ
ನಡುವೆ ನಂದ ಕಂದನ ಭಜನೆ

ಗಂಟೆ ಗಂಟೆಯ ಮಂಗಳಾ
ರತಿಯಲ್ಲಿ ಗುಂಪು ಗೋವಿಂದ
ಎಂದಾಗ ಧ್ಯಾನ
ಭಂಗಿಸುವ ತಿಳಿಸಾರಿನೊಗ್ಗರಣೆ

ರಥ ಚಕ್ರ ಉರುಳು
ರುಳಿದಂತೆ ಪಿಸುಮಾತು ನಿಟ್ಟುಸಿರು
ಬಂದರೂ ಒಂದೆರಡು ಗಟ್ಟಿದನಿ
ಗರ್ಭಗುಡಿಯೊಳಗೇ ಸಮಾಧಿ

ಮಠದ ನೆಲಗೋಡೆ ಪೀಠ
ಎಲ್ಲೆಲ್ಲು ಬಿರುಕು
ಇಲಿ ಬೆಕ್ಕು ಹೆಗ್ಗಣಗಳ ಕಾರ್ಬಾರು

ಬಯಲೇ ಆಲಯ
ಆ
ಲಯವೇ ಬಯಲು
ಎಂದವನು ನಿಂತೇ ಇದ್ದಾನೆ ಹೊರಗೆ

ಒಳಗಿಂದ ಅವ ಕಂಡ ಮುರಾರಿ
ಎಂದೋ ಪರಾರಿ !



ಪಿ. ಬಿ. ಪ್ರಸನ್ನ
೪, ೧೦ನೇ ಮುಖ್ಯರಸ್ತೆ, ಜೆ. ಪಿ. ನಗರ
'ಡಿ' ಬ್ಲಾಕ್, ಮೈಸೂರು - ೫೭೦ ೦೦೮

# ಮನುಷ್ಯನೊಳಗಿರಬೇಕಾದ ‘ಮನುಷ್ಯ ಸಂವಾದ’

■

ಸ. ರಾ. ಸುಳಕೂಡೆ

**ಮನುಷ್ಯ–ಮನುಷ್ಯತ್ವಕ್ಕೆ ಕುತ್ತುತರುವ ಕಾರ್ಯಕ್ಕೆ ಜಗವಿಂದು ವಿರಾಮ ಹೇಳಲೇಬೇಕಾದ ಕಾಲ ಬಂದಿದೆ. ಮಾನವೀಯತೆಯ ಬದುಕಿಗೆ ಎದುರಾಗುವುದೆಲ್ಲವನ್ನೂ ದೂರ ಸರಿಸುವುದು ಇಂದಿನ ಮನುಷ್ಯನ ಆದರ್ಶವಾಗಬೇಕಿದೆ.**

ಬಸ್ಸಿನಾಗ ನೂಕನುಗ್ಗಲದಾಗ ಜಾಗ ಮಾಡಕೊಂಡ ಕುಂಡ್ರೋದ ತಡ ಮನಕ ನಾನಾ ನಮೂನಿ ಮನುಷ್ಯರ ದರ್ಶನ ಪಡೆಯದ ಇರಾಕನ ಆಗಲಿಲ್ಲ. ಬಸ್ ಊರ ಹೊರಗ ಹೋಗದ ತಡ ಬಸ್ಸಿನೊಳಗಿದ್ದ ಮೂರ ಯುವಕರು ನಾಚಿಕೆ ಬಿಟ್ಟು ಹಿಂಗ ಹಾಡಕ ಸುರು ಮಾಡಿದರು, ‘‘ಹುಟ್ಟಿದರೆ ಹುಟ್ಟಬೇಕು, ನಾಯಿ ಹೊಟ್ಯಾಗ, ನಾಯಿ ಹೊಟ್ಯಾಗ’’... ಇದನ ಕೇಳಿದ ಮನ ದಂಗಾಗಿ ಹಿಂಗ್ಯಾಕ ಹಾಡತೇರಿ ಅಂದಾಗ, ಯುವಕರು ಮನುಷ್ಯಾ ಅಂದರ ದುಡಿಮೆ ಗಳಿಸಿ ಬದುಕಿದರನ ಚಂದ, ನಾವ ದೊಡ್ಡವರಾದು, ದುಡ್ಯಾಕ ಉದ್ಯೋಗನ ಉಳಿದಿಲ್ಲ ಅನ್ನೋದು ಖಾತ್ರಿ ಆಗೇತಿ, ನಾಯಿ ಹೊಟ್ಯಾಗ ಹುಟ್ಟಿದರ ನಾಕ ಮನಿ ತಿರುಗಿ ಹೊಟ್ಟಿ ತುಂಬಿಸಿಕೊಳ್ಳಾಕ ಬರತ್ತಿತ್ತಲ್ಲ, ಅದಕ ನಾವ ಹಿಂಗ ಹಾಡಾಕ ಹತ್ತೇವಿ, ಇತರಾಗ ಏನ ತಪ್ಪ ಐತಿ ? ನಾವ ಹಿಂಗ ಹಾಡವರ ನೋಡ್ರಿ ಅಂದಾಗ ಮನುಷ್ಯಾ ಅಗಿ ಜನ್ಮಕ ಬಂದ ಆ ಹೆಮ್ಮೆಗೆ ಕಪಾಲಮೋಕ್ಷ ಮಾಡಿದಂಗ ಅನಸದುಳಿಲಿಲ್ಲ. ಇಂಥ ಸುದ್ದಿ ಹೊತ್ತ ಊರ ಮುಟ್ಟಿ ಮನಿ ಸೇರಿದರ ಅಲ್ಲಿ ಮನುಷ್ಯಾ ಅಕರಾಳ-ವಿಕರಾಳ ಆಗಿ ಕಿತ್ತಾಟ ಕಾಳಗದಾಗ ಮುಳಗಿದ್ದ, ಜಗಳಕ ಕೈ ಮಾಡಿ ಕರಿತಿದ್ದ.

ಮನುಷ್ಯ ಅಪರೂಪದ ರೂಪ ಇನ್ನಷ್ಟು ಅರಿಯಲು ಒಂದು ಪುಸ್ತಕದ ಪುಟ ತಿರುವುತ್ತ-ತಿರುವುತ್ತ ಇದ್ದಾಗ ಮನ ಬಂದೆಡೆ ನಿಲ್ಲಾಕ ಹಚ್ಚಿತು; ಆ ವಾಕ್ಯಗಳನ್ನು ಅವಲೋಕಿಸಿದ್ದನ್ನು ಇಲ್ಲಿ ಹೇಳದ ಮುಂದ ಹೋಗಾಕನ ಬರುದುಲ್ಲ. ಅದರ ಹಕ್ಕಿಕತ ಹಿಂಗ ಐತಿ; ಒಂದು ಸಂಜೆ ಮರದ ಪೊಟರೆಯೊಂದರಲ್ಲಿ ಗಿಳಿಯೊಂದು ತನ್ನ ಮರಿಗೆ ಗುಟುಕು ನೀಡುತ್ತದೆ, ಇದ್ದಕ್ಕಿದ್ದಂತೆ ಮಗುವೊಂದರ ಆಕ್ರಂದನ ಕೇಳಿದ ಮರಿಗಿಳಿ ಕೆಳಗೆ ನೋಡುತ್ತದೆ. ತಂದೆಯೊಬ್ಬ ತನ್ನ ಪುಟ್ಟ ಮಗುವಿಗೆ ಹೊಡೆಯುತ್ತಿದ್ದಾನೆ; ಯಾಕೆಂದು ಅರ್ಥವಾಗದೆ ಗಿಳಿಮರಿ ತನ್ನ ತಾಯಿಯನ್ನು ಕೇಳುತ್ತದೆ. ಅಮ್ಮ ಆ ಮನುಷ್ಯ ಯಾಕ ತನ್ನ ಮಗೂನ ಹೊಡೇತಾ ಇದ್ದಾನೆ ? ತಾಯಿಗಿಳಿ ಹೇಳುತ್ತದೆ – ‘ಯಾಕಂದ್ರೆ ಅವನು ಮನುಷ್ಯ ಅದಕ್ಕೆ !’ ಇದರಲ್ಲೇನು ವಿಶೇಷವೆಂದು ನೀವು ಕೇಳಬಹುದು; ನಮ್ಮ ಮಮತೆ ಎಷ್ಟೊಂದು ಸೀಮಿತ ಸಂಕುಚಿತವೆನ್ನುವುದನ್ನು ಇದು ಗುರುತಿಸಿಲ್ಲವೇ ?

ಇಂದಿನ ಮನುಷ್ಯ ಹೆಚ್ಚು ಕಡಿಮೆ ಅಮಾನುಷ್ಯದ ಪ್ರತಿನಿಧಿಯಾಗಿಯೇ ಕಂಗೊಳಿಸಲು ಯತ್ನಿಸುತ್ತಿದ್ದಾನೆ. ಅವನಷ್ಟು ಕ್ರೂರಿ ಇನ್ನೊಂದು ಪ್ರಾಣಿ ಇಲ್ಲವೆಂಬುದಕ್ಕೆ ಒಂದು ಸ್ವಾರಸ್ಯಕರ ಪ್ರಸಂಗ ಉದಾಹರಿಸಬಹುದಾಗಿದೆ. ಮೈಸೂರು ಸಮೀಪವಿರುವ ಬಂಡೀಪುರ ಅಭಯಾರಣ್ಯದಲ್ಲಿ ತೂಗು ಫಲಕದಲ್ಲಿ ‘‘ಒಂದು ವೇಳೆ ಈ ಅಭಯಾರಣ್ಯದ ಅತ್ಯಂತ ಕ್ರೂರ ಪ್ರಾಣಿಯನ್ನು ನೀವು ನೋಡಲು ಬಯಸುವುದಾದರೆ ದಯವಿಟ್ಟು ಪರದೆಯನ್ನು ಮೇಲೆತ್ತಿ’’ ಎಂದು ಬರೆದಿದೆ. ಈ ತೂಗುಫಲಕವನ್ನು ಕಂಡ ಕೂಡಲೇ ಆಕರ್ಷಕರಾಗಿ ಪ್ರವಾಸಿಗರು ಅತ್ಯಂತ ಕ್ರೂರ ಪ್ರಾಣಿಯನ್ನು ನೋಡುವ ಕುತೂಹಲದಿಂದ ಪರದೆಯನ್ನು ಮೇಲೆತ್ತಿದರೆ ಕಾಣುವುದು ಬೃಹತ್ ಕನ್ನಡಿಯಲ್ಲಿನ ತಮ್ಮ ಪ್ರತಿಬಿಂಬ ! ಇದು ಕೇವಲ ಪ್ರತಿಬಿಂಬವಲ್ಲ; ಇಂದಿನ ಮನುಷ್ಯನ ನೈಜತೆಯ ಮುಖವೇ ಆಗಿದೆ.

ನಮ್ಮ ಕಚೇರಿಗೊಮ್ಮೆ ಗುರುಪಾದ ತನ್ನ ಮಗನನ್ನು ಕರೆದುಕೊಂಡು ಬಂದು ಮಗುವಿನ ಅಗಾಧ ಜ್ಞಾನದ ಸುದ್ದಿನ ಸಾರಿ, ಮಗುವಿನ ಜ್ಞಾನವನ್ನು ಪರೀಕ್ಷಿಸಲು ಪ್ರಶ್ನೆ ಕೇಳಾನೇಳಿ ಎಂದು ಸವಾಲು ಹಾಕಿದ. ಇದ್ದ ಬಿದ್ದವರು ಒಂದೊಂದು ಪ್ರಶ್ನೆ ಕೇಳಿಯೇ ಬಿಟ್ಟರು. ಮಗು ಅತ್ಯಂತ ಚುರುಕಿನಿಂದಲೇ ಉತ್ತರ ನೀಡಿದ್ದನ್ನು ಕೇಳಿ ದಂಗಾದೆವು ನಾವೆಲ್ಲ. ನನಗೂ ಒಂದು ಪ್ರಶ್ನೆ ಕೇಳಕನ ಬೇಕೆಂಬ ಗುರುಪಾದನ ಹಠಕ ಈ ಪ್ರಶ್ನೆ ಕೇಳಿದೆ – ಮನುಷ್ಯನಿಗೆ ಕಾಲುಗಳೆಷ್ಟು ? ಮಗು ತಬ್ಬಿಬ್ಬಾಗಿ ತಂದೆ ಕಡೆ, ಮುಗಿಲಕಡೆ ಕಣ್ಣ ಪಿಳಿಪಿಳಿಸುತ್ತ ಸುಮ್ಮನ ಇರಾಕ ಆಗದ ‘ಗೊತ್ತಿಲ್ಲ’ ಅಂತು. ಗುರುಪಾದ ಏನ್ರೀ ಹೋಗಿ ಹೋಗಿ ಇಂಥಾ ಕ್ಷುಲ್ಲಕ ಪ್ರಶ್ನೆ ಕೇಳೋದ ಅನ್ನುತ್ತ ಅಮೆರಿಕಾದ ಅಧ್ಯಕ್ಷ ಯಾರು ? ಇಟಲಿ ರಾಜಧಾನಿ ಯಾವುದು ? ತಾಜಮಹಲ ಕಟ್ಟಿಸಿದ ರಾಜ ಯಾರು ? ಹಿಂತಾವ ಮಗುವಿಗೆ ಕೇಳಿದರ ಹೇಳತದ; ಅದನ ಬಿಟ್ಟು ಮನುಷ್ಯನ ಮ್ಯಾಲ ಪ್ರಶ್ನೆ ಕೇಳೋದು ನನಗಂತೂ ಸರಿ ಕಾಣಲಿಲ್ಲ ಅನ್ನುತ್ತ ಸಿಟ್ಟಿನಿಂದ ಮಗುನ ಕರಕೊಂಡ ಹೊಂಟಬಿಟ್ಟ. ಈ ಜಗದಾಗ ಮನುಷ್ಯ ಮುಖ್ಯ ಅನ್ನೋದು ಅವರಿವರು ಸಾರಿ, ಸಾರಿ ಹೇಳಿದರೂ ಮನುಷ್ಯಾನ ಕೇಂದ್ರ ಮಾಡಿಕೊಂಡ ಮನುಷ್ಯತ್ವ ಬೆಳಸೋದು ಇನ್ನೂ ಹಂಗ ಉಳಿದೈತಿ ಅನದ ಇರಾಕ ಬರುದುಲ್ಲ!

ಜಗತ್ತಿನಲ್ಲಿ ನಾಲ್ಕು ಗುಣಧರ್ಮವುಳ್ಳ ಮನುಷ್ಯರಿದ್ದಾರಂತೆ. ಮೊದಲನೇ ಪ್ರಕಾರ ಮನುಷ್ಯರು ಸದಾಕಾಲ ವ್ಯಾಕುಲರಾಗಿ, ದುಃಖಿಗಳಾಗಿ ಇರೋದು. ತಾವು ಸ್ವತಃ ದುಃಖಿಗಳಾಗಿ ಬೇರೆಯವರಿಗೂ ಸಹ ದುಃಖ ಕೊಡತಾ ಇರುವವರು. ಮೂರು ಹೊತ್ತು ಅಳುತ್ತ, ಆಡುತ್ತ, ಅಳಬುರಕ ಬದುಕು ಸಾಗಿಸುವವರು. ಯಾವಾಗಲೂ ತಮ್ಮ ಅವಗುಣಗಳನ್ನು ಹೇಳತಾ ಚಿಕ್ಕ ಪುಟ್ಟ ಶರೀರದ ಅಸ್ವಸ್ಥತೆ ವರ್ಣಿಸುತ್ತಾ ತಮ್ಮ ಗೊಂದಲ-ಹಣೆಬರಹಕ್ಕೆ ದೋಷ ಕೊಡತಾ ಇರುವವರು. ತನ್ನಲ್ಲಿಯ ದೋಷಗಳನ್ನು ಬೇರೆಯವರಲ್ಲಿ ಹುಡುಕುತ್ತ ಆರೋಪಿಸುತ್ತಾ ನಿಂದಿಸುತ್ತಾ ಸಾಗುವ ಇವರು ವ್ಯಾಕುಲ ಕಲಹಪ್ರಿಯರಾಗಿರುತ್ತಾರೆ. ಎರಡನೇ ಪ್ರಕಾರದ ಮನುಷ್ಯರು ಸ್ವಂತಕ್ಕೆ ಕಡಿಮೆತನ ತಿಳಿದುಕೊಂಡು ಎಷ್ಟೇ ಇದ್ದರೂ ತನ್ನ ಹತ್ತಿರ ಹೆಚ್ಚಿಗೆ ಹಣವಿಲ್ಲ, ಸುಖವಿಲ್ಲ ಅಂತ ತಮ್ಮ ಹಣೇಬರಹಕ್ಕೆ ದೋಷ ಕೊಡತಾ ಬೇರೆಯವರ ಸುಖ-ಸಂಪತ್ತು- ಸೌಕರ್ಯ ನೋಡಿ ಮತ್ಸರಪಡತಾ ಇರುವವರು. ಮೂರನೇ ಪ್ರಕಾರದ ಮನುಷ್ಯರು ತಾವೇ ಬುದ್ಧಿವಂತರು, ಜಾಣರು, ಒಳ್ಳೆಯವರು, ಬೇರೆಯವರು ತಮಗಿಂತ ಕಡಿಮೆ ಸುಖದಲ್ಲಿ ಇರುವರೆಂದು ಭಾವಿಸಿ ಯಾವತ್ತೂ ತಮ್ಮ ಗುಣಗಾನ ಬೇರೆಯವರ ಮುಂದೆ ಮಾಡತಾ ಹೆಮ್ಮೆಯಿಂದ ಇರುವವರು. ನಾಲ್ಕನೆಯ ಪ್ರಕಾರದ ಮನುಷ್ಯರು ತಾವು ಒಳ್ಳೆಯವರು, ಬೇರೆಯವರೂ ಒಳ್ಳೆಯವರೆಂಬ ದೃಷ್ಟಿಯುಳ್ಳವರು. ಇಷ್ಟು ಪ್ರಕಾರದ ಮನುಷ್ಯರೇ ಈ ಜಗದಲ್ಲಿ ಇದ್ದಾರೆಂದು ವರ್ಗೀಕರಿಸುವ ವಿಚಾರದ ಸುತ್ತ ಸುತ್ತುತ್ತಾ ಹೋದರ ಅಸಂಖ್ಯ ಮನುಷ್ಯರ ಗತ್ತು ಗುಡಾರಾಗಿ ಗೂಡಾಗಿಯೇ ಇರುತ್ತಾರೆಂಬುದಕ್ಕೆ ಕಾರಣ ಇದ್ದ ಇರತೈತಿ.

ಒಬ್ಬ ಮನುಷ್ಯಾ ಇದ್ದ. ಅವನಿಗೆ ತನ್ನ ಮನೆನ ಅಮಂಗಳವೆನಿಸಿ ಅದನ್ನು ತೊರೆದ ಬಂದ. ಅಲ್ಲೂ ಅವನಿಗೆ ಹೊಲಸೆನಿಸಿತು; ಅಡವಿಗೆ ಹೋದ. ಅಲ್ಲೊಂದು ಮಾವಿನ ಮರದ ಕೆಳಗ ಕುಂತ; ಮೇಲಿಂದ ಪಕ್ಷಿಯೊಂದು ಅವನ ತಲೆಯ ಮ್ಯಾಲ ‘ಹೇಸಿಗೆ’ ಮಾಡಿತು. ಆ ಅಡವಿಯೂ ಅಮಂಗಳೆಂದು ಹೊಳಿಗೆ ಹೋಗಿ ದಂಡಿ ಮೇಲೆ ಕುಳಿತ. ಅಲ್ಲಿ ದೊಡ್ಡ ಮೀನು ಚಿಕ್ಕ ಮೀನಾ ತಿನ್ನೋದನ್ನ ನೋಡಿದ. ಅಸಹ್ಯ ಅನಿಸಿತು. ಸೃಷ್ಟಿ ತುಂಬ ಅಮಂಗಳ; ಇಲ್ಲಿರದ ಪ್ರಾಣ ಬಿಡೋದನ ಚಲೂ ಅಂದಕೊಂಡ. ಪ್ರಾಣ ಬಿಡಾಕ ಚಿತೆ ಮಾಡಿದ. ಆಗೊಬ್ಬ ಗೃಹಸ್ಥ ಬಂದು ಹೀಗೇಕೆ ಪ್ರಾಣ ಬಿಡುತ್ತೀ ? ಅಂದ. ಆ ಮನುಷ್ಯಾ ‘ಈ ಜಗತ್ತು ಅಮಂಗಳ ಆಗೇತಿ. ಅದಕ ಪ್ರಾಣ ಬಿಡೋದನ ಪರಿಹಾರ ಅಂತ ಸಾಯಾಕ ಹತ್ತೇನಿ’ ಅಂದ. ಗೃಹಸ್ಥ ಹೌಹಾರಿ ಹಿಂಗ ಕೇಳಿದ: ‘‘ನಿನ್ನ ಅಮೇಧ್ಯಮಯ ಶರೀರ, ಅದರ ಕೊಬ್ಬು ಇಲ್ಲಿ ಸುಟ್ಟರ ಎಷ್ಟ ಹೊಲಸಾದೀತು, ನಿನಗ ಖಬರಿ ಇದ್ದಾಂಗ ಕಾಣುದುಲ್ಲ; ನಾಂವ ಇಲ್ಲಿ ಸಮೀಪನ ಇದ್ದವರ; ನಾವೇಲ್ಲಿ ಆವಾಗ ಹೋಗುಣ ? ಒಂದ ಕುದಲ ಸುಟ್ಟರ ದುರ್ಗಂಧನ- ದುರ್ಗಂಧ ನಿನ್ನ ಇಡೀ ಕೊಬ್ಬು

ಸುಡಬೇಕಲ್ಲ! ಎಷ್ಟ ದುರ್ಗಂಧ ಆದೀತು'' ಯೋಚಿಸಿ, ಮುನ್ನೆಜ್ಜೆ ಹಾಕೆಂದ. ಅದಕ್ಕ ಆ ಮನುಷ್ಯಾ ಸಿಟ್ಟಾಗಿ 'ಈ ಲೋಕದಾಗ ಬದುಕಲಿಕ್ಕೂ ದಾರಿಯಿಲ್ಲ, ಸಾಯಲಿಕ್ಕೂ ಬಿಡುದುಲ್ಲ, ಏನ ಮಾಡಬೇಕು ಹೇಳ್ರಿ,' ಅಂದ. ಗೃಹಸ್ಥ ನಸುನಕ್ಕು ಆ ಮನುಷ್ಯಾನ ಕೂಡ್ರಿಸಿ ಹಿಂಗ ಹೇಳಿದ: ಮಂಗಳ, ಅಮಂಗಳ ಗೊಂದಲಾ ತಲ್ಯಾಗಿಂದ ತಗದ ತೂರು, ಹೊಲಸನ್ನ ಹಸನ ಮಾಡಾಕ ಕಲಿ, ಜೀವನ ತೊಳಗಿ ಬೆಳಗತದ, ಕಾಯಕದೊಳಗ ನಿಷ್ಠೆ, ಶ್ರದ್ಧೆ ಬೆಳದ ನಿಂತರ ಅಮಂಗಳವೆಂದೂ ಹತ್ತಿರ ಬರದು; ಸ್ವಚ್ಛತೆಯ ಕಾಪಾಡುವ ಛಲ ಹೊಂದಿದವನಿಗೆ ಹೊಲಸು ಅಗಾಧವೆನಿಸದು; ಗೊಂದಲ ಎಬ್ಬಿಸದು. ಮಂಗಳ ವೆಂಬುದು ಅರಿವಿಗೆ, ಕ್ರಿಯಾಶೀಲತೆಗೆ, ಶ್ರಮದ ಕೆಲಸಕ ಆಧಾರವಾಗಬೇಕೇ ವಿನಾ ಅವಿವೇಕ, ಪಲಾಯನದ ದಾರಿ ಆಗದಂತೆ ನೋಡಿಕೊಳ್ಳುವುದು ಅಗತ್ಯ. ಈ ಮಾತ ಕೇಳಿದ ಮನುಷ್ಯ ಹರ್ಷಿತನಾದ. ಗೊಂದಲ ಬಿಟ್ಟ ಬದುಕಿಗೆ ಬಂದ.

ಸೂರ್ಯನಂತೆ ನಿರಂತರ ಕಾರ್ಯದಲ್ಲಿ ನಿರತಾಗುವ ಮನಸ್ಸನ್ನು ಮನುಷ್ಯಗಳಿಸಿಕೊಂಡರೆ ಹೊಲಸುಳಿಯದು. ನೆಮ್ಮದಿ, ಸಮಾಧಾನ, ನೈರ್ಮಲ್ಯ, ಸೊಗಸು, ಸಂಪತ್ತು ಬಾರದುಳಿಯದು. ಸಹಜಾನಂದದ ಸೌಖ್ಯವನ್ನು ಅನುಭವಿಸುವ ಶಕ್ತಿ ಸಂಪಾದನೆಯೇ ಮನುಷ್ಯ ಜೀವನದ ತಿರುಳಾಗಿದೆ. ತಥ್ಯವೆಂದೂ ಹೇಳಬಹುದಾಗಿದೆ.

ಮನುಷ್ಯ, ಮನುಷ್ಯ ಜೀವನದ ಸುತ್ತ ಸುಳಿದಾಡಿದ ತೀವ್ರತಮ ಭಾವದ ಸೆಳವಿಗೆ ಸಿಕ್ಕ ಗುರುಪಾದ ಮನುಷ್ಯ




ಪ್ರಜ್ಞೆಯ ಪ್ರತಿಪಾದನೆಯ ಪ್ರತಿನಿಧಿ ಎಂಬಂತೆ ಹೀಗೆ ನುಡಿದ: ಜಗತ್ತಿನಲ್ಲಿ ನಡೆದಿರುವ ವಿಚಾರ-ಆಚಾರ, ವಾದ-ಪ್ರತಿವಾದ, ಹೋರಾಟ-ಹಾರಾಟ, ಕಲ್ಪನೆ-ಪರಿಕಲ್ಪನೆ, ಆಲೋಚನೆ-ದುರಾಲೋಚನೆ, ಸಾಮರಸ್ಯ-ವಿಭಿನ್ನತೆ, ನೈತಿಕತೆ-ಜಾರುವಿಕೆ... ಈ ಎಲ್ಲವನ್ನೂ ಉಪೇಕ್ಷಿಸಲಾಗದು. ಜಗತ್ತಿನ ಶಾಂತಿಗೂ ಕ್ರೌರ್ಯಕ್ಕೂ, ವಿನಾಶ-ವೃದ್ಧಿಗೂ ಕೇವಲ ಮನುಷ್ಯನೊಬ್ಬನೇ ಕಾರಣ ಕರ್ತೃ ಆಗಲಾರ. ಮನುಷ್ಯ-ಮನುಷ್ಯ ಬಾಳಿಗೆ ನಿರಂತರ ಒಲುವು ಹೊಂದಿರುವುದು ವಾಸ್ತವ ಸತ್ಯವೇ ಆಗಿದೆ.

ಈ ವಿಚಾರಸರಣಿಯೊಳಗೆ ಮುನ್ನುಗ್ಗಿದ ಮನ ಆಧುನಿಕ ಮನುಗಳ ವಿಶಾಲವಾದ ಜಾಲವನ್ನೇ ಕಂಡಷ್ಟು ಗಾಬರಿಯಾಯಿತು. ಕ್ಷಣಾರ್ಧದಲ್ಲಿ ಈ ಜಗತ್ತನ್ನೇ ಅಗ್ನಿಕುಂಡವನ್ನಾಗಿಸುವ ಆಧುನಿಕ ಮನುಗಳ ಮನಸ್ಸು ಇನ್ನೂ ಮಾನವೀಯಗೊಂಡಿಲ್ಲ. ಧರ್ಮ, ರಾಜಕೀಯ, ಸಾಮಾಜಿಕತೆ-ಪರಂಪರೆ ಮತ್ತೇನೂ ಅನ್ನುವ ಮನುಷ್ಯನನ್ನು ವಿಂಗಡಿಸುವ ವಿಭಜಿಸುವ ದುಷ್ಟ ಶಕ್ತಿಗಳನ್ನು ತಹಬಂದಿಗೆ ತರಲಾಗದ ಸ್ಥಿತಿಯು ಅಮಾನುಷ್ಯವನ್ನೇ ಬೆಂಬಲಿಸುತ್ತಿಲ್ಲವೇ? ಮನುಷ್ಯ-ಮನುಷ್ಯತ್ವಕ್ಕೆ ಕುತ್ತು ತರುವ ಕಾರ್ಯಕ್ಕೆ ಜಗವಿಂದು ವಿರಾಮ ಹೇಳಲೇಬೇಕಾದ ಕಾಲವಿದಾಗಿದೆ. ಮಾನವೀಯತೆಯ ಬದುಕಿಗೆ ಎದುರಾಗುವುದೆಲ್ಲವನ್ನೂ ದೂರ ಸರಿಸುವುದು ಇಂದಿನ ಮನುಷ್ಯನ ಆದರ್ಶವಾಗಬೇಕಿದೆ. ಜಾರಿಯಾ ಕವಿಯ ಈ ಸಾಲುಗಳು ದುಷ್ಟತೆ ತಡೆಯುವ ಧೀರಪ್ರಜ್ಞೆಯಂತಿದೆ. ಅದನ್ನು ಅರ್ಥೈಸಿಕೊಂಡಲ್ಲಿ ಮನುಷ್ಯ ಕಾಲದೊಳಗೂ ಸುರಕ್ಷಿತವೆಂಬ ನಂಬಿಕೆ ಬಾರದಿರಲಾರದು.

ಸ. ರಾ. ಸುಳಕೂಡೆ
ನಿ. ಸಂಖ್ಯೆ ೧೯೧೯, ರಾಮತೀರ್ಥನಗರ, ಬೆಳಗಾವಿ - ೧೫

## ಸಾದರ ಸ್ವೀಕಾರ

**ಕೆಂಪು ದೀಪದ ನೆರಳಲ್ಲಿ** (ಕಥಾ ಸಂಕಲನ)
ಶ್ರೀ ಮಿತ್ತೂರು
ಪುಟ : ೧೬೮ ಬೆಲೆ: ರೂ. ೯೫
ಹರೀಶ್ ಎಂಟರ್‌ಪ್ರೈಸಸ್, ೭/೩, ೧ನೇ ಮಹಡಿ, ಡಯಾಗ್ನಲ್ ರಸ್ತೆ, ಜನತಾ ಹೋಟೆಲ್ ಎದುರು, ವಿ. ವಿ. ಪುರಂ, ಬೆಂಗಳೂರು - ೫೬೦ ೦೦೪

**ಹೈದ್ರಾಬಾದ-ಕರ್ನಾಟಕದ ಬೀದಿ ನಾಟಕಗಳು**
ಡಾ. ದಸ್ತಗೀರ್‌ಸಾಬ್ ದಿನ್ನಿ
ಪುಟ : ೫೨ ಬೆಲೆ: ರೂ. ೫
ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾನಿಲಯ, ಗುಲಬರ್ಗಾ-೫೮೫ ೧೦೬

**ಶ್ರೀ ಕನಕದಾಸರ ನಳ ಚರಿತ್ರೆ** (ಗದ್ಯರೂಪ)
ಸು. ರುದ್ರಮೂರ್ತಿ ಶಾಸ್ತ್ರಿ
ಪುಟ : ೭೨ ಬೆಲೆ: ರೂ. ೩೦

**ಶ್ರೀ ಕನಕದಾಸರ ಮೋಹನ ತರಂಗಿಣಿ** (ಗದ್ಯರೂಪ)
ಸು. ರುದ್ರಮೂರ್ತಿ ಶಾಸ್ತ್ರಿ
ಪುಟ : ೧೩೨ ಬೆಲೆ: ರೂ. ೬೦

**ಶ್ರೀ ಕನಕದಾಸರ ಹರಿಭಕ್ತಸಾರ** (ಗದ್ಯರೂಪ)
ಸು. ರುದ್ರಮೂರ್ತಿ ಶಾಸ್ತ್ರಿ
ಪುಟ : ೭೬ ಬೆಲೆ: ರೂ. ೩೦

**ಶ್ರೀ ಕನಕದಾಸರ ರಾಮಧಾನ್ಯ ಚರಿತ್ರೆ** (ಗದ್ಯರೂಪ)
ಸು. ರುದ್ರಮೂರ್ತಿ ಶಾಸ್ತ್ರಿ
ಪುಟ : ೩೨ ಬೆಲೆ: ರೂ. ೧೫

**ದುರ್ಗಸಿಂಹನ ಪಂಚತಂತ್ರ** ಸು. ರುದ್ರಮೂರ್ತಿ ಶಾಸ್ತ್ರಿ
ಪುಟ : ೧೯೬ ಬೆಲೆ: ರೂ. ೬೦
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಭಾಗ್ಯಲಕ್ಷ್ಮಿ ಪ್ರಕಾಶನ**, ೮೭, ೩ನೇ ಕ್ರಾಸ್, ೪ನೇ ಬ್ಲಾಕ್ ಬನಶಂಕರಿ ೩ನೇ ಹಂತ, ೩ನೇ ಘಟ್ಟ, ಬೆಂಗಳೂರು-೮೫

**ಹಸರು ಹೆಜ್ಜೆ** (ಲೇಖನ ಸಂಕಲನ) ಅಡ್ಡೂರು ಕೃಷ್ಣರಾವ್
ಪುಟ : ೧೨೮ ಬೆಲೆ: ರೂ. ೬೦
**ಕೃಷಿ ಅನುಭವ ಕೂಟ**, ಕೃಷ್ಣಾ ಫಾರ್ಮ್, ಅಡ್ಡೂರು ಅಂಚೆ, ಗುರುಪುರ ಮಾರ್ಗ, ಮಂಗಳೂರು ತಾ. - ೫೭೪ ೧೪೫

**ಗದಾಯುದ್ಧ ಸಮೀಕ್ಷೆ** ಸಿ. ಪಿ. ಕೆ.
ಪುಟ : ೯೬ ಬೆಲೆ: ರೂ. ೩೫
**ಭಾರತೀ ಪ್ರಕಾಶನ**, ಸರಸ್ವತೀಪುರಂ, ಮೈಸೂರು-೯

**ದೇಜಗೌ : ವ್ಯಕ್ತಿ ಮತ್ತು ಕೃತಿ** ಸಿ. ಪಿ. ಕೆ.
ಪುಟ : ೧೦೩ ಬೆಲೆ: ರೂ. ೯೦

**ಮೂರು ಭಾರತ ಎರಡು ಪರ್ವ** (ತೌಲನಿಕ ಅಧ್ಯಯನ)
ಸಿ. ಪಿ. ಕೆ.
ಪುಟ : ೨೦೨ ಬೆಲೆ: ರೂ. ೧೮೦
**ತಳಗವಾದಿ ಪ್ರಕಾಶನ**, ೨೨, ವಿಜಯಶ್ರೀ, ಕುವೆಂಪುನಗರ, ಮೈಸೂರು - ೫೭೦ ೦೦೯

**ಕಾಡುಕೋಣ ಹುಲಿ ಮತ್ತು ಗಾಂಧಿ** (ಜಿಜ್ಞಾಸೆ)
ರಾಧಾಕೃಷ್ಣಶಾಸ್ತ್ರಿ
ಪುಟ : ೧೨೮ ಬೆಲೆ: ರೂ. ೪೫

**ನಾನು ಸತ್ಯವನ್ನೇ ಹೇಳುತ್ತೇನೆ** (ಲೇಖನಗಳು)
ರಾಧಾಕೃಷ್ಣಶಾಸ್ತ್ರಿ
ಪುಟ : ೩೦೬ ಬೆಲೆ: ರೂ. ೯೯
**ಝೆನ್ ಪಬ್ಲಿಕೇಷನ್ಸ್**, 'ಶ್ರೀ ಕೃಪಾ', ಕುಂಜಿಬೆಟ್ಟು, ಉಡುಪಿ - ೫೭೬೧೦೨

**ಮನುಷ್ಯರನ್ನು ನಂಬಬಹುದು** (ಕಥಾ ಸಂಕಲನ)
ಬಿ. ರಮೇಶ ಭಟ್
ಪುಟ : ೧೦೪ ಬೆಲೆ: ರೂ. ೬೦
**ಸುಹಾಸಂ**, 'ವಾಗ್ದೇವಿ', ಹಯಗ್ರೀವನಗರ, ಉಡುಪಿ-೨

**ಮಾನವೀಯತೆಯ ಸುತ್ತಮುತ್ತ** (ಲೇಖನಗಳು)
ಮೇಟಿ ಮರಿಯಪ್ಪ
ಪುಟ : ೮೦ ಬೆಲೆ: ರೂ. ೪೫
**ಮೇಟಿ ಪ್ರಕಾಶನ**, ಬೇವಿನಹಾಳ್ ಅಂಚೆ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ

**ಇಟ್ಟ ಹೆಜ್ಜೆ - ಪಟ್ಟ ಶ್ರಮ** (ಕನ್ನಡ ಚಳುವಳಿ ನಡೆದುಬಂದ ದಾರಿ)
ಸಂ: ಮು. ಅ. ವೆಂಕಟೇಶ್, ಎನ್. ಆನಂದರಾಮರಾವ್, ಮು. ಪಾರ್ಥಸಾರಥಿ
ಪುಟ : ೧೮೨ ಬೆಲೆ: ರೂ. ೫೦
**ಬಿಇಎಲ್ ಕರ್ನಾಟಕ ಕಾರ್ಮಿಕರ ಹಿತರಕ್ಷಣಾ ಸಮಿತಿ** (ನೋಂ), ಜಾಲಹಳ್ಳಿ, ಬೆಂಗಳೂರು - ೫೬೦ ೦೧೩

**ಶಿರವೇ ಬ್ರಹ್ಮಾಂಡ, ಜಗವೇ ಪಿಂಡಾಂಡ** (ಲೇಖನ ಸಂಕಲನ)
ಸದಾಶಿವಯೋಗಿ
ಪುಟ : ೧೧೩ ಬೆಲೆ: ರೂ. ೮೦

**ಶೈವತತ್ತ್ವ** (ಶಿವಯೋಗ ಸೂತ್ರ) ಸದಾಶಿವಯೋಗಿ
ಪುಟ : ೯೪ ಬೆಲೆ: ರೂ. ೭೦
**ಶ್ರೀ ಶಿವಾನಂದ ಯೋಗಾಶ್ರಮ**, ಹಂಪಿ-೫೮೩ ೨೩೯, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

# ಎರಡು ದುರಂತಗಳು ಆಡಳಿತೆಯ ವೈಫಲ್ಯಗಳು

**ಆ**ಡಳಿತಗಾರರ ನಿರ್ಲಕ್ಷ್ಯ, ಅಸಡ್ಡೆ, ನಿಷ್ಕ್ರಿಯತೆಗಳಿಂದ ಏನು ಅನಾಹುತವಾಗುವುದು ಎನ್ನುವುದಕ್ಕೆ ಇತ್ತೀಚೆಗೆ ಸಂಭವಿಸಿದ ಎರಡು ದುರಂತಗಳು ಇನ್ನೊಂದು ಸಾಕ್ಷಿ. ಸಹಸ್ರ, ಸಹಸ್ರ ಸಂಖ್ಯೆಯಲ್ಲಿ ಬಲಿಯಾದದ್ದು, ಸಂಕಷ್ಟಗಳಿಗೀಡಾದದ್ದು ಅಮಾಯಕ ನಾಗರಿಕರು. ಒಂದು ಪ್ರಕೃತಿ ವಿಕೋಪದಿಂದ ಆದದ್ದು, ಇನ್ನೊಂದು ಅವ್ಯವಸ್ಥೆ, ಮನುಷ್ಯನ ದೌರ್ಬಲ್ಯದಿಂದಾದದ್ದು. ಸುನಾಮಿ ನಂತರ ಜರುಗಿದ ದೊಡ್ಡ ದುರ್ಘಟನೆ ಇವು. ಪ್ರಕೃತಿ ವಿಕೋಪದಿಂದಾಗಿ ಅಮೆರಿಕಾದಲ್ಲಿ ಸಂಭವಿಸಿದ ಅನಾಹುತದಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಸಾವನ್ನಪ್ಪಿದರು, ಲಕ್ಷಾಂತರ ಮಂದಿ ನಿರಾಶ್ರಿತರಾದರು. ಅಮೆರಿಕಾದ ಆಕ್ರಮಣದಲ್ಲಿರುವ ಇರಾಕಿನಲ್ಲಿ ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಜರುಗಿದ ನೂಕುನುಗ್ಗಲಿನಲ್ಲಿ ಕಾಲ್ತುಳಿತಕ್ಕೆ ಸಿಕ್ಕಿ, ನದೀ ಪಾಲಾಗಿ ಸತ್ತವರ ಸಂಖ್ಯೆ ಒಂದು ಸಾವಿರಕ್ಕೂ ಹೆಚ್ಚು. ಈ ಎರಡೂ ಘಟನೆಗಳಲ್ಲಿ ಆಡಳಿತಗಾರರು ಅಗತ್ಯವಿದ್ದ ಸೂಕ್ತಕ್ರಮಗಳನ್ನು ಕೈಗೊಂಡಿದ್ದರೆ ಎಷ್ಟೋ ಜೀವಗಳನ್ನು ಉಳಿಸಬಹುದಾಗಿತ್ತು.

ಪ್ರಪಂಚದ ಮಹಾಶಕ್ತಿಶಾಲಿ, ಶ್ರೀಮಂತರಾಷ್ಟ್ರ, ಬಡ ಜನರ ಸಂರಕ್ಷಣೆಗೆ ಎಷ್ಟು ಮಟ್ಟಿಗೆ ಗಮನ ನೀಡುತ್ತದೆ ಎನ್ನುವುದಕ್ಕೆ ಕತ್ರಿನಾ ಚಂಡಮಾರುತ ತಂದ ವಿಪತ್ತಿನ ಸಂದರ್ಭದಲ್ಲಿ ಅಮೆರಿಕಾದ ಆಡಳಿತೆ ಕೈಗೊಂಡ ಬೇಜವಾಬ್ದಾರಿ ಕ್ರಮಗಳು ಉದಾಹರಣೆ. ಕತ್ರಿನಾ ಚಂಡಮಾರುತ ಸಮುದ್ರ ತೀರದಲ್ಲಿರುವ ಅಮೆರಿಕಾದ ಲೂಸಿಯಾನ, ಮಿಸಿಸಿಪ್ಪಿ ಮತ್ತು ಅಲಬಾಮಾ ರಾಜ್ಯಗಳ ಮೇಲೆ ಅಪ್ಪಳಿಸಿ ಭಾರೀ ಅನಾಹುತ ಉಂಟುಮಾಡಿತು. ಲೂಸಿಯಾನದ ನ್ಯೂ ಅರ್ಲಿಯನ್ಸ್ ನಗರ ವಿಪರೀತ ಹಾನಿಗೀಡಾಯಿತು. ಆಗಸ್ಟ್ ೨೯ರಂದು ಮುಂಜಾನೆ ಸಂಭವಿಸಿದ ಈ ವಿಪತ್ತಿನ ಸೂಚನೆ ಮೊದಲೇ ತಿಳಿದಿತ್ತು. ಅದರ ತೀವ್ರತೆಯ ಬಗ್ಗೆಯೂ ಮಾಹಿತಿ ಇತ್ತು. ಸುರಕ್ಷಿತ ಸ್ಥಳಗಳಿಗೆ ತೆರಳಲು ಎಚ್ಚರಿಕೆಯನ್ನೇನೋ ಸರಕಾರ ನೀಡಿತು. ಆದರೆ ಜನರನ್ನು ಸ್ಥಳಾಂತರಿಸಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳಲು ಆಡಳಿತ ಮುಂದಾಗಲಿಲ್ಲ. ಹಾಗಾಗಿ, ಉಳ್ಳವರು ಪಾರಾದರು, ಇಲ್ಲದವರು ನೀರು ಪಾಲಾದರು ಇಲ್ಲವೇ ಬೀದಿ ಪಾಲಾದರು. ಕಾರುಗಳಿದ್ದ ಶ್ರೀಮಂತರು ಸುರಕ್ಷಿತ ಪ್ರದೇಶಗಳಿಗೆ ಹೋಗಿ ನೆಲೆಸಿದರೆ, ತಿಂಗಳ ಕೊನೆಯಲ್ಲಿ ಬಸ್ ಚಾರ್ಜ್‌ಗೆ ಹಣವಿಲ್ಲದೆ ಬಡತನದ ಬವಣೆಯಲ್ಲಿದ್ದ ಜನ ಆಡಳಿತೆಯಿಂದ ಯಾವುದೇ ನೆರವಿಲ್ಲದೆ ಸಂಕಷ್ಟಕ್ಕೀಡಾದರು. ಅಲ್ಲಿ ಪ್ರಯಾಣಕ್ಕೆ ಬಸ್ಸುಗಳ ಸಂಖ್ಯೆಯೂ ಕಡಿಮೆ. ಇನ್ನು ಅನಾಹುತ ಸಂಭವಿಸಿದ ನಂತರ ಸ್ಥಳೀಯ ಹಾಗೂ ರಾಷ್ಟ್ರೀಯ ಆಡಳಿತ ಕೈಗೊಂಡ ಪರಿಹಾರ ಕ್ರಮಗಳೂ ಅಸಮರ್ಪಕವಾಗಿದ್ದುವಷ್ಟೇ ಅಲ್ಲದೆ ಮಂದಗತಿಯದೂ ಆಗಿತ್ತು. ಸಂಕಷ್ಟಕ್ಕೀಡಾದ ಜನರಲ್ಲಿ ಹೆಚ್ಚಿನವರು ಆಫ್ರಿಕನ್ ಅಮೆರಿಕನ್ನರು. ನಿರ್ಗತಿಕರಾದ, ತೀವ್ರ ಶೋಷಣೆಗೀಡಾಗಿರುವ ಈ ಜನಾಂಗದ ಬಗ್ಗೆ ಅಮೆರಿಕಾದ ಆಡಳಿತ ಯಾವತ್ತೂ ನಿರ್ಲಕ್ಷ್ಯ ತೋರುತ್ತಿದೆ. ಈ ಅನಾಹುತದ ಸಂದರ್ಭದಲ್ಲಿ ಮೇಲಿನಿಂದ ಕೆಳಗಿನವರೆಗೆ ಅಂದರೆ, ಅಧ್ಯಕ್ಷ ಬುಷ್‌ರಿಂದ ಹಿಡಿದು ಸ್ಥಳೀಯ ಆಡಳಿತದವರೆಗೆ ನಡೆದುಕೊಂಡ ರೀತಿ ಮುಕ್ತ ಮಾರುಕಟ್ಟೆಯ ವ್ಯವಸ್ಥೆಯಲ್ಲಿ ಆಡಳಿತಯಂತ್ರ ಯಾರ ಪರವಾಗಿದೆ ಎನ್ನುವುದನ್ನು ಸ್ಪಷ್ಟವಾಗಿ ಹೊರಗೆಡಹಿದೆ.

ಚಂಡಮಾರುತಕ್ಕೀಡಾದ ಈ ರಾಜ್ಯಗಳಲ್ಲಿ ಇಂಥ ಅನಾಹುತ ಸಂಭವಿಸುತ್ತಿರುವುದು ಇದೇ ಮೊದಲ ಬಾರಿಯೇನಲ್ಲ. ಆದರೆ ಈ ವರ್ಷ ಅದರ ತೀವ್ರತೆ ವಿಪರೀತವಾಗಿತ್ತಷ್ಟೆ. ಪ್ರವಾಹಗಳನ್ನು ತಡೆಯಲು ನಿರ್ಮಿಸಿರುವ ಕಟ್ಟೆಗಳನ್ನು ದುರಸ್ತಿಗೊಳಿಸಿ, ಇನ್ನಷ್ಟು ಎತ್ತರಿಸಲು ಫೆಡರಲ್ ಸರಕಾರವಾಗಲೀ, ಸ್ಥಳೀಯ ಆಡಳಿತವಾಗಲೀ ಗಮನ ನೀಡಲಿಲ್ಲ. ಅದರಲ್ಲೂ ಸಮುದ್ರ ಮಟ್ಟದಿಂದ ಕೆಳಮಟ್ಟದಲ್ಲಿರುವ ಲೂಸಿಯಾನದ ನ್ಯೂ ಆರ್ಲಿಯನ್ಸ್‌ನಲ್ಲಿ ದುರಸ್ತಿ ಕಾರ್ಯ ಕೈಗೊಂಡಿದ್ದರೆ ಎಷ್ಟೋ ಅನಾಹುತ ಕಮ್ಮಿಯಾಗುತ್ತಿತ್ತು. ಅಮೆರಿಕಾದ ಅಧ್ಯಕ್ಷ ಬುಷ್ ಆಡಳಿತದ ವೈಫಲ್ಯತೆಯ ಬಗ್ಗೆ ಅಮೆರಿಕದ ಜನರಲ್ಲಿ ತೀವ್ರ ಆಕ್ರೋಶ ವ್ಯಕ್ತಗೊಂಡಿದೆ. ಅಧ್ಯಕ್ಷ ಬುಷ್ ಅನಾಹುತ ಪ್ರದೇಶಗಳಿಗೆ ಭೇಟಿ ನೀಡಿದ್ದೂ ಕೂಡ ನಿಧಾನವಾಗಿಯೇ. ಉಪಾಧ್ಯಕ್ಷ ಡಿಕ್ ಶೆನಿ ಇಂಥ ರಾಷ್ಟ್ರೀಯ ಅನಾಹುತವಾಗಿದ್ದರೂ ತನ್ನ ರಜೆಯನ್ನು ಮುಂದುವರಿಸಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರೆ, ವಿದೇಶಾಂಗ ಕಾರ್ಯದರ್ಶಿ ಕಾಂಡೆಲೀಸ ರೈಸ್ ಷಾಪಿಂಗ್‌ನಲ್ಲಿ ನಿರತಳಾಗಿದ್ದಳಂತೆ. ಬುಷ್ ಆಡಳಿತ ಸಂಕಷ್ಟಕ್ಕೀಡಾದ ಜನರಿಗೆ ಸಾಂತ್ವನ ನೀಡಿ, ಪರಿಹಾರ ಒದಗಿಸುವುದಕ್ಕಿಂತ ಹೆಚ್ಚು ಆದ್ಯತೆ ನೀಡಿದ್ದು ಖಾಸಗಿ ಆಸ್ತಿಪಾಸ್ತಿಗಳನ್ನು, ಅಂಗಡಿ ಮುಂಗಟ್ಟುಗಳನ್ನು ಕಾಪಾಡಲು. ಆಹಾರ, ನೀರಿಗಾಗಿ ಪರದಾಡುತ್ತಿದ್ದ ಜನರಿಗೆ ಪರಿಹಾರ ಒದಗಿಸುವುದಕ್ಕಿಂತ ಹೆಚ್ಚಾಗಿ ಖಾಸಗಿ ಆಸ್ತಿ ರಕ್ಷಣೆಗೆ ಮುಂದಾಗಿದ್ದು ನಾಚಿಕೆಗೇಡು.

ಇನ್ನು ನಿರಾಶ್ರಿತರಾಗಿ ಬಂದ ಜನರಿಗೆ ಆಶ್ರಯ ನೀಡಲು ಬುಷ್ ಮಹಾಶಯನ ಟೆಕ್ಸಾಸ್ ರಾಜ್ಯವೇ ಹಿಂದೆ ಮುಂದೆ ನೋಡಿದ್ದು, ವಾಷಿಂಗ್ಟನ್‌ನಿಂದ ನೆರವು ಅಪೇಕ್ಷಿಸಿದ್ದು ಶೋಚನೀಯ. ಟೆಕ್ಸಾಸ್ ಯಾವತ್ತೂ ಬಿಳಿಯರ ಶ್ರೇಷ್ಠತೆ ಪ್ರತಿಪಾದಿಸುವುದರಲ್ಲಿ ಅಗ್ರಸ್ಥಾನ ಪಡೆದಿದೆ. ಲೂಸಿಯಾನದಿಂದ ಬಂದ ನಿರಾಶ್ರಿತರಲ್ಲಿ ಹೆಚ್ಚಿನವರು ಕರಿಯರು. ಅದಕ್ಕೇ ಉಪೇಕ್ಷೆ. ಹೆಚ್ಚು ನಿರಾಶ್ರಿತರನ್ನು ತೆಗೆದುಕೊಳ್ಳಲು ನಿರಾಕರಣೆ. ಹಾಗೆಯೇ ಅಮೆರಿಕಾದ ಇತರ ರಾಜ್ಯಗಳೂ ಕೂಡ ಸಂತ್ರಸ್ತರಿಗೆ ನೆರವು ನೀಡಲು ಲೆಕ್ಕಾಚಾರ ಹಾಕಿರುವುದು ಅಮೆರಿಕಾದ ಫೆಡರಲ್ ವ್ಯವಸ್ಥೆಯ ಇನ್ನೊಂದು ಮುಖವನ್ನು ತೋರಿಸುತ್ತದೆ. ಇದಕ್ಕೆ ತದ್ವಿರುದ್ಧವಾಗಿ ಅಮೆರಿಕಾದ ಆಡಳಿತ ಕೆಂಗಣ್ಣಿನಿಂದ ದ್ವೇಷಿಸುತ್ತಿರುವ ವೆನಿಜುವೇಲದ ಅಧ್ಯಕ್ಷ ಹ್ಯೂಗೋ ಚಾವೆಜ್ ರೆಡ್‌ಕ್ರಾಸ್ ಸಂಸ್ಥೆಯ ಮೂಲಕ ಒಂದು ಮಿಲಿಯ ಡಾಲರ್ ನೆರವು ನೀಡಲು ಮುಂದಾದದ್ದು, ಕ್ಯೂಬಾದ ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ವೈದ್ಯರ ತಂಡವನ್ನೂ ಔಷಧಿ ಸಾಮಗ್ರಿಗಳನ್ನೂ ಕಳುಹಿಸಲು ಮುಂದಾದದ್ದು ಶ್ಲಾಘನೀಯ. ಭಾರತವನ್ನು



ಒಳಗೊಂಡಂತೆ ಇತರ ಅಭಿವೃದ್ಧಿಶೀಲ ರಾಷ್ಟ್ರಗಳೂ ಶ್ರೀಮಂತ ಅಮೆರಿಕಾಗೆ ನೆರವೀಯಲು ಸಿದ್ಧವಾಗಿವೆ. ಕತ್ರಿನಾ ದುರಂತ ಮುಕ್ತ ಮಾರುಕಟ್ಟೆ ವ್ಯವಸ್ಥೆಯ ಶಿಥಿಲತೆಯನ್ನು, ಬಡಜನರ ಬವಣೆಯ ಬಗ್ಗೆ ಅನಾದರಣೆಯನ್ನು ಬಯಲಿಗೆಳೆದಿದೆ.

ಅಮೆರಿಕಾದ ಆಕ್ರಮಣದಲ್ಲಿರುವ ಇರಾಕಿನಲ್ಲಿಯಂತೂ ನಿತ್ಯ ದುರಂತ. ದೇಶದ ಎಲ್ಲಾದರೊಂದು ಕಡೆ ಬಾಂಬ್ ಸ್ಫೋಟಗೊಂಡು ಸಾವು ನೋವು ಸಂಭವಿಸದಿರುವ ದಿನವೇ ಇಲ್ಲ. ವಿದೇಶೀ ಆಕ್ರಮಣಕಾರರ ವಿರುದ್ಧವಾಗಿ ಹೋರಾಟ ಒಂದು ಕಡೆಯಾದರೆ, ಅಮೆರಿಕ ಸ್ಥಾಪಿಸಿರುವ ಕೈಗೊಂಬೆ ಸರಕಾರ ಅಸ್ತಿತ್ವಕ್ಕೆ ಬಂದ ಮೇಲೆ ಅಂತರ್ಯುದ್ಧ ಪರಿಸ್ಥಿತಿಯೇ ಉಂಟಾಗಿದೆ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಪಾಠ ಕಲಿತಿರುವ ಅಮೆರಿಕಾ, ಅವರ ಸಹಯೋಗದಿಂದ ಇರಾಕ್‌ನಲ್ಲಿ ವಿವಿಧ ಜನಾಂಗಗಳ ಮಧ್ಯೆ ದ್ವೇಷ ಬೀಜವನ್ನು ಬಿತ್ತುವುದರಲ್ಲಿ ಸಫಲ ಗೊಂಡಿದೆ. ಷಿಯಾ, ಸುನ್ನಿ ಪಂಗಡಗಳ ಮಧ್ಯೆ ಘರ್ಷಣೆಗಳು ಈಚೆಗೆ ವಿಪರೀತವಾಗಿದೆ. ಇನ್ನೊಂದು ಕಡೆ ಕುರ್ದಿಷ್ ಪ್ರತ್ಯೇಕವಾದಿಗಳ ಕೈ ಮೇಲಾಗುತ್ತಿದೆ. ಷಿಯಾ ಪಂಗಡ ಪ್ರಧಾನವಾಗಿರುವ ಇರಾಕ್ ಸರಕಾರ ಅನುಮೋದಿಸಿರುವ ಹೊಸ ಸಂವಿಧಾನ ದೇಶದಲ್ಲಿ ವೈಮನಸ್ಯವನ್ನು ಇನ್ನಷ್ಟು ಹೆಚ್ಚಿಸುವ ಸಾಧ್ಯತೆಗಳ ಜೊತೆಗೆ, ದೇಶವನ್ನು ಛಿದ್ರಗೊಳಿಸುವ ಸಾಧ್ಯತೆಯೂ ಇದೆ. ಈ ಬೆಳವಣಿಗೆಗಳು ಒಂದು ಕಡೆಯಾದರೆ ಆಡಳಿತ ಯಂತ್ರ ಸಂಪೂರ್ಣವಾಗಿ ಮುರಿದುಬಿದ್ದಿದೆಯೆಂಬುದು ಇನ್ನೊಂದಂಶ.

ಈಚೆಗೆ ಷಿಯಾ ಪಂಗಡದವರ ಧಾರ್ಮಿಕ ಸಮಾರಂಭದ ಸಮಯದಲ್ಲಿ ಸಂಭವಿಸಿದ ದುರಂತ ಶೋಚನೀಯ. ಲಕ್ಷಗಟ್ಟಳೆ ಯಾತ್ರಿಗಳು ಸೇರುವ ಸ್ಥಳದಲ್ಲಿ ಸೂಕ್ತವಾದ ವ್ಯವಸ್ಥೆ ಕಲ್ಪಿಸಿದ್ದರೆ ಇಂಥ ಅನಾಹುತ ಸಂಭವಿಸುತ್ತಿರಲಿಲ್ಲವೇನೋ. ದೇಶವನ್ನು ಆಕ್ರಮಿಸಿಕೊಂಡಿರುವ ಅಮೆರಿಕ ಹಾಗೂ ಬ್ರಿಟಿಷ್ ಸರಕಾರಗಳ ಹೊಣೆಗಾರಿಕೆಯೂ ಇದರಲ್ಲಿ ಇದೆ. ದೇಶದಲ್ಲಿ ಅಸ್ಥಿರ ಪರಿಸ್ಥಿತಿ ಇರುವ ಸಂದರ್ಭದಲ್ಲಿ ಅಗತ್ಯವಾದ ಮುಂಜಾಗ್ರತೆ ಕ್ರಮಗಳಿಲ್ಲದಿದ್ದುದೇ ಅನಾಹುತಕ್ಕೆ ಕಾರಣ. ಅಮೆರಿಕಾ ಈ ದೇಶವನ್ನು ಆಕ್ರಮಿಸಿಕೊಂಡ ಮೇಲೆ ಸಂಭವಿಸಿರುವ ಅತಿ ದೊಡ್ಡ ದುರಂತ ಇದು. ಸಾವಿರಾರು ಮಂದಿ ಹೆಂಗಸರು, ಮಕ್ಕಳು ಮತ್ತು ವೃದ್ಧರನ್ನು ಆಹುತಿ ತೆಗೆದುಕೊಂಡ ಈ ಘಟನೆ ದೇಶದಲ್ಲಿ ವಿವಿಧ ಪಂಗಡಗಳ ಮಧ್ಯೆ ದ್ವೇಷ ಹಾಗೂ ಅಪನಂಬಿಕೆಯನ್ನು ಇನ್ನಷ್ಟು ಹೆಚ್ಚಿಸುವುದರಲ್ಲಿ ಸಂದೇಹವಿಲ್ಲ. ಇದರ ಮೇಲೆ ಇರಾಕಿ ಸರಕಾರ ಕೈಗೊಂಡ ಪರಿಹಾರ ಕ್ರಮಗಳೂ ಅಸಮರ್ಪಕ ಅಥವಾ ಇಲ್ಲವೇ ಇಲ್ಲ. ಗಾಯಗೊಂಡವರಿಗೆ ಚಿಕಿತ್ಸೆ ಒದಗಿಸಲು, ಸತ್ತವರನ್ನು ಗುರ್ತಿಸಲು ಆಡಳಿತ ವ್ಯವಸ್ಥೆಗೆ ಕಷ್ಟವಾಯಿತು. ವಿದೇಶೀ ಆಕ್ರಮಣಕಾರರ ಆಶ್ರಯದಲ್ಲಿರುವ ಸರಕಾರದ ದುಸ್ಥಿತಿ ಇಂಥದ್ದು. ಎರಡು ವರ್ಷಗಳಿಗೂ ಹೆಚ್ಚು ಕಾಲದಿಂದ ಇರುವ ಆಕ್ರಮಣಕಾರಿ ಸೇನೆಗಳು ವಾಪಸ್ಸಾಗುವವರೆಗೆ, ಇರಾಕಿಗೆ ಮುಕ್ತಿ ಇಲ್ಲ, ಜನಗಳ ಬವಣೆ ತಪ್ಪಿದ್ದಲ್ಲ. ಅಂತರ್ಯುದ್ಧದ ಪರಿಸ್ಥಿತಿ ಮುಂದಿನ ದಿನಗಳಲ್ಲಿ ಇನ್ನಷ್ಟು ತೀವ್ರಗೊಂಡರೆ ದೊಡ್ಡ ಅನಾಹುತವೇ ಆಗುತ್ತದೆ. ಇದಕ್ಕೆ ಅಮೆರಿಕವೇ ಹೊಣೆಯಾಗಿರುತ್ತದೆ. ಅಮೆರಿಕ ಸೇನೆ ಇರುವವರೆಗೆ ಇರಾಕಿಗೆ ದುರಂತ ತಪ್ಪಿದ್ದಲ್ಲ.


ಸೀಯಾರ್ಕೆ
'ಚೌಬೀನ', ೮೯೯, ಬನಶಂಕರಿ ಮೂರನೇ ಹಂತ
ಕತ್ತರಗುಪ್ಪೆ, ಬೆಂಗಳೂರು - ೫೬೦ ೦೮೫


# ಆಗಸ್ಟ್ ೧೫ರ ಪ್ರಶ್ನೆಗಳು



ಸ್ವಾತಂತ್ರ್ಯದ ತೋಟದಲ್ಲಿ ಹೂಗಳೇಕೆ ಅರಳಲೇ ಇಲ್ಲ ?
ಎಂದು ಕೇಳಿದರೆ
ನೆಲದ ಗುಣ – ಮೊಳಕೆಯೊಡೆಯುವುದು ನಿಧಾನ, ಎಂದಿರಿ.

ಇರುಳಿನ ಹಂಗು ಕಳೆದು ಜಾವಗಳೇ ಉರುಳಿದರೂ
ಹಗಲು ಹರಿಯಲಿಲ್ಲವೇಕೆ ? ಎಂದರೆ
ಹಗಲಿನ ತೇರು ನಡಿಗೆ ನಿಧಾನ, ಎಂದಿರಿ.

ಮೌನದ ಬಸಿರು ತುಂಬಿಬಂದರೂ
ಮಾತನ್ನು ಹಡೆಯಲಿಲ್ಲವೇಕೆ ? ಎಂದರೆ
ಮಾತಿನ ಹೆರಿಗೆ ಬಲು ಕಷ್ಟ, ಕಾಯಿರಿ, ಎಂದಿರಿ.

ಕಾನನದಲ್ಲಿ ಹಕ್ಕಿಗಳ ಚಿಲಿಪಿಲಿ ಏಕಿಲ್ಲ ? ಎಂದರೆ
ಎದಿರುಗಾಳಿ ನಿಲ್ಲಲಿ, ಹಾರುವುದ ಕಾಣುವಿರಿ, ಎಂದಿರಿ.

ಕಾದು ಕಾದು ಸೋತ ಜನ, ಭೂಮಿಗಿಳಿದು ನೋಡಿದರೆ
ಮೊಳಕೆಯೊಡೆಯದಂತೆ ಬೀಜದ ಸುತ್ತ ಬಿಗಿ ಪಹರೆ ಇದೆ.

ಬಾನಿನೆತ್ತರಕ್ಕೆ ಏರಿ ಹಗಲಿನ ದಾರಿ ನೋಡಿದರೆ
ಸೂರ್ಯನನ್ನು ಸೆರೆಗೆ ದೂಡಲಾಗಿದೆ.

ಮೌನದ ಬಸಿರೊಳಗೆ ಇಣುಕಿ ನೋಡಿದರೆ
ಮಾತಿನ ಭ್ರೂಣವನ್ನೇ ಅಪಹರಿಸಲಾಗಿದೆ.

ಹಕ್ಕಿಯ ಗೂಡಿನೊಳಗೆ ಹೊಕ್ಕಿ ನೋಡಿದರೆ
ಪಶ್ಚಿಮದ ರಣಹದ್ದು ತತ್ತಿಗಳನ್ನು ಕುಕ್ಕಿ ತಿನ್ನುತ್ತಿದೆ.

ಪಂಡಿತರೆ, ಈಗ ಹೇಳಿ !

ಕಾಯುವುದೋ, 'ಕಾದು'ವುದೋ ?
ಸಾವು ಬದುಕಿನ ಸಮರ ನಡೆದಿದೆ
ಸಾವು ಸಾಯದೆ ಬದುಕಿಗೆ ಉಳಿವಿಲ್ಲ
ಭೂಮಿಯನ್ನು ಸೀಳದೆ ಮೊಳಕೆ ಚಿಗುರುವುದಿಲ್ಲ
ಕತ್ತಲ ಕಾರಾಸ್ಥಾನ ಸೋಲಿಸದೆ ಸೂರ್ಯನಿಗೆ ಮುಕ್ತಿಯಿಲ್ಲ
ಮೌನ ಮುರಿಯದೆ ಮಾತಿಗೆ ತಾವಿಲ್ಲ
ರಣಹದ್ದು ಇರುವ ತನಕ ತತ್ತಿಗಳ ಭಿತ್ತಿ ಹರಿಯುವುದಿಲ್ಲ
ಹಿಂಸೆಯನ್ನು ಕೊಲ್ಲದೆ ಅಹಿಂಸೆ ಜನಿಸುವುದಿಲ್ಲ.


ಶಿವಸುಂದರ
ನಂ. ೭೬, ೩ನೇ ಹಂತ, ವಿನಾಯಕ ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦



ನಿವೃತ್ತಿ ಹೊಂದಿ ಎರಡು ದಶಕಗಳು ಸಮೀಪಿಸುತ್ತಿದ್ದರೂ ಸದಾಕಾಲ ವಿದ್ಯುಚ್ಛಕ್ತಿಯ ಸಮಸ್ಯೆಗಳನ್ನೇ ಉಸಿರಾಡುವ ೭೫ರ ಹರೆಯದ ಶ್ರೀ ಬಿ. ಜಿ. ರುದ್ರಪ್ಪನವರು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಅಧ್ಯಕ್ಷರಾಗಿದ್ದವರು. ಯುವ ಉತ್ಸಾಹ, ನಿರಂತರ ಚಿಂತನೆ ಮತ್ತು ವಿದ್ಯುತ್ ಕ್ಷೇತ್ರದ ಸಮಸ್ಯೆಗಳ ಆಳವಾದ ಅಧ್ಯಯನದ ಹಿನ್ನೆಲೆಯಲ್ಲಿ ತಮ್ಮ ಪರಿಣತಿಯನ್ನು ಹಲವಾರು ಸಂಘ ಸಂಸ್ಥೆಗಳೊಡನೆ ನಿರ್ವಂಚನೆಯಿಂದ ಹಂಚಿಕೊಳ್ಳುತ್ತಿರುವ ಅಪರೂಪದ ತಂತ್ರಜ್ಞರು. ಸೇನಾಪತಿಗಳು ಎಂದೂ ನಿವೃತ್ತರಾಗುವುದಿಲ್ಲ ಎಂಬ ಮಾತೊಂದಿದೆ. ರುದ್ರಪ್ಪನವರನ್ನು ಹತ್ತಿರದಿಂದ ಬಲ್ಲವರಿಗೆ ಈ ಮಾತು ಅವರಿಗೆ ಹೆಚ್ಚು ಒಪ್ಪುತ್ತದೆ ಎಂದೆನಿಸದೆ ಇರದು. 'ಹೊಸತು' ತಂಡ ಇವರನ್ನು ಸಂದರ್ಶಿಸಿ, ನಮ್ಮ ಇಂದಿನ ವಿದ್ಯುಚ್ಛಕ್ತಿಯ ಪರಿಸ್ಥಿತಿಯನ್ನು ಕುರಿತು ಚರ್ಚಿಸಿತು. ಚರ್ಚೆಯಲ್ಲಿ ಭಾಗವಹಿಸಿದ್ದವರು ಶ್ರೀಮತಿ ಟಿ. ಎ. ರಂಗಮಣಿ, ಶ್ರೀಯುತರಾದ ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ ಮತ್ತು ಕೆ. ಪಿ. ಸ್ವಾಮಿ.

# ಕರ್ನಾಟಕದ ವಿದ್ಯುತ್ ಪರಿಸ್ಥಿತಿ

## ಶ್ರೀ ಬಿ. ಜಿ. ರುದ್ರಪ್ಪನವರೊಡನೆ ಸಂದರ್ಶನ

**ಹೊಸತು :** ವಿದ್ಯುಚ್ಛಕ್ತಿಯ ಕೊರತೆ ಭಾರತವನ್ನು, ಕರ್ನಾಟಕವನ್ನು ನಿರಂತರವಾಗಿ ಬಾಧಿಸುತ್ತಿದೆಯಲ್ಲವೇ ? ಈ ಬಗ್ಗೆ ಆತಂಕಕ್ಕೆ ಕಾರಣವಿದೆಯೇ ?

**ರುದ್ರಪ್ಪ:** ಖಂಡಿತ ಕೊರತೆ ಇದೆ. ಆದರೆ ಪ್ರಚಾರವಾಗುತ್ತಿರುವಷ್ಟು ಹೆಚ್ಚೇನೂ ಅಲ್ಲ. ಈ ಕುರಿತು ಕೆಲವು ಅಂಕಿ-ಅಂಶಗಳನ್ನು (ಕೋಷ್ಟಕ ೧, ೨) ಸೂಕ್ಷ್ಮವಾಗಿ ಅವಲೋಕಿಸಿದಾಗ ಕರ್ನಾಟಕದ ಕೊರತೆಯ ಪರಿಸ್ಥಿತಿಯನ್ನು ಅಖಿಲ ಭಾರತದ ಪರಿಸ್ಥಿತಿಗೆ ಹೋಲಿಸಿದರೆ, ಅಂತಹ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ಆದರೆ ೧೯೭೩ರಿಂದ ೧೯೯೫ರ ವರೆಗೆ ರಾಜ್ಯ ತೀವ್ರ ಕೊರತೆ ಅನುಭವಿಸಿತು. ಕೆಲವು ವರ್ಷಗಳು ದೊಡ್ಡ ಕೈಗಾರಿಕೆಗಳ ಮೇಲೆ ಶೇ. ೮೦ರಷ್ಟು ಕಡಿತ ಹೇರಲಾಗಿತ್ತು. ೧೯೯೫ರ ನಂತರ ಪರಿಸ್ಥಿತಿ ಸುಧಾರಿಸಿದೆ.

**ಹೊ :** ಕೊರತೆಗೆ ಮುಖ್ಯ ಕಾರಣಗಳೇನು ?

**ರು :** ಬೇಡಿಕೆ ದಿನೇದಿನೇ ಹೆಚ್ಚುತ್ತಿದ್ದು, ಅದಕ್ಕೆ ತಕ್ಕ ಉತ್ಪಾದನಾ ಬೆಳವಣಿಗೆ ಆಗದೇ ಇರುವುದೇ ಅದಕ್ಕೆ ಕಾರಣ. ಕೊರತೆಯ ನಡುವೆಯೂ, ಅದು ಸಮಸ್ಯೆಯಾಗಿರುವುದಕ್ಕೆ ಒಂದು ಮುಖ್ಯ ಕಾರಣವೆಂದರೆ ಬಳಕೆಯಲ್ಲಿನ ಅಶಿಸ್ತು ಮತ್ತು ಅಸಮರ್ಥ ಬಳಕೆ. ಕರ್ನಾಟಕದಲ್ಲಿ ೧೪ ಲಕ್ಷ ನೀರಾವರಿ ಪಂಪ್‌ಸೆಟ್ಟುಗಳು ಚಾಲ್ತಿಯಲ್ಲಿವೆ. ಇವು ರೈತರ ಜೀವನ ಮಟ್ಟವನ್ನು ಸುಧಾರಿಸಿವೆ. ಒಟ್ಟಿನಲ್ಲಿ ಸಮಾಜಕ್ಕೆ ಪ್ರಯೋಜನಕಾರಿಯಾಗಿವೆ ಎಂಬುದೂ ನಿಜ. ಆದರೆ ಇದು ವಿದ್ಯುತ್ ಕ್ಷೇತ್ರದ ಮೇಲೆ ಭಾರಿ ಹೊರೆ ಹೊರಿಸಿದೆ. ಏಕೆಂದರೆ, ಇದೊಂದು ಅನುದಾನಿತ ವಿಭಾಗ; ಅನುದಾನ ಉಚಿತವೆನಿಸಿ, ಜವಾಬ್ದಾರಿರಹಿತ ಬಳಕೆಗೂ ಎಡೆ ಮಾಡಿಕೊಡುತ್ತದೆ.

ಹಲವಾರು ವರ್ಷಗಳಿಂದ ನೀರಾವರಿ ವಿದ್ಯುತ್ ಸೆಟ್ಟುಗಳಿಗೆ ನಿರ್ದಿಷ್ಟ ಕಾಲಾವಧಿಯಲ್ಲಿ ವಿದ್ಯುತ್ ಒದಗಿಸುವುದಕ್ಕೆ ಸಂಬಂಧಿಸಿದಂತೆ ನಿಯಂತ್ರಣ ವ್ಯವಸ್ಥೆಯೊಂದನ್ನು ರೂಪಿಸಲಾಗಿದೆ. ರೈತರಿಗೆ ೨೪ ಗಂಟೆ ವಿದ್ಯುತ್ತಿನ ಅವಶ್ಯಕತೆ ಇಲ್ಲದ ಕಾರಣ, ಒಂದು ದಿನದಲ್ಲಿ ನಿಯಮಿತ ಗಂಟೆಗಳಷ್ಟು ಮಾತ್ರ ವಿದ್ಯುತ್ ಒದಗಿಸುವ ವ್ಯವಸ್ಥೆ ಮಾಡಲಾಗಿದೆ. ಗ್ರಾಮಾಂತರ ಪ್ರದೇಶದಲ್ಲಿರುವ ಮನೆಗಳು ಮತ್ತು ಅಂಗಡಿಗಳಿಗೆ ಹೆಚ್ಚು ಹೊತ್ತು ಸರಬರಾಜು ಇರಲೆಂದು ಕೆಲವು ಘಂಟೆಗಳ ಕಾಲ ಏಕ ಮಜಲು (ಸಿಂಗಲ್ ಫೇಸ್) ವಿದ್ಯುತ್ತನ್ನು ಒದಗಿಸುವ ವ್ಯವಸ್ಥೆ ಕೂಡ ಇದೆ. ಇದರಿಂದ ಪಂಪು ಸೆಟ್ಟುಗಳನ್ನು ನಡೆಸಲಾಗುವುದಿಲ್ಲ. ಆದರೆ ಕೆಲವು ರೈತರು ಒಂದು ವಿಶಿಷ್ಟವಾದ ಸಲಕರಣೆಯನ್ನು ಅಳವಡಿಸಿಕೊಂಡು ಅನಧಿಕೃತವಾಗಿ ಇದಕ್ಕೂ ವಿದ್ಯುತ್ತನ್ನು ಉಪಯೋಗಿಸುತ್ತಿದ್ದಾರೆ. ಇದರಿಂದ ವಿದ್ಯುಚ್ಛಕ್ತಿಯ ನಷ್ಟ ಹೆಚ್ಚುತ್ತಿದೆ. ಈ ರೀತಿಯ ಬಳಕೆಯನ್ನು ನಿಯಂತ್ರಿಸಲು ಹೊಸ ವ್ಯವಸ್ಥೆಯೊಂದನ್ನು ಆಚರಣೆಗೆ ತರಲಾಗುತ್ತಿದೆ. ಇದಲ್ಲದೆ ಒಂದು ಲಕ್ಷಕ್ಕೂ ಹೆಚ್ಚು ಅನಧಿಕೃತ ಪಂಪುಸೆಟ್ಟುಗಳು ಚಾಲನೆಯಲ್ಲಿವೆ. ಕಾನೂನಿನ ಪ್ರಕಾರ ಅಂತಹವರಿಗೆ ಜೈಲು ಶಿಕ್ಷೆಯಾಗಬೇಕು. ಆದರೆ ದಂಡ ವಿಧಿಸಿ ಅಂತಹ ಪಂಪುಸೆಟ್ಟುಗಳನ್ನು ಸಕ್ರಮಗೊಳಿಸಲು ಸರ್ಕಾರ ನಿರ್ದೇಶಿಸಿದೆ.

**ಹೊ :** ಕಾಲಕಾಲಕ್ಕೆ ಬೇಡಿಕೆಯ ಹೆಚ್ಚಳವನ್ನು ಸರಿಯಾಗಿ ಅಂದಾಜು ಮಾಡಲು ಸಾಧ್ಯವಾಗಿದೆಯೇ ?

**ರು :** ಭವಿಷ್ಯತ್ತಿನಲ್ಲಿ ಬರುವ ವಿದ್ಯುತ್ ಬೇಡಿಕೆಗೆ ಸಂಬಂಧಿಸಿದಂತೆ ಕೆಪಿಟಿಸಿಎಲ್ ವೈಜ್ಞಾನಿಕವಾಗಿ ಮುನ್ನಂದಾಜಿನ ಅಧ್ಯಯನ ನಡೆಸಿ ೧೧ನೆಯ ಯೋಜನೆಯ ಕೊನೆಯಲ್ಲಿ, ಅಂದರೆ ೨೦೧೧-೧೨ರ ಹೊತ್ತಿಗೆ, ಕರ್ನಾಟಕದ ನಿರೀಕ್ಷಿತ ವಿದ್ಯುತ್ ಬೇಡಿಕೆ ಸುಮಾರು ೯೦೦೦ರಿಂದ ೧೦,೯೦೦ ಮೆಗಾ ವಾಟ್ ಎಂದು ಅಂದಾಜು ಮಾಡಿದೆ. ಇಂದಿನ ಬೇಡಿಕೆ ಸುಮಾರು ೬೦೦೦ ಮೆಗಾವಾಟ್‌ಗಳಷ್ಟಿದೆ.

ಪೂರೈಕೆ ಮತ್ತು ಬೇಡಿಕೆ ಎರಡೂ ಪರಸ್ಪರ ಹೊಂದಿಕೊಂಡು ಬೆಳೆಯಬೇಕು. ಕರ್ನಾಟಕದಲ್ಲಿ ಮೊಟ್ಟಮೊದಲು ಸರ್ಕಾರಿ ಒಡೆತನದ ವಿದ್ಯುತ್ ಸ್ಥಾವರವನ್ನು ೧೯೦೨ರಷ್ಟು ಹಿಂದೆಯೇ ನಿರ್ಮಿಸಲಾಯಿತು. ರಾಜ್ಯದ ಸಂಸ್ಥಾಪಿತ ಸಾಮರ್ಥ್ಯವನ್ನು ೧೯೪೭ರಲ್ಲಿ ೫೯ ಮೆಗಾವಾಟ್‌ಗೆ ಏರಿಸಲಾಯಿತು. ೨೦೦೫ರ ಏಪ್ರಿಲ್-ಜೂನ್ ತಿಂಗಳ ಅಂಕಿ-ಅಂಶಗಳಂತೆ ಸರಾಸರಿ ಬೇಡಿಕೆಗೆ ಹೋಲಿಸಿದರೆ ಭಾರತದ ಕೊರತೆ ಶೇ. ೭.೨ರಷ್ಟಿದ್ದರೆ ಕರ್ನಾಟಕದ್ದು ಶೇ. ೪.೮. ಗರಿಷ್ಠ ಬೇಡಿಕೆಯ ಸಮಯದಲ್ಲಿ ಈ ಕೊರತೆ ಭಾರತದ್ದು ಶೇ. ೧೨.೧ರಷ್ಟಿದ್ದರೆ, ಕರ್ನಾಟಕದ್ದು ಶೇ. ೯.೬ರಷ್ಟಿದೆ. ೧೯೪೮ರಲ್ಲಿ ೧೨೦ ಮೆಗಾವಾಟ್ ಶಕ್ತಿ ಉತ್ಪಾದಿಸುವ ಮಹಾತ್ಮ ಗಾಂಧಿ ಜಲ ವಿದ್ಯುತ್ ಕೇಂದ್ರ ಸ್ಥಾಪಿತವಾಗಿ ಲಭ್ಯತೆ ಇಮ್ಮಡಿಯಾಯಿತು. ಆದರೆ ೧೯೫೫ರ ಹೊತ್ತಿಗೆ ವಿದ್ಯುತ್ ಬೇಡಿಕೆ ಜಾಸ್ತಿಯಾಗಿ ಕೊರತೆಯ ವಾತಾವರಣ ಸೃಷ್ಟಿಯಾಯಿತು. ಅಂದರೆ, ಲಭ್ಯತೆ ಹೆಚ್ಚಾದಂತೆ ಬೇಡಿಕೆಯೂ ಏರತೊಡಗಿತು. ಅದೇ ರೀತಿ ಶರಾವತಿ ಜಲ ವಿದ್ಯುತ್ ಕೇಂದ್ರ ೧೯೭೦ರಲ್ಲಿ ಸ್ಥಾಪಿತಗೊಂಡು ಲಭ್ಯತೆಯು ಹಲವು ಪಟ್ಟು ಹೆಚ್ಚಿದಾಗ್ಯೂ ೧೯೭೩ರ ವೇಳೆಗೆ ಕೊರತೆಯ ಸಮಸ್ಯೆ ಮತ್ತೆ ಕಾಣಿಸಿಕೊಂಡಿತು. ಆಗ ವಿದ್ಯುತ್ ಸರಬರಾಜಿನ ಶೇ. ೭೫ರಷ್ಟನ್ನು ಕೈಗಾರಿಕಾ ವಿಭಾಗವೇ ಬಳಸಿಕೊಳ್ಳುತ್ತಿತ್ತು. ಅಂದರೆ ವಿದ್ಯುತ್ ಸರಬರಾಜಿನ ಸ್ಥಿತಿ ಉತ್ತಮವಾಗಿದ್ದರೆ ಕೈಗಾರಿಕೆಗಳ ಬೆಳವಣಿಗೆಗೆ ಒತ್ತಾಸೆ ನೀಡುತ್ತದೆ ಎಂಬ ಅಂಶ ಸ್ಪಷ್ಟವಾದಂತಾಯಿತು. ೧೯೭೦ರಿಂದೀಚೆಗೆ ವಿದ್ಯುದುತ್ಪಾದನಾ ಸಾಮರ್ಥ್ಯವು ವಿಕಾಸವಾಗಿ ಪೂರೈಕೆ ಹೆಚ್ಚಿದರೂ ಬೇಡಿಕೆ ಅದಕ್ಕೂ ಮೀರಿ ಹೆಚ್ಚತೊಡಗಿತು. ಕರ್ನಾಟಕವು ಸತತ ೨೦ ವರ್ಷಗಳ ಕಾಲ ವಿದ್ಯುತ್ ಕೊರತೆಯನ್ನು ಎದುರಿಸಬೇಕಾಗಿ ಬಂತು.

**ಹೊ :** ಬೇಡಿಕೆಯನ್ನು ಪೂರೈಸುವುದು ಹೇಗೆ ?

**ರು :** ಬೇಡಿಕೆಯಲ್ಲಾಗುತ್ತಿರುವ ಈ ಹೆಚ್ಚಳ ಇದೇ ಮಟ್ಟದಲ್ಲಿ ಹೆಚ್ಚು ಕಾಲ ಮುಂದುವರಿಯಲಾರದು. ಗೃಹ ಹಾಗೂ

ನೀರಾವರಿ ಪಂಪ್‌ಸೆಟ್ ವಿಭಾಗದಲ್ಲಿ ಬೇಡಿಕೆ ಇನ್ನು ಹೆಚ್ಚಾಗಲಾರದಂತಹ ಹಂತ ತಲುಪಿರುವಂತಿದೆ. ಕರ್ನಾಟಕದಲ್ಲಿ ಕೆಲವು ತಾಂಡಾ, ಬಸ್ತಿ ಹಾಗೂ ಗುಡ್ಡಗಾಡು ವಸತಿ ಪ್ರದೇಶಗಳನ್ನು ಬಿಟ್ಟು ಎಲ್ಲ ಗ್ರಾಮಗಳಿಗೂ ವಿದ್ಯುತ್ತನ್ನು ಒದಗಿಸಲಾಗಿದೆ. ನಿಜ, ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯುತ್ ಸರಬರಾಜು ಸಮರ್ಪಕವಾಗಿಲ್ಲ. ಕೊರತೆಯ ಫಲವಾಗಿ ಮೂರು-ಫೇಜ್ ವಿದ್ಯುತ್ತನ್ನು ೬ ಗಂಟೆಗಳ ಕಾಲ ಹಾಗೂ ಒಂದು-ಫೇಜ್ ವಿದ್ಯುತ್ತನ್ನು ೧೨ ಗಂಟೆಗಳ ಕಾಲವಷ್ಟೆ ಒದಗಿಸಲಾಗುತ್ತಿದೆ. ಅದಕ್ಕೆ ಹೋಲಿಸಿದರೆ ನಗರ ಪ್ರದೇಶಗಳಲ್ಲಿ ವಿದ್ಯುತ್ ಕಡಿತಗಳು ಬಹಳ ಕಮ್ಮಿ ಎನ್ನಬಹುದು. ಉತ್ಪಾದನೆಯಲ್ಲಿ ಸಾಕಷ್ಟು ಹೆಚ್ಚಳವಿಲ್ಲದೆ ಈ ಪರಿಸ್ಥಿತಿ ಸುಧಾರಿಸದು.

ಬಿಡದಿ ಅನಿಲ ವಿದ್ಯುತ್ ಸ್ಥಾವರ, ನಾಗಾರ್ಜುನ ಉಷ್ಣ ವಿದ್ಯುತ್ ಸ್ಥಾವರ, ಬಳ್ಳಾರಿಯಲ್ಲಿ ಬೃಹತ್ ಉಷ್ಣ ವಿದ್ಯುತ್ ಕೇಂದ್ರಗಳ ಜೊತೆಗೆ ಅನೇಕ ಭಾರಿ ಯೋಜನೆಗಳನ್ನೂ ಸರ್ಕಾರಿ ಹಾಗೂ ಖಾಸಗಿ ವಿಭಾಗಗಳಲ್ಲಿ ನಿರ್ಮಿಸಲು ಯೋಜಿಸಲಾಗಿದ್ದರೂ ಅನಿಲ ಸರಬರಾಜಿನಲ್ಲಿ ಅನಿಶ್ಚಿತತೆ, ಪರಿಸರವಾದಿಗಳ ವಿರೋಧ, ಅಂತರರಾಜ್ಯ ವಿವಾದಗಳು, ಕಾನೂನು/ಹಣಕಾಸು ಸಮಸ್ಯೆಗಳು ಇತ್ಯಾದಿ ತೊಡಕುಗಳಿಂದಾಗಿ ಅವುಗಳನ್ನು ಪ್ರಾರಂಭಿಸಲಾಗುತ್ತಿಲ್ಲ.

ಉತ್ಪಾದನೆಯನ್ನು ಹೆಚ್ಚಿಸಲು ಕ್ರಮ ಕೈಗೊಳ್ಳುತ್ತಿರುವಾಗಲೇ ಉತ್ಪಾದಿತ ಶಕ್ತಿಯ ಪೂರೈಕೆಯಲ್ಲಿ ಅನೇಕ ಕಾರಣಗಳಿಂದ ಸೋರಿಕೆಯಾಗುತ್ತಿರುವುದನ್ನು ತಪ್ಪಿಸಬೇಕು. ಅಂಥ ಕೆಲವು ಕ್ರಮಗಳೆಂದರೆ :

(ಅ) ವಿದ್ಯುತ್ ಸಾಗಣೆ ಹಾಗೂ ವಿತರಣೆಯಲ್ಲಾಗುತ್ತಿರುವ ತಾಂತ್ರಿಕ ನಷ್ಟಗಳನ್ನು ಕಡಿಮೆ ಮಾಡುವುದು.

(ಆ) ಹೆಚ್ಚು ದಕ್ಷತೆಯಿರುವ ವಿದ್ಯುತ್ ಸಾಧನ ಮತ್ತು ಉಪಕರಣಗಳನ್ನು ಅಳವಡಿಸಿ, ವಿದ್ಯುತ್ ಬಳಕೆಯಲ್ಲಿನ ನಷ್ಟವನ್ನು ಕಮ್ಮಿ ಮಾಡುವುದು.

(ಇ) ವಿದ್ಯುತ್ ಕಳ್ಳತನವನ್ನು ತಡೆಗಟ್ಟುವುದು.

ಇದಲ್ಲದೆ, ಉದ್ಯಮಗಳು ತಮಗೆ ಬೇಕಾದ ವಿದ್ಯುತ್ ತಯಾರಿಸಿಕೊಳ್ಳಲು ಸಾಧ್ಯವಾದಷ್ಟು ಮಟ್ಟಿಗೆ ಪರವಾನಗಿ ಪಡೆದುಕೊಳ್ಳಬೇಕು. ಕೊರತೆಯನ್ನು ನಿಭಾಯಿಸಲು ಅನೇಕ ಉದ್ಯಮಗಳು ಸ್ವ ಉತ್ಪಾದನೆಯಲ್ಲಿ ತೊಡಗಿಕೊಂಡಿವೆ. ಅವುಗಳಲ್ಲಿ ಇಂಧನ ಉಪಯೋಗದಲ್ಲಿ ದಕ್ಷತೆ ಕಡಿಮೆಯಾಗಿ ದೇಶಕ್ಕೆ ನಷ್ಟವಾಗುತ್ತಿದೆ. ರಾಜ್ಯದಲ್ಲಿ ಅಂತಹ ಸುಮಾರು ೨೮೦೦ ಮೆಗಾವಾಟ್‌ಗಳಷ್ಟು ಸ್ವ ಉತ್ಪಾದನಾ ಕೇಂದ್ರಗಳಿವೆ. ದೇಶದ ಹಿತದೃಷ್ಟಿಯಲ್ಲಿ ಇವುಗಳ ಸಂಖ್ಯೆ ಕಡಿಮೆಯಾಗಬೇಕು.

ಬಿಗಿ ನಿಯಂತ್ರಣದಿಂದ ಒಂದು ಕಡೆ ರೈತರ ವಿದ್ಯುತ್ ಬೇಡಿಕೆಯನ್ನು ತೃಪ್ತಿಕರವಾಗಿ ಪೂರೈಸಿ, ವಿದ್ಯುತ್ ಸರಬರಾಜು ವ್ಯವಸ್ಥೆಯ ಹೊರೆಯನ್ನು ಕಡಿಮೆ ಮಾಡಬಹುದು. ಆದರೆ ಮುಂದಿನ ದಿನಗಳಲ್ಲಿ ಭೂ ಜಲ ಲಭ್ಯತೆಯು ಕಡಿಮೆಯಾಗುವ ಲಕ್ಷಣಗಳು ಕಂಡುಬರುತ್ತಿವೆ. ಈಗಾಗಲೆ ಅನೇಕ ಜಿಲ್ಲೆಗಳಲ್ಲಿ ನೀರಿನ ಕೊರತೆ ಕಂಡುಬರುತ್ತಿದೆ.

ಇತರೆ ವಿಕಸಿತ ದೇಶಗಳಿಗೆ ಹೋಲಿಸಿದಲ್ಲಿ ನಮ್ಮ ವಿದ್ಯುಚ್ಛಕ್ತಿಯ ತಲಾಬಳಕೆ ತುಂಬ ಕಡಿಮೆ ಇದೆ. ಅಮೆರಿಕಾ, ಕೆನಡಾಗಳಂಥ ವಿಕಸಿತ ದೇಶಗಳು ಪರ್ಯಾಯ ಪರಿಸ್ಥಿತಿ ತಲುಪಿವೆ. ಅಲ್ಲಿ ಶಕ್ತಿಯ ಬಳಕೆಯಲ್ಲಿ ಸಂಪೂರ್ಣ ದಕ್ಷತೆ ಹಾಗೂ ಸಮರ್ಪಕ ಸಂರಕ್ಷಣಾ ವ್ಯವಸ್ಥೆ ಜಾರಿಯಲ್ಲಿದೆ. ಇಂದು ಅಮೆರಿಕಾದಲ್ಲಿ ವಿದ್ಯುತ್ ಬಳಕೆ ವರ್ಷಕ್ಕೆ ತಲಾ ೧೨೦೦೦ (೧೯೯೯) ಯೂನಿಟ್‌ಗಳಷ್ಟಿದ್ದರೆ, ಚೀನಾದಲ್ಲಿ ೭೫೮೯ ಯೂನಿಟ್‌ಗಳು (೧೯೯೯), ನಮ್ಮ ರಾಷ್ಟ್ರದಲ್ಲಿ ಕೇವಲ ೩೯೦ (೨೦೦೩-೦೪) ಯೂನಿಟ್‌ಗಳು, ಕರ್ನಾಟಕದಲ್ಲಿ ೨೦೦೩-೦೪ರಲ್ಲಿ ಸುಮಾರು ೪೮೨ ಯೂನಿಟ್‌ಗಳಷ್ಟಿತ್ತು. ನೆರೆ ರಾಜ್ಯಗಳಾದ ಆಂಧ್ರ ಮತ್ತು ತಮಿಳುನಾಡಿಗೆ ಹೋಲಿಸದರೆ ನಮ್ಮ ರಾಜ್ಯ ಹಿಂದಿದೆ.

ವಿತರಣಾ ಜಾಲದಲ್ಲಿ ನಷ್ಟವನ್ನು ಕಡಿಮೆ ಮಾಡುವುದು ಅತಿ ಮುಖ್ಯ. ಇನ್ನೊಂದು ಸ್ವಾರಸ್ಯಕರ ವಿಷಯವೆಂದರೆ, ಬಹುತೇಕ ಒಂದು ಕಿಲೋವಾಟ್ ಉತ್ಪಾದನೆ ಮಾಡಲು ಅಗತ್ಯವಿರುವ ಖರ್ಚಿಗಿಂತ, ಒಂದು ಕಿಲೋವಾಟ್ ನಷ್ಟವನ್ನು ನಿವಾರಿಸಲು ಅಗತ್ಯವಿರುವ ಖರ್ಚು ಬಹಳ ಕಡಿಮೆ. ಇದನ್ನು ತಾಂತ್ರಿಕವಾಗಿ ತಪ್ಪಿಸಲು ಸಾಧ್ಯವಿದೆ.

**ಕೋಷ್ಟಕ - ೧**

| | ಕರ್ನಾಟಕ | | ಭಾರತ | |
|---|---|---|---|---|
| | ಮೆವಾ | ಒಟ್ಟಿನ ಶೇಕಡಾವಾರು | ಮೆವಾ | ಒಟ್ಟಿನ ಶೇಕಡಾವಾರು |
| ಜಲ ವಿದ್ಯುತ್ | ೩೫೯೪ | ೫೪.೬೧ | ೩೧೭೫೦ | ೨೬.೫೫ |
| ಉಷ್ಣ ವಿದ್ಯುತ್ | ೨೫೪೮ | ೩೮.೭೨ | ೮೦೭೬೧ | ೬೭.೫೪ |
| ಪರಮಾಣು ವಿದ್ಯುತ್ | * | - | ೩೨೬೦ | ೨.೭೩ |
| ವಾಯು | ೪೩೯ | ೬.೬೭ | ೩೮೦೦ | ೩.೧೮ |
| ಒಟ್ಟು | ೬೫೮೧ | ೧೦೦.೦೦ | ೧೧೯೫೭೧ | ೧೦೦.೦೦ |

* ಕೈಗಾದಲ್ಲಿರುವ ಪರಮಾಣು ವಿದ್ಯುತ್ ಸ್ಥಾವರವನ್ನು ಭಾರತ ಸರಕಾರದ ಅಣು ವಿದ್ಯುತ್ ಕಾರ್ಪೊರೇಷನ್ ನಿರ್ಮಿಸಿದೆ. ಇಲ್ಲಿ ಉತ್ಪಾದಿಸಲಾಗುತ್ತಿರುವ ವಿದ್ಯುಚ್ಛಕ್ತಿಯನ್ನು ದಕ್ಷಿಣ ಭಾರತ ರಾಜ್ಯಗಳು ಹಂಚಿಕೊಳ್ಳುತ್ತಿದ್ದು, ಕರ್ನಾಟಕಕ್ಕೂ ಇದರಲ್ಲಿ ಪಾಲಿದೆ.

**ಕೋಷ್ಟಕ - ೨**

**ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಜಲವಿದ್ಯುತ್ ಸಂಭಾವ್ಯತೆ**

| | ಕರ್ನಾಟಕ | ಭಾರತ |
|---|---|---|
| ಸಂಭಾವ್ಯತೆ | ೯೦೦೦ಮೆ.ವಾ | ೮೪೦೦೦ಮೆ.ವಾ |
| ಬಳಕೆಗೆ ತಂದಿರುವುದು | ೩೫೯೪ಮೆ.ವಾ | ೩೧೭೫೦ಮೆ.ವಾ |

**ಹೊ :** ಪರಮಾಣು ಶಕ್ತಿ ಸೂಕ್ತ ಪರ್ಯಾಯವೆ ?

**ರು :** ಪರಮಾಣು ವಿದ್ಯುಚ್ಛಕ್ತಿ ಸ್ಥಾವರಕ್ಕೂ ನೀರು ಅತಿಮುಖ್ಯವಾದ ಅಂಶ. ಉದಾಹರಣೆಗೆ, ಕೈಗಾ ವಿದ್ಯುತ್ ಸ್ಥಾವರಕ್ಕೆ ಕೆಪಿಟಿಸಿಎಲ್‌ನ ಕದ್ರಾ ಅಣೆಕಟ್ಟೆಯಿಂದ ನೀರು ಸರಬರಾಜಾಗುತ್ತಿದೆ. ಇಲ್ಲಿ ಬಳಸುವ ತಂತ್ರಜ್ಞಾನ ಕಲ್ಲಿದ್ದಲು ಆಧಾರಿತ ವಿದ್ಯುತ್ ಸ್ಥಾವರಗಳಲ್ಲಿನ ತಂತ್ರಜ್ಞಾನಕ್ಕೆ ಹೋಲಿಕೆಯುಳ್ಳದ್ದು. ಪರಮಾಣು ಸ್ಥಾವರದಲ್ಲಿ ನೀರನ್ನು ಉಗಿಯಾಗಿ ಪರಿವರ್ತಿಸಲು ಬೇಕಾದ ಉಷ್ಣವು ರಿಯಾಕ್ಟರ್‌ಗಳಲ್ಲಿ ಪರಮಾಣು ವಿದಳನ ಕ್ರಿಯೆಯಿಂದ ಉತ್ಪತ್ತಿಯಾಗುತ್ತದೆ. ಉಷ್ಣ ವಿದ್ಯುತ್ ಸ್ಥಾವರಗಳಲ್ಲಾದರೋ ಇದಕ್ಕೆ ಕಲ್ಲಿದ್ದಲನ್ನು ಇಂಧನವಾಗಿ ಬಳಸಲಾಗುತ್ತದೆ. ಅಣು ಸ್ಥಾವರಗಳ ತ್ಯಾಜ್ಯ ವಸ್ತುಗಳ ಸುಕ್ಷೇಮ ನಿರ್ವಹಣೆ ಉಷ್ಣ ವಿದ್ಯುತ್ ಸ್ಥಾವರಗಳ ಕಲ್ಲಿದ್ದಲು ಬೂದಿಯ ನಿರ್ವಹಣೆ ಎರಡೂ ಕ್ಲಿಷ್ಟ ಸಮಸ್ಯೆಗಳು. ಉಷ್ಣ ವಿದ್ಯುತ್ ಸ್ಥಾವರ ಹಾಗೂ ಅಣು ವಿದ್ಯುತ್ ಸ್ಥಾವರ ಎರಡಕ್ಕೂ ಸಾಕಷ್ಟು ಜಲ ಸಂಪನ್ಮೂಲ ಅತ್ಯವಶ್ಯ. ನಮ್ಮಲ್ಲಿ ಅಣು ಇಂಧನ ಅಷ್ಟಾಗಿ ಲಭ್ಯವಿಲ್ಲ. ಈಗಿರುವ ಅಣು ಇಂಧನ ಸಂಪನ್ಮೂಲ ಸುಮಾರು ೧೦,೦೦೦ ಮೆ.ವಾ ವಿದ್ಯುದುತ್ಪಾದನೆಗೆ ಸಾಕಾಗುತ್ತದೆ. ಇಲ್ಲಿ ಇಂಧನವನ್ನು ದಕ್ಷತೆಯಿಂದ ಬಳಸಲು ಫಾಸ್ಟ್ ಬ್ರೀಡರ್ ತಂತ್ರಜ್ಞಾನದಂಥ ಹೊಸ ತಂತ್ರಜ್ಞಾನಗಳನ್ನು ರೂಪಿಸಲಾಗುತ್ತಿದೆ. ಅಮೆರಿಕಾದೊಡನೆ ಭಾರತ ನಡೆಸುತ್ತಿರುವ ಈ ಕುರಿತ ಸಂಧಾನದಿಂದ ಸೂಕ್ತ ರೀತಿಯ ಅಣು ಇಂಧನವನ್ನು ಆಮದು ಮಾಡಿಕೊಳ್ಳಲು ನೆರವು ಬರುವ ನಿರೀಕ್ಷೆಯಿದೆ.

**ಹೊ :** ಪುನರ್ನವೀಕರಿಸಿಕೊಳ್ಳಬಹುದಾದ ಶಕ್ತಿಯ ಸಂಪನ್ಮೂಲಗಳು ಯಾವುವು ? ಹಾಗೂ ಅವುಗಳ ಉತ್ಪತ್ತಿಯ ಪರಿಸ್ಥಿತಿ ಹೇಗಿದೆ ?

**ರು :** ವಾಯುಶಕ್ತಿ ಮತ್ತು ಸೌರಶಕ್ತಿಯಂತಹ ಸಂಪನ್ಮೂಲಗಳು ಕಲ್ಲಿದ್ದಲಿನಂತೆ ಮುಗಿದುಹೋಗುವ ಮೂಲಗಳಲ್ಲ. ಯಾವತ್ತಿಗೂ ಲಭ್ಯವಿರುತ್ತವೆ. ಹರಿಯುವ ನೀರಿನ ಹಾದಿಯಲ್ಲಿ ಸ್ಥಾಪಿಸಬಹುದಾದ ಸಣ್ಣ ಸಣ್ಣ ಜಲವಿದ್ಯುತ್ ಯಂತ್ರಗಳೂ ಇದೇ ಜಾತಿಗೆ ಸೇರಿವೆ. ಸಕ್ಕರೆ ಉದ್ಯಮದಲ್ಲಿ ಉತ್ಪತ್ತಿಯಾಗುವ ಕಬ್ಬಿನ ಸಿಪ್ಪೆ ಉತ್ತಮ ಇಂಧನವಾಗಿದ್ದು, ಅದನ್ನೇ ಬಳಸಿ ವಿದ್ಯುತ್ ಉತ್ಪತ್ತಿಮಾಡಿಕೊಳ್ಳಬಹುದು. ಇಂತಹ ಸಾವಯವ ಇಂಧನಗಳು ಒಂದು ಉದ್ಯಮದ ಭಾಗವಾಗಿ ಜೊತೆಜೊತೆಯಾಗಿ ಉತ್ಪಾದನೆಯಾಗುವುದರಿಂದ, ಕೋ-ಜನರೇಷನ್ ಎನ್ನಿಸಿಕೊಳ್ಳುತ್ತವೆ. ಮುಖ್ಯವಾಗಿ ಇವು ಮಿತವ್ಯಯಿಗಳು. ಪಟ್ಟಿ-೩ರಲ್ಲಿ ಈ ಮೂಲಗಳ ಸದ್ಯದ ಪರಿಸ್ಥಿತಿಯ ಚಿತ್ರವಿದೆ. ಪಟ್ಟಿ-೪ರಲ್ಲಿ ವಿವಿಧ ಮೂಲದ ವಿದ್ಯುಚ್ಛಕ್ತಿ ಉತ್ಪಾದನೆಯ ಬೆಲೆ ಹೋಲಿಕೆಯ ವಿವರಗಳಿವೆ.

ಅನೇಕ ಸ್ವತಂತ್ರ ವಿದ್ಯುದುತ್ಪಾದಕ ಸಂಸ್ಥೆಗಳು ವಾಯು, ಕಿರು ಜಲ ವಿದ್ಯುತ್ ಹಾಗೂ ಸೌರ ವಿದ್ಯುತ್ ಪ್ರಾಯೋಜನೆಗಳನ್ನು ವಿಕಾಸಗೊಳಿಸುತ್ತಿವೆ. ಇವನ್ನು ಅಸಾಂಪ್ರದಾಯಿಕ ಶಕ್ತಿ ಸಂಪನ್ಮೂಲಗಳೆಂದೂ ಕರೆಯಲಾಗುತ್ತದೆ. ಇವುಗಳ ಕೊಡುಗೆ ದೊಡ್ಡ ಪ್ರಮಾಣದ್ದಲ್ಲ. ಸಾಂಪ್ರದಾಯಿಕ ಮೂಲಗಳ ಜೊತೆಗೆ ಅವನ್ನು ಪೂರಕವಾಗಿ ಬಳಸಬಹುದು. ಇವು ಪರಿಸರ ಸ್ನೇಹಿಗಳು. ಇವುಗಳ ಕಾಣಿಕೆ ಮಹತ್ವಪೂರ್ಣ.

**ಸೌರ ವಿದ್ಯುತ್**

ಪುನರ್ನವೀಕರಣ ರೀತಿಯ ಅಸಾಂಪ್ರದಾಯಿಕ ಶಕ್ತಿ ಆಕರಗಳಲ್ಲಿ ಸೌರ ವೋಲ್ಟಾಯಿಕ್ ಶಕ್ತಿ ಆಕರವು ತುಂಬ ಖರ್ಚಿನದು. ಇದಕ್ಕೆ ತೊಡಗಿಸಬೇಕಾದ ಬಂಡವಾಳದ ಖರ್ಚು ಸಾಂಪ್ರದಾಯಿಕ ಶಕ್ತಿಗಳಿಗಿಂತ ಆರರಿಂದ ಎಂಟು

ಪಟ್ಟು ಹೆಚ್ಚಾಗಬಹುದು. ಖರ್ಚು ಹೆಚ್ಚಾಗಲು ಎರಡು ಕಾರಣಗಳು; ಸದ್ಯಕ್ಕೆ ಪರಿವರ್ತನೆಯ ತಾಂತ್ರಿಕ ದಕ್ಷತೆ ಕಮ್ಮಿಯಿದೆ. ರಾತ್ರಿ ವೇಳೆಯಲ್ಲಿನ ಉಪಯೋಗಕ್ಕೆ ವಿದ್ಯುತ್ತನ್ನು ಶೇಖರಿಸಲು ಬ್ಯಾಟರಿಗಳ ಅಗತ್ಯವಿದೆ. ನಿರ್ದಿಷ್ಟ ಪ್ರದೇಶಗಳಲ್ಲಿ ಈ ರೀತಿಯ ಉತ್ಪಾದನೆ ಸೂಕ್ತವಾಗಬಹುದು. (ಉದಾ : ಲಡಾಕ್) ಆದರೆ ನೇರವಾಗಿ ನೀರು ಕಾಯಿಸಲು ಅಥವಾ ಪದಾರ್ಥಗಳನ್ನು ಒಣಗಿಸಲು ಸೌರಶಕ್ತಿಯನ್ನು ಹೆಚ್ಚು ದಕ್ಷತೆಯಿಂದ ಉಪಯೋಗಿಸಬೇಕು. ವೆಚ್ಚವೂ ಕಡಿಮೆ.

ವಿದ್ಯುತ್‌ಜಾಲದಿಂದ ದೂರ ಇರುವ ಮತ್ತು ಬೇಡಿಕೆ ಕಮ್ಮಿ ಇರುವ ತಾಂಡಾಗಳು, ಹರಿಜನ ಬಸ್ತಿಗಳು, ಬುಡಕಟ್ಟು ಕಾಲೋನಿಗಳಿಗೆ ಸೌರ ವಿದ್ಯುತ್ ಒದಗಿಸುವುದು ಸೂಕ್ತ.

ಸೌರ ಫೋಟೋವೋಲ್ಟಾಯಿಕ್ ವಿದ್ಯುತ್ತನ್ನು ರೈಲ್ವೆ ಸಿಗ್ನಲಿಂಗ್, ಗ್ರಾಮಾಂತರ ದೂರವಾಣಿ ಅಥವಾ ಲೇಹ್, ಮೇಘಾಲಯ, ಅರುಣಾಚಲ ಪ್ರದೇಶಗಳಲ್ಲಿರುವಂತಹ ಸಾಗಣೆ ತಂತೀಮಾರ್ಗಗಳನ್ನು ಹಾಕಲಾಗದ, ಸಂಪರ್ಕವಿಲ್ಲದ ಪ್ರದೇಶಗಳಲ್ಲಷ್ಟೆ ಬಳಸುವುದು ಸೂಕ್ತ.

**ವಾಯುವಿದ್ಯುತ್**

ಉತ್ಪಾದನೆಯ ಬೆಲೆಯಲ್ಲಿ ವಾಯುವಿದ್ಯುತ್ ಆಕರವು ಸಾಂಪ್ರದಾಯಿಕ ಆಕರದ ಸರಿಸಮ ಬರುತ್ತದೆ. ಅಸಾಂಪ್ರದಾಯಿಕ ಶಕ್ತಿ ಆಕರಗಳ ಸಚಿವಾಲಯವು ಇದಕ್ಕೆ ಸಹಾಯ ಹಣ ಒದಗಿಸುವುದಲ್ಲದೆ ಯೂನಿಟ್‌ಗೆ ಸುಮಾರು ರೂ. ೩.೫೦ರಷ್ಟು ಬೆಲೆಯನ್ನೂ ನಿಗದಿಪಡಿಸಿದೆ.

ಕರ್ನಾಟಕದಲ್ಲಿ ಚಿತ್ರದುರ್ಗ ಹಾಗೂ ಗದಗ್ ಜಿಲ್ಲೆಗಳಲ್ಲಿ ವಾಯುವಿದ್ಯುತ್ ಸಂಭಾವ್ಯತೆ ಇದೆ. ರಾಜ್ಯದಲ್ಲಿ ಈಗಾಗಲೇ ೪೧೦ ಮೆ.ವಾ. ಶಕ್ತಿಯ ವಾಯು ಟರ್ಬೈನ್‌ಗಳು ಈಗಾಗಲೇ ಕಾರ್ಯ ನಿರ್ವಹಿಸುತ್ತಿವೆ. ಕೆಪಿಸಿಎಲ್ ಸಂಸ್ಥೆಯು ಗದಗ್ ಜಿಲ್ಲೆಯ ಕಪ್ಪತಗುಡ್ಡದಲ್ಲಿ ನಿರ್ಮಿಸಿ ನಡೆಸುತ್ತಿರುವ ವಾಯುವಿದ್ಯುತ್ ಘಟಕವು ಅತ್ಯುತ್ತಮವಾದುದು. ಆದರೆ ವಾಯುಶಕ್ತಿಯು ಋತುಬದ್ಧ. ಜುಲೈನಿಂದ ಸೆಪ್ಟೆಂಬರ್/ಅಕ್ಟೋಬರ್‌ವರೆಗಷ್ಟೆ ಕಾರ್ಯ ನಿರ್ವಹಿಸಬಲ್ಲುದು. ಆದರೆ ಈ ಅವಧಿಯಲ್ಲಿ ಕೃಷಿ ಬೇಡಿಕೆ ಅತ್ಯಲ್ಪ.

**ಹೊ :** ಶಕ್ತಿಯ ಉತ್ಪಾದನೆಯನ್ನು ಹೆಚ್ಚಿಸಲು ಎಂಥ ಇಂಧನಗಳ ಮಾದರಿಯ ಆಯ್ಕೆಯಾಗಬೇಕು ?

**ರು :** ಕೆಲವು ಸಂದರ್ಭಗಳಲ್ಲಿ ರಾಯಚೂರಿನ ವಿದ್ಯುತ್ ಘಟಕಕ್ಕೆ ಸುಮಾರು ೨೦೦೦೦ ಟನ್ನುಗಳಷ್ಟು ಕಲ್ಲಿದ್ದಲನ್ನು ಸಾವಿರ ಕಿ.ಮಿ.ಗಳಿಗಿಂತಲೂ ಹೆಚ್ಚು ದೂರದಿಂದ ಪ್ರತಿ ದಿನವೂ ತರಿಸಿಕೊಳ್ಳಬೇಕು. ಈ ಸಾಗಾಣಿಕೆಗೆ ಹೆಚ್ಚು ಖರ್ಚು ಬೀಳುತ್ತದೆ. ಕಲ್ಲಿದ್ದಲನ್ನು ಸಾಗಿಸಬೇಕೇ ಅಥವಾ ವಿದ್ಯುಚ್ಛಕ್ತಿಯನ್ನು ಗಣಿಯ ಹತ್ತಿರದಲ್ಲಿ ಉತ್ಪಾದನೆ ಮಾಡಿ ಟ್ರಾನ್ಸ್‌ಮಿಷನ್ ಲೈನುಗಳ ಮೂಲಕ ಕಳುಹಿಸಬೇಕೇ ಎಂಬುದರ ಬಗ್ಗೆ ಈಗಲೂ ಚರ್ಚೆ ನಡೆಯುತ್ತಲೇ ಇದೆ.

ಹೊಸ ತಾಂತ್ರಿಕ ಬೆಳವಣಿಗೆಯಿಂದಾಗಿ ಕೆಲವು ಸಂದರ್ಭಗಳಲ್ಲಿ ಇಂಧನಕ್ಕಿಂತ ಉತ್ಪಾದಿತ ವಿದ್ಯುಚ್ಛಕ್ತಿಯನ್ನು ರವಾನಿಸುವುದು ಹೆಚ್ಚು ಲಾಭದಾಯಕವೆಂದು ಕಂಡುಬಂದಿದೆ. ಹೊಸ ತಂತ್ರಜ್ಞಾನ, ಅಂದರೆ ಡಿ.ಸಿ. ಟ್ರಾನ್ಸ್‌ಮಿಷನ್ ಲೈನ್ ಮೂಲಕ, ಸಾವಿರ ಕಿಲೋ ಮೀಟರ್‌ಗಿಂತಲೂ ದೂರವಿರುವ ಟಲ್ಚೇರ್ ಗಣಿ (ಒರಿಸ್ಸಾ)ಯ ಹತ್ತಿರ ಸ್ಥಾಪಿಸಲ್ಪಟ್ಟ ವಿದ್ಯುತ್ ಕೇಂದ್ರದಿಂದ ಸುಮಾರು ೨೦೦೦ ಮೆ.ವಾ.ಗಳಷ್ಟು ವಿದ್ಯುತ್ತನ್ನು ಕೋಲಾರಕ್ಕೆ ಕಳುಹಿಸಲಾಗುತ್ತಿದೆ. ಇಲ್ಲಿಂದ ದಕ್ಷಿಣದ ನಾಲ್ಕು ರಾಜ್ಯಗಳಿಗೂ ಈ ವಿದ್ಯುತ್ತನ್ನು ಹಂಚಲಾಗುತ್ತಿದೆ. ಆದರೆ ಬಳ್ಳಾರಿ ಮತ್ತು ರಾಯಚೂರು ಕೇಂದ್ರಗಳಿಗೆ ಕಲ್ಲಿದ್ದಲನ್ನು ಇತರ ಕಡೆಯಿಂದ ತರಿಸಿಕೊಳ್ಳಬೇಕಾಗಿದೆ.

**ನೈಸರ್ಗಿಕ ಅನಿಲ**

ಗೋದಾವರಿ ನದೀಪಾತ್ರದಲ್ಲಿ ಲಭ್ಯವಿರುವ ನೈಸರ್ಗಿಕ ಅನಿಲವನ್ನು ಕೊಳಾಯಿ ಮೂಲಕ ವಿದ್ಯುತ್ ಕೇಂದ್ರಕ್ಕೆ ನೇರವಾಗಿ ಒಯ್ಯಬಹುದು. ಇದು ಅತ್ಯಂತ ಮಿತವ್ಯಯದ ಪರ್ಯಾಯ ಸಾಗಣೆ ವಿಧಾನ. ನೈಸರ್ಗಿಕ ಅನಿಲವನ್ನು ಆಮದು ಮಾಡಿಕೊಳ್ಳಬೇಕಾದರೆ ಅದನ್ನು ಮಧ್ಯಪ್ರಾಚ್ಯ ದೇಶಗಳಿಂದ ದ್ರವರೂಪದಲ್ಲಿ ಹಡಗುಗಳ ಮೂಲಕ ತರಿಸಿಕೊಂಡು, ರೇವುಪಟ್ಟಣದಲ್ಲಿ ಅದನ್ನು ಅನಿಲವನ್ನಾಗಿ ಪರಿವರ್ತಿಸಿ, ಆ ನಂತರ ಈ ಅನಿಲವನ್ನು ಕೊಳಾಯಿ ಮಾರ್ಗಗಳ ಮೂಲಕ ವಿದ್ಯುತ್ ಕೇಂದ್ರಗಳಿಗೆ ಹರಿಸಬೇಕಾಗುತ್ತದೆ. ಇದರಿಂದ ಅನಿಲ ವಿದ್ಯುತ್ತಿನ ಬೆಲೆ ಹೆಚ್ಚುತ್ತದೆ. ಅಲ್ಲದೆ ಜಾಗತಿಕ ಮಾರುಕಟ್ಟೆಯಲ್ಲಿ ತೈಲದ ಜೊತೆಗೆ ಅನಿಲದ ಬೆಲೆಯೂ ಆಗಾಗ್ಗೆ ಏರುಪೇರಾಗುತ್ತದೆ. ಬಿಡದಿಯ ಉದ್ದೇಶಿತ ೧೪೦೦ ಮೆ.ವಾ ಸಾಮರ್ಥ್ಯದ ಕಂಬೈನ್ಡ್ ಸೈಕಲ್ ನೈಸರ್ಗಿಕ ಅನಿಲ ವಿದ್ಯುದಾಗಾರಕ್ಕೆ ಯಾವ ರೀತಿಯಲ್ಲಿ ಅನಿಲ ಒದಗಿಸಬೇಕು ಎಂಬುದು ಇನ್ನೂ ನಿರ್ಣಯವಾಗಿಲ್ಲ. ಗೋದಾವರಿ ಕಡೆಯಿಂದ ವಿದ್ಯುತ್ ಬಂದರೆ ಬೆಲೆ ಕಮ್ಮಿಯಾಗುತ್ತದೆ. ಆದರೆ ಅನಿಲ ವಿದ್ಯುತ್ ಸ್ಥಾವರಗಳು ಕೆಲವು ವಿಶಿಷ್ಟ ಅನುಕೂಲತೆಗಳನ್ನು ಪಡೆದಿವೆ : ಇದಕ್ಕೆ ನೀರಿನ ಅವಶ್ಯಕತೆ ಕಲ್ಲಿದ್ದಲು ಆಧಾರಿತ ವಿದ್ಯುತ್ ಸ್ಥಾವರಗಳಿಗೆ ಬೇಕಾದುದಕ್ಕಿಂತ ಮೂರು ಪಟ್ಟು ಕಡಿಮೆ. ಅಗತ್ಯವಿರುವ ಭೂಮಿಯ ಪ್ರಮಾಣವೂ ತುಂಬ ಕಡಿಮೆ. ಕಲ್ಲಿದ್ದಲು ಹಾಗೂ ಬೂದಿ ನಿರ್ವಹಣೆಯ ಕಠಿಣ ಸಮಸ್ಯೆ ಇಲ್ಲ. ಪರಿಸರ ಮಾಲಿನ್ಯ ಕಮ್ಮಿ – ಬೂದಿಯೇ ಇರುವುದಿಲ್ಲ. ಇರಾನ್, ಪಾಕಿಸ್ತಾನ ಮತ್ತು ಬಾಂಗ್ಲಾ ದೇಶಗಳೊಡನೆ ಇತ್ತೀಚೆಗೆ ಅನಿಲ ಪೂರೈಕೆಗೆ ಸಂಧಾನಗಳು ಬೇಗ ನಡೆಯುತ್ತಿದ್ದು, ಈ ಬೆಳವಣಿಗೆ ಆಶಾದಾಯಕ ಎನ್ನಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಗೋದಾವರಿಯಿಂದ ಅನಿಲ ದೊರಕಿದರೆ ಬಹಳ ಅನುಕೂಲ.

**ಹೊ :** ರಾಜ್ಯಗಳ ವಿದ್ಯುನ್ಮಂಡಳಿಗಳು ಅಪಾರ ನಷ್ಟಕ್ಕೊಳಗಾಗಿರುವುದಕ್ಕೆ ಕಾರಣಗಳೇನು ?

**ರು :** ಕೃಷಿ ಕ್ಷೇತ್ರದಲ್ಲಿ ವಿದ್ಯುತ್ ಬಳಕೆ ಬಹಳ ಹೆಚ್ಚು. ಎಂದರೆ ಸುಮಾರು ಶೇ. ೪೦ರಷ್ಟು ಈ ರೀತಿಯ ಬಳಕೆಗೆ. ದರವೂ ಕೂಡ ಕಡಿಮೆಯೇ. ಸರ್ಕಾರವು ದರ ಕಡಿಮೆ ಮಾಡಿರುವುದರಿಂದ ಆಗುವ ನಷ್ಟವನ್ನು ತುಂಬಬೇಕಾಗಿದೆ. ಅದಲ್ಲದೆ ಅನೇಕ ಕಾರಣಗಳಿಂದ ರೈತರಿಂದಲೂ ಮತ್ತು ಪಂಚಾಯಿತಿಗಳಿಂದಲೂ ಬರಬೇಕಾದ ಹಣ ಪೂರ್ತಿ ಸಂದಾಯವಾಗುತ್ತಿಲ್ಲ. ಇದಲ್ಲದೆ ವಿತರಣಾ ವ್ಯವಸ್ಥೆ ಅತೃಪ್ತಿಕರವಾಗಿರುವುದರಿಂದ ವಿತರಣಾ ಜಾಲದ ನಷ್ಟ ಜಾಸ್ತಿಯಾಗಿದೆ. ಈ ಸ್ಥಿತಿಗೆ ಹೆಚ್ಚಿನ ಮಟ್ಟಿಗೆ ವಿತರಣಾ ಸಂಸ್ಥೆಗಳು ಹೊಣೆ ಎಂದು ಹೇಳಬಹುದು. ಕೆಲವೆಡೆಗಳಲ್ಲಿ ಆಡಳಿತದ ಖರ್ಚು ಜಾಸ್ತಿಯಿದೆ. ಈ ಕಾರಣಗಳಿಂದ ಮಂಡಳಿಗಳೂ ಭಾರಿ ನಷ್ಟದಲ್ಲಿವೆ.

**ಹೊ :** ಕಟ್ಟು-ಸಡಿಲಿಕೆ, (Un-bundling) ಘಟಕ ವಿಂಗಡನೆ, ಖಾಸಗೀಕರಣಗಳಂಥ ಸುಧಾರಣೆಗಳಿಂದ ಅಪೇಕ್ಷಿತ ಪರಿಣಾಮ ಆಗುತ್ತಿದೆಯೇ ?

**ರು :** ನಮ್ಮ ರಾಷ್ಟ್ರದಲ್ಲಿ ಖಾಸಗೀಕರಣ, ರಾಷ್ಟ್ರೀಕರಣ ಪ್ರಕ್ರಿಯೆಗಳಿಗೆ ತಮ್ಮದೇ ಆದ ಇತಿಹಾಸವಿದೆ. ೧೯೧೦ರ ವಿದ್ಯುಚ್ಛಕ್ತಿ ಸಂಬಂಧಪಟ್ಟ ಕಾನೂನಿನಲ್ಲಿ ವಿದ್ಯುತ್ ಸ್ಥಾವರಗಳು ಮತ್ತು ವಿದ್ಯುತ್ ವಿತರಣಾ ಕ್ಷೇತ್ರಗಳು ಖಾಸಗಿ ಕ್ಷೇತ್ರದಲ್ಲಿರುವುದಕ್ಕೆ ಅವಕಾಶವಿತ್ತು. ನಮ್ಮ ರಾಜ್ಯದಲ್ಲಿ ಈ ಜವಾಬ್ದಾರಿಯನ್ನು ಸರ್ಕಾರ ತಾನೇ ವಹಿಸಿಕೊಂಡಿತ್ತು. ಸ್ವಾತಂತ್ರ್ಯ ಬಂದ ನಂತರ ಈ ಧೋರಣೆ ಬದಲಾಯಿತು.

೧೯೪೪೮ರಲ್ಲಿ ಪಂಡಿತ ನೆಹರೂ ಅವರು ಲೆನಿನರಿಂದ ಪ್ರಭಾವಿತರಾಗಿ, ವಿದ್ಯುಚ್ಛಕ್ತಿಯು ದೇಶದ ಬೆಳವಣಿಗೆಗೆ ಅತಿ ಮುಖ್ಯ ಹಾಗಾಗಿ ಅದು ಸರಕಾರಿ ವಿಭಾಗದಲ್ಲಿರಬೇಕು ಎಂಬ ವಿವೇಕದಿಂದ ಒಂದು ಹೊಸ ಕಾನೂನನ್ನು (ಎಲೆಕ್ಟ್ರಿಸಿಟಿ ಸಪ್ಲೈ ಆ್ಯಕ್ಟ್-೧೯೪೪೮) ಜಾರಿಗೆ ತಂದರು. ಅದರಂತೆ ರಾಜ್ಯಗಳು ವಿದ್ಯುತ್ ಮಂಡಳಿಗಳನ್ನು ಸ್ಥಾಪಿಸಬೇಕಾಯಿತು. ವಿದ್ಯುತ್ ಮಂಡಳಿಗಳನ್ನು ಸ್ವಾಯತ್ತ ಸಂಸ್ಥೆಗಳು ಎಂಬುದಾಗಿ ಘೋಷಿಸಿದರು. ಯಾವ ರಾಜಕಾರಣಿಯೂ ಅದರಲ್ಲಿ ಸದಸ್ಯನಾಗಿರಲು ಸಾಧ್ಯವಿರಲಿಲ್ಲ. ಮಂಡಲಿಯ ಅಧ್ಯಕ್ಷ ಹಾಗೂ ಸದಸ್ಯರಿಗೆ ಇರಬೇಕಾದ ಅರ್ಹತೆಗಳನ್ನು ನಿಗದಿಪಡಿಸಲಾಯಿತು.



ಶ್ರೀ ರುದ್ರಪ್ಪನವರನ್ನು ಸಂದರ್ಶಿಸುತ್ತಿರುವವರು ಎಸ್. ಸುರೇಂದ್ರ ಮತ್ತು ಟಿ. ಎ. ರಂಗಮಣಿ

ಮಂಡಲಿಗಳೇ ಆಯವ್ಯಯಗಳನ್ನು ಅನುಮೋದಿಸಬೇಕಿತ್ತು. ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯನ್ನು ರಿಯಾಯಿತಿ ದರದಲ್ಲಿ ಒದಗಿಸಬೇಕಿತ್ತು. ಆಂಧ್ರ ಪ್ರದೇಶ, ಮಹಾರಾಷ್ಟ್ರ, ತಮಿಳುನಾಡುಗಳಂಥ ಇತರ ರಾಜ್ಯಗಳಲ್ಲಿ ವಿದ್ಯುತ್ ಉತ್ಪಾದನೆ, ಸಾಗಣೆ ಹಾಗೂ ವಿತರಣೆಗಾಗಿ ಕೇವಲ ಒಂದೇ ಮಂಡಲಿಯನ್ನು ಸ್ಥಾಪಿಸಿದ್ದರೆ ನಮ್ಮ ರಾಜ್ಯದಲ್ಲಿ ಸಾಗಣೆ, ವಿತರಣೆ ಹಾಗೂ ಉತ್ಪಾದನೆಗಾಗಿ ಬೇರೆ ಬೇರೆ ಮಂಡಲಿಗಳನ್ನು ಸ್ಥಾಪಿಸಲಾಯಿತು. ವಿದ್ಯುತ್ ಸಾಗಣೆ ಹಾಗೂ ವಿತರಣೆ ಎರಡನ್ನೂ ೧೯೫೭ರಲ್ಲಿ ಮೈಸೂರು ವಿದ್ಯುನ್ಮಂಡಲಿ ವಹಿಸಿಕೊಂಡಿತು. ಉತ್ಪಾದನೆಯ ಜವಾಬ್ದಾರಿಯನ್ನು ತಾನೇ ಇಟ್ಟುಕೊಂಡಿದ್ದ ಸರ್ಕಾರ ೧೯೭೦ರಲ್ಲಿ ಮೈಸೂರು ಪವರ್ ಕಾರ್ಪೊರೇಷನ್ (ಆ ನಂತರದಲ್ಲಿ ಅದು ಕರ್ನಾಟಕ ಪವರ್ ಕಾರ್ಪೊರೇಷನ್ ಆಯಿತು)ನ್ನು ಸ್ಥಾಪಿಸಿ ಅದನ್ನು ಅದಕ್ಕೆ ವಹಿಸಿಕೊಟ್ಟಿತು.

ಕಾಲಕ್ರಮದಲ್ಲಿ ರಾಜಕೀಯ ಹಸ್ತಕ್ಷೇಪ ಹೆಚ್ಚಿತು. ವಿದ್ಯುತ್ ದರಗಳನ್ನು ರಾಜಕೀಯ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಲಾಯಿತು. ಗ್ರಾಮ ವಿದ್ಯುದೀಕರಣ ಮತ್ತು ಪಂಪುಸೆಟ್ಟುಗಳಿಗೆ ವಿದ್ಯುತ್ ಒದಗಿಸುವಿಕೆ ಮುಂತಾದ ಕಾರ್ಯಕ್ರಮಗಳಿಗೆ ಪ್ರಾಮುಖ್ಯತೆ ನೀಡಲಾಯಿತು. ಇದಕ್ಕೆ ಬೇಕಾದ ಹಣದ ಮೊತ್ತವನ್ನು ರೂರಲ್ ಎಲೆಕ್ಟ್ರಿಫಿಕೇಷನ್ ಕಾರ್ಪೊರೇಷನ್‌ನಿಂದ ಪಡೆಯಲಾಯಿತು. ಈ ಯೋಜನೆಗಳಿಂದ ಸಾಕಷ್ಟು ಆದಾಯ ಬರದೇ ಇದ್ದ ಕಾರಣ ಸಾಲದ ಹೊರೆ ಮತ್ತಷ್ಟು ಜಾಸ್ತಿಯಾಯಿತು. ಮಂಡಳಿಗಳು ನಷ್ಟ ಅನುಭವಿಸಿದವು. ಆದರೆ ಕೆ.ಇ.ಬಿ. ಅದಕ್ಕೆ ಹೊರತಾಗಿತ್ತು. ಇದಕ್ಕೆ ಕಾರಣ ಶರಾವತಿಯಿಂದ ಉತ್ಪತ್ತಿಯಾಗುತ್ತಿದ್ದ ವಿದ್ಯುಚ್ಛಕ್ತಿಯ ಬೆಲೆ ಬಹಳ ಕಡಿಮೆ ಇತ್ತು.

೧೯೯೧ರಲ್ಲಿ ಸುಧಾರಣೆಗಳ ಭಾಗವಾಗಿ ಎಲ್ಲ ರಾಜ್ಯಗಳಲ್ಲೂ ಉತ್ಪಾದನೆ ಸಾಗಣೆ ವಿತರಣೆಗಳನ್ನು ಒಂದುಗೂಡಿಸಿದ್ದ ಕಟ್ಟುಪಾಡುಗಳನ್ನು ಸಡಿಲಿಸುವ ಪ್ರಯತ್ನಗಳು ಪ್ರಾರಂಭವಾದುವು.

ಆದರೆ ಈ ಸುಧಾರಣೆ 'ಬದಲಾವಣೆಗಾಗಿ ಬದಲಾವಣೆ' ಎಂಬುದಕ್ಕಷ್ಟೆ ಸೀಮಿತವಾಯಿತು. ವಿದ್ಯುತ್ ವಿಭಾಗದ ನಿರ್ವಹಣೆಯನ್ನು ಸುಧಾರಿಸಲು ಹೊರಡುವ ಮೊದಲು ಅದಕ್ಕೆ ಅಂಟಿರುವ ರೋಗವನ್ನು ಪತ್ತೆ ಹಚ್ಚಿ, ಆ ರೋಗಕ್ಕೆ ಪರಿಹಾರವನ್ನು ಕಂಡುಹಿಡಿಯಬೇಕು. ಅದು ಬಿಟ್ಟು ಸಂಸ್ಥೆಗಳ ದಕ್ಷತೆಯನ್ನು ಸುಧಾರಿಸಲು ಖಾಸಗೀಕರಣ ಮತ್ತು ವಿಭಜೀಕರಣವೇ ಪರಿಹಾರವೆಂದು ಭಾವಿಸಲಾಯಿತು.

**ವಿದ್ಯುತ್ ಕ್ಷೇತ್ರದ ಸುಧಾರೀಕರಣದ ಮೊದಲ ಹೆಜ್ಜೆ**

೧೯೯೧ರಲ್ಲಿ ವಿದ್ಯುದುತ್ಪಾದನೆಯ ಕ್ಷೇತ್ರದಲ್ಲಿ ಖಾಸಗೀಕರಣದ ಮೊದಲನೆಯ ಪ್ರಯತ್ನ ನಡೆಯಿತು. ಖಾಸಗಿ ಸಂಸ್ಥೆಗಳು ಉತ್ಪಾದನಾ ಕೇಂದ್ರಗಳನ್ನು ಸ್ಥಾಪಿಸಿದರೆ ವಿದ್ಯುತ್ ಕೊರತೆಯು ನಿವಾರಣೆಯಾಗುತ್ತದೆ ಎಂಬ ಭಾವನೆ ಸರ್ಕಾರದಲ್ಲಿ ಮೂಡಿಬಂತು. ಸಂಸ್ಥೆಗಳನ್ನು ಆಕರ್ಷಿಸಲು ಅನೇಕ ರಿಯಾಯಿತಿಗಳನ್ನು ಪ್ರಕಟಿಸಿದ್ದಾಯಿತು. ಅನೇಕ ಸಂಸ್ಥೆಗಳು ಮುಂದೆಬಂದವು. ಅವರಿಗೆ ಅನುಮತಿ ಕೊಟ್ಟಿದ್ದೂ ಆಯಿತು. ಅನುಮತಿಗಳ ಲೆಕ್ಕ ತೆಗೆದುಕೊಂಡರೆ ರಾಜ್ಯದಲ್ಲಿ ಸಾವಿರಾರು ಮೆ.ವಾ ಶಕ್ತಿಯ ಉತ್ಪಾದನಾ ಕೇಂದ್ರಗಳು ಸ್ಥಾಪಿತವಾಗಬೇಕಾಗಿತ್ತು. ಆದರೆ ಒಂದು ಯೋಜನೆಯೂ ಕಾರ್ಯರೂಪಗೊಳ್ಳಲಿಲ್ಲ. ಅಸ್ತಿತ್ವಕ್ಕೆ ಬರಲಿಲ್ಲ.

ಕೋಷ್ಟಕ - ೪ ಅಸಾಂಪ್ರದಾಯಿಕ ಶಕ್ತಿಯೋಜನೆಗಳಿಗೆ ತಗಲುವ ತುಲನಾತ್ಮಕ ಖರ್ಚು

| ಮೂಲ | ಬಂಡವಾಳ ವೆಚ್ಚ |
|---|---|
| **ಅಸಾಂಪ್ರದಾಯಿಕ** | |
| ವಾಯು | ೪-೫ ಕೋಟಿ/ಮೆವಾ |
| ಸೌರಫೋಟೋವೋಲ್ಟಾಯಿಕ್ | ೩೦-೪೦ ಕೋಟಿ/ಮೆವಾ |
| ಕಿರು ಜಲವಿದ್ಯುತ್ | ೪-೬ ಕೋಟಿ/ಮೆವಾ |
| **ಸಾಂಪ್ರದಾಯಿಕ** | |
| ಬೃಹತ್ ಜಲವಿದ್ಯುತ್ | ೧.೫-೪.೦ ಕೋಟಿ/ಮೆವಾ ಲಭ್ಯವಿರುವ ಮೇಲ್ಪುದಿ ಅವಲಂಬಿಸಿ |
| ಬೃಹತ್ ಉಷ್ಣವಿದ್ಯುತ್ | ೪-೪.೫ ಕೋಟಿ/ಮೆವಾ |
| ಬೃಹತ್ ಅನಿಲವಿದ್ಯುತ್ | ೩.೫ ಕೋಟಿ/ಮೆವಾ |

ಕೋಷ್ಟಕ - ೩

**ಪುನರ್‌ನವೀಕರಿಸಿಕೊಳ್ಳಬಲ್ಲ ಶಕ್ತಿ – ಕರ್ನಾಟಕ ಹಾಗೂ ಭಾರತದ ಪರಿಸ್ಥಿತಿ**

| | ಕರ್ನಾಟಕ | | ಭಾರತ | |
|---|---|---|---|---|
| | ಸಂಭಾವ್ಯತೆ | ಪ್ರಸ್ತುತ | ಸಂಭಾವ್ಯತೆ | ಪ್ರಸ್ತುತ |
| ವಾಯು | ೨೦೦೦ | ೪೩೯ | ೪೫೦೦೦ | ೩೮೦೦ |
| ಬಯೋಮಾಸ್ | – | ೫೮ | ೧೬೦೦೦ | ೩೦೦ |
| ಕಿರು ಜಲವಿದ್ಯುತ್ | ೭೦೦ | ೨೧೯ | ೧೫೦೦೦ | ೧೭೦೦ |
| ಕೊಜೆನ್ | ೫೩೩ | ೨೯೪ | ೩೫೦೦ | ೪೫೦ |
| ಎಸ್‌ಪಿವಿ | ೨೦ಮೆವಾ/ಚ.ಕಿ.ಮೀ. | ಇಲ್ಲ | ೨೦ಮೆವಾ/ಚ.ಕಿಮೀ. | ೨.೮ |
| ಒಟ್ಟು | ೩೨೩೩ | ೧೦೧೦ | ೭೯೫೦೦ | ೬೨೫೨.೮ |

ಕೊರತೆ ಹೆಚ್ಚುತ್ತಾಹೋಯಿತು. ಈ ಬಾರಿ ಶೀಘ್ರವಾಗಿ ಸ್ಥಾಪಿಸಬಹುದಾದ ಸಣ್ಣ ಯೋಜನೆಗಳನ್ನು ಖಾಸಗಿ ಕ್ಷೇತ್ರದ ಮೂಲಕ ಸ್ಥಾಪಿಸುವ ಮತ್ತೊಂದು ರೀತಿಯ ಪ್ರಯೋಗ ನಡೆಯಿತು. ಆದರೆ ಅದಕ್ಕೆ ಉಪಯೋಗಿಸತಕ್ಕಂತಹ ಇಂಧನ ನ್ಯಾಫ್ತಾ ಎಂದು ಗುರುತಿಸಲಾಯಿತು. ನ್ಯಾಫ್ತ ಬೆಲೆ ಏರಿತು. ಈ ಪ್ರಯೋಗವೂ ಸೋಲು ಕಂಡಿತು. ಅಂತಿಮವಾಗಿ ಕೇವಲ ಎರಡು ಸ್ಥಾವರಗಳು ಸ್ಥಾಪಿತವಾದವು. ೧) ಟಾಟಾ ವಿದ್ಯುತ್ ಕಂಪನಿ ೮೧.೩ ಮೆ. ವಾ. ಸಾಮರ್ಥ್ಯ ಮತ್ತು ೨) ರಾಯಲಸೀಮ ಕಂಪನಿಯ ಸಾಮರ್ಥ್ಯ ೨೧.೮ ಮೆ.ವಾ. ಇದಲ್ಲದೆ, ಜಿಂದಾಲ್ ಕಂಪನಿ ತನ್ನ ಸ್ವಂತ ಉಪಯೋಗಕ್ಕೆಂದು ಸ್ಥಾಪಿಸಿದ ವಿದ್ಯುತ್ ಕೇಂದ್ರದಿಂದ ೧೩೦ ಮೆ.ವಾ ವಿದ್ಯುತ್ ಸರಬರಾಜು ಮಾಡುತ್ತಿದೆ.

ಮೇಲಿನ ಎರಡು ಯತ್ನಗಳೂ ವಿಫಲಗೊಂಡಿದ್ದರಿಂದ ಇನ್ನೊಂದು ಹೊಸ ಪ್ರಯೋಗಕ್ಕೆ ಸರ್ಕಾರ ಕೈ ಹಾಕಿತು. ಅತಿ ಶೀಘ್ರಕಾಲದಲ್ಲೇ ಎಲ್ಲೆಂದರಲ್ಲಿಗೆ ವಿದ್ಯುತ್ ಒದಗಿಸಬಲ್ಲ ದೋಣಿ ಮೇಲೆ ಸ್ಥಾಪಿತವಾದ ವಿದ್ಯುತ್ ಕೇಂದ್ರದಿಂದ, ವಿದ್ಯುಚ್ಛಕ್ತಿಯನ್ನು ಕೊಳ್ಳುವುದು. ಬೆಲೆ ಹೆಚ್ಚೆನಿಸಿದರೂ ಮೂರು ಸಂಸ್ಥೆಗಳಿಗೆ ಅನುಮತಿ ನೀಡಲಾಯಿತು. ಕೊನೆಗೆ ತಣ್ಣೀರು ಬಾವಿ (ಮಂಗಳೂರು ಹತ್ತಿರ) ಒಂದು ಸ್ಥಾವರ ಚಾಲನೆಗೆ ಬಂದಿದೆ. ಆದರೆ ಅದು ನ್ಯಾಫ್ತ ಇಂಧನವನ್ನು ಉಪಯೋಗಿಸುವುದರಿಂದಾಗಿ ವಿದ್ಯುದ್ದರವೂ ಬಹಳ ಜಾಸ್ತಿ. ದರ ಹೆಚ್ಚು ಎಂಬ ಕಾರಣದಿಂದಾಗಿ ವಿದ್ಯುತ್ತನ್ನು ಕೊಳ್ಳದಿದ್ದಾಗಲೂ ನಿಗದಿತ ಶುಲ್ಕ ನೀಡಲೇಬೇಕಾಗಿದೆ.

ಖಾಸಗೀಕರಣದಿಂದಾದ ಮತ್ತೊಂದು ಅನುಭವವನ್ನು ತಿಳಿಸಲೇಬೇಕು. ಆಲಮಟ್ಟಿ ಅಣೆಕಟ್ಟಿನ ಕೆಳಗೆ ೨೯೦ ಮೆ.ವಾ. ಜಲ ವಿದ್ಯುತ್ ಯೋಜನೆಯನ್ನು ಸಿದ್ಧಪಡಿಸಲಾಯಿತು. ಸರ್ಕಾರದ ನೀತಿಗೆ ಅನುಸಾರವಾಗಿ ೧೯೯೧ರಲ್ಲಿ ಈ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ಖಾಸಗಿ ಸಂಸ್ಥೆಯೊಂದಕ್ಕೆ ಒಪ್ಪಿಸಿ ಹಲವಾರು ವರ್ಷಗಳು ಕಳೆದಿದ್ದರೂ ಯಾವುದೇ ಪ್ರಗತಿ ಸಾಧಿಸಲಾಗಲಿಲ್ಲ. ಕೊನೆಗೆ ಈ ಸಂಸ್ಥೆ ೫ ಘಟಕಗಳ ನಿರ್ಮಾಣದ ೧೪೪೦ ಕೋಟಿ ರೂಗಳ ಅಂದಾಜಿನ ಯೋಜನೆಯನ್ನು ಸರ್ಕಾರಕ್ಕೆ ಕಳಿಸಿ ಕೊಟ್ಟಿತು. ಸರ್ಕಾರವು ಕೆಪಿಸಿಎಲ್‌ಗೆ ಕಳಿಸಿಕೊಟ್ಟಾಗ ಈ ಯೋಜನೆಯನ್ನು ಕೇವಲ ೬೭೪ ಕೋಟಿ ಖರ್ಚಿನಲ್ಲಿ ನಿರ್ಮಿಸಬಹುದೆಂದು ಆ ಸಂಸ್ಥೆ ತಿಳಿಸಿತು. ಕೊನೆಗೆ ಸರ್ಕಾರ ಈ ಯೋಜನೆಯನ್ನು ಮತ್ತೆ ಕೆಪಿಸಿಎಲ್‌ಗೆ ಹಿಂದಿರುಗಿಸಿತು. ಕೇವಲ ಎರಡೂವರೆ ವರ್ಷಗಳಲ್ಲಿ ಅಂದಾಜು ಮೀರದಂತೆ ಕೆಪಿಸಿಎಲ್ ಈ ಯೋಜನೆಯನ್ನು ಚಾಲನೆಗೆ ತಂದಿತು. ಖಾಸಗೀಕರಣದ ಬೆಲೆ ೭೦೦ ಕೋಟಿಗಿಂತ ಹೆಚ್ಚೆಂದು ಸರ್ಕಾರಕ್ಕೆ ಮನವರಿಕೆಯಾಯಿತು.

**ಹಣದ ಕೊರತೆ ಇಲ್ಲದಿದ್ದರೆ ಸರಕಾರಿ ವಿಭಾಗದ ಸಂಘಟನೆಗಳು ಅಲ್ಪಾವಧಿಯಲ್ಲಿ ಮಿತವ್ಯಯದೊಂದಿಗೆ ಯೋಜನೆಗಳನ್ನು ನಿರ್ಮಿಸಿ ಪೂರೈಸುವ ಸಾಮರ್ಥ್ಯ ಹೊಂದಿವೆ ಎಂಬುದು ಇದರಿಂದ ಸಾಬೀತಾಗುತ್ತದೆ. ವಿದ್ಯುದುತ್ಪಾದನಾ ವಿಭಾಗದ ಸಮಸ್ಯೆಗೆ ಖಾಸಗೀಕರಣವು ಪರಿಹಾರ ಅಲ್ಲವೇಅಲ್ಲ.**

ನಾನು ಖಾಸಗೀಕರಣವನ್ನು ಥ್ಯಾಚರಿಸಂ ಎಂದು ಕರೆಯುತ್ತೇನೆ. ಇಂಗ್ಲೆಂಡಿನಲ್ಲಿ ಸರಕಾರಿ ಒಡೆತನದಲ್ಲಿದ್ದ ವಿದ್ಯುದುತ್ಪಾದನಾ ಘಟಕಗಳನ್ನು ಆಗಿನ ಪ್ರಧಾನಿ ಥ್ಯಾಚರ್ ಸಂಪೂರ್ಣವಾಗಿ ಖಾಸಗೀಕರಣಗೊಳಿಸಿದರು. ವಿದ್ಯುತ್ ಕ್ಷೇತ್ರದಲ್ಲಿ ಸ್ಥಿತಿ ಸ್ವಲ್ಪಮಟ್ಟಿಗೆ ಉತ್ತಮಗೊಂಡರೂ ರೈಲ್ವೆ ಕ್ಷೇತ್ರ ತೊಂದರೆಗೊಳಗಾಯಿತು.

ಫ್ರಾನ್ಸಿನಲ್ಲಿ ವಿದ್ಯುದುತ್ಪಾದನಾ ವಿಭಾಗವು ಇನ್ನೂ ಸರಕಾರಿ ಮಾಲೀಕತ್ವದಲ್ಲೇ ಇದ್ದು ಚೆನ್ನಾಗಿ ಕಾರ್ಯ ನಿರ್ವಹಿಸುತ್ತಿದೆ.

ಖಾಸಗಿ ವಿಭಾಗದ ವಿದ್ಯುದುತ್ಪಾದನಾ ಘಟಕಗಳು ಯಶಸ್ವಿಯಾಗಿಲ್ಲ ಎಂದೇನೂ ಇಲ್ಲ. ಮುಂಬಯಿಯ ಬಾಂಬೇ ಸಬರ್ಬನ್ ಎಲೆಕ್ಟ್ರಿಸಿಟಿ ಸಪ್ಲೈ ಕಂಪನಿಯು ಖಾಸಗಿ ಒಡೆತನದ್ದು. ಅದು ವರ್ಷಾಂತರಗಳಿಂದ ಯಶಸ್ವಿಯಾಗಿ ಕೆಲಸ ಮಾಡುತ್ತಿದೆ. ಈಗ ಅದನ್ನು ರಿಲಯನ್ಸ್ ಕಂಪನಿ ತನ್ನ ವಶಕ್ಕೆ

ತೆಗೆದುಕೊಂಡಿದೆ. ಮೊನ್ನೆ ಮೊನ್ನೆ ಮುಂಬಯಿಯಲ್ಲಿ ವಿಪರೀತ ಮಳೆಯಿಂದ ಉಂಟಾದ ಪರಿಸ್ಥಿತಿಯಲ್ಲಿ ಈ ಕಂಪನಿ ಸಕಾಲದಲ್ಲಿ ವಿದ್ಯುತ್ ಪೂರೈಕೆಯ ವ್ಯವಸ್ಥೆಯನ್ನು ಸರಿಪಡಿಸಲಾಗದೆ ಸಾರ್ವಜನಿಕರ ಕ್ಷಮೆ ಕೋರಿದ್ದು ಇದೊಂದೇ ಒಂದು ಸಂದರ್ಭದಲ್ಲಿ. ಖಾಸಗಿ ಒಡೆತನದ ಟಾಟಾ ಪವರ್ ಕಂಪನಿ ಇನ್ನೂ ಚೆನ್ನಾಗಿ ಕೆಲಸ ಮಾಡುತ್ತಿದೆ. ಅಷ್ಟೇ ದಕ್ಷತೆಯಿಂದ ಸಾರ್ವಜನಿಕ ಕ್ಷೇತ್ರದಲ್ಲಿರುವ ಬಿ.ಇ.ಎಸ್.ಟಿ. ಸಂಸ್ಥೆ ಮುಂಬಯಿಯ ಮಧ್ಯಭಾಗದಲ್ಲಿ ವಿದ್ಯುತ್ ಸರಬರಾಜು ಮಾಡುತ್ತಿದೆ ಎಂಬುದು ಬಹಳ ಜನರಿಗೆ ತಿಳಿದಿಲ್ಲ.

ಅದೇ ಹೊತ್ತಿನಲ್ಲಿ ಎನ್‌ಟಿಪಿಸಿ, ಎಪಿಎಸ್‌ಇಬಿ (ಈಗ ಇದು ಎಪಿಜೆಇಎನ್‌ಸಿಓ ಹಾಗೂ ಎಪಿಜಿಆರ್ ಐಡಿಸಿಓ ಎಂಬುದಾಗಿ ವಿಭಜನೆಗೊಂಡಿದೆ), ಕೆಪಿಸಿಎಲ್‌ಗಳಂಥ ಸರಕಾರಿ ಸಂಘಟನೆಗಳು ತುಂಬ ಚೆನ್ನಾಗಿ ಕೆಲಸ ಮಾಡುತ್ತಿವೆ. ತಮ್ಮ ಸಾರ್ವಜನಿಕ ಹೊಣೆಗಾರಿಕೆಯನ್ನು ಅರಿತಿವೆ. ಅವು ಕೇವಲ ವ್ಯಾಪಾರಿ ಸಂಸ್ಥೆಗಳಲ್ಲ.

**ಕರ್ನಾಟಕದಲ್ಲಿ ಸಾಗಣೆ ಹಾಗೂ ವಿತರಣೆ**

ಸುಧಾರಣಾ ಪ್ರಕ್ರಿಯೆಯ ಒಂದು ಭಾಗವಾಗಿ ೧೯೯೯ರಲ್ಲಿ ಸಾಗಣೆ ಹಾಗೂ ವಿತರಣೆ ವಿಭಾಗಗಳನ್ನು ಪ್ರತ್ಯೇಕಗೊಳಿಸಿ ಸಾಗಣೆಗಾಗಿ ಕೆಪಿಟಿಸಿಎಲ್ ಸಂಸ್ಥೆಯನ್ನು ರೂಪಿಸಲಾಯಿತು. ನಾಲ್ಕು ವಲಯಗಳನ್ನಾಗಿ ವಿತರಣೆಯನ್ನು ವಿಭಜಿಸಲಾಯಿತು. ವಿಭಜನೆಯನ್ನು ಯಾವ ಆಧಾರದ ಮೇಲೆ ಮಾಡಬೇಕು ಎಂಬ ಪ್ರಶ್ನೆ ಉದ್ಭವಿಸಿತು. ವಲಯಗಳ ಆಧಾರದ ಮೇಲೆ ವಿಭಜನೆ ಮಾಡಬೇಕೆಂದು ನಾನು ಮಾಡಿದ ಸಲಹೆಯ ಮೇರೆಗೆ, ಹುಬ್ಬಳ್ಳಿ, ಗುಲಬರ್ಗಾ, ಮಂಗಳೂರು ಹಾಗೂ ಬೆಂಗಳೂರು ಎಂದು ವಲಯವಿಭಜನೆ ಮಾಡಿ ನಾಲ್ಕು ಎಸ್‌ಕಾಂಗಳನ್ನು ಸ್ಥಾಪಿಸಲಾಯಿತು. ಈಗ ವಿಶ್ವಬ್ಯಾಂಕ್‌ನ ಸಲಹೆಯ ಮೇರೆಗೆ ಈ ಎಸ್‌ಕಾಂಗಳನ್ನು ಖಾಸಗೀಕರಣಗೊಳಿಸುವ ಪ್ರಯತ್ನ ನಡೆಯುತ್ತಿದೆ.

**ನಿಜ ಹೇಳಬೇಕೆಂದರೆ, ಸಾರ್ವಜನಿಕ ಜೀವನಕ್ಕೆ ಅತ್ಯಗತ್ಯವಾದ ಹಾಗೂ ಸಾರಭೂತವಾದ ಕ್ಷೇತ್ರಗಳನ್ನು ಖಾಸಗೀಕರಣಗೊಳಿಸಬಾರದು. ಪ್ರಾಥಮಿಕ ಶಿಕ್ಷಣ, ನೀರು ಸರಬರಾಜು, ನೈರ್ಮಲ್ಯ, ವಿದ್ಯುಚ್ಛಕ್ತಿ, ರೈಲ್ವೆ ವಿಭಾಗಗಳಂಥ ಮುಖ್ಯ ಸಂಸ್ಥೆಗಳನ್ನು ಸರಕಾರವೇ ನಡೆಸಬೇಕು ಎನ್ನುವುದು ನನ್ನ ಖಚಿತ ಹಾಗೂ ಅನುಭವಗಮ್ಯ ಅಭಿಪ್ರಾಯ.**

**ಹೊ :** ನಿಯಂತ್ರಿತ ವ್ಯವಸ್ಥೆ ಎಷ್ಟು ಪ್ರಸ್ತುತ ? ಇದರಿಂದ ಪ್ರಯೋಜನವಾಗಿದೆಯೇ ? ಇದನ್ನು ಎಷ್ಟರಮಟ್ಟಿಗೆ ಟೀಕಿಸಬಹುದು ?

**ರು :** ೧೯೯೯ರಲ್ಲಿ ಕೇಂದ್ರ ವಿದ್ಯುತ್ ನಿಯಂತ್ರಣ ಆಯೋಗ (ಸೆಂಟ್ರಲ್ ಎಲೆಕ್ಟ್ರಿಸಿಟಿ ರೆಗ್ಯುಲೇಟರಿ ಕಾರ್ಪೊರೇಷನ್)ವನ್ನು ರಚಿಸಲಾಯಿತು. ಕರ್ನಾಟಕದಲ್ಲಿ ಇಂತಹ ನಿಯಂತ್ರಣ ಆಯೋಗ (ಕೆಇಆರ್‌ಸಿ)ವನ್ನು ಅದೇ ವರ್ಷ ಸ್ಥಾಪಿಸಲಾಯಿತು. ಕೆಪಿಟಿಸಿಎಲ್‌ನಿಂದ ಎಸ್ಕಾಂಗಳಿಗೆ ವಿದ್ಯುತ್ ಮಾರಾಟ ದರಗಳು ಮತ್ತು ಗ್ರಾಹಕರಿಗೆ ಸರಬರಾಜು ಮಾಡುವ ವಿದ್ಯುತ್ ದರಗಳನ್ನು ಪರಿಶೀಲಿಸಿ, ಆಡಳಿತದ ಖರ್ಚು ವೆಚ್ಚ, ಬಡ್ಡಿ ಇತ್ಯಾದಿ ಖರ್ಚುಗಳು, ಸಾಗಣೆ, ವಿತರಣೆಯಲ್ಲಿ ಆಗುವ ನಷ್ಟ, ಸೋರಿಕೆ ಮುಂತಾದುವುಗಳನ್ನೆಲ್ಲಾ ವಿಮರ್ಶಿಸಿ ಈ ಸಂಸ್ಥೆಯು ಸಾಮಾನ್ಯವಾಗಿ ವಿವಿಧ ವಿದ್ಯುತ್ ಉತ್ಪಾದನಾ ಕೇಂದ್ರಗಳಿಂದ ಒದಗಿಸುವ ವಿದ್ಯುತ್ ದರಗಳಿಗೆ ಒಪ್ಪಿಗೆ ನೀಡುತ್ತಿದೆ. ಅದಲ್ಲದೆ ಜನಗಳ ಮತ್ತು ಸಂಸ್ಥೆಗಳ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳುತ್ತಿದೆ. ಗ್ರಾಹಕರಿಗೆ ಅನ್ಯಾಯವಾಗದಂತೆ ಎಚ್ಚರ ವಹಿಸುತ್ತಿದೆ. ಈ ವ್ಯವಸ್ಥೆಯಲ್ಲಿ ವಿದ್ಯುತ್ ಉತ್ಪಾದನಾ ಕೇಂದ್ರಗಳು, ಕೆಪಿಸಿಎಲ್, ಕೆಪಿಟಿಸಿಎಲ್ ಮತ್ತು ಎಸ್ಕಾಂಗಳ ದಕ್ಷತೆ ಬಗ್ಗೆ ಗಮನಹರಿಸಲೇಬೇಕಾಗುತ್ತದೆ. ಕೆಲವು ನಿಯಂತ್ರಣ ಆಯೋಗಗಳು ವ್ಯಾಪ್ತಿ ಮೀರಿ ವರ್ತಿಸುವ ಸಂದರ್ಭಗಳೂ ಇವೆ. ಒಟ್ಟಿನಲ್ಲಿ ದರಗಳ ಬಗೆಗಿನ ತೀರ್ಮಾನ ಸರ್ಕಾರದ ವ್ಯಾಪ್ತಿಗೆ ಬರುವುದಿಲ್ಲ. ಸಾಮಾಜಿಕ ಕಾರಣಗಳಿಂದ ಯಾವುದಾದರೂ ಗ್ರಾಹಕ ವೃಂದಕ್ಕೆ ದರವನ್ನು ಸರ್ಕಾರದ ವತಿಯಿಂದ ಇಳಿಸಿದಾಗ ಮಾತ್ರ ಸರ್ಕಾರವೇ ನಷ್ಟ ತುಂಬಿಸಬೇಕಾಗುತ್ತದೆ.

ನಿಯಂತ್ರಣ ಆಯೋಗವು ಈಗಾಗಲೇ ಅಸ್ಸಾಂ, ಆಂಧ್ರ ಪ್ರದೇಶ, ದಿಲ್ಲಿ, ಗೋವಾ, ಗುಜರಾತ್, ಹರಿಯಾಣ, ಹಿಮಾಚಲ ಪ್ರದೇಶ, ಕರ್ನಾಟಕ, ಮಧ್ಯ ಪ್ರದೇಶ, ಮಹಾರಾಷ್ಟ್ರ, ಒರಿಸ್ಸಾ, ಪಂಜಾಬ್, ರಾಜಾಸ್ತಾನ, ತಮಿಳುನಾಡು, ಉತ್ತರಾಂಚಲ್, ಉತ್ತರ ಪ್ರದೇಶ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಸ್ಥಾಪಿತವಾಗಿವೆ. ವಿದ್ಯುತ್ ಸಚಿವಾಲಯ, ಕೇಂದ್ರ ವಿದ್ಯುತ್ ಪ್ರಾಧಿಕಾರ ಹಾಗೂ ನಿಯಂತ್ರಣ ಆಯೋಗ – ಇವುಗಳ ನಡುವಿನ ಜವಾಬ್ದಾರಿಯ ವ್ಯಾಪ್ತಿಗಳು ಅನೇಕ ವೇಳೆ ಪರಸ್ಪರ ಅತಿಕ್ರಮಿಸುತ್ತವೆ.



ಬಿ. ಜಿ. ರುದ್ರಪ್ಪ ಮತ್ತು ಕೆ. ಎಸ್. ಪಾರ್ಥಸಾರಥಿ

**ಹೊ :** ಮುಂದಿನ ಹತ್ತು ವರ್ಷಗಳಲ್ಲಿ ಕರ್ನಾಟಕದ ವಿದ್ಯುತ್ ಯೋಜನೆ ಹೇಗೆ ನಡೆದಿದೆ ?

**ರು :** ಮುಂದಿನ ಹತ್ತು ವರ್ಷಗಳಲ್ಲಿ ಕನಿಷ್ಠ ೫ ಅಥವಾ ೬ ಸಾವಿರ ಮೆ.ವಾ. ಉತ್ಪಾದನೆಯಾಗಬೇಕು. ಆದರೆ ಇದಕ್ಕೆ ಬೇಕಾದ ಮೂಲ ಪರಿಕರಗಳ ಅಂದಾಜಿನ ಪ್ರಮಾಣ ಎದೆಗೆಡಿಸುತ್ತದೆ. ಉದಾಹರಣೆಗೆ, ರಾಯಚೂರಿನ ೧೪೭೦ ಮೆ.ವಾ. ಉಷ್ಣ ವಿದ್ಯುತ್ ಸ್ಥಾವರಕ್ಕೆ ದಿನಕ್ಕೆ ೨೦,೦೦೦ ಟನ್ ಕಲ್ಲಿದ್ದಲು ಬೇಕು. ಇದು ಹೊರಹಾಕುವ ೬೦೦೦ ಟನ್ ಬೂದಿಯನ್ನು ವಿಲೇವಾರಿ ಮಾಡುವ ವ್ಯವಸ್ಥೆ ಬೇಕು. ಕೆಪಿಸಿಎಲ್ ಈ ಬೂದಿ ಪ್ರಮಾಣದಲ್ಲಿ ಅರ್ಧಕ್ಕೂ ಹೆಚ್ಚು ಭಾಗವನ್ನು ಸಿಮೆಂಟ್ ಕೈಗಾರಿಕೆಗಳಿಗೆ ಬಳಸಲು ಸರಬರಾಜು ಮಾಡುವುದರಲ್ಲಿ ಯಶಸ್ವಿಯಾಗಿದೆ. ಮಾಲಿನ್ಯ ಸಮಸ್ಯೆಯನ್ನು ಇದು ಸ್ವಲ್ಪಮಟ್ಟಿಗೆ ಪರಿಹರಿಸಿದೆ. ಈ ವಿದ್ಯುತ್ ಸ್ಥಾವರಕ್ಕೆ ವಾರ್ಷಿಕ ೨ ಟಿಎಂಸಿಗೂ ಹೆಚ್ಚು ಪ್ರಮಾಣದಲ್ಲಿ ನೀರು ಬೇಕು. (ಉಷ್ಣ ವಿದ್ಯುತ್ ಸ್ಥಾವರದಲ್ಲಿ ನೀರನ್ನು ಉಗಿ ಆವರ್ತದಲ್ಲಿ ಒಳಗೇ ಸುತ್ತಿಸಲಾಗುತ್ತದೆ. ಈ ಪ್ರಕ್ರಿಯೆಯಲ್ಲಿ ನಷ್ಟವಾಗುವ ನೀರನ್ನು ತುಂಬಲು 'ಸರಿದೂಗಿಕೆ' ನೀರು ಸೇರಿಸಿದರೆ ಸಾಕು.)

೬೦೦೦ ಮೆ.ವಾ.ನಷ್ಟು ವಿದ್ಯುದುತ್ಪಾದನೆ ಹೆಚ್ಚಿಸಲು ವಿದ್ಯುತ್ ಸ್ಥಾವರಗಳಿಗೆ ಎಷ್ಟು ಕಲ್ಲಿದ್ದಲು, ನೀರು ಹಾಗೂ ಭೂಮಿ ಬೇಕಾಗುತ್ತದೆ ಎಂಬುದನ್ನು ಇದರಿಂದ ತಿಳಿಯಬಹುದು. ಇವನ್ನು ಸಾಧಿಸಲು ಬಂಡವಾಳಕ್ಕಿಂತ ರಾಜಕೀಯ ಇಚ್ಛಾಶಕ್ತಿ, ತಂತ್ರಜ್ಞರಿಗೆ ಸ್ವಾತಂತ್ರ್ಯ ಖಾಸಗಿಯೇ ಅಥವಾ ಸಾರ್ವಜನಿಕವೋ ಎಂಬ ಚರ್ಚೆಯ ನಿರರ್ಥಕತೆಯ ಅರಿವು ಇವೆಲ್ಲಾ ಬೇಕಾಗುತ್ತದೆ. **ತಾಂತ್ರಿಕವಾಗಿ ಹೇಳುವುದಾದರೆ ನಮಗೆ ಇಷ್ಟು ಉತ್ಪಾದನೆ ಮಾಡಿಕೊಳ್ಳುವ ಸಾಮರ್ಥ್ಯವಿದೆ.**

**ಹೊ :** ವಿದ್ಯುತ್ ಕೇಂದ್ರದ ಕಾರ್ಯದಕ್ಷತೆಯನ್ನು ಹೇಗೆ ಅಳೆಯುವುದು ? ನೌಕರ ವರ್ಗದ ಆಯ್ಕೆ ತಾಂತ್ರಿಕ ಅರ್ಹತೆಯ ಆಧಾರದ ಮೇಲೆ ಆಗಿದೆಯೇ ?

**ರು :** * ಮಾರಾಟವಾದ ವಿದ್ಯುತ್ತಿನ ಒಂದು ಯೂನಿಟ್‌ಗೆ ಬಳಸಿದ ಜನಬಲ.

* ತಲಾ ಒಬ್ಬೊಬ್ಬ ನೌಕರನಿಂದ ಉತ್ಪತ್ತಿಯಾದ ಸರಾಸರಿ ವಿದ್ಯುಚ್ಛಕ್ತಿ ಎಷ್ಟು ಎಂದು ಗಮನಿಸಬೇಕು. ಇದು ಹೆಚ್ಚುತ್ತಾ ಹೋಗಬೇಕು.
* ಒಂದು ಮೆಗಾವಾಟ್ ವಿದ್ಯುತ್ ಉತ್ಪಾದಿಸಲು ಹಾಕಿದ ಬಂಡವಾಳವೆಷ್ಟು? ಇದು ಸಾಧ್ಯವಾದಷ್ಟು ಕಡಿಮೆಯಾಗುತ್ತಾ ಹೋಗಬೇಕು.

ಶುಲ್ಕ ವಸೂಲಿ ಕಾರ್ಯದಲ್ಲಿ ದಕ್ಷತೆ ಇದೆಯೇ ? ಇದು ನೂರಕ್ಕೆ ನೂರು ಆಗಬೇಕು.

**ಹೊ :** ಭವಿಷ್ಯತ್ತಿನ ಬಗ್ಗೆ ಭರವಸೆಗೆ ಕಾರಣವಿದೆಯೇ ?

**ರು :** ವಿದ್ಯುಚ್ಛಕ್ತಿ ಕ್ಷೇತ್ರದಲ್ಲಿ ಆಗಿರುವ ಪ್ರಗತಿ ಅದ್ಭುತವಾಗಿದೆ. ಇದು ಇನ್ನೂ ಹತ್ತು ವರ್ಷಗಳಲ್ಲಿ ದ್ವಿಗುಣಗೊಳ್ಳಬೇಕಾಗಿದೆ. ಇಂದು ಕಾಣಬರುತ್ತಿರುವ ವಿದ್ಯುಚ್ಛಕ್ತಿ ಕೊರತೆಯನ್ನು ಆದಷ್ಟೂ ಬೇಗನೆ ನಿವಾರಿಸಲಾಗುವುದೆಂಬ ಭರವಸೆ ಇದೆ.

ಅನುವಾದ : **ಕೆ. ಎಲ್. ಗೋಪಾಲಕೃಷ್ಣರಾವ್**
ನಂ. ೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು - ೨೮

ದುಶ್ಶಾಸನ ಮತ್ತೊಮ್ಮೆ ಭೂಮಿಗೆ ಇಳಿದುಬಂದ. ಇಷ್ಟು ವರ್ಷಗಳು, ಯುಗಗಳು, ಅವನೆಲ್ಲಿದ್ದ ?

ಕಂಚಿಶ್ರೀಗಳ ಹಾಗೆ, ಜಯಲಲಿತಾ ಮೊಕದ್ದಮೆಯ ಹಾಗೆ, ಎರಡು ಯುಗಗಳು ಆದರೂ ಅವನ ವಿಚಾರಣೆಯೇ ಮುಗಿದಿಲ್ಲ. ಮೇಲಿನ ಲೋಕದಲ್ಲಿ ಸ್ಥಳದ ಅಭಾವ ಎಂದು, ಭೂಲೋಕದಲ್ಲಿಯೇ ಅಷ್ಟು ದಿನಗಳು ಅಡ್ಡಾಡಿಕೊಂಡಿರಲಿ, ಅವನ ಸರದಿ ಬಂದಾಗ ಎಳೆದು ತರೋಣ ಎಂದು – ಕೆಳಗೆ ಅವನನ್ನು ತಳ್ಳಿಬಿಟ್ಟಿದ್ದಾರೆ. ಹೀಗೆ ಅವನನ್ನು ತಳ್ಳಿದಾಗ ನೇರವಾಗಿ ಕಬ್ಬನ್ ಪಾರ್ಕಿಗೇ ಅವನು ಬಂದು ಧುಮುಕಿಬಿಟ್ಟ.

ಈಗ ಒಬ್ಬ ಹುಡುಗ ''ಕಳ್ಳೇಕಾಯ್... ಕಳ್ಳೇಕಾಯ್...'' ಎಂದು ಕೂಗುಹಾಕುತ್ತ ಒಂದು ಬಿದಿರ ತಟ್ಟೆಯನ್ನು ಹೊತ್ತು ಇವನ ಬಳಿ ಬಂದ. ಕಡಲೇಕಾಯಿ ದ್ವಾಪರಯುಗದಲ್ಲಿಯೂ ಇತ್ತು. ದುಶ್ಶಾಸನನಿಗೆ ಅದು ಏನು ಎನ್ನುವುದು ಗೊತ್ತು. ಆದರೆ ಅದನ್ನು ದುಡ್ಡುಕೊಟ್ಟು ಕೊಳ್ಳಬೇಕು ಎನ್ನುವುದು ಮಾತ್ರ ತಿಳಿಯದು. ಹೇಗೂ ಅವನು ಅರಮನೆಯಲ್ಲಿಯೇ ಹುಟ್ಟಿ ಬೆಳೆದವನಷ್ಟೇ. ಅರಮನೆಯಲ್ಲಿ ಕಡಲೇಕಾಯಿ ಕೊಂಡು ತಿಂದು ಹೊಟ್ಟೆ ತುಂಬಿಸಿಕೊಳ್ಳುವ ಪ್ರಮೇಯ ಅವನಿಗೆ ಬಂದಿರಲು ಸಾಧ್ಯವಿಲ್ಲವಷ್ಟೆ.

ದುಶ್ಶಾಸನ ಈಗ ಕಡಲೇಕಾಯಿಯ ಕಡೆ ಬೆರಳು ತೋರಿಸುತ್ತ ''ಕ್ಯಾ ?'' ಎಂದ. ಹುಡುಗ ಇವನು ಹಿಂದೀ ವಾಲಾ ಎಂದು ತಿಳಿದುಕೊಂಡು ಕಡಲೇಬೀಜದೊಂದಿಗೆ ಸುರುಳೀ ಸುತ್ತಿದ್ದ ಪೊಟ್ಟಣವನ್ನು ತೋರಿಸುತ್ತ ''ಏಕ್ ರೂಪೈ'' ಎಂದ. ಬೆಂಗಳೂರಿನಲ್ಲಿ ಹುಡುಗರು ದೊಡ್ಡವರು ಹೀಗೆ ಎಲ್ಲರಿಗೂ ಕನ್ನಡ ಬಿಟ್ಟು ಉಳಿದ ಎಲ್ಲ ಭಾಷೆಗಳೂ ಗೊತ್ತು.

ಹುಡುಗ ಏನೋ ಹೇಳಿದ ಎಂದು ಅರಿವಾಗಿ ದುಶ್ಶಾಸನ ತನ್ನ ಜೇಬಿಗೆ ಕೈ ಇಳಿಬಿಟ್ಟ. ಅವನು ದ್ರೌಪದಿಯ ಸೀರೆ ಸೆಳೆದದ್ದಕ್ಕಾಗಿ ಇನ್ನೂ ವಿಚಾರಣೆ ಪೂರ್ಣಗೊಳ್ಳದೆ ಇರುವುದರಿಂದ, ಒಂದು ಬಗೆಯಲ್ಲಿ ಅವನು ನಿರಪರಾಧಿಯೇ. ಶಿಕ್ಷೆ ವಿಧಿಸಿದ ಮೇಲೆಯೇ ಅವನು ಅಪರಾಧಿ ಆಗುತ್ತಾನಷ್ಟೆ. ನಮ್ಮ ನ್ಯಾಯ, ನೀತಿ ಹಾಗೆಯೇ ಇದೆ ಅಲ್ಲವೇ. ಹಾಗಾಗಿಯೇ ಅವನ ಸರದಿ ಬಂದಾಗ ಕರೆಸಿಕೊಳ್ಳೋಣ ಎಂದು, ಮೇಲಿನ ಲೋಕದಲ್ಲಿ ಜಾಗದ ಅಭಾವ, ಭೂಲೋಕದಲ್ಲಿಯೆ ಅಷ್ಟು ದಿನಗಳು ಅಡ್ಡಾಡಿಕೊಂಡಿರಲಿ ಎಂದು ಕೆಳಗೆ ಅವನನ್ನು ನೂಕಿಬಿಟ್ಟಿದ್ದಾರಷ್ಟೆ. ಹಾಗೆ ಕೆಳಗೆ ಬೀಳಿಸುವಾಗ ಡಿಸೆಂಬರ್ ಚಳಿ ಅಯ್ಯೋ ಪಾಪ ಎಂದು ಕನಿಕರ ತೋರಿಸಿ ಒಂದು ಜರ್ಕಿನ್ ಹಾಕಿಯೇ ಅವನನ್ನು ಕೆಳಗೆ ತಳ್ಳಿದ್ದಾರೆ.

ಅದು ಕಪ್ಪು ಬಣ್ಣದ ಜರ್ಕಿನ್. ಮುಂದೆ ಎರಡು, ಒಳಗೆ ಎರಡು ಮೂರು ಅದಕ್ಕೆ ಉದ್ದ ಉದ್ದ ಜೇಬುಗಳು. ದುಶ್ಶಾಸನ ಏನೋ ಯೋಚಿಸುತ್ತ ಅವನ ಉದ್ದುದ್ದ ಜೇಬಿಗೆ ಕೈ ಇಳಿಬಿಟ್ಟಾಗ, ಕೈಗೆ ಒಂದು ಐದು ರೂಪಾಯಿನ ನೋಟು ಸಿಕ್ಕಿಬಿಟ್ಟಿತು.

ಹೌದು. ದ್ರೌಪದಿಯ ಸೀರೆ ಸೆಳೆದ ಆಪಾದನೆ ಇನ್ನೂ ತೀರ್ಪು ಹೊರಬೀಳದೇ ಇರುವಾಗ ಅವನು ಭೂಲೋಕದಲ್ಲಿ ಕಷ್ಟಪಡುವುದು ಬೇಡ ಎಂದು, ಅವನ ಅಷ್ಟೂ ಜೇಬುಗಳ ತುಂಬಾ ಐನೂರು, ನೂರು, ಐವತ್ತು, ಇಪ್ಪತ್ತು, ಹತ್ತು, ಐದು – ಹೀಗೆ ಬಗೆಬಗೆಯ ನೋಟುಗಳನ್ನು ದೇವತೆಗಳು ತುಂಬಿಸಿ ಕಳಿಸಿದ್ದಾರೆ. ಅರ್ಧ ಜೇಬಿನಷ್ಟು ಚಿಲ್ಲರೆಗಳನ್ನೂ ಸಹ.

ಈಗ ಇವನು ಕೈ ಹಾಕಿದೊಡನೆ ಐದು ರೂಪಾಯಿನ ಒಂದು ಹಸಿರು ಮಿಶ್ರಣ ನೋಟು ಸಿಕ್ಕಿಬಿಟ್ಟಿತು. ಹುಡುಗ ಕಡಲೇ ಬೀಜವನ್ನು ಖುಷಿಯಿಂದ ಸುರಿದ. ಹೌದು, ಈಗ ಅವನಿಗೆ ತುಂಬಾ ಸಂತೋಷ. ಯಾರೂ ಐದು ರೂಪಾಯಿಗೆ ಕಡಲೇಬೀಜ ಕೊಳ್ಳುವುದಿಲ್ಲ. ಐವತ್ತು ಪೈಸೆಗೆ ಒಂದು ರೂಪಾಯಿಗೆ ಅಷ್ಟೇ ಅಲ್ಲವೆ ? ಈಗ ಒಮ್ಮೆಲೇ ಐದು ರೂಪಾಯಿನ ವ್ಯಾಪಾರ ಆಗಿಬಿಟ್ಟಿದೆಯಲ್ಲ !

ದುಶ್ಶಾಸನನಿಗೆ ಒಂದೂ ಅರ್ಥವಾಗಲಿಲ್ಲ. ಹುಡುಗ ಕಡಲೇಬೀಜವನ್ನು ಸುರಿದುಕೊಟ್ಟದ್ದು, ತಾನು ಜೇಬಿನಿಂದ ಹೊರತೆಗೆದದ್ದು – ಕಾಗದದ ಚೂರುಗಳೇ. ಆದರೆ ಅದು 'ಕಾಗದ' ಎನ್ನುವುದು ಅವನಿಗೆ ತಿಳಿಯುವುದಾದರೂ ಹೇಗೆ ? ಅವನ ಕಾಲದಲ್ಲಿ ಈ ಕಾಗದ, ಬಣ್ಣ ಬಣ್ಣದ ನೋಟುಗಳು ಎನ್ನುವ ಕಾಗದದ ಚೂರುಗಳು ಇಂಥವು ಯಾವುವೂ ಇರಲಿಲ್ಲವಷ್ಟೆ. ಆ ಕಾಲದಲ್ಲಿ ತಿಂಡಿ-ತಿನಿಸು ಹಾಕಿಸಿಕೊಳ್ಳಲು ಬಗೆಬಗೆಯ ಎಲೆಗಳನ್ನು ಉಪಯೋಗಿಸುತ್ತಿದ್ದರು.

ಅಷ್ಟಲ್ಲದೆ ಆ ಕಾಲದಲ್ಲಿ ವರಾಹ ಅಂಥ ಇಂಥ ನಾಣ್ಯಗಳು ಇದ್ದುವು ಅಲ್ಲವೇ ?

ಒಂದು ಮಾತ್ರ ಈಗ ದುಶ್ಶಾಸನನಿಗೆ ಚೆನ್ನಾಗಿ ಅರ್ಥವಾಗಿಹೋಯಿತು; ತನ್ನ ಜೇಬಿನಿಂದ ಏನೋ ಒಂದು ಎಳೆದುಕೊಟ್ಟರೆ ತನಗೆ ತಿನ್ನಲು ಕುಡಿಯಲು ಸಾಮಗ್ರಿಗಳು ಸಿಗುತ್ತವೆ ಎಂದು. ಅಷ್ಟು ಸಾಕು.

ಕಡಲೇಬೀಜಗಳನ್ನು ಬಾಯಿಗೆ ಎಸೆದುಕೊಳ್ಳುತ್ತ ದುಶ್ಶಾಸನ ಈಗ ಮುಂದೆ ಮುಂದೆ ಹೆಜ್ಜೆ ಹಾಕಿದ. ಮಹಾತ್ಮ ಗಾಂಧಿ ಪ್ರತಿಮೆಯ ಬಳಿ ಬಂದುಸೇರಿಬಿಟ್ಟ. ಅಂಥವೇ ಪ್ರತಿಮೆಗಳನ್ನು ಆ ಕಾಲದಲ್ಲಿಯೂ ಕೆತ್ತಿಸುತ್ತ ಇದ್ದರು. ಶಿವ ವಿಷ್ಣು ಬ್ರಹ್ಮ – ಹೀಗೆ. ದುಶ್ಶಾಸನ ಬಾಗಿ ಬಾಗಿ ನೋಡಿದ. ಊಹೂಂ. ಇದು ಆ ಥರದ ಪ್ರತಿಮೆ ಅಲ್ಲ. ಬೇರೆ ಯಾರದೋ ? ಅವನ ಕಾಲದಲ್ಲಿ ಮಹಾತ್ಮ ಗಾಂಧಿ ಇರಲಿಲ್ಲವಷ್ಟೆ ಅದು ಗಾಂಧಿ ಪ್ರತಿಮೆಯೆಂದೂ ಅದರ ಮುಂದಿನ ರಸ್ತೆಗೆ ಮಹಾತ್ಮ ಗಾಂಧಿ ರಸ್ತೆ ಎಂದು ಹೆಸರೆನ್ನುವುದೂ ಪಾಪ ದುಶ್ಶಾಸನನಿಗೆ ಹೇಗೆ ತಿಳಿಯಬೇಕು ?

ಈಗ ಕಡಲೇಬೀಜ ಮುಗಿದುಹೋಗಿತ್ತು. ಆತ ಈಗ ಮಹಾತ್ಮ ಗಾಂಧಿ ರಸ್ತೆಯ ಪ್ಲಾಟ್‌ಫಾರ್ಮಿಗೆ ಬಂದು ಸೇರಿಯೂಬಿಟ್ಟಿದ್ದ.

ಆದರೆ ಈ ರಸ್ತೆಯಲ್ಲಿ ಅಡ್ಡಾಡುವ ಜನರನ್ನು ನೋಡಿ ಮಾತ್ರ ದುಶ್ಶಾಸನ ದಂಗು, ಬಡಿದು ಹೋದ. ಇವರಲ್ಲಿ ಗಂಡಸರು ಯಾರು ಹೆಂಗಸರು ಯಾರು ಎಂದು ಕಂಡು ಹಿಡಿಯುವುದೇ ಕಷ್ಟವಾಗಿದೆ. ಎದೆಗಳನ್ನು ನೋಡಿ ಹೆಂಗಸರು ಎಂದು ಹೇಳಬೇಕಾಗಿದೆ.



ಶೇಷನಾರಾಯಣ

# ದುಶ್ಶಾಸನ 'ಕೃಷ್ಣ ಕೃಷ್ಣಾ' ಎಂದು ಕೂಗಿಕೊಳ್ಳುತ್ತ ಓಡಿದ

ಆ ಕಾಲದ ಗಂಡಸರ ಕಚ್ಚೆ ಪಂಚೆ, ಹಣೆಗೆ ವಿಭೂತಿ ಅಥವಾ ನಾಮ ಹೆಂಗಸರು ಹದಿನೆಂಟು ಮೊಳದ ಸೀರೆ, ಬಳೆ, ರುಳಿ, ಚೈನು, ತಲೆ ತುಂಬಾ ಹೂ. ಅದು ಸರಿ, ಈಗ ಇಲ್ಲಿ ಅಡ್ಡಾಡುವವರಿಗೆ ಜಡೆಗಳೆ ಇಲ್ಲ. ಎಲ್ಲರೂ ಬಾಬ್‌ಕಟ್. ಹೂ ಮುಡಿಯುವುದು ಎಲ್ಲಿ ಬಂತು? ಅಷ್ಟಲ್ಲದೆ ಹೂ ಮುಡಿದ ಹೆಣ್ಣು ಈ ರಸ್ತೆಯಲ್ಲಿ ಅಡ್ಡಾಡಿದರೆ, ಅದು ಈ ರಸ್ತೆಗೇ ಭಾರೀ ಅಪಮಾನ.

ಈಗ ದುಶ್ಯಾಸನನಿಗೆ ಭಾರೀ ಪೀಕಲಾಟ. ತಾನು ಹಳೆಯ ಕಾಲದ ಕಚ್ಚೆ ಪಂಚೆ ಹಾಕಿ ಗದೆ ಹಿಡಿದು ಹೊರಟರೆ ಚೆನ್ನವೇ? ಹಾಂ, ಹೀಗೆ ಮಾಡೋಣವೆ?

ಅವನು ದ್ರೌಪದಿಯ ಸೀರೆಯ ಸೆರಗನ್ನು ಹಿಡಿದೆಳೆದ ಅಪರಾಧಕ್ಕಾಗಿ ದೇವಲೋಕದ ಸೆರೆಮನೆಯಲ್ಲಿ ಒಬ್ಬ ಕೈದಿಯಾಗಿ ಕಾಲ ತಳ್ಳುತ್ತಲಿರುವಾಗ ನಾರಿಮನ್ನರಂಥ ಸಮರ್ಥ ಲಾಯರನ್ನೇ ನಿಯಮಿಸಿಕೊಂಡಿದ್ದರೂ ತನ್ನ ಕೇಸು ಇನ್ನೂ ಇತ್ಯರ್ಥವಾಗದೆ ಇರುವಾಗ –

ಒಂದು ದಿನ. ಅವನಿದ್ದ ಸೆರೆಮನೆ, ಪರಪ್ಪನ ಅಗ್ರಹಾರದಲ್ಲಿರುವ ಸೆರೆಮನೆಗಿಂತಲೂ ದೊಡ್ಡದು. ಆತ ಸರಳುಗಳೊಳಗೆ ಹಾಗೆಯೇ ಕುಳಿತಿದ್ದಾಗ, ಒಂದು ಘಟನೆ ನಡೆಯಿತು.

ಸರಳುಗಳಾಚೆ ವಿಶಾಲವಾದ ಮೈದಾನ. ದೇವತೆಗಳು ಅಲ್ಲಿ ಕೆಲವರಿಗೆ ತರಬೇತಿ ನೀಡುತ್ತಿದ್ದರು. ತಮ್ಮ ಕೆನ್ನೆಗಳನ್ನು ತಾವೇ ಅವರು ಸವರಿಕೊಂಡರೆ ಬೇರೊಂದು ರೂಪ ಆಗಿ ಬಿಡುತ್ತ ಇದ್ದರು. ಇನ್ನೊಬ್ಬನ ಹಾಗೆ; ಮತ್ತೊಬ್ಬನ ಹಾಗೆ.

ತನಗೆ ಜರ್ಕಿನ್ ಹಾಕಿ, ಜರ್ಕಿನ್ ಜೇಬುಗಳ ತುಂಬಾ ನೋಟುಗಳನ್ನು ತುಂಬಿ, ಮತ್ತೆ ಈ ಭೂಲೋಕಕ್ಕೇ ತನ್ನನ್ನು ಕಳಿಸಿರುವಾಗ, ಈ ಅದ್ಭುತ ವಿದ್ಯೆ ತನಗೂ ಬರುತ್ತದೋ? ದೇವತೆಗಳು ಆ ರೀತಿ ಆಶೀರ್ವಾದ ಮಾಡಿದ್ದಾರೋ?

ದುಶ್ಯಾಸನ ಈಗ ತನ್ನ ಮುಂದೆ ಹೋಗುತ್ತಿರುವ ಒಬ್ಬ ಹುಡುಗನನ್ನು ದಿಟ್ಟಿಸುತ್ತ 'ನಾನೂ ಆ ಹುಡುಗನ ಥರವೇ ಆಗಬೇಕು' ಎಂದು ಮನಸ್ಸಿನೊಳಗೇ ಹೇಳಿಕೊಂಡ.

ಏನಾಶ್ಚರ್ಯ! ದುಶ್ಯಾಸನ ಈಗ ಆ ಹಿಪ್ಪಿ ಹುಡುಗನೇ ಆಗಿಬಿಟ್ಟಿದ್ದಾನೆ. ಕೊಳಕು ದೊಗಳೆ ಪ್ಯಾಂಟು, ಗಬ್ಬು ನಾತದ ಅಂಗಿ, ವಿಕಾರವಾಗಿ ತಲೆ ಕೂದಲನ್ನು ಇಳಿಬಿಡುವಿಕೆ, ಒಂದೇ ಕಿವಿಗೆ ನಕ್ಷತ್ರದ ಹಾಗೆ ಏನನ್ನೋ ಅಂಟಿಸಿಕೊಂಡಿದ್ದಾನೆ, ಬಲದ ಮುಂಗೈಗೆ ಒಂದು ಹಿತ್ತಾಳೆ ಬಳೆ...

ಎಲ್ಲರೂ ದುಶ್ಯಾಸನನನ್ನು ನೋಡುವವರೇ. ಇವನು ಎಲ್ಲರಿಗಿಂತ ಬೇರೆ ಥರ ಇದ್ದಾನೆ. ಹಿಪ್ಪಿ ವೇಷದ ದುಶ್ಯಾಸನ ಗದೆಯನ್ನು ಭುಜದ ಮೇಲೆ ಹಾಕಿಕೊಂಡಿದ್ದಾನೆ. ಇದು ಹೊಸ ಫ್ಯಾಷನ್ ಇರಬೇಕು. 'ನಾಳೆ ನಾವೂ ಇಂಥ ಒಂದು ಗದೆಯನ್ನು ಸಂಪಾದಿಸಿ ಭುಜದ ಮೇಲೆ ಹಾಕಿಕೊಂಡು ಈ ರಸ್ತೆಯಲ್ಲಿ ಅಡ್ಡಾಡಬೇಕು' ಎಂದೂ ಕೆಲವು ಯುವಕರು ಮಾತಾಡಿಕೊಂಡರು.

ಎಲ್ಲರೂ ಇವನನ್ನು ದಿಟ್ಟಿಸುತ್ತ ಇರುವಾಗ, ದುಶ್ಯಾಸನ ಸ್ವಲ್ಪ ದೂರ ಮುಂದೆ ಹೋಗಿರಬೇಕು ಆಗ –

ಧಿಗ್ಗನೆ ಆ ಮಹಾತ್ಮ ಗಾಂಧಿ ರಸ್ತೆಯ ಉದ್ದ ಸಾಲಿನ ದೀಪಗಳು ಎಲ್ಲವೂ ಹತ್ತಿಕೊಂಡುಬಿಟ್ಟವು.

ದುಶ್ಯಾಸನನಿಗೆ ಅಚ್ಚರಿಯ ಮೇಲೆ ಅಚ್ಚರಿ. ಅವನ ಕಾಲದಲಿ ವಿದ್ಯುತ್ ಎಲ್ಲಿತ್ತು? ಈಗ ಎಂಥೆಂಥವೋ ನೇತಾಡುತ್ತ ಇಲ್ಲಿಂದ ಅಲ್ಲಿಯವರೆಗೂ ಬೆಳಕನ್ನು ಚೆಲ್ಲುತ್ತಲಿವೆ.

ಅವ್ವೀ ಅವ್ವೀ ಇದ್ಯಾನವೀ ಈ ಕರಾಮತ್ತು! ದುಶ್ಯಾಸನ ಈಗ ನಾಲ್ಕು ಹೆಜ್ಜೆ ಮುಂದೆ ಹೋದ. ಅಲ್ಲಿ ಒಂದು ಅಂಗಡಿಯ ಮುಂದೆ ನಾಲ್ಕಾರು ಭಾಷೆಗಳ ಪತ್ರಿಕೆಗಳನ್ನು ನೇತು ಹಾಕಿದ್ದರು. ಹಿಂದಿ ಪತ್ರಿಕೆಯೂ ಇತ್ತು. ಆ ಕಾಲದಲ್ಲಿ ಕಾಗದದ ಮೇಲೆ ಅಚ್ಚು ಮಾಡುವ ಪತ್ರಿಕೆಗಳು ಇಲ್ಲದಿದ್ದರೂ ಓಲೆಗರಿ ಇತ್ತಷ್ಟೆ.

ದುಶ್ಯಾಸನ ಗದೆಯನ್ನು ಹಿಡಿದೇ ಬಾಗಿ ಬಾಗಿ ನೋಡಿದ. ಅದರಲ್ಲಿ ದಪ್ಪದಪ್ಪ ಅಕ್ಷರಗಳಲ್ಲಿದ್ದ ಶೀರ್ಷಿಕೆ: 'ಕಂಚಿಶ್ರೀ ಬಂಧನ್'

ಬಂಧನ್ ಎಂದರೇನೋ ಬಂಧನ ಅರ್ಥವಾಗುತ್ತದೆ, ಸರಿಯೇ. ಆದರೆ ಕಂಚಿಶ್ರೀ ಎಂದರೇನು? ಅದೇನು ಕಂಚಿಕಾಯೋ? ಕಜ್ಜಾಯೋ? ಕೋಳಿಮೊಟ್ಟೆಯೋ? ದ್ವಾಪರ ಯುಗದಲ್ಲಿ ಪರಮಪೂಜ್ಯ ಕಂಚಿ ಮಹಾಸ್ವಾಮಿಗಳೂ ಕಂಚೀಮಠವೂ ಇರಲಿಲ್ಲವಷ್ಟೆ.

ದುಶ್ಯಾಸನ ಪತ್ರಿಕೆಯನ್ನು ಹಿಡಿದು ಎರಡು ಸೆಕೆಂಡ್ ಕಣ್ಣಾಡಿಸಿ, ಬಳಿಕ ಅದನ್ನು ನಾಲ್ಕಾಗಿ ಮಡಚಿ ತನ್ನ ಜರ್ಕಿನ್ ಜೇಬಿಗೇ ತುರುಕಿಕೊಂಡ.

ಹೌದು, ಮಹಾತ್ಮ ಗಾಂಧಿ ರಸ್ತೆಯಲ್ಲಿ ಹುಡುಗಿಯರ ಭುಜಕ್ಕೆ ಢಿಕ್ಕಿ ಹೊಡೆದಾಗ ಸಿಗುವ ಸುಖ ಮಝಾ ಝುಂ ಝುಂ ಈ ಪತ್ರಿಕೆ ಓದಿನಲ್ಲಿ ಸಿಗುತ್ತದೆಯೇ?

ಈಗ ಆತ ಮತ್ತೂ ಹತ್ತು ಹೆಜ್ಜೆ ಮುಂದೆ ಹಾಕಿದ. ಬ್ರಿಗೇಡ್ ರಸ್ತೆಯಿಂದ ಈ ಕಡೆ ಒಂದು ಗಲ್ಲಿ. ಬಲಭಾಗ ಆ ಗಲ್ಲಿಯೊಳಗೆ ಆತ ಪ್ರವೇಶಿಸಿದ.

ಅಲ್ಲಿ ಒಂದು ದೊಡ್ಡ ಹೋಟೆಲ್. ಸ್ವಸಹಾಯ ಪದ್ಧತಿಯದು. ವೃತ್ತಾಕಾರದ್ದು, ಚಚ್ಚೌಕದ್ದು, ಹೀಗೆ ಟೇಬಲ್ಲುಗಳನ್ನು ಹಾಕಿರುವ ಕಡೆ ನಿಂತೇ ಬಗೆಬಗೆಯ ತಿನಿಸುಗಳನ್ನು ಜನ ದನಗಳಂತೆ ಗಬಗಬನೆ ತಿನ್ನುತ್ತ ಇದ್ದಾರೆ. ಯಾವುಯಾವುವೋ ತಿಂಡಿ ತಿನಿಸುಗಳ, ಎಣ್ಣೆ ತುಪ್ಪ ಮುಂತಾದವುಗಳ ವಾಸನೆ ರಸ್ತೆಗೂ ಘಂ ಚೆಲ್ಲುತ್ತ ಇದೆ.

ದುಶ್ಯಾಸನ ಸ್ವಲ್ಪ ಹೊತ್ತು ಹಾಗೆಯೇ ನಿಂತು ಅಲ್ಲಿನ ವ್ಯವಸ್ಥೆಗಳನ್ನು ದಿಟ್ಟಿಸಿದ. ಆ ಕಾಲದ ದ್ವಾಪರಯುಗದವನಾದ ತಾನು ಪೆದ್ದುಪೆದ್ದಾಗಿ ನಡೆದುಕೊಳ್ಳಬಾರದು. ಇದು ಬೇರೆಯದೇ ಕಾಲ. ಕಲಿಯುಗ. ಕಲಿಯುಗದ ರೀತಿ ರಿವಾಜುಗಳು ಹೇಗಿವೆಯೋ ತಾನೂ ಹಾಗೆ ಧಿಮ್ಮಾಕ್ಕಾಗಿ ನಡೆದುಕೊಳ್ಳಬೇಕೆಂದುಕೊಂಡ.

ಈಗ ಆತ ಇಂದಿನ ಪದ್ಧತಿಗೆ ಸ್ವಲ್ಪಸ್ವಲ್ಪವಾಗಿ ಹೊಂದಿಕೊಳ್ಳತೊಡಗಿದ. ತನ್ನ ಜೇಬಿಗೆ ಕೈ ಇಳಿಬಿಟ್ಟ. ಐನೂರು ರೂಪಾಯಿನ ಗರಿಗರಿ ನೋಟು. ಅದನ್ನು ತೆಗೆದುಕೊಂಡವನೇ ಕೌಂಟರಿನ ಬಳಿ ಹೋದ. ಅವನಿಗೆ ಈಗಿನ ಕಾಲದ ತಿನಿಸುಗಳ ಹೆಸರು ತಿಳಿಯದು. ಒಂದು ದೊಡ್ಡ ಟೇಬಲಿನ ಮುಂದೆ ಏನೋ ತಿನ್ನುತ್ತ ಇರುವವನ ಕಡೆ ಬೆರಳು ತೋರಿಸಿ ದುಶ್ಯಾಸನ ಐನೂರು ರೂಪಾಯಿನ ನೋಟನ್ನು ಅವನ ಮುಂದೆ ತಳ್ಳಿದ. ಅದು ಪರೋಟ.

ಈತ ಮೂಕನೋ ಏನೋ ಎಂದು ಭಾವಿಸಿ ಕೌಂಟರಿನಲ್ಲಿದ್ದ ಉಡುಪಿ ಗೋಪಾಲ ಕೃಷ್ಣ ಭಟ್ಟ "ಪರೋಟಾ?" ಎಂದ "ಹೂಂ" ಎಂದು ತಲೆಯಾಡಿಸಿದ ದುಶ್ಯಾಸನ.

ಎರಡು ಪರೋಟಾಕ್ಕೆ ಟಿಕೆಟ್ ಹರಿದುಕೊಟ್ಟ ಭಟ್ಟ "ಕಾಫೀನೋ? ಚಾಯನೋ?" ಎಂದು ಕೇಳಿದ. "ಚಾಯ" ಎಂದ ದುಶ್ಯಾಸನ.

ಆ ಟಿಕೆಟ್ಟುಗಳು ಎನ್ನುವ ತುಣುಕುಗಳನ್ನು ಹಿಡಿದುಕೊಂಡು, ಉಳಿದ ಚಿಲ್ಲರೆಗಳನ್ನು ಜೇಬಿನೊಳಗೆ ಹಾಕಿ, ದುಶ್ಯಾಸನ ಸ್ಟಾಲಿನ ಬಳಿ ಹೋದ. ಎರಡು ಟಿಕೆಟ್ಟುಗಳನ್ನು ಅಲ್ಲಿದ್ದ ಹುಡುಗನ ಮುಂದೆ ನೀಡಿದ. ಹುಡುಗ ಚಾಯ್ ಟಿಕೆಟನ್ನು ಇವನಿಗೇ ಹಿಂದಿರುಗಿಸಿ, "ಇದು ಟೀದ್ದು" ಎಂದು ಹೇಳಿ, ಪರೋಟಾ ಟಿಕೆಟ್ಟ್ ಮಾತ್ರ ತೆಗೆದುಕೊಂಡು "ಎರಡು ಪರೋಟಾ" ಎಂದು ಕೂಗುಹಾಕಿದ.

ದುಶ್ಯಾಸನನಿಗೆ ಯಾಕೋ ಹಿಪ್ಪಿಯ ವೇಷ ಹಿಡಿಸಲಿಲ್ಲ. ಒಬ್ಬ ನಾಗರಿಕನನ್ನು ನೋಡುತ್ತ "ಆ ರೂಪು ಬೇಕು" ಎಂದಿದ್ದ. ರಸ್ತೆಯಲ್ಲಿ ಅಡ್ಡಾಡುವ ಒಬ್ಬ ಮಧ್ಯ ವಯಸ್ಸಿನವನ ರೂಪವೇ ಅವನಿಗೆ ಈಗ ಬಂದಿತ್ತು. ಹೆಗಲ ಮೇಲಿದ್ದ ಗದೆಯೂ ಬೇರೆಯವರಿಗೆ ಕಾಣುತ್ತಿರಲಿಲ್ಲ. ಅವನು ಸ್ಟಾಲಿನ ಬಳಿ ನಿಂತ ಜಾಗದಿಂದಲೇ ದೋಸೆ ಕಾವಲಿ ಕಾಣುತ್ತಿತ್ತು. ಅದರಲ್ಲಿ ಒಂದು ಬದಿ ಪರೋಟಾ, ಚಪಾತಿ, ಮತ್ತೊಂದು ಕಡೆ ಬಗೆಬಗೆಯ ದೋಸೆಗಳನ್ನು ಹಾಕುತ್ತಿದ್ದರು; ಬೇಯಿಸುತ್ತಿದ್ದರು. ಸಾದಾ, ಸೆಟ್, ಬೆಣ್ಣೆ ಮಸಾಲೆ – ಹೀಗೆ ದ್ವಾಪರಯುಗದಲ್ಲಿಯೂ ದೋಸೆಗಳನ್ನು ಬೇಯಿಸುವುದನ್ನು ದುಶ್ಯಾಸನ ನೋಡಿದ್ದನಷ್ಟೆ.

ಸ್ಟಾಲಿಗೆ ಸೇರಿದ ಹಾಗೆಯೇ ದುಶ್ಯಾಸನ ಅವು ಬೇಯುವುದನ್ನೇ ನೋಡುತ್ತ ನಿಂತ. ದೋಸೆ ಭಟ್ಟ ಕಾವಲಿಯ ಮೇಲಿದ್ದ ಎಲ್ಲದಕ್ಕೂ ಚಕಚಕನೆ ಸಲಸಲ ಎಣ್ಣೆ

**ಸುದ್ದಿಚಿತ್ರ**



೧೭-೦೯-೨೦೦೫ರ ಶನಿವಾರ ಮೈಸೂರಿನ ಇನ್‌ಸ್ಟಿಟ್ಯೂಷನ್ ಆಫ್ ಇಂಜಿನಿಯರ್ಸ್ ಸಭಾಂಗಣದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಪ್ರಾರಂಭವಾಯಿತು. ಖ್ಯಾತ ಛಾಯಾಚಿತ್ರಕಾರ ಶ್ರೀ ಟಿ. ಎಸ್. ಸತ್ಯನ್ ಪ್ರದರ್ಶನ ಉದ್ಘಾಟಿಸಿದರು.

ಸಿಂಪಡಿಸುತ್ತ ಇದ್ದ. ಬಿಸಿಯಾದ ಕಾವಲಿ ಎಣ್ಣೆ ಬಿದ್ದೊಡನೆ ಚುಂಯ್ ಎನ್ನುತ್ತಿತ್ತು; ಹೊಗೆಯೇಳುತ್ತಿತ್ತು.

ದೋಸೆ ಭಟ್ಟ ಈಗ ಕಾವಲಿಯ ಮೇಲಿದ್ದ ಎಲ್ಲವನ್ನೂ ಪಕ್ಕದಲ್ಲಿದ್ದ ಒಂದು ದೊಡ್ಡ ತಟ್ಟೆಗೆ ಎತ್ತಿ ಎತ್ತಿ ಹಾಕಿದ. ಬಳಿಕ ಥಗ್ ಥಗ್ ಥಗ್ ಎಂದು ಹಲ್ಲೆಯಿಂದ ಕಾವಲಿಯ ಅಂಚಿಗೆ ಬಡಿದ. ಹೀಗೆ ಅವನು ಬಡಿದದ್ದು ಆರ್ಡರ್ ಮಾಡಿರುವ ಸಪ್ಲೈಯರುಗಳು ಎಲ್ಲರೂ ಎತ್ತಿಕೊಂಡು ಹೋಗಲಿ ಎನ್ನುವ ಸಂಕೇತ.

ದುಶ್ಶಾಸನನ ಸರದಿಯೂ ಬಂದಿತು. ಒಂದು ತಟ್ಟೆಗೆ ಆಲೂ ಪರೋಟಾ ಸಾಗು ಚಟ್ನಿ– ಎಲ್ಲವನ್ನೂ ಸುರಿದು ಒಬ್ಬ ಹುಡುಗ ಇವನ ಮುಂದೆ ನೀಡಿದ. ಆತ ಆ ತಟ್ಟೆಯನ್ನು ಎತ್ತಿಕೊಂಡು ಈ ಕಡೆ ಬಂದು ಅಚ್ಚುಕಟ್ಟಾಗಿ ತಿಂದು ಮುಗಿಸಿದ.

ರಾತ್ರಿಯ ವೇಳೆ. ಅದೂ ಗಡಗಡ ಚಳಿ, ಖಾರವಾಗಿ ಹಿತವಾಗಿ ಏನಾದರೂ ತಿಂದು ಟೀ ಕುಡಿದರೆ ಆಹಾ, ಆ ಸುಖವೇ ಸುಖ.

ಈಗ ದುಶ್ಶಾಸನ ಆ ಹೋಟೆಲಿನಿಂದ ಹೊರಬಿದ್ದು ರಸ್ತೆಗೆ ಬಂದುಸೇರಿದ. ತೇಗು ಬಂದಿತು. ಭರ್ಜರಿ, ಏವ್. ಆ ಹೋಟೆಲಿನ ಮಗ್ಗುಲಲ್ಲಿಯೇ ಒಂದು ಕಿರುಬೀದಿ. ಯೋಚನೆ ಮಾಡುತ್ತ ಏನೇನೋ ಆ ಗಲ್ಲಿಯೊಳಗೆ ಪ್ರವೇಶಿಸಿದ. ಮುಂದೆ ಹೋದರೆ ಅದು ದೊಡ್ಡ ರಸ್ತೆಯೇ ಆಯಿತು.

ಆ ರಸ್ತೆಯ ಕೊನೆಯಲ್ಲಿ ಒಂದು ಸರ್ಕಲ್. ಸರ್ಕಲ್ ಬದಿಯೇ ಒಂದು ಡೀಲಕ್ಸ್ ಲೈವ್‌ಬ್ಯಾಂಡ್ ಮನರಂಜನಾ ಕಾರ್ಯಕ್ರಮ ಎಂಬ ಬೋರ್ಡ್; ಕಟ್ಟಡ. ಅನೇಕರು ಅದರೊಳಗೆ ಪ್ರವೇಶಿಸಬೇಕಾದರೆ ಈ ಕಡೆ ತಿರುಗಿ ನೋಡಿಕೊಂಡು ಯಾರೂ ತಮ್ಮನ್ನು ಗಮನಿಸಬಾರದು ಎನ್ನುವ ಧಾಟಿಯಲ್ಲಿ ಒಳ ಹೋಗುತ್ತ ಇದ್ದಾರೆ. ಯಾಕೆ ಅವರೆಲ್ಲರೂ ಹೀಗೆ ಮಾಡುತ್ತ ಇದ್ದಾರೋ ?

ದುಶ್ಶಾಸನನಿಗೆ ಏನೋ ಸಂದೇಹ. ಸರಿ, ಇಲ್ಲೇನಿದೆ ನೋಡಿಯೇ ಬಿಡೋಣ ಎಂದು ಅವನೂ ಕೆಲವು ನೋಟುಗಳನ್ನು ಕೌಂಟರಿನೊಳಗೆ ತಳ್ಳಿ ಒಳಗೆ ಪ್ರವೇಶಿಸಿದ.

ಅಲ್ಲಿ ವಿಶಾಲವಾದ ಹಾಲ್. ಮಂದ ಬೆಳಕು. ಉತ್ತರದ ಕಡೆ ವೇದಿಕೆ. ವೇದಿಕೆಯ ಎದುರಿಗೆ ಉದ್ದಕ್ಕೂ ಕುರ್ಚಿಗಳ ಸಾಲು. ವೇದಿಕೆಯ ಮುಂದೆ ಸಂಗೀತ ಸಾಧನಗಳನ್ನು ಇಟ್ಟುಕೊಂಡಿರುವ ಆರ್ಕೆಸ್ಟ್ರಾದವರು ಮತ್ತು ನಾನಾ ಬಗೆಯ ಬೆಳಕುಗಳನ್ನು ಹಾಯಿಸುವವರು.

ದುಶ್ಶಾಸನ ಒಂದು ಕುರ್ಚಿಯಲ್ಲಿ ಹೋಗಿ ಕುಳಿತೊಡನೆ ದೀಪಗಳು ಎಲ್ಲವೂ ಆರಿ ಹೋದವು. ಕತ್ತಲೆ ಎಂದರೆ ಕತ್ತಲೆ. ಮರುಕ್ಷಣದಲ್ಲಿ ಆ ವೇದಿಕೆಯ ಆ ಬದಿ ಈ ಬದಿಯ ದೀಪಗಳು ಹತ್ತಿಕೊಂಡವು. ತಕ್ಷಣ ಸಂಗೀತ ಸಾಧನಗಳ ಆರ್ಭಟ. ಢಮಢಮ ಢಂ ಢಂ ಢಂ ಢಂ. ಯಾವಾಗ ಢಂ ಢಂ ಪ್ರಾರಂಭವಾಯಿತೋ ಆಗ ವೇದಿಕೆಯ ಮೇಲೆ ಧಿಗ್‌ಧಿಗ್ ದಪ್ಪ ತೋಳು ತೊಡೆ ಎದೆಗಳ ಒಬ್ಬಳು ಹುಡುಗಿ ನರ್ತನ ಹೆಜ್ಜೆಯೊಂದಿಗೆ ರಂಗಪ್ರವೇಶ ಮಾಡಿಬಿಟ್ಟಳು. ಅವಳ ಹಿಂದೆ ಮತ್ತೊಬ್ಬಳು, ಮಗದೊಬ್ಬಳು. ಹೀಗೆ ಐವರು ಹುಡುಗಿಯರು. ಪಡ್ಡೆ ಪ್ರಾಯದವರು.

ಸಂಗೀತದ ಆರ್ಭಟ ಜೋರಾಯಿತು. ಹುಡುಗಿಯರೂ ನಾನಾ ಬಗೆಯಲ್ಲಿ, ಭಂಗಿಯಲ್ಲಿ ಕುಣಿಯತೊಡಗಿದರು. ಕೆಂಪು ಹಸಿರು ಹಳದಿ ದೀಪಗಳ ಬೆಳಕನ್ನು ಅವರ ಮೇಲೆ ಹಾಯಿಸಿದಾಗ ಅವರೆಲ್ಲರೂ ಅಂಥಂಥವೇ ಬಣ್ಣಗಳ ಹುಡುಗಿಯರಾಗಿ ಭಾರಿ ದಾಂಧಲೆ ಎಬ್ಬಿಸುತ್ತ ಇದ್ದಾರೆ.

ಅದು ಸರಿ. ಇವರು ಬಟ್ಟೆಗಳನ್ನೇ ಹಾಕಿಕೊಂಡಿಲ್ಲವಲ್ಲ. ದಪ್ಪ ತೊಡೆಗಳ ನಡುವೆ ಲಂಗೋಟಿಯಷ್ಟೇ ಚೂರು ಕಟ್ಟಿಕೊಂಡಿದ್ದಾರೆ. ಮೇಲೆಯೂ ಹಾಗೆಯೇ... ಅರ್ಧ ಕರ್ಚೀಫು ಬಟ್ಟೆಯನ್ನು ಎದೆಗೆ ಅದು ಹೇಗೋ ಸುತ್ತಿದ್ದಾರೆ. ಪೂರಾ ನಗ್ನ ಎಂದೇ ಹೇಳಬಹುದು. ಈ ಸ್ಥಿತಿಯಲ್ಲಿ ಅವರು ಧಿಗ್‌ಧಿಗ್ ಎಂದು ಕುಣಿಯತೊಡಗಿದರೆ ಎದುರಿಗೆ ಕುಳಿತ ರಸಿಕರಿಗೆ ಹುಚ್ಚು ಬೆಪ್ಪು ಹಿಡಿಯದೆ ಮತ್ತೇನು ಆದೀತು ?

ಇತ್ತ ಕುರ್ಚಿಗಳ ಸಾಲುಸಾಲುಗಳಲ್ಲಿ ಮದ್ಯ ಸರಬರಾಜು. ಸೊಗಸಾದ ಗಿಂಡಿಗಳಲ್ಲಿ ಕೆಂಪಗಿನ ದ್ರವವನ್ನು ನೀಡುವಿಕೆ.

ದುಶ್ಶಾಸನ ಈಗ ತನ್ನ ಜರ್ಕಿನ್ ಜೇಬಿಗೆ ಕೈಹಾಕಿ ಎಳೆದ. ಸಾವಿರ ರೂಪಾಯಿನ ನೋಟು. ಆ ನೋಟನ್ನು ಮುಂದೆ ನೀಡಿ ಒಂದು ಗಿಂಡಿ ಆ ಕೆಂಪು ಅಮೃತವನ್ನು ತೆಗೆದುಕೊಂಡು ಕುಡಿದ. ಕುಡಿದನೋ ಇಲ್ಲವೋ ಅವನ ತಲೆಯೊಳಗೆ ಏನೇನೋ ಆಗುತ್ತ ಇದೆ. ದೇಹ ಹಗುರ. ಎಲ್ಲೋ ಹಾರುವಂತೆ. ಅಲ್ಲಿದ್ದ ಎಲ್ಲ ಕುರ್ಚಿಗಳೂ ಎದ್ದು ಎದ್ದು ಕುಣಿಯುವಂತೆ. ಈಗ ಆ ಐವರು ಹುಡುಗಿಯರೂ ಧಡಧಡನೆ ವೇದಿಕೆಯಿಂದ ಕೆಳಗಿಳಿದು ಬಂದು ಇವನನ್ನು ಅಪ್ಪಿಕೊಂಡ ಹಾಗಿದೆ, ದುಶ್ಶಾಸನಾ, ನನ್ನ ಚಿನ್ನಾ ! ಎನ್ನುವ ಹಾಗಿದೆ.

ಕೆಲವೇ ನಿಮಿಷಗಳು ಅಷ್ಟೇ. ಏನೋ ಜ್ಞಾನೋದಯ ಆದವನ ಹಾಗೆ ದುಶ್ಶಾಸನ ಧಿಗ್ಗನೆ ಬೆಚ್ಚಿ ಕುರ್ಚಿಯನ್ನು ಬಿಟ್ಟು ಮೇಲೆದ್ದು ಬಿಟ್ಟ. ಅವನ ದೇಹ ಈಗ ಒಂದೇ ಸಮನೆ ನಡುಗತೊಡಗಿದೆ.

ಹೌದು. ಆ ಕಾಲದಲ್ಲಿ ದ್ವಾಪರಯುಗದಲ್ಲಿ ತುಂಬಿದ ಸಭೆಯಲ್ಲಿ ದುರ್ಯೋಧನ ''ದ್ರೌಪದಿಯ ಸೀರೆ ಬಿಚ್ಚು'' ಎಂದ. ತಾನು ಆ ಕೆಲಸ ಮಾಡಬಾರದಿತ್ತು. ಆದರೆ ಅಣ್ಣನ ಆಜ್ಞೆ. ಅಣ್ಣ ಸಾಮಾನ್ಯ ಅಲ್ಲ. ಕುರುಕುಲ ರಾಜ. ರಾಜಾಜ್ಞೆ ಮೀರುವುದುಂಟೆ ?

ಅದು ಸರಿ, ತುಂಬಿದ ಸಭೆಯಲ್ಲಿ ರಾಜಾಜ್ಞೆಯಂತೆ ಒಂದು ಸಲ ಮಾತ್ರ ತಾನು ದ್ರೌಪದಿಯ ಸೀರೆಯ ಸೆರಗನ್ನು ಹಿಡಿದು ಎಳೆದದ್ದು ನಿಜ. ಅಷ್ಟರಲ್ಲಿ ತನಗೆ ಯಾಕೋ ತಲೆಸುತ್ತು ಬರುವ ಹಾಗಾಯಿತು. ಕೆಳಗೆ ಬಿದ್ದದ್ದೂ ಆಯಿತು.

ಇಷ್ಟನ್ನೇ ದೊಡ್ಡದು ಮಾಡಿ ಈ ವ್ಯಾಸ ಎನ್ನುವವನು ಏನೇನೋ ಕಥೆ ಕಟ್ಟಿ ಮಹಾಭಾರತ ಬರೆದುಬಿಟ್ಟಿದ್ದಾನೆ, ನಾನು ಸೆರಗನ್ನು ಹಿಡಿದು ಎಳೆಯುತ್ತ ಎಳೆಯುತ್ತ ಬಿಚ್ಚುತ್ತ ಬಿಚ್ಚುತ್ತ ಹೋದೆನಂತೆ. ಬಿಚ್ಚುತ್ತ ಬಿಚ್ಚುತ್ತ ಸೆರಗು ಮತ್ತೆ ಮತ್ತೆ ಸುತ್ತಿಕೊಳ್ಳುತ್ತ ಇತ್ತಂತೆ. ಹಾಗಾಗಲು ದ್ರೌಪದಿಯ ಸೊಂಟ ಅದೇನು ಕೈಮಗ್ಗವೇ ? ಯಾರಾದರೂ ನಂಬುವ ಮಾತೆ ?

ದೇವಲೋಕವೋ ಭೂಲೋಕವೋ ಯಾವ ಲೋಕದ ಪೊಲೀಸರದೂ ಒಂದೇ ಕತೆ. ಒಂದೇ ಬಗೆ. ಒಂದೇ ಬೆಣ್ಣೆ ಒಂದೇ ಮಸಾಲಾ. ಒಂದು ಸಲ ಕಳ್ಳತನ ಮಾಡಿದರೆ ಮತ್ತೊಂದು ಸಲ ಎಲ್ಲಿ ಕಳ್ಳತನ ಆದರೂ ''ನೀನೇ ಮಾಡಿದ್ದೀಯ'' ಎಂದು ಮಾಡದಿದ್ದರೂ ಈತನನ್ನೇ ಹಿಡಿದು ಬಡಿಯುತ್ತಾರಷ್ಟೆ. ಈ ಖಾಕಿ ಪೊಲೀಸರು ಒರಟರಪ್ಪ ಒರಟರು. ಶತ ಒರಟರು.

ಹಾಗೆಯೇ ಒಂದು ಸಲ ತಾನು ದ್ರೌಪದಿಯ ಸೀರೆಯ ಸೆರಗನ್ನು ಹಿಡಿದು ಜಗ್ಗಿಸಿದ್ದಕ್ಕೆ ತನಗೆ ಶಿಕ್ಷೆಯೋ ಬಿಡುಗಡೆಯೋ ಯಾವುದೂ ಆಗದೆ ಹೆಚ್ಚು ಕಡಮೆ ಎರಡು ಯುಗಗಳೇ ಕಳೆದುಹೋಗಿವೆ. ತನಗೆ ಪುನರ್ಜನ್ಮ ಅಂಥಾದ್ದು ಇಂಥಾದ್ದು ಯಾವುದೂ ಇಲ್ಲ, ತನ್ನ ಕೇಸೇ ಇತ್ಯರ್ಥ ಆಗಿಲ್ಲ. ಹಿಯರಿಂಗು ಹಿಯರಿಂಗು ಎಂದು ಕೇಸು ಮುಂದೆ ಮುಂದೆ ಹೋಗುತ್ತಲೇ ಇದೆ.

ಪರಿಸ್ಥಿತಿ ಹೀಗಿರುವಾಗ ಈಗ ತನ್ನ ಮುಂದಿರುವ ವೇದಿಕೆಯ ಮೇಲೆ ಹೆಚ್ಚು ಕಡಮೆ ನಗ್ನರಾಗಿಯೇ ಕುಣಿಯುತ್ತ ಇರುವ ಈ ಐವರು ಹುಡುಗಿಯರ ಬಟ್ಟೆಬರೆಗಳನ್ನು ನಾನೇ ಬಿಚ್ಚಿ ಹಾಕಿದ್ದೇನೆ ಎಂದು ಹೊಸ ಆಪಾದನೆ ನನ್ನ ಮೇಲೆ ಶುರು ಆಗಿಬಿಡುತ್ತದೋ ಹೇಗೇ ? ಆದರೂ ಆದೀತು. ಈ ಪೊಲೀಸರ ಆಟವನ್ನು ದಾಂಧಲೆಯನ್ನು ಹೀಗೆಯೇ ಎಂದು ಹೇಳುವಂತಿಲ್ಲ.

ಆ ರೀತಿ ಹೊಸ ಆಪಾದನೆಯನ್ನು ತನ್ನ ಮೇಲೆ ಹೊರಿಸಿದರೆ, ತನ್ನ ಗತಿ ? ಈಗಾಗಲೇ ದ್ರೌಪದಿಯ ಸೀರೆಯನ್ನು ಸೆಳೆದ ಆಪಾದನೆ ಯುಗಯುಗಗಳು ಕಳೆದರೂ ಮುಗಿದಿಲ್ಲ, ಸೆರೆಮನೆಯ ಕೋಣೆಯೊಳಗೆ ಕುಳಿತೂ ಕುಳಿತೂ ಬೇಜಾರಾಗಿ ಹೋಗಿದೆ. ತುಂಬಾ ಬೇಜಾರಾದಾಗ ಈ ಪೊಲೀಸರಿಗೆ ದಮ್ಮಯ್ಯ ಗುಡ್ಡೆ ಹಾಕಿದರೆ ಒಂದು ಬೀಡಿ ಎಸೆಯುತ್ತಾರೆ. ಹಾಳಾದ ಪೊಲೀಸರು.

ದುಶ್ಶಾಸನ ಈಗ ಭಯದಿಂದ ಉಡುಗಿಹೋದ. ಮುಂದಿನ ದಿನಗಳನ್ನು ನೆನೆದು ನಡುಗಿಬಿಟ್ಟ. ಜೋರಾಗಿ ಈಗ ಆತ ಕೂಗುಹಾಕತೊಡಗಿದ.

''ಇಲ್ಲ, ಇಲ್ಲ, ಖಂಡಿತವಾಗಿಯೂ ಈ ಹುಡುಗಿಯರ ಬಟ್ಟೆಗಳನ್ನು ನಾನು ಬಿಚ್ಚಿಲ್ಲ. ಬಿಚ್ಚಿಲ್ಲ. ಸತ್ಯದ ಮೇಲೆ ಆಣೆ. ನಿಮ್ಮಪ್ಪನಾಣೆ, ಅಮ್ಮನಾಣೆ, ಗಾಂಧಾರಿಯಾಣೆ...''

ಧಿಗ್ಗನೆ ಎಲ್ಲರೂ ಮೇಲೆದ್ದುಬಿಟ್ಟರು. ದೀಪಗಳೂ ಜಗ್ಗನೆ ಹತ್ತಿಕೊಂಡವು. ವೇದಿಕೆಯ ಬಳಿ ಇದ್ದ ದೀಪಗಳು ಮಾತ್ರ ಆರಿಹೋದವು. ವೇದಿಕೆಯ ಮೇಲಿದ್ದ ಹುಡುಗಿಯರೂ ನೇಪಥ್ಯಕ್ಕೆ ಸರಿದುಬಿಟ್ಟರು.

ಎಲ್ಲರಿಗೂ ಭಯ. ಹೀಗೆ 'ದೊಡ್ಡ ಮನುಷ್ಯರು' ಎನ್ನುವವರು ಕೆಲವರು ಅಲ್ಲಿ ನಗ್ನ ಕುಣಿತ ನೋಡಲು ಸೇರಿದ್ದರು. ಈಗ ಹಠಾತ್ತನೆ ಪೊಲೀಸರು ಗೀಲೀಸರ ದಾಳಿ ಆಗಿದೆಯೋ ? ಎಲ್ಲಿ ತಮ್ಮ ತಮ್ಮ ಹೆಸರುಗಳು ಪತ್ರಿಕೆಗಳಲ್ಲಿ ಬಂದುಬಿಡುತ್ತವೋ ? ಗಿಡುಗಗಳ ಹಾಗೆ ಈ ಪತ್ರಿಕೆಗಳು ಇಂಥ ಸಂಭವಗಳನ್ನೇ ಕಾದುಕೊಂಡಿರುತ್ತವೆ.

ರಾಮ ರಾಮಾ ! ಅಯೋಧ್ಯೆ ರಾಮಾ !

ಇಷ್ಟರಲ್ಲಿ ಒಬ್ಬ ''ಹಿಡೀರೀ, ಹಿಡೀರಿ, ಅವನೇ ಹಾಗೆ ಕೂಗಿಕೊಂಡಿದ್ದು'' ಎಂದು ದುಶ್ಶಾಸನನ ಕಡೆ ಬೆರಳು ತೋರಿಸುತ್ತ ಕೂಗಿಕೊಂಡ. ಅವನನ್ನು ಹಿಡಿಯಲು ಯಾರೋ ಮುನ್ನುಗ್ಗಿದರು.

ಆದರೆ ದುಶ್ಶಾಸನ ಹಿಡಿಯಲು ಬಂದವನನ್ನು ಢುಬ್ ಎಂದು ಗದೆಯಿಂದ ಒಂದೇಟು ಹಾಕಿ ಹಿಂದಕ್ಕೆ ತಳ್ಳಿ ''ನಾನಲ್ಲ, ನಾನಲ್ಲ, ಹುಡುಗಿಯರ ಬಟ್ಟೆಗಳನ್ನು ಖಂಡಿತವಾಗಿಯೂ ನಾನು ಬಿಚ್ಚಿಲ್ಲ...'' ಎಂದು ಚೀರಿಕೊಂಡು ಕುರ್ಚಿಗಳನ್ನು ಎಡವುತ್ತ ಕೆಡವುತ್ತ ದಾಟುತ್ತ ಬಾಗಿಲಿಗೆ ಬಂದೇಬಿಟ್ಟ. ಬಾಗಿಲಲ್ಲಿದ್ದ ಗೂರ್ಖಾನಿಗೂ ಒಂದೇಟು ಹಾಕಿ ಓಡಿ ಓಡಿ ಮಹಾತ್ಮ ಗಾಂಧಿ ರಸ್ತೆಗೆ ಬಂದು ಸೇರಿಯೇಬಿಟ್ಟ.

ಗದೆಯನ್ನು ಬಲದ ಭುಜದ ಮೇಲೆ ಹಾಕಿಕೊಂಡು ಕೃಷ್ಣ ಕೃಷ್ಣಾ ಎಂದು ಕೂಗಿಕೊಳ್ಳುತ್ತ ಹಾಳಾದ ಆ ರಸ್ತೆಯಲ್ಲಿ ಬೆಳಗಿನ ಎರಡು ಗಂಟೆಯ ಸಮಯದಲ್ಲಿ ದುಶ್ಶಾಸನ ಉದ್ದಕ್ಕೂ ಉದ್ದಕ್ಕೂ ಓಡತೊಡಗಿದ.

ಶೇಷನಾರಾಯಣ
ಲಕ್ಕಪ್ಪ ಬಡಾವಣೆ, ನಂ. ೯, ಮೊದಲನೆಯ ಕ್ರಾಸ್, ಸಿಂಗಾಪುರ
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು-೯೭

# ಸರ್ವಾಂಗಗಳೂ ಲಿಂಗಮಯವಯ್ಯ

## ಅಲ್ಲಮನ ಒಂದು ವಚನ

ಸಂಕುಲಜೀವ



ಅಲ್ಲಮ ನನ್ನ ಹುಚ್ಚು.

ಅಲ್ಲಮಪ್ರಭು ಒಂದು ಬಯಲು. ಒಂದು ವಿಶಾಲ ಬಯಲು. ಈ ಬಯಲಿಗೆ ಅನೇಕ ದಾರಿಗಳು. ನಾವು ಯಾವ ದಾರಿಯಿಂದಲಾದರೂ ಈ ಬಯಲಿನೊಳಗೆ ಪ್ರವೇಶಿಸಿ ಅಲ್ಲಮನನ್ನು ಪರಿಚಯ ಮಾಡಿಕೊಳ್ಳಬಹುದು, ಅಭ್ಯಾಸ ಮಾಡಬಹುದು. ವೀರಶೈವ ಮತ ಧರ್ಮದ ಸಿದ್ಧಾಂತದ ಅಧ್ಯಯನದಲ್ಲಿ ಅಲ್ಲಮ ನಮಗೆ ಅನಿವಾರ್ಯವಾಗಿ ಸಿಕ್ಕೇ ಸಿಗುತ್ತಾನೆ. ಒಬ್ಬ ಕವಿಯಾಗಿಯೂ ನಾವು ಅಲ್ಲಮನನ್ನು ಅಭ್ಯಾಸ ಮಾಡಬಹುದು. ಅವನನ್ನು ಒಬ್ಬ ಯೋಗಿಯಾಗಿ, ಅನುಭಾವಿ ತತ್ವಜ್ಞಾನಿಯಾಗಿ ಕೂಡ ತಿಳಿದುಕೊಳ್ಳಲಿಕ್ಕೆ ಪ್ರಯತ್ನ ಮಾಡಬಹುದು. ಪಾಶ್ಚಾತ್ಯ ಸಂಸ್ಕೃತಿಯೊಳಗೆ ತತ್ವಜ್ಞಾನಿ, (ಫಿಲಾಸಫರ್) ಎಂಬುವವರು ಯಾವಾಗಲೂ ಅನುಭಾವಿಗಳಾಗಿರುತ್ತಾರೆ ಎಂದೇನಿಲ್ಲ. ಆದರೆ ನಮ್ಮಲ್ಲಿ ಅನುಭಾವಿಗಳು ತತ್ವಜ್ಞಾನಿಗಳು ಸಾಮಾನ್ಯವಾಗಿ ಒಬ್ಬರೇ ಆಗಿರುತ್ತಾರೆ. ಅಲ್ಲಮನನ್ನು ಹೀಗೂ ನೋಡಬಹುದು. ಶರಣ ಚಳುವಳಿ ನಮ್ಮ ಇಡೀ ದೇಶದ ಇತಿಹಾಸದಲ್ಲಿ ಆಗಿಹೋದಂತಹ ಬಹಳ ಮಹತ್ವದ ಸಾಮಾಜಿಕ ಚಳುವಳಿ. ಅದರ ಕೇಂದ್ರ ಬಿಂದು, ಅದರ ತಾತ್ವಿಕ ಚಿಲುಮೆ ಅಲ್ಲಮ. ಈ ದೃಷ್ಟಿಯಿಂದಲೂ ನಾವು ಅಲ್ಲಮನನ್ನು ಅಭ್ಯಾಸ ಮಾಡುವುದು ಶಕ್ಯವಿದೆ. ಕನ್ನಡ ನಾಡಿನ ನುಡಿ, ಇತಿಹಾಸ ಇವುಗಳನ್ನು ಅಭ್ಯಾಸ ಮಾಡುವಾಗಲೂ ಅಲ್ಲಮ ನಮಗೆ ಭೆಟ್ಟಿಯಾಗುತ್ತಾನೆ. ಹೀಗೆ ಬೇರೆ ಬೇರೆ ದಾರಿಗಳಿಂದ ನಾವು ಅಲ್ಲಮನನ್ನು ಅರ್ಥಮಾಡಿಕೊಳ್ಳಲು ಶಕ್ಯವಿದೆ.

ನನಗೆ ಅಲ್ಲಮ ಸಿಕ್ಕಿದ್ದು ಹೇಗೆ ? ನನಗೆ ಮೊದಲು ಆಸಕ್ತಿ ಹುಟ್ಟಿದ್ದು ಝೆನ್ ಕಥೆಗಳಲ್ಲಿ, ಬೌದ್ಧ ಮತದ ಒಂದು ಶಾಖೆಯಾಗಿ ಬೆಳೆದು ಚೀನಾ, ಕೋರಿಯಾ ಮತ್ತು ಜಪಾನ್‌ಗಳಲ್ಲಿ ಅರಳಿರುವಂತಹ ಈ ಝೆನ್ ತತ್ವ ಹಾಗೂ ಅದರ ಜೊತೆ ಬೌದ್ಧಮತದ ವಿಚಾರಗಳು ಮತ್ತು ಬುದ್ಧನ ವಿಚಾರಗಳು ಇವುಗಳನ್ನು ಓದುವ ತಿಳಿದುಕೊಳ್ಳುವ ಪ್ರಯತ್ನ ಮಾಡಿದೆ. ಇವುಗಳಲ್ಲಿ ಬಹಳ ಮಹತ್ವದ್ದಾಗಿ ಬರುವುದು ಶೂನ್ಯತತ್ವ ಎಂಬುದು. ಶೂನ್ಯತತ್ವದ ಬಗೆಗಿನ ನನ್ನ ಕುತೂಹಲ ನನ್ನನ್ನು ಶೂನ್ಯ ಸಿಂಹಾಸನ, ಶೂನ್ಯ ಸಂಪಾದನೆ ಇವುಗಳ ಕಡೆ ತಂದಿತು. ಬೌದ್ಧರು ಹೇಳುವ ಶೂನ್ಯ ತತ್ವಕ್ಕೂ ಶರಣರು ಹೇಳುವ ಶೂನ್ಯ ತತ್ವಕ್ಕೂ ಏನಾದರೂ ಸಂಬಂಧ ಇದೆಯೇ, ಇವುಗಳ ನಡುವಿನ ವ್ಯತ್ಯಾಸವೇನು ಎಂಬುದನ್ನು ತಿಳಿದುಕೊಳ್ಳಲು ನೋಡಿದೆ. ಅಲ್ಲಮ ನನಗೆ ಸಿಕ್ಕಿದ್ದು ಈ ಸಂದರ್ಭದಲ್ಲಿ.

ಭಾರತ ಜಗತ್ತಿಗೆ ಕೊಟ್ಟಂತಹ ಅತ್ಯಂತ ಶ್ರೇಷ್ಠ ಮೂವರು ಕವಿಗಳು ಅಂದರೆ ಅಲ್ಲಮಪ್ರಭು, ಜ್ಞಾನೇಶ್ವರ ಮತ್ತು ಕಬೀರ ಎಂದು ಕನ್ನಡದ ಕೀರ್ತಿ ಶ್ರೀ ಕೀರ್ತಿನಾಥ ಕುರ್ತಕೋಟಿಯವರು ಒಂದು ಸಂದರ್ಭದಲ್ಲಿ ಹೇಳಿದ್ದರು. ನಮಗೆ ದೊರೆತಿರುವುದು ಅಲ್ಲಮನ ಸುಮಾರು ೧೭೦೦ ವಚನಗಳು. ಯಾರಿಗೂ ಕೂಡ ಅಲ್ಲಮ ಒಂದು ದೊಡ್ಡ ಸವಾಲೇ ಸರಿ. ಅವನ ವಚನಗಳನ್ನು ಅವನ ಸಾಹಿತ್ಯವನ್ನು ಓದಿದಂತಹ ಎಲ್ಲರೂ ಒಪ್ಪುವ ಮಾತೇ ಇದು. ಅವನ ಬೆಡಗಿನ ವಚನಗಳಂತೂ ಅರ್ಥ ಮಾಡಿಕೊಳ್ಳುವುದೇ ಬಹಳ ಕಷ್ಟದ ಸಂಗತಿ. ಅಲ್ಲಮ ಒಂದು ರೀತಿ ನಿಸ್ಸೀಮ; ಅತೀತ. ಅವನು ಎಲ್ಲ ತರ್ಕ, ಎಲ್ಲ ವಿಚಾರ, ಎಲ್ಲ ವಾದಗಳ ಆಚೆ ನಿಂತುಬಿಡುವಂತಹ ವ್ಯಕ್ತಿ. ವಿರುದ್ಧಗಳನ್ನು ಒಂದೇ ಬಿಂದುವಿಗೆ ತಂದು ಅವುಗಳನ್ನು ಅತ್ಯಂತ ಗಟ್ಟಿಯಾಗಿ ಮುಖಾಮುಖಿ ಮಾಡಿಸುವಂತಹ ಅನುಭಾವಿ. ಬೃಹತ್ತನ್ನು ಒಂದು ಅಣುವಿಗೆ ತರುವುದಾಗಲಿ ಅಥವಾ ಒಂದು ಅಣುವನ್ನು ಬ್ರಹ್ಮಾಂಡವಾಗಿಸುವುದಾಗಲಿ ಅಲ್ಲಮನಿಗೆ ಬಹಳ ಸಲೀಸಾದಂತಹ ಸಂಗತಿ. ಅಲ್ಲಮನ ಜ್ಞಾನ, ಅವನ ಅರಿವು ಎಷ್ಟು ದೊಡ್ಡದು ಹಾಗೂ ಅದನ್ನು ಹೇಳಲಿಕ್ಕೆ ಅವನು ಬಳಸುವ ಭಾಷೆ ಎಂತಹದ್ದು ಹಾಗೂ ಅವನ ಶೈಲಿ ಎಂತಹದ್ದು ಎಂಬುದನ್ನು ತಿಳಿದುಕೊಳ್ಳುವುದು ನಿಜಕ್ಕೂ ಒಂದು ರೋಚಕವಾದ ಅನುಭವವೇ ಸರಿ.

ಈ ಒಂದು ಸಂಕ್ಷಿಪ್ತ ಪೀಠಿಕೆಯೊಂದಿಗೆ ನಾನು ಅಲ್ಲಮನ ಕೆಳಗಿನ ವಚನವನ್ನು ಅರ್ಥೈಸಬಯಸುತ್ತೇನೆ.

*ಹರಿವ ನದಿಯ ಮೈಯೆಲ್ಲ ಕಾಲು*
*ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ*
*ಬೀಸುವ ಗಾಳಿಗೆ ಮೈಯೆಲ್ಲ ಕೈ*
*ಇದು ವಿಷಯ ಗುಹೇಶ್ವರ*
*ನಿಮ್ಮ ಶರಣಂಗೆ ಸರ್ವಾಂಗಗಳೂ*
*ಲಿಂಗಮಯವಯ್ಯ*

ಅಲ್ಲಮನ ಇತರ ಹಲವಾರು ವಚನಗಳನ್ನು ನೋಡಿದಾಗ ಇದು ಒಂದು ಸಣ್ಣ ವಚನ, ಬಹಳ ಸರಳವಾದ ವಚನ ಅಂತ ಅನಿಸುತ್ತದೆ. ಹರಿವ ನದಿ, ಉರಿವ ಕಿಚ್ಚು, ಬೀಸುವ ಗಾಳಿ ಇವೆಲ್ಲ ನಮಗೆ ಚಿರಪರಿಚಿತವಾದ ಸಂಗತಿಗಳೇ. ಇವು ಪೂರ್ಣ ಭೌತಿಕ ವಿಷಯಗಳು ಹಾಗೂ ನಿರ್ಜೀವ ಸಂಗತಿಗಳು. ಅಲ್ಲಮನು ಈ ನಿರ್ಜೀವ ಸಂಗತಿಗಳಿಗೆ ನಮ್ಮ ಶರೀರದ ಅವಯವಗಳನ್ನು ನೀಡಿ ಒಂದು ಅರ್ಥದಲ್ಲಿ ಅವುಗಳಿಗೆ ಜೀವ ತುಂಬುತ್ತಾನೆ. ನದಿ, ಕಿಚ್ಚು, ಗಾಳಿ ಹೀಗೆ ಬೃಹತ್ತಿನಿಂದ, ಬಹಿರಂಗದಿಂದ ಪ್ರಾರಂಭಿಸಿ ಕಾಲು,

ಭಾರತ ಜಗತ್ತಿಗೆ ಕೊಟ್ಟಂತಹ ಅತ್ಯಂತ ಶ್ರೇಷ್ಠ ಮೂವರು ಕವಿಗಳು ಅಂದರೆ ಅಲ್ಲಮಪ್ರಭು, ಜ್ಞಾನೇಶ್ವರ ಮತ್ತು ಕಬೀರ ಎಂದು ಕನ್ನಡದ ಕೀರ್ತಿ ಶ್ರೀ ಕೀರ್ತಿನಾಥ ಕುರ್ತಕೋಟಿಯವರು ಒಂದು ಸಂದರ್ಭದಲ್ಲಿ ಹೇಳಿದ್ದರು. ನಮಗೆ ದೊರೆತಿರುವುದು ಅಲ್ಲಮನ ಸುಮಾರು ೧೭೦೦ ವಚನಗಳು. ಯಾರಿಗೂ ಕೂಡ ಅಲ್ಲಮ ಒಂದು ದೊಡ್ಡ ಸವಾಲೇ ಸರಿ. ಅವನ ವಚನಗಳನ್ನು ಅವನ ಸಾಹಿತ್ಯವನ್ನು ಓದಿದಂತಹ ಎಲ್ಲರೂ ಒಪ್ಪುವ ಮಾತೇ ಇದು. ಅವನ ಬೆಡಗಿನ ವಚನಗಳಂತೂ ಅರ್ಥ ಮಾಡಿಕೊಳ್ಳುವುದೇ ಬಹಳ ಕಷ್ಟದ ಸಂಗತಿ. ಅಲ್ಲಮ ಒಂದು ರೀತಿ ನಿಸ್ಸೀಮ; ಅತೀತ. ಅವನು ಎಲ್ಲ ತರ್ಕ, ಎಲ್ಲ ವಿಚಾರ, ಎಲ್ಲ ವಾದಗಳ ಆಚೆ ನಿಂತುಬಿಡುವಂತಹ ವ್ಯಕ್ತಿ. ವಿರುದ್ಧಗಳನ್ನು ಒಂದೇ ಬಿಂದುವಿಗೆ ತಂದು ಅವುಗಳನ್ನು ಅತ್ಯಂತ ಗಟ್ಟಿಯಾಗಿ ಮುಖಾಮುಖಿ ಮಾಡಿಸುವಂತಹ ಅನುಭಾವಿ.

ಬಾಯಿ, ಕೈ ಹೀಗೆ ಒಂದು ಜೀವಂತ ಶರೀರಕ್ಕೆ ತೆಗೆದು ಕೊಂಡು ಬಂದು ಮುಂದೆ ಲಿಂಗಮಯ ಅಂದರೆ ಅತ್ಯಂತ ಸೂಕ್ಷ್ಮಕ್ಕೆ ತಂದು ನಿಲ್ಲಿಸುತ್ತಾನೆ. ಸಂಪೂರ್ಣ ಬಹಿರಂಗದಿಂದ ಪ್ರಾರಂಭಿಸಿ ಅತ್ಯಂತ ಅಂತರಂಗ ದೊಳಗೆ ಬರುತ್ತಾನೆ. ಕೆಲವೇ ಕೆಲವು ಶಬ್ದ, ಸಾಲು ಗಳಲ್ಲಿ ಒಂದು ಘನ ಸತ್ಯವನ್ನು ನಮ್ಮ ಮುಂದೆ ರಚಿಸಿ ಇಡುತ್ತಾನೆ. ಇಲ್ಲಿ ನಾವು ಗಮನವಿಟ್ಟು ನೋಡಿದಾಗ ನಮಗೆ ಗೋಚರಿಸುವದೇನೆಂದರೆ, ಅಲ್ಲಮನು ಹರಿವ ನದಿ, ಉರಿವ ಕಿಚ್ಚು, ಬೀಸುವ ಗಾಳಿ ಈ ಮೂರು ಸಂಗತಿಗಳೊಳಗಿರುವ ಅವುಗಳ ಮೂಲ ಸಾರವನ್ನೇ ಹಿಡಿಯುತ್ತಾನೆ. ನದಿ ನಮಗೆ ನದಿಯಾಗುವುದು ಅದು ಹರಿಯುತ್ತದೆ ಅನ್ನುವ ಕಾರಣಕ್ಕೆ. ಅದು ನಿಂತ ನೀರಾದರೆ ನಾವು ನದಿ ಅಂತ ಕರೆಯುವುದಿಲ್ಲ. ಗಾಳಿ ಎಂಬುದು ಗಾಳಿಯಾಗುವುದು ಅದು ಬೀಸುತ್ತ ಇರುವಾಗ ಮಾತ್ರ. ಹರಿವ ನದಿಗೆ ಮೈಯೆಲ್ಲ ಕಾಲು ಎಂದು ಹೇಳುವ ಮೂಲಕ ಅಲ್ಲಮನು ನದಿಯ ಇತರ ಅನವಶ್ಯಕ ಗುಣಗಳನ್ನೆಲ್ಲ ಬದಿಗಿರಿಸಿ ಅದರ ಅತ್ಯಂತ ಮುಖ್ಯ ಗುಣವಾದ ಕೇವಲ ಅದರ ನದಿತನ ಎಂಬುದನ್ನು ಅದರ ಹರಿಯುವಿಕೆ ಎಂಬುದನ್ನು ಮಾತ್ರ ಆಯ್ದುಕೊಳ್ಳುತ್ತಾನೆ. ನದಿಗೆ ಈ ಕ್ಷಣದಲ್ಲಿ ಹರಿಯುವುದೇ ಸರ್ವಸ್ವ. ಅದನ್ನು ಹೊರತುಪಡಿಸಿ ಅದಕ್ಕೆ ಬೇರೆ ಏನೂ ಇಲ್ಲ, ಅದು ಮೈಯೆಲ್ಲ ಕಾಲಾಗಿ ಹರಿಯುತ್ತದೆ ಅಷ್ಟೇ. ಇದೇ ರೀತಿ ಉರಿಯುವ ಕಿಚ್ಚಿಗೆ ಮೈಯೆಲ್ಲಾ ಬಾಯಿ. ಏನೇನು ತನ್ನ ಸ್ಪರ್ಶಕ್ಕೆ ಬರುತ್ತದೆಯೋ ಸಂಪರ್ಕಕ್ಕೆ ಬರುತ್ತದೆಯೋ ಅದೆಲ್ಲವನ್ನೂ ಕಿಚ್ಚು ನುಂಗುತ್ತಾ ಹೋಗುತ್ತದೆ. ಇದೇ ರೀತಿ ಬೀಸುವ ಗಾಳಿ ಕೂಡ ತನ್ನ ತೆಕ್ಕೆಗೆ ಬಂದದ್ದೆಲ್ಲವನ್ನೂ ಜೊತೆಗೆ ತೆಗೆದುಕೊಂಡು ಮುಂದೆ ಹೋಗುತ್ತದೆ. ನದಿಯ ನದಿತನ ಎಂಬುದನ್ನು ಕಿಚ್ಚಿನ ಕಿಚ್ಚುತನ ಎಂಬುದನ್ನು ಗಾಳಿಯ ಗಾಳಿತನ ಎಂಬುದನ್ನು ಅಥವಾ ಯಾವುದನ್ನು ಬೌದ್ಧ ಸಿದ್ಧಾಂತದಲ್ಲಿ ಸಚ್ನೆಸ್ ಅಥವಾ ದಸ್ನೆಸ್ ಎಂದು ಹೇಳಲಾಗಿದೆಯೋ ಅದನ್ನು ಅಲ್ಲಮನು ಕೇವಲ ಮೂರು ತೀರ ಸಾಮಾನ್ಯ ಸಂಗತಿ ಗಳನ್ನೇ ಇಟ್ಟುಕೊಂಡು ನಮಗೆ ಹೇಳುತ್ತಾನೆ. ಬಹಳ ಮಹತ್ವದ ವಿಷಯವೆಂದರೆ ಇಲ್ಲಿ ಇರುವುದು ಚಲನ ಶೀಲತೆ ಹಾಗೂ ಕ್ರಿಯೆ. ಹರಿಯುವ ನದಿ, ಉರಿಯುವ ಕಿಚ್ಚು, ಬೀಸುವ ಗಾಳಿ – ಈ ಮೂರೂ ವಿಷಯಗಳು ಈಗ ಘಟಿಸುತ್ತಿರುವ ಕ್ರಿಯೆಗಳು. ಆದ್ದರಿಂದಲೇ ಅಲ್ಲಮನು ಅವುಗಳಿಗೆ ನಮ್ಮ ಶರೀರದ ಅವಯವ ಗಳನ್ನು ನೀಡುತ್ತಾನೆ. ಕಾಲು ಬಾಯಿ ಮತ್ತು ಕೈ ಇವು ನಮ್ಮ ಶರೀರದ ಮೂರು ಮುಖ್ಯ ಅಂಗಗಳು. ಟೇಬಲ್ಲಿಗೂ ಕಾಲುಗಳಿರುತ್ತವೆ. ಆದರೆ ಅವು ನಿಂತಂತಹ ಕಾಲುಗಳು, ನಿಶ್ಚಲ ಕಾಲುಗಳು. ಆದರೆ ನಮಗೆ ಕಾಲು ಎಂಬುದು ಪೂರ್ಣವಾಗಿ ದೊರಕುವುದು ಅದು ಕ್ರಿಯೆಗೆ ಉಪಯೋಗವಾದಾಗ ಮಾತ್ರ. ಅಂದರೆ ಚಲನೆಗೆ ದೊರೆತಾಗ ಮಾತ್ರ ಅದು ಕಾಲು ಆಗುತ್ತದೆ. ಕಾಲು ಕಾಲಾಗುವುದು ಅದು ಕ್ರಿಯೆಗೆ ತೊಡಗಿದಾಗಲೇ. ಅದೇ ರೀತಿ ಬಾಯಿ ಹಾಗೂ ಕೈ. ಈ ಕ್ರಿಯೆ ಹಾಗೂ ಚಲನಶೀಲತೆ ಎಂಬುದೇ ನಿಜವಾದ ಜಂಗಮತ್ವ ಅಥವಾ ಜಂಗಮತನ ಅನ್ನುವ ಒಂದು ಮಹಾಸತ್ಯವನ್ನು




ಅಲ್ಲಮ ಬಹಳ ಸರಳವಾದ ಮಾತುಗಳಲ್ಲಿ ನಮಗೆ ಹೇಳುತ್ತಾನೆ ಹಾಗೂ ಅಲ್ಲಿಂದ ಮುಂದೆ ಅವನು ಏನು ಹೇಳಬಯಸುತ್ತಾನೆಂದರೆ – ಸರ್ವಾಂಗಗಳೂ ಲಿಂಗಮಯವಯ್ಯ ನಿಮ್ಮ ಶರಣಂಗೆ. ನದಿಯಾಗಲಿ ಉರಿಯುವ ಕಿಚ್ಚಾಗಲಿ ಬೀಸುವ ಗಾಳಿಯಾಗಲಿ ಅವುಗಳಿಗೆ ಇರುವುದು ಈ ಸಂಪೂರ್ಣ ಏಕಾಗ್ರತೆ. ಆ ಏಕಾಗ್ರತೆ ಆ ತನ್ಮಯತೆ ಆ ತಲ್ಲೀನತೆ ಅಥವಾ ತಾದಾತ್ಮ್ಯ – ನಾನು ಅದೇ ಆಗಿಬಿಡುತ್ತೇನೆ, ಅದನ್ನು ಬಿಟ್ಟು ನನಗೆ ಬೇರೆ ಏನೂ ಅಸ್ತಿತ್ವವಿಲ್ಲ – ಹರಿಯುವುದೇ ನನ್ನ ಕೆಲಸ, ನಾನು ಹರಿಯುತ್ತೇನೆ ಅಂತ ನದಿ ಹೇಳುತ್ತದೆ. ಅದೇ ತರಹ ಅದುವೇ ಇದುವಾಗಿ ಬೇರೆ ಏನೂ ಇಲ್ಲ ಅನ್ನುವಂಥಾ ಒಂದು ಸತ್ಯವನ್ನ ಅಲ್ಲಮ ಹೇಳುತ್ತಾನೆ. ಸರ್ವಾಂಗಗಳು ಲಿಂಗಮಯವಯ್ಯ ಎಂದು ಹೇಳುವಾಗ ಅಲ್ಲಮನು ಹೇಳುವಂತಹ ಲಿಂಗ ಅಂದರೆ ಏನು ? ಅಲ್ಲಮ ಉದ್ದಕ್ಕೂ ಬೇರೆ ಬೇರೆ ವಚನಗಳಲ್ಲಿ ಲಿಂಗ ಅನ್ನುವದನ್ನು ಬೇರೆ ಬೇರೆ ರೀತಿಯೊಳಗೆ ಹೇಳುತ್ತಾನೆ. ಆದರೆ ಒಂದೇ ಸತ್ಯವನ್ನು ಹೇಳುತ್ತಾನೆ. ಅಲ್ಲಮನಿಗೆ ಲಿಂಗ ಎಂದರೆ ಗುಹೇಶ್ವರ, ಗುಹೇಶ್ವರ ಅಂದರೆ ಅರಿವು, ಅರಿವು ಅಂದರೆ ಬಯಲು, ಬಯಲು ಅಂದರೆ ಶೂನ್ಯ, ಶೂನ್ಯ ಅಂದರೆ ಲಿಂಗ.

*ಮಠವೇಕೋ ಪರ್ವತವೇಕೋ*
*ಜನವೇಕೋ ನಿರ್ಜನವೇಕೋ*
*ಚಿತ್ತ ಸಮಾಧಾನವುಳ್ಳ ಶರಣಂಗೆ*
*ಮತ್ತೆ ಹೊರಗಣ ಚಿಂತೆ ಧ್ಯಾನ*
*ಮೌನ ಜಪ ತಪವೇಕೋ ತನ್ನ ತಾನರಿದ*
*ಶರಣಂಗೆ*

ಈ ವಚನದಲ್ಲಿ ಕೂಡ ಅಲ್ಲಮನು ವ್ಯಕ್ತಿಗೆ ತನ್ನ ಅರಿವು ಎಂಬುದೇ ಘನಸತ್ಯ, ಆ ಅರಿವು ಎಂಬುದೇ ಲಿಂಗ, ಅದುವೇ ಗುಹೇಶ್ವರ ಅಂತ ಹೇಳುತ್ತಾನೆ. ಇನ್ನೊಂದು ವಚನದಲ್ಲಿ ಅಲ್ಲಮನು,

*ಲಿಂಗವನರಿಯದೆ ಏನನರಿದಡೆಯೂ ಫಲವಿಲ್ಲ*
*ಲಿಂಗವನರಿದ ಬಳಿಕ ಮತ್ತೇನನರಿದರೂ ಫಲವಿಲ್ಲ*
*ಸರ್ವ ಕಾರಣ ಲಿಂಗವಾಗಿ ಲಿಂಗವನೆ ಅರಿದು*
*ಲಿಂಗ ಸಂಗವನೆ ಮಾಡುವ*
*ಸಂಗ ಸುಖದೊಳು ಓಲಾಡುವೆ ಗುಹೇಶ್ವರ*

ಎಂದು ಹೇಳುತ್ತಾನೆ. ಮತ್ತೊಂದು ವಚನದಲ್ಲಿ,

*ಅರಿದೆನೆಂಬುದು ತಾ ಬಯಲು*
*ಅರಿಯೆನೆಂಬುದು ತಾ ಬಯಲು*
*ಅರುಹಿನ ಕುರುಹಿನ ಮರಹಿನೊಳಗೆ*
*ಗುಹೇಶ್ವರನೆಂಬುದು ತಾ ಬಯಲು*

ಎಂದು ಹೇಳುತ್ತಾನೆ.

ಹೀಗೆ ಗುಹೇಶ್ವರ ಬಯಲು ಅರಿವು ಲಿಂಗ ಇವೆಲ್ಲಾ ಅಲ್ಲಮನ ವಚನಗಳಲ್ಲಿ ಸಂವಾದಿಯಾದ ಒಂದೇ ಅರ್ಥದ ಶಬ್ದಗಳು ಅಥವಾ ಪರಿಕಲ್ಪನೆಗಳು.

ಈ ಸಂದರ್ಭದಲ್ಲಿ ಒಂದು ಝೆನ್ ಕಥೆಯನ್ನು ಹೇಳ ಬಯಸುತ್ತೇನೆ. ಒಬ್ಬ ಶಿಷ್ಯ ಚಿತ್ರಕಲೆಯನ್ನು ಕಲೀಬೇಕು ಎಂಬ ಇಚ್ಛೆಯಿಂದ ಝೆನ್ ಗುರುವಿನ ಬಳಿ ಬರುತ್ತಾನೆ. ನನಗೆ ಚಿತ್ರಕಲೆಯನ್ನು ಕಲಿಯುವ ಮನಸ್ಸಿದೆ, ನನಗೆ ಸ್ವಲ್ಪ ಮಾರ್ಗದರ್ಶನ ಮಾಡಿರಿ ಎಂದು ವಿನಂತಿಸಿಕೊಳ್ಳುತ್ತಾನೆ. ಆಗ ಗುರುಗಳು ಅಲ್ಲಿಯೇ ಆಶ್ರಮದಲ್ಲಿ ಕುಳಿತುಕೊಂಡಿದ್ದರು. ಅವರ ಮುಂದೆ ಒಂದು ಬೆಕ್ಕು ಹಾದುಹೋಗುತ್ತದೆ. ಅವರು ತೀರ ಸಹಜವಾಗಿಯೆ ಅವನಿಗೆ ಆ ಬೆಕ್ಕನ್ನು ತೋರಿಸಿ ಆ ಬೆಕ್ಕಿನ ಚಿತ್ರ ತೆಗೆದುಕೊಂಡು ಬಾ ನೋಡೋಣ ನಿನಗೆ ಚಿತ್ರಕಲೆ ಎಷ್ಟು ಸಾಧಿಸಿದೆ ನೀನೇನು ಮಾಡಬಲ್ಲೆ ಅಂತ ನಿನಗೆ ಹೇಳುತ್ತೇನೆ ಎಂದು ಹೇಳಿ ಕಳಿಸುತ್ತಾರೆ. ಈ ಶಿಷ್ಯ ವಾಪಸ್‌ಹೋಗಿ ಮರುದಿನ ಒಂದು ಬೆಕ್ಕಿನ ಚಿತ್ರ ತೆಗೆದುಕೊಂಡು ಬರುತ್ತಾನೆ. ಅದನ್ನು ನೋಡಿ ಗುರುಗಳು ಇದು ಬೆಕ್ಕಿನ ಚಿತ್ರ ಅಲ್ಲ, ಸ್ವಲ್ಪ ಪರಿಶ್ರಮ ಪಟ್ಟು ಸರಿಯಾಗಿರುವ ಬೆಕ್ಕಿನ ಚಿತ್ರ ತೆಗೆದುಕೊಂಡು ಬಾ ಎಂದು ಹೇಳುತ್ತಾರೆ. ಇವನು ಹೋಗಿ ಒಂದು ವಾರ ಪರಿಶ್ರಮ ಪಟ್ಟು ಮತ್ತೊಂದು ಚಿತ್ರ ತೆಗೆದು ಕೊಂಡು ಬರುತ್ತಾನೆ. ಗುರುಗಳು ಇದು ಬೆಕ್ಕಿನ ಚಿತ್ರ ಅಲ್ಲ ಅಂತ ಹೇಳಿ ಮರಳಿ ಕಳಿಸುತ್ತಾರೆ. ಶಿಷ್ಯ ಹೋಗಿ ಒಂದು ತಿಂಗಳು ಬಿಟ್ಟು ಮತ್ತೊಂದು ಚಿತ್ರ ತೆಗೆದು ಕೊಂಡು ಬಂದು ತೋರಿಸುತ್ತಾನೆ. ಆಗಲೂ ಗುರುಗಳು ಇದು ಕೂಡ ಬೆಕ್ಕಿನ ಚಿತ್ರ ಅಲ್ಲ; ನೀನು ಬೆಕ್ಕಿನ ಚಿತ್ರ ತೆಗೆಯಬೇಕು ಅಂತ ಹೇಳುತ್ತಾರೆ. ಆ ಶಿಷ್ಯ ಹೋದವನು ವಾಪಸ್ ಬರುವುದಿಲ್ಲ. ಸುಮಾರು ಹತ್ತು ವರ್ಷದ ನಂತರ ಮರಳಿಬರುತ್ತಾನೆ. ಬಂದು ಗುರುವಿಗೆ ನಮಸ್ಕಾರ ಮಾಡಿ ಹೇಳುತ್ತಾನೆ – ನಿಮಗೆ ನನ್ನ ಗುರುತು ಹತ್ತಲಿಕ್ಕಿಲ್ಲ. ಆದರೆ ಹತ್ತು ವರ್ಷದ ಹಿಂದೆ ನೀವು ನನಗೆ ಒಂದು ಬೆಕ್ಕಿನ ಚಿತ್ರ ತೆಗೆಯಲಿಕ್ಕೆ ಹೇಳಿದ್ದಿರಿ, ನಾನು ಈಗ ಆ ಚಿತ್ರವನ್ನು ತೆಗೆದುಕೊಂಡುಬಂದಿದ್ದೇನೆ ಎಂದು ಹೇಳಿ ತಾನು ತಂದ ಚಿತ್ರವನ್ನು ತೋರಿಸುತ್ತಾನೆ. ಆ ಚಿತ್ರವನ್ನು ನೋಡಿ ಗುರುಗಳು ಹೌದು, ಇದು ಬೆಕ್ಕಿನ ಚಿತ್ರ ನೋಡು, ಹೇಗೆ ಇದನ್ನು ಸಾಧಿಸಿದೆ ಅಂತ ಕೇಳುತ್ತಾರೆ. ಆಗ ಅವನು ಹೇಳುತ್ತಾನೆ – ನೀವು ಮೂರು ಸಲ ನನ್ನನ್ನು ವಾಪಸ್ ಕಳಿಸಿದಿರಿ. ನನಗೆ ಆಗ ಯಾಕೆ ಅಂತ ಅರ್ಥ ಆಗಿರಲಿಲ್ಲ. ಆದರೆ ಮುಂದೆ ನನ್ನನ್ನು ನಾನು ಅದರಲ್ಲಿ ತೊಡಗಿಸಿಕೊಂಡಾಗ, ಬೆಕ್ಕಿನ ಚಿತ್ರ ತೆಗೆಯುವುದು ಹೇಗೆ ಅಂತ ನಾನು ಅದರ ಆಳದೊಳಗಿನ ಆಳದೊಳಗೆ ಹೋಗಲಿಕ್ಕೆ ಶುರು

ಮಾಡಿದಾಗ ನನಗೆ ಕೊನೆಗೆ ಅರ್ಥವಾಯಿತು, ನಾನೇ ಬೆಕ್ಕು ಆಗಬೇಕು ಎಂಬ ಸತ್ಯ. ಯಾವಾಗ ನಾನೇ ಒಂದು ಬೆಕ್ಕು ಆಗುತ್ತೇನೆಯೋ ಆವಾಗ ನನಗೆ ಆ ಚಿತ್ರ ತೆಗೆಯಲು ಶಕ್ಯವಾಗುತ್ತದೆ. ಆ ಬೆಕ್ಕಿನ ಸಾರ, ಸರ್ವಸ್ವ ಏನು ಅಂತನ್ನೋದನ್ನು ನಾನು ಅರ್ಥ ಮಾಡಿಕೊಂಡಾಗಲೇ ಆ ಬೆಕ್ಕಿನ ಒಂದು ಸಂಪೂರ್ಣವಾದ, ಸರಿಯಾದ ಚಿತ್ರ ತೆಗೆಯುವುದು ನನ್ನಿಂದ ಶಕ್ಯ ಆಗುತ್ತದೆ ಎಂಬುದು ಅರಿವಾಯಿತು. ಅದನ್ನು ಸಾಧಿಸಿದಾಗ ಮಾತ್ರ ನನಗೆ ಈ ಚಿತ್ರ ತೆಗೆಯಲು ಶಕ್ಯವಾಯಿತು. ಈ ಸಾರವನ್ನು ಹಿಡಿಯುವುದು ಎನ್ನುವುದಿದೆಯಲ್ಲ, ತಾನು ತೆಗೆಯ ಬೇಕಾದಂತಹ ಚಿತ್ರದ ವಸ್ತು, ಅದರ ಸಾರ, ಕುಂಚ, ಬಣ್ಣ, ತಾನು, ತನ್ನ ಕೈ ಎಲ್ಲವೂ ಆ ಕ್ಷಣದಲ್ಲಿ ಒಂದೇ ಆಗಿ, ಅದನ್ನ ಬಿಟ್ಟು ಬೇರೆ ಏನೇನೂ ಇಲ್ಲ, ಅನ್ನು ವಂಥಾ ಆ ಗಳಿಗೆ ಶಕ್ಯ ಆದಾಗ ಆ ಬೆಕ್ಕಿನ ಚಿತ್ರ ಶಕ್ಯ ವಾಗುತ್ತದೆ. ಸರ್ವಾಂಗಗಳು ಲಿಂಗಮಯವಾಗುವುದು ಅಂದರೆ ನಮ್ಮನ್ನು ನಾವೇ ಸಂಪೂರ್ಣವಾಗಿ ಅರಿತು ಕೊಂಡು ನಮ್ಮ ಸರ್ವಸ್ವವನ್ನೂ ಆ ಅರಿವಿನ ಉತ್ಕಟ ಸ್ಥಿತಿಯೊಳಗೆ ತರುವುದು. ಹೀಗೆ ನಮ್ಮನ್ನು ನಾವೇ ಅರಿವಿನ ಉತ್ಕಟ ಸ್ಥಿತಿಯೊಳಗೆ ತರುವ ಪ್ರಕ್ರಿಯೆ ಅಸಹಜವಾದ ರೀತಿಯಲ್ಲಿ ಆಗುವುದು ಸರಿಯಲ್ಲ. ಸರ್ವಾಂಗಗಳನ್ನೂ ಒಂದೇ ಬಿಂದುವಿನೊಳಗೆ ಒಂದು ಕ್ಷಣಕ್ಕೆ ತರುವುದು ಸಂಪೂರ್ಣ ಅರಿವಿನ ಉತ್ಕಟ ಸ್ಥಿತಿಯೊಳಗೆ ತರುವುದು ತೀರ ಸಹಜವಾದ ರೀತಿಯಲ್ಲಿ ಆಗಬೇಕು. ಈ ತಾದಾತ್ಮ್ಯ ನಮಗೆ ಶಿಸ್ತು, ಶ್ರದ್ಧೆ ಸಾತತ್ಯ ಹಾಗೂ ಸಾಧನೆಯಿಂದ ಲಭಿಸುತ್ತದೆ. ಧ್ಯಾನದಿಂದ ಶಕ್ಯ ವಾಗುತ್ತದೆ. ಸರ್ವಾಂಗಗಳೂ ಲಿಂಗಮಯವಾಗುವುದು ಅಥವಾ ಅರಿವು, ಆತ್ಮಜ್ಞಾನ ಅನ್ನುವುದನ್ನು ಪ್ರತ್ಯಕ್ಷ ಕ್ರಿಯಾರೂಪಕ್ಕೆ ತರುವುದನ್ನು ನಾವು ಝೆನ್ ತತ್ವಜ್ಞಾನ ಪರಂಪರೆಯಲ್ಲಿ ನೋಡುತ್ತೇವೆ. ಧ್ಯಾನವನ್ನು ತಳಹದಿಯಾಗಿ ಇಟ್ಟುಕೊಂಡು ಬೇರೆ ಬೇರೆ ರೀತಿ ಯೊಳಗೆ ಸರ್ವಾಂಗಗಳನ್ನೂ ಲಿಂಗಮಯವಾಗಿಸಿ ಏನೇನು ಸಾಧಿಸಬಹುದು ಅನ್ನುವುದನ್ನು ಈ ಝೆನ್ ಪರಂಪರೆ ನಮಗೆ ತೋರಿಸಿಕೊಟ್ಟಿದೆ. ಉದಾಹರಣೆಗೆ, ಕರಾಟೆ. ಕರಾಟೆ ನಮಗೆಲ್ಲ ಗೊತ್ತಿರುವ ಹಾಗೆ ಒಂದು ಸ್ವಸಂರಕ್ಷಣಾ ವಿದ್ಯೆ. ಕರಾಟೆಯಲ್ಲಿ ಒಬ್ಬ ವ್ಯಕ್ತಿ ಒಂದೇ ಕ್ಷಣದಲ್ಲಿ ಕೇವಲ ಒಂದು ಕೈಯಿಂದ ಹೊಡೆದು ಇಪ್ಪತ್ತು ಇಟ್ಟಿಗೆಗಳನ್ನು ತುಂಡು ಮಾಡುವುದನ್ನು ನಾವೆಲ್ಲ ನೋಡಿ ದ್ದೇವೆ. ನಮ್ಮಂತೆಯೇ ಸಾಮಾನ್ಯ ಮೈಕಟ್ಟು ಇರುವ ಸಾಮಾನ್ಯ ಜನರ ಎತ್ತರ ತೂಕ ಇರುವಂತಹ ವ್ಯಕ್ತಿಗೆ ಇದು ಹೇಗೆ ಶಕ್ಯವಾಗುತ್ತದೆ ? ಇದು ಸರ್ವಾಂಗಗಳೂ ಲಿಂಗಮಯವಾಗುವಂಥ ಒಂದು ಸಂದರ್ಭ. ಕರಾಟೆ ಪಟುವು ಆ ಒಂದು ಕ್ಷಣದಲ್ಲಿ ತನ್ನ ಸರ್ವಸ್ವವನ್ನೂ ಒಂದು ಉತ್ಕಟ ಸ್ಥಿತಿಗೆ ಒಯ್ದು ತನ್ನ ಸಂಪೂರ್ಣ ಶಕ್ತಿಯನ್ನು ತನ್ನ ಕೈಗೆ ತಂದುಕೊಂಡು ಹೊಡೆಯುತ್ತಾನೆ. ಆ ಕ್ಷಣದಲ್ಲಿ ಅವನು ಕೇವಲ ತನ್ನ ಕೈ ಹಾಗೂ ಕೈಯಲ್ಲಿ ತಂದುಕೊಂಡಿರುವ ಶಕ್ತಿ ಬೇರೆ ಏನೂ ಅಲ್ಲ ಅಥವಾ ಸುಮಿಯೆ. ಚಿತ್ರಕಲೆ ನೋಡೋಣ. ಝೆನ್ ತತ್ವಜ್ಞಾನ ಆಧಾರಿತ ಚಿತ್ರಕಲೆ ಸುಮಿಯೆ ಚಿತ್ರಕಲೆ ಅಂತ. ಸುಮಿಯೆ ಚಿತ್ರಕಲೆ ಹೇಗಿರುತ್ತದೆ ಅಂದರೆ, ಅವರು ಯಾವ ಪಟದ ಮೇಲೆ ಚಿತ್ರ ಬಿಡಿಸುತ್ತಿರುತ್ತಾರೋ ಆ ಪಟ ಸ್ಥಿರವಾಗಿ ಒಂದು ಕಡೆ ನಿಂತಿರುವುದಿಲ್ಲ. ಒಂದು ಬಾಗಿಲಿನ ಹಾಗೆ ಸತತವಾಗಿ ನಿಮ್ಮ ಮುಂದೆ ಬಂದು ಹೋಗುತ್ತಿರುತ್ತದೆ ಅದು. ನೀವು ಬೇರೆ ಪ್ರಕಾರದ ಚಿತ್ರಕಲೆ ಬಿಡಿಸ ಬಹುದು. ಆದರೆ ಸುಮಿಯೆ ಚಿತ್ರಕಲೆ ಹಾಗಲ್ಲ. ಪಟ ಈ ಕಡೆ ಬಂದಾಗ ಒಂದು ಕ್ಷಣದೊಳಗೇ ಒಂದು ಗೆರೆ ಎಳೆಯಬೇಕು. ಮರುಕ್ಷಣವೇ ಆ ಪಟ ಸರಿದು ಹಿಂದೆ ಹೋಗುತ್ತದೆ. ಮತ್ತೆ ಆ ಪಟ ಸಮೀಪ ಬಂದಾಗ ಇನ್ನೊಂದು ಗೆರೆಯನ್ನು ಎಳೆಯಬೇಕು. ಹೀಗೆ ಮಾಡುತ್ತ ಇಡಿ ಚಿತ್ರವನ್ನು ಪೂರ್ಣಗೊಳಿಸಬೇಕು. ಇಲ್ಲಿ ತಿದ್ದಲಿಕ್ಕೆ ಅವಕಾಶವೇ ಇಲ್ಲ. ನಾನು ಹೆಚ್ಚು ಸರಿ ಮಾಡುತ್ತೇನೆ, ಬರೆದ ಗೆರೆಯನ್ನು ಅಳಿಸಿ ಮತ್ತೆ ಬರೆಯುತ್ತೇನೆ ಎಂಬುದಕ್ಕೆ ಅವಕಾಶವೇ ಇಲ್ಲ. ಇದು ಶಕ್ಯವಾಗ ಬೇಕೆಂದರೆ ಆ ಚಿತ್ರ ಆ ಹಾಳೆ ನನ್ನ ಕಡೆ ಬಂದಾಗ ಆ

# ನಾನು

ನನಗೆ ನಾನೇ
ತಿದ್ದಿ, ತೀಡಿ ಅಂಕುಡೊಂಕುಗಳ ಸರಿ ಮಾಡಿ
ಇದ್ದರದೇ ಭಾಗ್ಯ ಈ ಲೋಕಕ್ಕೆ
ಒಂದೇ ದಾರಿ ನಾಕಕ್ಕೆ
ನನ್ನ ನಾ ತಿಳಿಯುವುದು, ಅರಿಯುವುದು
ಅದಕಾಗಿ ಬರೆಯುವುದು
ದಾರಿ ಮಹದಾನಂದಕ್ಕೆ !

ಒಳಗೆ
ಭಯ, ನೋವು, ಚಿಂತೆ, ತಲ್ಲಣಗಳು
ನಟನೆ, ಸೋಗುಗಳು
ಎಲ್ಲ ಝಾಡಿಸಿದರೆ ಝಳ ಝಳ
ಪಳ ಪಳ ಹೊಳೆದು
ಕನ್ನಡಿ ಎದುರು ಮುಖ ಕಂಡಂತೆ !
ಬೆಳೆಯುತ್ತಲೇ ಇರುವ ಅಹಂಕಾರದ ಪರೆ ಹರಿದು ಹರಿದು
ಮಾಯೆ ಮರೆಯಾಗಿ ಲೋಕ ಸರಿ ಕಂಡಂತೆ !

ಲೋಕದೊಳಗೆ ನಾನೋ ?
ನನ್ನೊಳಗೆ ಲೋಕವೋ ?
ಎಲ್ಲರೊಳಗೆ ಒಂದಾಗುವುದು ಪ್ರಾರಂಭವಾದಾಗ
ಒಳಗಿನೆಲ್ಲ ಹುಳುಕುಗಳ ಸುಡುವ
ರಾಸಾಯನಿಕ ಕ್ರಿಯೆ ಆರಂಭ !

ಇಲ್ಲಿ ಕೊಡುವವರು ಯಾರೋ ?
ಗಳಿಸುವುದು ಪಡೆವ ತಾಕತ್ತು
ಉಳಿಸುವುದು ಆತ್ಮದುನ್ನತಿ.

ನನ್ನ ನಾ (ಬ್ರಹ್ಮನ) ಅರಿತು ಆನಂದಿಸಲು
ಹೋಗಬೇಕಿಲ್ಲ ಹೊರಗೆ, ಹಿಮಾಲಯದ ತಪ್ಪಲಿಗೆ
ದೇವಾಲಯಗಳಿಗೆ, ಮಠಗಳಿಗೆ ಗುಡಿಗುಂಡಾರಗಳಿಗೆ
ಮನಸಿಗೆ ಮನಸಿನ ಮಾತು ಬೆಳೆದು
ವಿವೇಕದಲಿ ಅರೆದು, ಕಡೆದು
ಬೆಣ್ಣೆ ಬಂದಂತೆ
ಬರಬೇಕು ಕಣಾ ನನ್ನಲ್ಲೇ

ಬಂದಗದ್ದೆ ರಾಧಾಕೃಷ್ಣ
ಕೆಳದಿ ಅಂಚೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ಕ್ಷಣದಲ್ಲಿ ಬೇರೆ ಏನೂ ಇಲ್ಲದ ರೀತಿಯೊಳಗೆ ನನ್ನ ಸರ್ವಸ್ವವೂ ಅಲ್ಲಿ ಆ ಕುಂಚದ ತುದಿಗೆ ಬರಬೇಕು. ಆ ಕ್ಷಣದಲ್ಲಿ ಕಲಾವಿದನ ವಿಚಾರ, ಅವನ ಕೈ, ಅವನ ಕುಂಚ ಹಾಗೂ ಪಟ ಇವೆಲ್ಲವೂ ಒಂದೇ ಆಗಿರಬೇಕು. ಇದು ಸರ್ವಾಂಗಗಳೂ ಲಿಂಗಮಯವಾಗುವಂತಹ ಸಂದರ್ಭ. ಇದೇ ರೀತಿ ಖಡ್ಗವಿದ್ಯೆ ಅಥವಾ ಕುಂಗ್ ಫು ಕಲೆ, ಸಮುರಾಯಿ ಸಮರ ಕಲೆ, ಸಹಜ ಕೃಷಿ, ಹೂಗಳನ್ನು ಸುಂದರವಾದ ವಿನ್ಯಾಸದಲ್ಲಿ ಜೋಡಿಸುವಂತಹ ಇಕೆಬಾನಾ ಕಲೆ ಇವೆಲ್ಲವೂ ಕೂಡ.

ಬಹಳ ಮುಖ್ಯವಾದ ಒಂದು ವಿಷಯವೇನೆಂದರೆ ಈ ಅರಿವು ಅಥವಾ ಈ ಆತ್ಮಜ್ಞಾನ ಅಂತನ್ನೋದು ಇದನ್ನು ಒಂದು ಸಲ ಸಾಧಿಸಿದ ಬಳಿಕ ಅದು ನಿಂತ ನೀರಾಗಬಾರದು. ಆ ಅರಿವು ಸತ್ಯವಾದ ಸರಿಯಾದ ಅರಿವಾಗಿದ್ದರೆ ಅದು ಕ್ರಿಯಾತ್ಮಕವಾಗಿರಬೇಕು ಅದು ಚಲನಶೀಲವಾಗಿರಬೇಕು. ಅಲ್ಲಮ ಹೇಳುವಂತಹ ಈ ಮೂರು ಹೋಲಿಕೆಗಳು – ಹರಿಯುವ ನದಿ, ಉರಿಯುವ ಕಿಚ್ಚು, ಬೀಸುವ ಗಾಳಿ ಅವುಗಳ ಆ ಜಂಗಮತ್ವ ಆ ಅರಿವಿನೊಳಗೂ ಇದೆ. ಈ ವಚನದ ಬಹಳ ಮಹತ್ವದ ಅಂಶವೆಂದರೆ ಆ ಅರಿವು ಎಂಬುದನ್ನು ನಾನು ಒಂದು ಸಲ ಸಾಧಿಸಿದ ಬಳಿಕ, ನಾನು ಒಂದು ಎತ್ತರಕ್ಕೆ ಬಂದುಬಿಟ್ಟೆ; ಇನ್ನು ಮುಂದೆ ಏನೂ ಇಲ್ಲ ಎಂದು ಭಾವಿಸುವುದು ತಪ್ಪು. ಆ ಅರಿವನ್ನು ಸಾಧಿಸಿದ ಬಳಿಕವೂ ಚೈತನ್ಯಮಯವಾಗಿರುತ್ತದೆ, ಚಲನಶೀಲವಾಗಿರುತ್ತದೆ, ಕ್ರಿಯಾತ್ಮಕವಾಗಿರುತ್ತದೆ.

ಈ ಅರಿವು ಕೂಡ ಚಲನಶೀಲವಾಗಿರುತ್ತದೆ. ಅಂದರೆ ಏನು ? ಬಹುಶಃ ಬಹಳ ಸರಳವಾದ ಒಂದು ನಿರ್ದರ್ಶನವನ್ನು ನಾನು ಕೊಡಬಹುದು ಅಂತಾದರೆ ಅದು ಈ ನೆಲದ್ದು. ನಾವು ನಿಂತ ನೆಲ. ಈ ಕ್ಷಣಕ್ಕೆ ನನ್ನ ಅನುಭವಕ್ಕೆ ಬರುವುದು ಈ ನಿಂತಂತಹ ನೆಲ, ಸ್ಥಿರವಾಗಿರುವ ನೆಲ. ಆದರೆ ಜ್ಞಾನದ ಮಿತಿಯನ್ನು ನಾನು ಹೆಚ್ಚು ಮಾಡಿಕೊಳ್ತಾ ಹೋದಾಗ, ವಿಸ್ತಾರಗೊಳಿಸ್ತಾ ಹೋದಾಗ ನನಗೆ ಒಂದು ಹಂತದಲ್ಲಿ ಈ ನೆಲ ಈ ಪೃಥ್ವಿ ಒಂದು ಗೋಳಾಕಾರವಾಗಿದೆ ಎಂಬ ಸತ್ಯ ಅರಿವಾಗುತ್ತದೆ. ಪೃಥ್ವಿ ತನ್ನ ಸುತ್ತಲೂ ತಾನು ತಿರುಗುತ್ತ ಇದೆ. ಪ್ರತಿಕ್ಷಣವೂ ತಿರುಗುತ್ತಾ ಇದೆ. ಪ್ರತಿಕ್ಷಣವೂ ಸಾವಿರಾರು ಮೈಲಿಗಳಷ್ಟು ತಿರುಗುತ್ತಾ ಇದೆ. ಈ ಭೂಮಿ ಸೂರ್ಯನ ಸುತ್ತಲೂ ತಿರುಗುತ್ತಾ ಇದೆ ಹಾಗೂ ಈ ಇಡೀ ಸೌರಮಂಡಲ ಯಾವುದೋ ಆಕಾಶಗಂಗೆಯೊಳಗೆ ಚಲಿಸುತ್ತ ಎಲ್ಲಿಯೋ ಹೊರಟಿದೆ. ಈ ಘನ ಸತ್ಯವನ್ನು ನಾನು ಸರಿಯಾಗಿ ತಿಳಿದುಕೊಂಡು ಬೌದ್ಧಿಕ ಮಟ್ಟದಲ್ಲಿ ಅರಿವಿನ ಮಟ್ಟದಲ್ಲಿ ಅದನ್ನು ಅನುಭವಿಸಿದಾಗ ಇದೇ ರೀತಿ ಈ ಅರಿವು ಈ ಆತ್ಮಜ್ಞಾನ ಎಂಬುದು ಕೂಡ ಒಂದು ಹಂತಕ್ಕೆ ಬಂದು ನಿಂತುಬಿಡುವಂತಾದ್ದಲ್ಲ, ಇದು ಚಲನಶೀಲವಾದಂತಹ ಸತ್ಯ ಅಂತನ್ನೋದು ನಮಗೆ ಗೊತ್ತಾಗುತ್ತದೆ.

ಈ ವಚನದ ಇನ್ನೊಂದು ಬಹಳ ಮಹತ್ವದ ಭಾಗ ಅಂದರೆ ಅಲ್ಲಮ ಹೇಳುವಂಥಾ ಸರಳ ಎನ್ನುವ ಶಬ್ದ. ಆ ಇಡೀ ಚಳುವಳಿಯೇ ಹೆಸರುವಾಸಿಯಾಗಿದ್ದು ಶರಣ ಚಳವಳಿ ಅಂತ. ಪ್ರತಿಯೊಬ್ಬರೂ ತಮ್ಮನ್ನು ತಾವೇ ಶರಣರೆಂದು ಕರೆದುಕೊಂಡಿದ್ದರು. ಯಾಕೆ ಅದು ಶರಣ ಚಳುವಳಿಯಾಯಿತು ಯಾಕೆ ಅವರು ತಮ್ಮನ್ನು ತಾವೇ ಶರಣರೆಂದು ಕರೆದುಕೊಳ್ತಾರೆ ? ಇಡೀ ಈ ಶರಣ ಚಳವಳಿ ಹೊರಗಿನ ಯಾವುದೇ ಒಂದು ದೇವರು ಒಂದು ದೈವ ಒಂದು ವಿಧಿ ಯಾವುದನ್ನೂ ಒಪ್ಪಿಕೊಳ್ಳದೇ ಇರುವಂಥಾ ಒಂದು ಚಳುವಳಿ. ನನ್ನ ಅರಿವು ನನ್ನ ಆತ್ಮಜ್ಞಾನ ಇದುವೇ ಅತ್ಯಂತ ಕೊನೆಯ ಸತ್ಯ ಅಂತಾನೇ ಪ್ರತಿಪಾದಿಸುತ್ತಾ ಬಂದವರು ಶರಣರು. ಇದನ್ನು ಅತ್ಯಂತ ಗಟ್ಟಿಯಾಗಿ ಹೇಳುವುದು ಅಲ್ಲಮಪ್ರಭುವೇ. ಹೀಗಿರುವಾಗ ನಾವು ಸಾಮಾನ್ಯವಾಗಿ ನೋಡುವ ಹಾಗೆ ವ್ಯಕ್ತಿಗೆ ಎಚ್ಚರವಿರದೆ ಹೋದರೆ ಈ ಅರಿವು ಅಥವಾ ಜ್ಞಾನ ಅಂತನ್ನೋದು ಒಂದು ಹಂತದೊಳಗೆ ಬಿರುಸಾಗುತ್ತ ಹೋಗುತ್ತದೆ; ನನಗೆ ಎಲ್ಲಾ ಗೊತ್ತು ಅನ್ನುವ ಒಂದು ರೀತಿಯ ಕಠೋರತೆ ಬರುತ್ತದೆ. ಈ ಜ್ಞಾನದೊಳಗಿನ ಮಾನವೀಯತೆಯ ಆರ್ದ್ರತೆ ಕಡಿಮೆ ಆಗುತ್ತದೆ. ಹಾಗಾದಾಗ ಅರಿವು ಜನರಿಂದ ದೂರ ಸಮಾಜದಿಂದ ದೂರ ಹೋಗುತ್ತದೆ. ಶುಷ್ಕವಾದಂತಹ ಜ್ಞಾನವಾಗಿ ಅದು ನಿಷ್ಕರುಣಿಯಾಗುತ್ತದೆ. ಈ ಒಂದು ಅಂಶವನ್ನು ಬಹಳ ಮೊದಲೇ ಕಂಡುಕೊಂಡುಬಿಟ್ಟರು ನಮ್ಮ ಶರಣರು. ಅದಕ್ಕಾಗಿಯೇ ಅವರು ಶರಣು ನಾನು ನಿಮಗೆ ಶರಣು ಅಂದರು. ನಾನು ಲೋಕಕ್ಕೆ ಶರಣು. ಶರಣು ಅಂದಾಗ ಅದರೊಳಗಿರಬೇಕಾದಂತಹ ಬಹಳ ಮಹತ್ವದ ಗುಣಗಳು ವಿನಯ, ತಾಳ್ಮೆ ಹಾಗೂ ಕಳಕಳಿ. ಶರಣ ಅನ್ನೋ ಶಬ್ದವೇ ಇದನ್ನು ಹೇಳುತ್ತದೆ. ಶರಣತ್ವದ ಈ ಗುಣಗಳು ಇದ್ದಾಗ ಮಾತ್ರ ಅವರ ಅರಿವು ಅವರ ಜ್ಞಾನಕ್ಕೊಂದು ಶೋಭೆ ಬರುತ್ತದೆ. ಅದಕ್ಕೊಂದು ಸಾರ್ಥಕತೆ ಬರುತ್ತದೆ. ಇವೆರಡನ್ನು ಬೇರ್ಪಡಿಸಿದಾಗ ಆ ಅರಿವು ಅಥವಾ ಜ್ಞಾನದ ಜೊತೆ ವಿನಯ ಅನ್ನೋದಿಲ್ಲ, ಅನುಕಂಪ ಅನ್ನೋದಿಲ್ಲ ಎಂದಾದರೆ ಅದು ನಿಷ್ಕರುಣಿಯಾದದ್ದಾದರೆ ಲೋಕ ಹಿತವನ್ನು ಸಾಧಿಸುವಲ್ಲಿ ಅದು ವಿಫಲವಾಗುತ್ತದೆ. ಧರ್ಮ ಎಂಬುದಕ್ಕೆ ಎರಡು ಕಣ್ಣು – ಒಂದು ಅರಿವು, ಇನ್ನೊಂದು ಕರುಣೆ. ಅರಿವು ಮುಖ್ಯ ಹೌದು, ಆ ಅರಿವಿನ ಜೊತೆ ಕರುಣೆ ಅನ್ನೋದು ಕೂಡ ಅಷ್ಟೇ ಮುಖ್ಯ. ಇವೆರಡು ಒಂದೇ ಚೆಂಡಿನ ಎರಡು ಮುಖಗಳು. ಒಂದೇ ಚೆಂಡಿನ ಎರಡು ಮುಖಗಳು ಅಂತ ಹೇಳೋದು, ಒಂದೇ ನಾಣ್ಯದ ಎರಡು ಮುಖ ಅಂತಲ್ಲ. ಒಂದೇ ನಾಣ್ಯದ ಎರಡು ಮುಖ ಅಂದಾಗ ಅವೆರಡೂ ಬೇರೆ ಬೇರೆಯೇ. ಈ ಕಡೆ ಒಂದು ಮುಖ ಆ ಕಡೆ ಒಂದು ಮುಖ. ಒಂದೇ ಚೆಂಡಿನ ಎರಡು ಮುಖ ಎಂದು ಹೇಳಿದಾಗ ಈ ಮುಖ ಮುಗಿದು ಆ ಮುಖ ಎಲ್ಲಿ ಸುರು ಆಗುತ್ತದೆ ಅಂತನ್ನೋದು ಗೊತ್ತಾಗುವುದಿಲ್ಲ. ಅರಿವು ಅನ್ನೋದು ಯಾವಾಗ ಕರುಣೆ ಆಗುತ್ತದೆ, ಕರುಣೆ ಅನ್ನೋದು ಯಾವಾಗ ಅರಿವು ಆಗುತ್ತದೆ ? ಮೂಲದಲ್ಲಿ ಅವೆರಡೂ ಒಂದೇ. ಅರಿವಿಗೆ ಸೊಕ್ಕಿಲ್ಲ, ಎಲ್ಲಿ ಸೊಕ್ಕು ಶುಷ್ಕತೆಯಿರುತ್ತದೆಯೋ ಅದು ಸರಿಯಾದ ಅರಿವಲ್ಲ, ಸೊಕ್ಕಿಲ್ಲದಂಥಾದ್ದು ವಿನಯವಿರುವಂಥಾದ್ದು ಕಳಕಳಿಯಿರುವಂಥಾದ್ದು ಅನುಕಂಪ ಇರುವಂಥಾದ್ದು ಅದು ಸರಿಯಾದ ಅರಿವು. ಇದು ನಿಜವಾದ ಶರಣತ್ವ. ಇದನ್ನು ನಾನು ನನ್ನ ಸರ್ವಾಂಗಗಳಲ್ಲಿಯೂ ತುಂಬಿಕೊಳ್ಳಬೇಕು. ಇದು ಸರ್ವಾಂಗಗಳೂ ಲಿಂಗಮಯವಾಗುವ ಪರಿ !

ಈ ಎಲ್ಲ ಕಾರಣಗಳಿಗಾಗಿ ಅಲ್ಲಮನ ಈ ಒಂದು ವಚನ ನನಗೆ ಬಹಳ ಪ್ರಿಯವಾದದ್ದು. ಅಲ್ಲಮನೆ ಆಗಲಿ, ಬಸವ, ಅಕ್ಕ, ಕಬೀರ ಹಾಗೂ ಇತರ ಹಲವಾರು ಶರಣರು ಕವಿಗಳು ದಾರ್ಶನಿಕರು ನನಗೆ ಕೇವಲ ಓದಲ್ಲ. ಈಗ ಓದಿಕೊಂಡು ಇಲ್ಲಿಯೇ ಬಿಟ್ಟುಬಿಡಬೇಕಾದಂತಹ ಪುಸ್ತಕದೊಳಗಿನ ವ್ಯಕ್ತಿಗಳಲ್ಲ. ಅಲ್ಲಮ ನನಗೆ ಪರಮ ಗುರುವೂ ಹೌದು, ಬಹಳ ಆತ್ಮೀಯ ಗೆಳೆಯನೂ ಹೌದು. ನನ್ನ ಒಳಗಿನ ಒಳಗೆ ತುಂಬಿಕೊಂಡಿರುವವ ಅಲ್ಲಮ. ಈ ವಚನ ಹಾಗೂ ಅಲ್ಲಮನ ಇತರ ವಚನ ಗಳನ್ನು ನನಗೆ ನಾನೇ ಯಾವಾಗಲೂ ಗುಣಗುಣಿಸ್ತಾ ಇರ್ತಿನಿ – ಬಹಳ ಸಂತೋಷವಾದಾಗಲೂ ಹೌದು, ಅತ್ಯಂತ ಕ್ಲಿಷ್ಟವಾದಂತಹ ಸಂದರ್ಭ ಎದುರಾದಾಗ ಅಥವಾ ಕಷ್ಟಗಳೆದುರಾದಾಗಲೂ ಹೌದು. ಇವೆಲ್ಲ ನನಗೆ ದಾರಿ ತೋರುವ ದೀಪಗಳು. ಅಲ್ಲಮ ನನಗೆ ತಿಳಿದ ಹಾಗೆ ಸುಮಾರು ೧೨೦೦ ವಚನಗಳ ಪರ್ವತವನ್ನು ನಮಗೆ ಕೊಟ್ಟುಹೋಗಿದ್ದಾನೆ. ಅಲ್ಲಮ ಎಂಬ ಮಹಾ ಪರ್ವತ ನಮ್ಮ ಬಳಿ ಇದೆ. ಬಹಳ ವಿಶೇಷವೆಂದರೆ ಅಲ್ಲಮನ ಜೀವನದ ಬಗ್ಗೆ ಬಹುತೇಕ ಖಚಿತವಾದ ಮಾಹಿತಿ ನಮಗೆ ದೊರಕುವುದಿಲ್ಲ. ಅಲ್ಲಮ ಎಂಬ ಶಬ್ದದ ಅರ್ಥದ ಬಗ್ಗೆಯೇ ಸಾಕಷ್ಟು ಜಿಜ್ಞಾಸೆ ಇದೆ. ಈ ಶಬ್ದದ ಉತ್ಪತ್ತಿ ಯಾಕೆ, ಹೇಗೆ, ಎಲ್ಲಿ ಅಂತನ್ನೋದು, ಅವನ ತಾಯಿ ತಂದೆ ಯಾರು, ಅವನು ಎಲ್ಲೆಲ್ಲಿ ಓಡಾಡಿದ, ಒಂದು ಸಲ ಅನುಭವ ಮಂಟಪಕ್ಕೆ ಬರುತ್ತಾನೆ. ಅಲ್ಲಿಂದ ಹನ್ನೆರಡು ವರ್ಷ ಎಲ್ಲಿಯೋ ಹೋಗಿ ಮತ್ತೆ ಬಂದು ಶೂನ್ಯ ಸಿಂಹಾಸನವನ್ನು ಏರುತ್ತಾನೆ – ಅವನ ಪ್ರಿಯತಮೆ ಕಾಮಲತೆಯೋ ಮಾಯೆಯೋ ಅವನ ಸಾವು ಎಲ್ಲಿ ಆಯಿತು – ಈ ಯಾವ ವಿಷಯಗಳ ಬಗ್ಗೆಯೂ ನಿಖರವಾದ ಮಾಹಿತಿ ನಮಗೆ ಸಿಗುವುದಿಲ್ಲ. ಒಂದು ದೃಷ್ಟಿಯಿಂದ ಇದು ಬಹಳ ಒಳ್ಳೆಯದೆ. ಹಾಗೇನಾದರೂ ಒಂದಿಷ್ಟು ಮಾಹಿತಿಗಳು ನಮಗೆ ಸಿಕ್ಕಿದ್ದಿದ್ದರೆ ನಾವು ಅವನನ್ನು ಒಂದು ಸಂಸ್ಥೆಯಾಗಿಸಿ ಒಬ್ಬ ದೇವರನ್ನಾಗಿ ಮಾಡಿಬಿಟ್ಟು ಪೂಜೆ ಮಾಡಿಬಿಡುತ್ತಿದ್ದೆವು ಯಾವ ರೀತಿ ನಾವು ಇತರ ಹಲವಾರು ವ್ಯಕ್ತಿಗಳ ಬಗ್ಗೆ ಮಹಾಚೈತನ್ಯಗಳ ಬಗ್ಗೆ ಮಾಡಿದ್ದೇವೋ ಅದೇ ರೀತಿ. ಅಲ್ಲಮ ಇವೆಲ್ಲವುಗಳನ್ನು ದಾಟಿ ಆಚೆ ಹೋಗಿದ್ದಾನೆ. ಹಾಗೆಯೇ ಉಳಿದುಕೊಂಡಿದ್ದಾನೆ. ಅವನನ್ನು ನಾವು ಹಿಡಿಯೋದೆ ಕಷ್ಟ. ಅವನಿಂದ ನಮಗೆ ಏನಾದರೂ ಸಿಕ್ಕಿರೋದು ಅಂದರೆ ಈ ವಚನಗಳು ಹಾಗೂ ವಚನಗಳ ರೂಪದಲ್ಲಿ ಅವನ ತತ್ವಸಂಹಿತೆ, ಅವನ ಜೀವನ ದರ್ಶನ, ಅವನ ಬೆಳಕು ಮಾತ್ರ. ಈ ಬೆಳಕಿನಿಂದ ನಾವು ನಮ್ಮ ಎದೆಯ ಹಣತೆಗಳನ್ನು ಬೆಳಗಿಸಿಕೊಂಡು ಸದಾಕಾಲ ಸರ್ವಾಂಗಗಳನ್ನೂ ಲಿಂಗಮಯವಾಗಿಸಿಕೊಂಡು ಬಾಳುವ ಚಂದದ ಪರಿಯನ್ನು ನಾವು ಕಲಿಯಬೇಕಿದೆ ಇಂದು.


ಡಾ॥ ಸಂಜೀವ ಕುಲಕರ್ಣಿ

[illegible], ಮಾಳಮಡ್ಡಿ, ಧಾರವಾಡ - [illegible]




# ವೇದ ಮಾಟಗಾರಿಕೆಯ ಅನಾವರಣ

ಇಂತಹ ಒಂದು ಸಮಾಜವನ್ನು ಊಹಿಸಿಕೊಳ್ಳಿ.

* ಈ ಸಮಾಜದಲ್ಲಿ ಪುರುಷನಿಗೆ ಎಷ್ಟು ಲೈಂಗಿಕ ಸ್ವಾತಂತ್ರ್ಯ ಇರುತ್ತದೆಯೋ ಅಷ್ಟೇ ಲೈಂಗಿಕ ಸ್ವಾತಂತ್ರ್ಯ ಹೆಣ್ಣಿಗೂ ಇರುತ್ತದೆ. ಆಕೆ ತನಗಿಷ್ಟ ಬಂದವನನ್ನು ಮದುವೆಯಾಗಬಹುದು. ಮದುವೆಯಾಗದೆ ಮಕ್ಕಳನ್ನು ಪಡೆಯಬಹುದು. ಗಂಡನಿಗೆ ತಿಳಿಯದ ಹಾಗೆ ಅನೈತಿಕ ಸಂಬಂಧವನ್ನು ಹೊಂದಬಹುದು. ಅನೈತಿಕ ಗರ್ಭವನ್ನು ಯಾರಿಗೂ ತಿಳಿಯದ ಹಾಗೆ ಪಾತ ಮಾಡಿಸಿಕೊಳ್ಳಬಹುದು. ಜೀವನದುದ್ದಕ್ಕೂ ಮದುವೆಯಾಗದಲೆ, ಮುಕ್ತ ಲೈಂಗಿಕ ಬದುಕನ್ನು ನಡೆಸಬಹುದು.
* ವಿಧವೆಯರು ಲೈಂಗಿಕವಾಗಿ ಮುಕ್ತವಾಗಿರಬಹುದು. ಬಯಸಿದಲ್ಲಿ ಮರು ಮದುವೆಯನ್ನು ಮಾಡಿಕೊಳ್ಳಬಹುದು. ತನ್ನ ಗಂಡನ ಸೋದರ ಅಥವಾ ಗಂಡನ ಬಂಧುಗಳೊಡನೆ ಕೂಡಿ ಮಕ್ಕಳನ್ನು ಪಡೆಯಬಹುದು. ಹಣಕ್ಕಾಗಿ ಯಾವ ಮನೆಯನ್ನು ಬೇಕಾದರೂ ಹೊಕ್ಕು, ಅಲ್ಲಿರುವ ಗಂಡಸನ್ನು ಕೂಡಬಹುದು. ಜೂಜು ಕೇಂದ್ರಗಳಿಗೆ ಹೋಗಿ, ಹಣಕ್ಕಾಗಿ ಅಲ್ಲಿರುವ ಗಂಡಸರೊಡನೆ ಕ್ರೀಡಿಸಬಹುದು.
* ಗಂಡಸರು ಮದ್ಯಪಾನ ಮಾಡಬಹುದು. ಎತ್ತು ಹಾಗೂ ಹಸುವಿನ ಮಾಂಸವನ್ನು ತಿನ್ನಬಹುದು. ದಿವಾಳಿಯಾಗುವ ಮಟ್ಟದವರೆಗೆ ಜೂಜಾಡಬಹುದು. ಜೂಜಿನಲ್ಲಿ ತನ್ನ ಹೆಂಡತಿಯನ್ನು ಪಣವಿಡಬಹುದು. ಪಣವಿಟ್ಟು ಸೋಲಬಹುದು. ಸೋತ ಹೆಂಡತಿಯು ಅವನ ಕಣ್ಣ ಮುಂದೆಯೇ ಲೈಂಗಿಕವಾಗಿ ದೌರ್ಜನ್ಯಕ್ಕೊಳಗಾಗಬಹುದು.
* ಮಹಿಳೆಯರಿಗೆ ಬುದ್ಧಿ ಕಡಿಮೆ. ಅವಳಿಗೆ ಯಾವುದೇ ಬೋಧನೆಯನ್ನು ಮಾಡಲಾಗದು. ಮಹಿಳೆಯೊಡನೆ ಯಾವ ವಿಧದ ಸ್ನೇಹವೂ ಸಾಧ್ಯವಿಲ್ಲ. ಅವಳ ಹೃದಯ ಕಿರುಬನಿಗಿಂತ ಕ್ರೂರವಾದದ್ದು. ಮಹಿಳೆಯರು ಸಾಮಾನ್ಯವಾಗಿ ಅಶುಚಿಗಳು. ಋತುಸ್ರಾವದಲ್ಲಿ, ಗರ್ಭಧಾರಣೆಯಲ್ಲಿ, ಬಾಣಂತನದಲ್ಲಿ ಹಾಗೂ ಹೊಕ್ಕಳ ಕೆಳಗೆ ಅವರು ಯಾವಾಗಲೂ ಮೈಲಿಗೆಯನ್ನು ಹೊಂದಿರುವವರು. ಹೆಣ್ಣು ಇರುವುದೇ ಮಕ್ಕಳನ್ನು ಹೆರುವುದಕ್ಕಾಗಿ. ಆಕೆಯ ಒಂದು ಋತುಸ್ರಾವವೂ ವ್ಯರ್ಥವಾಗಿ ಹರಿದುಹೋಗಬಾರದು. ಆಕೆ ಸದಾ ಮಕ್ಕಳನ್ನು ಹೆರುತ್ತಿರಬೇಕು.
* ಕಾಮಕ್ಕಾಗಿ ತಂದೆ ತನ್ನ ಮಗಳನ್ನು ಕೂಡಬಹುದು. ಸೋದರ ತನ್ನ ಒಡಹುಟ್ಟಿದ ಸೋದರಿಯನ್ನು ಕಾಮಿಸಬಹುದು. ಮಕ್ಕಳೆನಿಸಿಕೊಂಡವರು ಹೆತ್ತ ತಂದೆ ತಾಯಿಯರನ್ನು ಕೊಲೆ ಮಾಡಬಹುದು.

ಇಂತಹ ಒಂದು ಸಮಾಜ ನಮ್ಮ ಭರತಭೂಮಿಯಲ್ಲಿ ಇತ್ತು ಎಂದರೆ ಬೆಚ್ಚಿಬೀಳಬೇಡಿ. ಇದುವೇ 'ವೇದಕಾಲೀನ ಸಮಾಜ'. ಇದಕ್ಕೆ ಆಧಾರ ನಾಲ್ಕು (ಮುಖ್ಯವಾಗಿ ಋಕ್ ಹಾಗೂ ಅಥರ್ವ) ವೇದಗಳು. ವೇದ ಎಂಬ ಶಬ್ದದ ಅರ್ಥ 'ಜ್ಞಾನ'. ಆರ್ಯರು ಭಾರತಕ್ಕೆ ಬಂದು, ಇಲ್ಲಿದ್ದ ಮೂಲವಾಸಿಗಳೊಡನೆ ಹೋರಾಡಿ, ಅವರೊಡನೆ ಬೆರೆತು ಬಾಳಿ ಬದುಕಿದ ಬಗ್ಗೆ ನಮಗೆ ಅರಿವು ನೀಡುವ ದಾಖಲೆ, ವೇದ.

ಸಂಪ್ರದಾಯಸ್ಥರು ಹಾಗೂ ಅವರು ರೂಪಿಸಿದ ಭ್ರಮಾ ಪ್ರಭಾವಳಿಯಲ್ಲಿ ಬದುಕುತ್ತಿರುವವರು ವೇದಗಳೆಂದರೆ ಅವು ಸನಾತನ, ಅಪೌರುಷೇಯ, ಆಧ್ಯಾತ್ಮಿಕ ಹಾಗೂ ಆಧಿಭೌತಿಕ ಅರಿವಿನ ಮೂಲ. ಇದರಲ್ಲಿ ವಿಜ್ಞಾನವಿದೆ, ಖಗೋಳ ಶಾಸ್ತ್ರವಿದೆ, ವೈದ್ಯಕೀಯವಿದೆ... ಹೀಗೆ ಎಲ್ಲಾ ಶಾಸ್ತ್ರಗಳ ಹಾಗೂ ಅರಿವಿನ ಭಂಡಾರ ಇಲ್ಲಿದೆ ಎಂದು ಭಾವಿಸುವುದು ಸಹಜ. ಇಂತಹವರು ಒಮ್ಮೆ ಶ್ರೀ ಬಿ. ವಿ. ವೀರಭದ್ರಪ್ಪನವರ 'ವೇದಗಳಲ್ಲಿ ಜನಸಾಮಾನ್ಯರು' ಎಂಬ ಕೃತಿಯನ್ನು ಓದಬೇಕು. ಅದರಲ್ಲಿ ಈ ಮೇಲೆ ತಿಳಿಸಿದಂತಹ 'ಬೌದ್ಧಿಕ ಶಾಕ್'ಗಳು ಹೇರಳವಾಗಿ ಸಿಗುತ್ತವೆ.

ವೇದಗಳ ರಚನೆಯ ಅಂತಿಮ ಕಾಲದಲ್ಲಿ ಹಾಗೂ ನಂತರ ವೇದಗಳನ್ನು ಪಠಿಸುವ ಅಧಿಕಾರ ಕೇವಲ ಬ್ರಾಹ್ಮಣರಿಗೆ ಮಾತ್ರ ಇತ್ತು. ಬ್ರಾಹ್ಮಣ ಸ್ತ್ರೀಯರಿಗೂ ಇದು ನಿಷಿದ್ಧವಾಗಿತ್ತು. ಹಾಗಾಗಿ ಬ್ರಾಹ್ಮಣೇತರರಿಗೆ ಇದನ್ನು ಓದುವ ಅವಕಾಶವಿರಲಿಲ್ಲ. ಹಾಗಾಗಿ ಅವರು ಹೇಳಿದ್ದೇ 'ಪರಮಸತ್ಯ'ವಾಗಿತ್ತು. ವೇದಗಳ ಬಗ್ಗೆ ಅತೀವ ಕುತೂಹಲವನ್ನು ತಳೆದು, ಅವನ್ನು ಓದಿ ಅರ್ಥಮಾಡಿಕೊಂಡು ವೇದಗಳೆಂದರೇನು ಎಂಬುದನ್ನು ಜಗತ್ತಿಗೆ ಮೊದಲ ಬಾರಿಗೆ ಜರ್ಮನಿಯ ಮ್ಯಾಕ್ಸ್ ಮುಲ್ಲರ್ ಅವರು ಮಾಡಿಕೊಟ್ಟರು. ಮ್ಯಾಕ್ಸ್ ಮುಲ್ಲರ್ ತಮ್ಮ ಆತ್ಮಚರಿತ್ರೆಯಲ್ಲಿ 'ವೇದ ಪ್ರಕಟವಾಗುವ ಮೊದಲು ಸಹಜವಾಗಿ ಅವುಗಳ ಬಗ್ಗೆ ಇದ್ದ ಕಲ್ಪನೆಗಳು ಅವು ಪ್ರಕಟವಾಗುವಾಗ ಭಗ್ನಗೊಂಡವು. ನಾನು ನನ್ನ ಅಪವಿತ್ರ ಕೈಗಳನ್ನು ಅವುಗಳಿಗೆ ಸೋಂಕಿಸಿದ್ದರಿಂದ ಮತ್ತು ಅವುಗಳನ್ನು ಪ್ರಕಟಿಸಿ ಸಾರ್ವಜನಿಕ ಆಸ್ತಿಯನ್ನಾಗಿ ಮಾಡಿದ್ದರಿಂದ ಭಾರತದ ಬ್ರಾಹ್ಮಣರು ಗಾಬರಿಗೊಂಡರು' ಎಂದು ಬರೆದಿದ್ದಾರೆ. ಬ್ರಾಹ್ಮಣ ಪುರುಷರು ತಮ್ಮ ಸಮಾಜದ ಪ್ರತಿಯೊಬ್ಬರ ಮೇಲೆ ಹತೋಟಿಯನ್ನು ಗಳಿಸಲು ಎಂತೆಂತಹ ಕ್ಷುದ್ರ ಕಾರ್ಯಗಳಲ್ಲಿ ತೊಡಗಿದರು ಎಂಬುದರ ನೇರ ದಾಖಲೆ ವೇದಗಳು. ಇಲ್ಲಿ ಕೇವಲ ಪ್ರಾಣಿಗಳಂತೆ ಬದುಕುಳಿಯುವುದಕ್ಕಾಗಿ ಬ್ರಾಹ್ಮಣ-ಕ್ಷತ್ರಿಯ, ಬ್ರಾಹ್ಮಣ-ಶೂದ್ರ, ಕ್ಷತ್ರಿಯ-ಶೂದ್ರ ಹೋರಾಟಗಳ ಚಿತ್ರಣವಿದೆ. ವಿವಿಧ ಕಾಲಮಾನಗಳಲ್ಲಿ ವಿವಿಧ ವರ್ಗಗಳ ಕೈ ಮೇಲಾಗಿ ನಂತರ ಅವನತಿ ಹೊಂದಿದ್ದನ್ನು ನೋಡಬಹುದಾಗಿದೆ.

ವಿವೇಕಾನಂದರು ಮ್ಯಾಕ್ಸ್ ಮುಲ್ಲರ್ ಅವರ ದುಡಿಮೆ ಹಾಗೂ ಸೇವೆಯನ್ನು ಸ್ಮರಿಸಿ, 'ಈ ವ್ಯಕ್ತಿ ನಮ್ಮ ಪೂರ್ವಜರ ಸಾಹಿತ್ಯವನ್ನು ಉಳಿಸಲು, ಪ್ರಚಾರ ಮಾಡಲು ಮತ್ತು ಇತರರು ಮೆಚ್ಚಿಕೊಳ್ಳುವಂತೆ ಮಾಡಲು ನಾವಾರೂ ಮಾಡಬಹುದಾದದಕ್ಕಿಂತ ಸಾವಿರ ಪಾಲು ಹೆಚ್ಚಾಗಿ ಆ ವ್ಯಕ್ತಿ ಈ ಕೆಲಸವನ್ನು ಅತ್ಯಂತ ಮಧುರವಾದ ಪ್ರೀತಿ ಮತ್ತು ಗೌರವದಿಂದ ಮಾಡಿದ್ದಾರೆ' ಎಂದು ಹೇಳಿರುವುದು ಅಕ್ಷರಶಃ ಸರಿಯಾಗಿದೆ. (ಹಾಗೆಯೇ ವೇದಕಾಲದ ಸಾಮಾನ್ಯ ಜನರ ಬದುಕಿನ ಸ್ಥೂಲ ಚಿತ್ರ ಕನ್ನಡದ ಜನತೆಗೆ ದಕ್ಕುವ ಹಾಗೆ ಮಾಡಿದ ಶ್ರೀ ಬಿ. ವಿ. ವೀರಭದ್ರಪ್ಪನವರೂ ಸಹ ಅಭಿನಂದನಾರ್ಹರು.) ಮ್ಯಾಕ್ಸ್ ಮುಲ್ಲರ್ ಅವರನ್ನು ಆರಂಭದಲ್ಲಿ ಕಟುವಾಗಿ ಟೀಕಿಸಿದ ಸನಾತನಿಗಳು ವಿವೇಕಾನಂದರ ವಾಸ್ತವ ನುಡಿಗಳಿಗೆ ಎದುರಾಡದಿರುವುದು ಆಶ್ಚರ್ಯವೆನಿಸುತ್ತದೆ. ಕೊನೆಗೆ, 'ಗೆಲ್ಲಲಾಗದ ಬಲಶಾಲಿಯ ಜೊತೆ ಸಂಧಿ ಮಾಡಿಕೊಂಡು ಅವನ ಜೊತೆಯಲ್ಲಿ ಸೇರಿಕೋ' ಎಂಬ ತತ್ವದಂತೆ ಮ್ಯಾಕ್ಸ್ ಮುಲ್ಲರ್ ಅವರನ್ನು 'ಬ್ರಾಹ್ಮಣ'ರನ್ನಾಗಿಸಿ 'ಮೋಕ್ಷ ಮೂಲ ಭಟ್ಟ' ಎಂದು ಅವರ ಹೆಸರನ್ನು ಸಂಸ್ಕೃತೀಕರಿಸಿ, ಅವರನ್ನು ತಮ್ಮವರಲ್ಲಿ ಒಬ್ಬರನ್ನಾಗಿಸಿಕೊಂಡುಬಿಟ್ಟರು !

'ವೇದಗಳಲ್ಲಿ ಜನಸಾಮಾನ್ಯರು' ಪುಸ್ತಕ ತನ್ನ ಕೆಲವು ಮಿತಿಗಳನ್ನು ಹೊಂದಿದೆ. ವೇದಗಳ ಬಗ್ಗೆ ಏನೇನೂ ತಿಳಿಯದ ಒಬ್ಬ ವಿದ್ಯಾರ್ಥಿ ಇದನ್ನು ಓದಲು ಆರಂಭಿಸಿದರೆ ಅಥವಾ ಬ್ರಾಹ್ಮಣರು ಸೃಷ್ಟಿಸಿರುವ ಭ್ರಮಾ ಪ್ರಭಾವಳಿಯ ವ್ಯಾಪ್ತಿಯಲ್ಲಿ ಬರದ ಓರ್ವ ಹುಡುಗ ಇದನ್ನು ಓದಿದರೆ, ಇದರ ತಲೆಬುಡವೂ ಅವನಿಗೆ ಅರ್ಥವಾಗದು. ಈಗಾಗಲೇ ಭಾರತೀಯ ಸಮಾಜದ ಬಗ್ಗೆ ಸಾಕಷ್ಟು ತಿಳಿದಿರುವ ಓದುಗನನ್ನು ಗಮನದಲ್ಲಿಟ್ಟು ಈ ಪುಸ್ತಕವನ್ನು ಬರೆಯಲಾಗಿದೆ. ಹಾಗಾಗಿ ವೇದಗಳ ಬಗ್ಗೆ ಸ್ಪಷ್ಟ ಚಿತ್ರವನ್ನು ಯಾವುದೇ ಪೂರ್ವಗ್ರಹಗಳಿಲ್ಲದೆ ಸರಳವಾಗಿ ನೀಡುವ ಒಂದು ಪುಸ್ತಕ ಕನ್ನಡದಲ್ಲಿ ಬರಬೇಕಿದೆ.

ಬಿ. ವಿ. ವೀರಭದ್ರಪ್ಪನವರು ಸಾಕಷ್ಟು ಪುಸ್ತಕಗಳನ್ನು ಅಧ್ಯಯನ ಮಾಡಿ ಈ ಕಿರು ಹೊತ್ತಿಗೆಯನ್ನು ಬರೆದಿದ್ದಾರೆ. ಆದರೆ ಅವರು ವೇದಗಳನ್ನು ಮೂಲದಲ್ಲಿ ಓದಿ, ಅವುಗಳ ಆಶಯವನ್ನು ನೇರವಾಗಿ ತಿಳಿಸಿದ್ದರೆ ಅವರ ಅನಿಸಿಕೆಗಳಿಗೆ ಮತ್ತಷ್ಟು ಅಧಿಕೃತತೆ ಬರುತ್ತಿತ್ತು. ಕೆಲವು ವಿಷಯಗಳ ಪುನರಾವರ್ತನೆಯು ಬೇಸರ ತರಿಸುತ್ತದೆ. ಆದರೂ ಸಹ ಈ ಕೃತಿ ವೇದಗಳ ಬಗ್ಗೆ ಮತ್ತಷ್ಟು ಆಳವಾಗಿ ಓದುವಂತೆ ಓದುಗನಿಗೆ ಪ್ರೇರೇಪಣೆ ನೀಡಿದರೆ ಅದರಲ್ಲಿ ಆಶ್ಚರ್ಯವಿಲ್ಲ. ಈ ಕೃತಿಯನ್ನು ಇನ್ನೊಮ್ಮೆ ಕ್ರಮಬದ್ಧವಾಗಿ ಬರೆದು, ಅಗತ್ಯ ನಕ್ಷೆ ಹಾಗೂ ಕಾಲಘಟ್ಟಗಳ ಪಟ್ಟಿಯನ್ನು ನೀಡಿದರೆ, ಈ ಕೃತಿ ಕನ್ನಡ ಸಾಹಿತ್ಯಕ್ಕೆ ಒಂದು ಉತ್ತಮ ಸೇರ್ಪಡೆಯಾಗಬಲ್ಲದು. ಕರ್ತೃ ಬಿ. ವಿ. ವೀರಭದ್ರಪ್ಪನವರು ಅಭಿನಂದನಾರ್ಹರು.

ಡಾ|| ನಾ. ಸೋಮೇಶ್ವರ
ಎಡಿ-೫-೧೮೬, ಕೆ.ಎಚ್.ಬಿ-ಎಸ್.ಎಫ್.ಎಸ್-೪೦೭, ೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

# ಊರ್ಮಿಳೆಯ ಸ್ವಗತದಲ್ಲಿ ಬೆತ್ತಲೆಗೊಂಡ ರಾಮಾಯಣ

ಎಸ್. ಶಶಿಕಾಂತ ಯಡಹಳ್ಳಿ

ಊರ್ಮಿಳೆ ವಾಲ್ಮೀಕಿ ರಾಮಾಯಣದಲ್ಲಿ ಅತ್ಯಂತ ಉಪೇಕ್ಷೆಗೊಳಗಾಗಿ ನಿರ್ಲಕ್ಷಿಸಲಾದ ಚಿಲ್ಲರೆ ಪಾತ್ರ. ಇಂತಹ ಅಮುಖ್ಯ ಪಾತ್ರದ ದೃಷ್ಟಿಕೋನದಲ್ಲಿ ರಾಮಾಯಣವನ್ನು ವಾಸ್ತವದ ನೆಲಗಟ್ಟಿನಲ್ಲಿ ವಿಮರ್ಶಿಸುವ ನಿಟ್ಟಿನಲ್ಲಿ ಪ್ರೊ॥ ಎಚ್. ಎಸ್. ವೆಂಕಟೇಶ ಮೂರ್ತಿಯವರು ರಚಿಸಿದ ಏಕವ್ಯಕ್ತಿ ಪ್ರಯೋಗವಾದ 'ಊರ್ಮಿಳೆ'ಯು ಎನ್. ಮಂಗಳಾರವರ ನಿರ್ದೇಶನ ಮತ್ತು ಅಭಿನಯದಲ್ಲಿ ನಾಲ್ಕಾರು ಬಾರಿ ಪ್ರದರ್ಶನ ಗೊಂಡಿದೆ.

ಶ್ರೀರಾಮ ೧೪ ವರ್ಷ ವನವಾಸಕ್ಕೆ ತೆರಳಲು ನಿಂತಾಗ ಸೀತೆ ಹಟಕ್ಕೆ ಬಿದ್ದು ಹಿಂಬಾಲಿಸಿದಳು. ಲಕ್ಷ್ಮಣ ಹಿಂದೆ ಮುಂದೆ ನೋಡದೆ ಅಣ್ಣನ ಜೊತೆ ನಡೆದೇ ಬಿಟ್ಟ. ಆದರೆ... ಲಕ್ಷ್ಮಣನ ಹೆಂಡತಿ ಊರ್ಮಿಳೆ ೧೪ ವರ್ಷ ಪತಿಯಿಂದಗಲಿ ಅರಮನೆಯಲ್ಲಿದ್ದೂ ವನವಾಸವನ್ನು ಸ್ವಯಂ ವಿಧಿಸಿಕೊಂಡು ಗಿಡಮರಗಳನ್ನು ಬೆಳೆಸುತ್ತಲೇ ಅದೆಷ್ಟು ನಿರೀಕ್ಷೆ, ನೋವು, ಸಂಕಟ, ಒಂಟಿತನಗಳನ್ನು ಅನುಭವಿಸಿರಬಹುದೆಂಬುದರ ಸುಂದರ ಊಹೆ ಇಲ್ಲಿದೆ. ಆಗಿನ ಕಾಲದ ಮುಖ್ಯ ಘಟನೆಗಳನ್ನು ವ್ಯಂಗ್ಯಪೂರಿತ ಮಾತುಗಳಿಂದ ಲೇವಡಿ ಮಾಡುತ್ತಲೇ ರಾಮಾಯಣದ ಇನ್ನೊಂದು ಮುಖವನ್ನು ಪ್ರೇಕ್ಷಕರಿಗೆ ತೋರುತ್ತಾ ಅವರನ್ನು ವಿಚಾರ ಸಂಘರ್ಷಕ್ಕೊಳ ಪಡಿಸುವಲ್ಲಿ 'ಊರ್ಮಿಳೆ' ಯಶಸ್ವಿಯಾಗಿದ್ದಾಳೆ. ಜೊತೆಗೆ ಹಲವಾರು ಮಹತ್ವದ ತಾತ್ವಿಕ ಪ್ರಶ್ನೆಗಳನ್ನೂ ಎತ್ತುತ್ತಾಳೆ.

ಲಕ್ಷ್ಮಣ ಸರ್ವಶಕ್ತ, ಸರ್ವರಕ್ಷಕ ರಾಮನಿಗೆ ರಕ್ಷಕನಾಗಿ (?) ಪಿತೃಧರ್ಮ, ಪತ್ನಿ ಧರ್ಮ, ಪ್ರಜಾಪಾಲನಾ ಧರ್ಮಗಳನ್ನು ನಗಣ್ಯ ಮಾಡಿ ವನವಾಸಕ್ಕೆ ತೆರಳುವಾಗ ಹೆಂಡತಿಗೆ, ಆ ಮೂಲಕ ಎಲ್ಲಾ ಗೃಹಿಣಿಯರಿಗೆ, ''ಪತಿ ಮನೆಯಲ್ಲಿ ಇಲ್ಲದಿರುವಾಗ ಗೃಹ ರಕ್ಷಣೆ, ಅತಿಥಿ ಸೇವೆ ಮತ್ತು ಸಂತಾನ ಸಂರಕ್ಷಣೆ ಇದೇ ಗೃಹಿಣಿಯ ಧರ್ಮ'' ಎಂದು ಮಹಿಳೆಯರ ಆದ್ಯ ಕರ್ತವ್ಯಗಳನ್ನು ನೆನಪಿಸಿದ. ಶತ ಶತಮಾನಗಳಿಂದ ಮಹಿಳೆಗೆ ಮೂರು ಕಾಸಿನ ಅಭಿಪ್ರಾಯ ಸ್ವಾತಂತ್ರ್ಯ ಕೊಡದ ಈ ಆರ್ಯಧರ್ಮ ಪಾಲಕರು ಮತ್ತು ಪೋಷಕರು ಮಹಿಳೆಯರನ್ನು ಸೇವೆಗೆ, ಗೃಹಕೃತ್ಯಗಳಿಗೆ ಮತ್ತು ಸಂತಾನಾಭಿವೃದ್ಧಿಗೆ ಬಿಟ್ಟು ಇನ್ಯಾವುದಕ್ಕೆ ತಾನೆ ಬಳಸಿ ಕೊಂಡಿದ್ದಾರೆ? ವಾಲಿ ಸಂಹಾರ, ಸೇತು ಬಂಧನ, ರಾವಣ ಸಂಹಾರ, ಸೀತಾಗ್ನಿಪ್ರವೇಶ ಎಲ್ಲವೂ ಘಟಿಸಿದ್ದು ಧರ್ಮಸಂಘರ್ಷದ ಹೆಸರಲ್ಲಿ ತಾನೆ? ಆದರೆ ಈ ಧರ್ಮಸಂಘರ್ಷದ ವಿಶ್ಲೇಷಣೆಯೇ ಅವರವರ ಹಿತಾಸಕ್ತಿ ಪೂರೈಕೆಗಳಿಗೆ ಅನುಗುಣವಾಗಿದೆ. ಆದರೆ ಪರೋಕ್ಷವಾಗಿ ಗೂಬೆ ಕೂರಿಸುವುದು ಮಾತ್ರ ಸ್ತ್ರೀಯರ ಮೇಲೆ.

ಮನುಷ್ಯರ ಪಕ್ಷಪಾತ ಒತ್ತಟ್ಟಿಗಿರಲಿ, ಪಂಚಭೂತಗಳಲ್ಲೊಂದಾಗಿ ಎಂದೂ ತನ್ನ ಗುಣದಲ್ಲಿ ಭೇದ ತೋರದ ಅಗ್ನಿಯೂ ಸಹ ರಾಮಾಯಣದಲ್ಲಿ ಪಕ್ಷಪಾತ ತೋರಿದ್ದನ್ನು ಲೇವಡಿ ಮಾಡುವ ಊರ್ಮಿಳೆ ''ತನ್ನ ಬಾಲಕ್ಕೆ ಬೆಂಕಿಯಿಟ್ಟ ಸೇಡಿಗೆ ಆಂಜನೇಯ ಇಡೀ ಲಂಕೆಯನ್ನು ಸುಟ್ಟು ಏನೂ ತಪ್ಪೆಸಗದ ಪಾಪದ ಪ್ರಜೆಗಳು, ಪ್ರಾಣಿಗಳು, ಪಕ್ಷಿಗಳನ್ನು ಕರಕಲಾಗಿಸಿದ. ಬೆಂಕಿ ಮುದುಕರು, ಮಕ್ಕಳು, ಮಹಿಳೆಯರು, ಗರ್ಭಿಣಿಯರೆಲ್ಲರನ್ನೂ ಬೂದಿ ಮಾಡಿತು. ಆದರೆ ಸೀತೆ ಅಗ್ನಿ ಪ್ರವೇಶ ಮಾಡಿದಾಗ ಅವಳ ಕೂದಲೂ ಕೊಂಕಿಸಲಿಲ್ಲ ಯಾಕೆ? ಅಗ್ನಿಗೂ ಪಕ್ಷಪಾತವೇ?'' ಎಂದು ಪ್ರಕೃತಿಯನ್ನು ಪ್ರಶ್ನಿಸುತ್ತಲೇ ಅಗ್ನಿಪರೀಕ್ಷೆಯ ಪ್ರಹಸನವನ್ನೇ ಪ್ರಶ್ನಿಸುವ ಮೂಲಕ ರಾಮಾಯಣದ ಕರಾಳ ಮುಖಗಳನ್ನು ಬಿಚ್ಚಿಡುತ್ತಾ ಊರ್ಮಿಳೆ ಪ್ರೇಕ್ಷಕರನ್ನು ಬೆಚ್ಚಿಬೀಳಿಸುತ್ತಾಳೆ.

''ಯುದ್ಧದಿಂದ ಧ್ವಂಸ ಮಾಡಿದ ಲಂಕೆಯನ್ನು ಪುನಃ ಹೊಸದಾಗಿ ಕಟ್ಟಬೇಕು. ಭಾರಿ ವೃಕ್ಷಗಳನ್ನು ನೆಟ್ಟು ಬೆಳೆಸೋಕೆ ಹತ್ತಾರು ವರ್ಷವಾದರೆ... ಮುರಿದು ಹಾಕೋಕೇ ಹತ್ತೇ ನಿಮಿಷ ಸಾಕು. ಅಯೋಧ್ಯೆಯ ವಾಸ್ತು ಶಿಲ್ಪಿಗಳು ಲಂಕೆಗೆ ಹೋಗಬೇಕು, ಇಲ್ಲಿನ ಅರಮನೆ ತದ್ರೂಪು ಅಲ್ಲಿ ಏಳಬೇಕು. ಇಲ್ಲಿನ ಆಡಳಿತ ಅಲ್ಲಿ ನಡೆಯಬೇಕು, ಒಟ್ಟಾರೆಯಾಗಿ ಅಯೋಧ್ಯೆಯ ನಾಗರಿಕತೆ (?) ಲಂಕೆಯಲ್ಲಿ ಸ್ಥಾಪನೆಯಾಗಬೇಕು'' ಎಂಬ ವಿಸ್ತರಣಾವಾದಿ ರಾಮನ ಆಶಯವು ಅದ್ಯಾಕೋ ನೋಡುಗರಿಗೆ ಇರಾಕನ್ನು ಜ್ಞಾಪಿಸಿಬಿಡುವಂತಿದೆ. ಅಯೋಧ್ಯೆಯ ವಿಸ್ತರಣಾವಾದಿ ಹಿತಾಸಕ್ತಿಗಾಗಿ ಧರ್ಮಸಂಘರ್ಷವನ್ನು ಮುಂದೆ ಮಾಡಿ ಲಂಕೆಯ ಸಂಪತ್ತು ಲೂಟಿ ಮಾಡಿ ಆರ್ಯಸಾಮ್ರಾಜ್ಯ ಅಲ್ಲಿ ಸ್ಥಾಪಿಸಲಾಯಿತು; ಹಾಗೆಯೇ ಅಮೆರಿಕಾದಿ ಸಾಮ್ರಾಜ್ಯಶಾಹಿ ದೇಶಗಳು ಕೂಡ ತಮ್ಮ ತೈಲ ಹಿತಾಸಕ್ತಿಗಾಗಿ ಧರ್ಮಸಂಘರ್ಷದ ಹೆಸರಲ್ಲಿ ಇರಾಕ್‌ನಲ್ಲಿ ಅಮಾನುಷ ಯುದ್ಧ ಮಾಡಿ ಅಲ್ಲಿ ತಮ್ಮ ಬಾಲಂಗೋಚಿ ಆಡಳಿತ ಸ್ಥಾಪಿಸಿ ನಾಗರಿಕತೆಯ ಪುನರುತ್ಥಾನದ ಜವಾಬ್ದಾರಿ ನಿರ್ವಹಿಸುತ್ತಿವೆ. ಕನಿಷ್ಠ ಸೀತಾಪಹರಣದ ಕಾರಣವಾದರೂ ರಾಮನಿಗಿತ್ತು, ಆದರೆ ಈ ಬುಷ್‌ನಂಥವರು ಸುಳ್ಳು ಆರೋಪಗಳ ಮೇಲೆ ಇರಾಕ್‌ನ ಮೇಲೆ ಬಾಂಬಿನ ಮಳೆಗರೆದರು. ''ರಾಮಾಯಣವಿರಲಿ, ಅಮೆರಿಕಾಯಣವಿರಲಿ ಸಾಮ್ರಾಜ್ಯಶಾಹಿ ಹಿತಾಸಕ್ತಿ ಎಂದೂ ಬದಲಾಗದು'' ಎಂಬುದನ್ನು ಊರ್ಮಿಳಾ ರಂಗಪ್ರಯೋಗ ಬಹಳ ಸೂಕ್ಷ್ಮವಾಗಿ ತೋರಿಸುವಲ್ಲಿ ಯಶಸ್ವಿಯಾಗಿದೆ.

''ಇಲ್ಲಿನ ಶಾಲೆಯ ಹಾಗೆ ಅಲ್ಲಿನ ಶಾಲೆ, ಇಲ್ಲಿನ ಮಕ್ಕಳು ಏನು ಕಲೀತಾರೋ ಅದನ್ನು ಅಲ್ಲಿಯ ಮಕ್ಕಳು ಕಲೀಬೇಕು. ಲಂಕೆಯ ಚರಿತ್ರೆ ಓದೋದು ಬಿಟ್ಟು ಆರ್ಯಾವರ್ತದ ಚರಿತ್ರೆ ಓದಬೇಕು... ರಘುವಂಶದ ವಂಶಪಟ್ಟಿ ಉರು ಹಚ್ಚಬೇಕು...'' ಹೀಗೆ ಮಕ್ಕಳ ಶಿಕ್ಷಣಪದ್ಧತಿಯ ಮೇಲೆ ದಾಳಿಕೋರರ ಸಂಸ್ಕೃತಿಯನ್ನು ಹೇಗೆ ಹೇರಲಾಗುತ್ತಿದೆ ಎಂಬುದನ್ನು ಊರ್ಮಿಳೆಯ ಮೂಲಕ ನಾಟಕಕಾರರು ಸ್ಪಷ್ಟವಾಗಿ ಹೇಳುತ್ತಾರೆ. ಕಾಲ ಬದಲಾಗಿರಬಹುದು. ಆದರೆ ಈಗಲೂ ಆಗುತ್ತಿರುವುದು ಅದೇ ತಾನೆ? ಮಕ್ಕಳಿಗೆ ಅಗತ್ಯ ಇರಲಿ ಬಿಡಲಿ, ಯಾರ್‍ಯಾರದೋ ಹಿತಾಸಕ್ತಿಗಾಗಿ ನಮ್ಮ ಮಕ್ಕಳು ಬಲಿಯಾಗುತ್ತಿರುವುದು ಸುಳ್ಳಲ್ಲವಲ್ಲ. ಪುರೋಹಿತಶಾಹಿ ಪಾಠ-ಪ್ರವಚನಗಳನ್ನು ಈಗಲೂ ಪಠ್ಯಕ್ರಮದಲ್ಲಿ ಅಳವಡಿಸ ಲಾಗಿದೆ. ರಾಜಮಹಾರಾಜರ ವೈಭವೀಕರಣದ ಮೂಲಕ ಭ್ರಮೆಗಳನ್ನು ಸೃಷ್ಟಿಸುವ ಪಠ್ಯ ಗಳನ್ನು ನಮ್ಮ ಭವ್ಯ ಭಾರತದ ಸಂಸ್ಕೃತಿಯ ಪರಿಚಯದ ಹೆಸರಲ್ಲಿ ತುರುಕಲಾಗಿದೆ. ಮಾತೃಭಾಷೆಯನ್ನು ಬಿಟ್ಟು ಈ ನಾಡನ್ನು ಆಕ್ರಮಿಸಿ ಶೋಷಿಸಿ ಆಳಿದವರ ಇಂಗ್ಲಿಷ್ ಭಾಷೆ ಯನ್ನು ವರಪ್ರಸಾದವೇನೋ

೪೭ನೇ ಪುಟಕ್ಕೆ

# ಮಂಗಳದ ಪುನರಾಗಮನ

ಎರಡು ವರ್ಷಗಳ ಕೆಳಗೆ ಆಕಾಶದ ರಾಜ ಎಂಬಂತೆ ಮೆರೆದು ಹಿನ್ನೆಲೆಗೆ ಸರಿದ ಮಂಗಳ ಈಗ ಅಂತಹ ಇನ್ನೊಂದು ಪ್ರದರ್ಶನಕ್ಕೆ ಸಜ್ಜಾಗಿದೆ. ಈಗಾಗಲೇ ಅನೇಕರು ಅದರ ಪ್ರಕಾಶದ ಹೆಚ್ಚಳವನ್ನು ಗುರುತಿಸಿ ಯಾವುದಿದು ಹೊಸ ಗ್ರಹ ಎಂದು ಬೆರಗಾಗಿದ್ದಾರೆ. ಭೂಮಿ (ಅಂದರೆ ನಾವು) ಅದನ್ನು ಹಿಂದೆ ಹಾಕಿ ಓಡುತ್ತಿರುವ ಸಂದರ್ಭದಲ್ಲಿ ಅದು ಹಿಂದಕ್ಕೆ ಸರಿಯುತ್ತಿದೆಯೇನೋ ಎಂದು ಉಂಟಾಗುವುದು ಭ್ರಮೆ. ಇದಕ್ಕೆ ಹಿಮ್ಮುಖ ಚಲನೆ ಎಂದು ಹೆಸರೂ ಇದೆ. ಇದರ ಆರಂಭದ ಸೂಚನೆ ಸಿಗುವುದು ಒಂದನೆಯ ತಾರೀಖಿನಂದು. ಅದುವರೆವಿಗೂ ಮುನ್ನಡೆಯುತ್ತಿದ್ದ ಅಂದರೆ ಮೇಷದಿಂದ ವೃಷಭದತ್ತ ಹೊರಟಿದ್ದ ಮಂಗಳ ಅಂದು ತಟಸ್ಥವಾಗಿ ನಿಂತುಬಿಟ್ಟಂತೆ ಕಾಣುತ್ತದೆ. ಆ ಮುಂದೆ ಅದು ಮೇಷದತ್ತ ಅಂದರೆ ಹಿಂದಕ್ಕೆ ಹೊರಡುತ್ತದೆ. ಭೂಮಿ-ಮಂಗಳ ದೂರ ಇನ್ನು ಮುಂದೆ ಕಡಿಮೆಯಾಗ ತೊಡಗುತ್ತದೆ. ೨೯ರಂದು ಕನಿಷ್ಠ ಅಂದರೆ ೬೩ ಮಿಲಿಯನ್ ಕಿ.ಮೀ. ಗಳಾಗಿ ಆ ಬಳಿಕ ಪುನಃ ಹೆಚ್ಚಾಗುವುದು. ಕಳೆದ ಬಾರಿ ಅಂದರೆ ಆಗಸ್ಟ್ ೨೦೦೩ರಲ್ಲಿ ಇದು ಸುಮಾರು ೫೬ ಮಿಲಿಯನ್ ಕಿ.ಮೀ. ಇತ್ತು. ಈ ಅಪಾರದೂರದಲ್ಲಿ ಹತ್ತಿಪ್ಪತ್ತು ಮಿಲಿಯನ್ ಆಚೀಚೆ ಆದರೂ ಬರಿಗಣ್ಣಿಗೆ ವ್ಯತ್ಯಾಸವೇನೂ ತಿಳಿಯುವುದಿಲ್ಲ. ಆದ್ದರಿಂದ ಆಗ ಕಂಡಷ್ಟೇ ಪ್ರಕಾಶಮಾನವಾಗಿ ಈಗಲೂ ಕಾಣುತ್ತದೆ ಎನ್ನಬಹುದು. ಒಟ್ಟಿನಲ್ಲಿ ಕಿತ್ತಲೆ ಬಣ್ಣದ ಈ ಗ್ರಹದ ಸುಂದರ ನೋಟ ನಮಗೆ ಅಂದಾಜಾಗಿ ಎರಡು ವರ್ಷಕ್ಕೊಮ್ಮೆ ಲಭ್ಯ.




ಈ ಓಟದ ಇನ್ನೊಂದು ಅನುಕೂಲವೂ ಇದೆ. ಸಂಜೆ ಸೂರ್ಯಾಸ್ತವಾಗುತ್ತಿದ್ದಂತೆಯೇ ಪೂರ್ವದಲ್ಲಿ ಉದಯಿಸುವ ಮಂಗಳ ರಾತ್ರಿ ಇಡೀ ನೋಡಲು ಸಿಗುತ್ತದೆ. ಪ್ರಕಾಶದ ಹೆಚ್ಚಳದಿಂದ ಅದನ್ನು ಗುರುತಿಸುವುದು ಸುಲಭವಾದದ್ದರಿಂದ ಅದರ ಚಲನೆಯನ್ನು ತಿಳಿಯಲು ಈಗ ಉತ್ತಮ ಅವಕಾಶ. ಅದರ ಆಸುಪಾಸಿನಲ್ಲಿ ಅತಿ ಪ್ರಖರವಾದ ಯಾವುದೇ ನಕ್ಷತ್ರವಿಲ್ಲ. ರಾತ್ರಿ ಎಂಟರ ಹೊತ್ತಿಗೆ ಪೂರ್ವದತ್ತ ದೃಷ್ಟಿ ಹೊರಳಿಸಿದರೆ ಸಾಕು. ತೆಳ್ಳನೆಯ ಮೋಡಗಳಿದ್ದರೂ ಚಿಂತೆ ಇಲ್ಲ. ಶುಭ್ರ ಆಕಾಶವಿದ್ದರೆ ಕೃತ್ತಿಕಾಗುಚ್ಛ, ರೋಹಿಣಿ ಎಂಬ ಕೆಂಪು ನಕ್ಷತ್ರ ಇವುಗಳನ್ನು ಕಾಣಬಹುದು. ೧೯ರಂದು ಮಂಗಳದ ಪಕ್ಕದಲ್ಲೇ ಕಾಣುವ ಚಂದ್ರನಿಂದ ನೀವು ಕಂಡದ್ದು ಮಂಗಳವೇ ಎಂದು ಖಚಿತ ಪಡಿಸಿಕೊಳ್ಳಬಹುದು.

**ಡಾ|| ಬಿ. ಎಸ್. ಶೈಲಜಾ**

ಮಂಗಳಕ್ಕೊಂದು ಪ್ರತಿಸ್ಪರ್ಧಿಯಂತೆ ಕಾಣುವ ಚುಕ್ಕೆ ಪಶ್ಚಿಮದಲ್ಲಿದೆ. ಸೂರ್ಯಾಸ್ತವಾದೊಡನೆ ಕಾಣುವ ಈ ಚುಕ್ಕೆ ಶುಕ್ರಗ್ರಹ. ಏಕಾಂಗಿಯಂತೆ ಕಾಣುತ್ತದೆಯೇ? ಇಲ್ಲ, ಸಾಕಷ್ಟು ನಕ್ಷತ್ರಗಳು ಅಲ್ಲಿವೆ. ೭ರಂದು ಚಂದ್ರನ ಜೊತೆ ಗೂಡಿದ ಮೇಲೆ ಅದು ವೃಶ್ಚಿಕದತ್ತ ಓಡುತ್ತದೆ. ೧೬ರಂದು ಕೆಂಪು ನಕ್ಷತ್ರ ಜ್ಯೇಷ್ಠಾದೊಡನೆ ಜೋಡಿಯಾಗುತ್ತದೆ.

ಹೀಗೆ ಶುಕ್ರ ಒದಗಿಸಿದ ಸುಳಿವನ್ನೇ ಬಳಸಿ ಆಕಾಶದ ಇತರ ಪುಂಜಗಳ ಪರಿಚಯ ಮಾಡಿಕೊಳ್ಳೋಣ. ವೃಶ್ಚಿಕ-ಧನುಗಳ ನಡುವೆ ಹರಡಿರುವ ಆಕಾಶಗಂಗೆಯ ಭಾಗ ಕಣ್ಣಿಗೊಂದು ಹಬ್ಬ. ನೆಬ್ಯುಲಗಳು, ಗುಚ್ಛಗಳು ಅಲ್ಲಿ ದಟ್ಟವಾಗಿ ಹರಡಿಕೊಂಡಿವೆ. ಈ ಗಂಗೆಯ ಹರಿವನ್ನು ಗಮನಿಸಿ. ನೆತ್ತಿಯತ್ತ ಹರಿದು ಬೇಸಿಗೆ ತ್ರಿಕೋಣದ ಮೂರು ಪುಂಜಗಳ ನಡುವೆ ಹರಿಯುತ್ತದೆ. ಸಿಗ್ನಸ್ (ರಾಜಹಂಸ), ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) - ಈ ಮೂರೂ ಪುಂಜಗಳ ಪ್ರಕಾಶಮಾನ ನಕ್ಷತ್ರಗಳು - ಡೆನೆಬ್, ವೇಗಾ (ಅಭಿಜಿತ್), ಆಲ್ಟೇರ್ (ಶ್ರವಣ) - ರಚಿಸುವ ತ್ರಿಕೋಣ ಇದು. ಇದನ್ನು ದಾಟಿ ಉತ್ತರಕ್ಕೆ ತಿರುಗಿ ಕಾಸಿಯೋಪಿಯ (ಕುಂತಿ) ಮೂಲಕ ಹಾಯುತ್ತದೆ. ಇಂಗ್ಲಿಷ್ ಭಾಷೆಯ M ಆಕಾರದ ಈ ಪುಂಜವನ್ನು ಸುಲಭವಾಗಿ ಗುರುತಿಸಬಹುದು. ನೆತ್ತಿಯಿಂದ ಪೂರ್ವಕ್ಕೆ ಕಾಣುವ ಇನ್ನೊಂದು ಪ್ರಕಾಶಮಾನ ಪುಂಜ ಪೆಗಸಸ್ (ನಕುಲ) ಎಂಬ ಚೌಕ. ರಾಶಿ ಚಕ್ರದ ಮಕರ, ಕುಂಭ ಇವು ಕ್ಷೀಣವಾದವು. ಕುಂಭದ ದಕ್ಷಿಣಕ್ಕಿರುವ ಗ್ರುಸ್ (ಬಕ) ಮತ್ತು ದಕ್ಷಿಣ ಮೀನದ ಮೀನಾಕ್ಷಿ(ಫಾಮಲ್ ಹೌಟ್) ಇವನ್ನು ಕಾಣಬಹುದು.

ಕಳೆದ ತಿಂಗಳು ದಿಗಂತದ ಅಂಚಿಗೆ ಸರಿದ ಗುರುಗ್ರಹ ಈ ತಿಂಗಳು ಕಾಣುವುದಿಲ್ಲ. ಬುಧ ತಿಂಗಳ ಕೊನೆಗೆ ಸಂಜೆಯ ಆಕಾಶದಲ್ಲಿ ಪಶ್ಚಿಮದ ಅಂಚಿನಲ್ಲಿ ಕಾಣುವುದು. ಶನಿಗ್ರಹ ಮಧ್ಯರಾತ್ರಿಯ ನಂತರ ಉದಯಿಸುವುದು. ಆದ್ದರಿಂದ ಬೆಳಗಿನ ಜಾವ ಕಾಣುವುದು. ಆಗ ಪಶ್ಚಿಮದಂಚಿನಲ್ಲಿ ಮಂಗಳ, ನೆತ್ತಿಯ ಸಮೀಪ ಶನಿ ಕಾಣುವುವು.

ಈ ತಿಂಗಳಲ್ಲಿ ಗ್ರಹಣಗಳಿವೆ. ಪಾರ್ಶ್ವ ಸೂರ್ಯಗ್ರಹಣ ನೋಟ ನಮಗಿದೆ. ಕುತೂಹಲಕ್ಕಾಗಿಯಾದರೂ ಬರಿಗಣ್ಣಿನಿಂದ ನೋಡಿದಲ್ಲಿ ಅಪಾಯ ಕಟ್ಟಿಟ್ಟದ್ದೇ. ಆದ್ದರಿಂದ ಸೂರ್ಯಾಸ್ತ ಕಾಣುವ ತಾಣವನ್ನು ಆರಿಸಿಕೊಂಡು ಸೂರ್ಯಾಸ್ತ ನೋಡುವುದು ಸುರಕ್ಷಿತ. ಗೋಡೆಯ ಮೇಲೆ ಕನ್ನಡಿಯಿಂದ ಪ್ರತಿಫಲನ ನೋಡಬಹುದು. ಮರದ ನೆರಳಿನಲ್ಲಿಯೂ ಅಸಂಖ್ಯಾತ 'ಬಿಂಬಗಳು ಮೂಡುವುವು. ಹಿಂದೆ ಕೊಂಡಿದ್ದ ಎಕ್ಲಿಪ್ಸ್ ಗಾಗಲ್ಸ್‌ನಲ್ಲಿ ಗೀಚುಗಳಿಲ್ಲ ಎಂದು ಖಾತ್ರಿಪಡಿಸಿ ಉಪಯೋಗಿಸಿಕೊಳ್ಳಿ. ಸಾಯಂಕಾಲ ೪:೨೧ಕ್ಕೆ ಆರಂಭವಾಗುವ ಗ್ರಹಣ ಮುಗಿಯುವುದರೊಳಗೆ ಸೂರ್ಯಾಸ್ತವಾಗುವುದು. ಕರ್ನಾಟಕದ ಇತರ ಸ್ಥಳಗಳಿಂದ ಆರಂಭದ ಸಮಯ ಎಂಟು-ಹತ್ತು ನಿಮಿಷಗಳಷ್ಟು ತಡವಾಗಬಹುದು.



೧೬ರ ಸಂಜೆ ಪೂರ್ವದಲ್ಲಿ ಗ್ರಹಣ "ಹಿಡಿದ" ಚಂದ್ರನ ಉದಯದ ನೋಟ



*೧೭ರ ಸಂಜೆ ಪಶ್ಚಿಮದಲ್ಲಿ ಶುಕ್ರ-ಜ್ಯೇಷ್ಠಾ ಸಂಗಮ*

ಚಂದ್ರಗ್ರಹಣ ೧೭ರಂದು. ಇದು ಪಾರ್ಶ್ವಗ್ರಹಣ. ಮಧ್ಯಾಹ್ನ ೩:೨೧ಕ್ಕೆ ಆರಂಭವಾಗುತ್ತದೆಯಾದರೂ, ನಮಗೆ ಚಂದ್ರ ನೋಡಲು ಸಿಗುವುದು ಸಂಜೆ ೬:೦೦ ಗಂಟೆಯ ಹೊತ್ತಿಗೆ ಅದು ಉದಯಿಸಿದಾಗ. ಆದ್ದರಿಂದ ಚಂದ್ರೋದಯವನ್ನು ತಪ್ಪದೇ ನೋಡಿ. ಚಂದ್ರೋದಯ ಸಂಜೆ ೫:೫೫ಕ್ಕೆ. ಅದಾದ ಏಳು ನಿಮಿಷಕ್ಕೆ ಚಂದ್ರ ಪೂರ್ಣ ನೆರಳಿನಿಂದ ಹೊರಬಂದುಬಿಡುತ್ತದೆ. ಅದಾದ ನಂತರ ಚಂದ್ರ ಇನ್ನೂ ಪಾರ್ಶ್ವ ಛಾಯಾ ಪ್ರದೇಶದಲ್ಲಿ ೭:೪೫ರವರೆಗೆ ಇರುವುದಾದರೂ ಬರಿಗಣ್ಣಿಗೆ ಈ ವ್ಯತ್ಯಾಸ ಕಾಣುವುದಿಲ್ಲ. ಬೆಂಗಳೂರಿನಿಂದ ಪೂರ್ವಕ್ಕಿರುವ ಕೋಲಾರದಲ್ಲಿ, ತುಮಕೂರು ಮತ್ತು ಚಿತ್ರದುರ್ಗ ಹಾಗೂ ಆಂಧ್ರ ಮುಂತಾದ ಪ್ರದೇಶಗಳಿಗೆ ಇನ್ನೂ ಐದಾರು ನಿಮಿಷ ಹೆಚ್ಚು ಹೊತ್ತು ಕಾಣಬಹುದು. ಪಶ್ಚಿಮದ ಪ್ರದೇಶಗಳಿಗೆ (ಉದಾ: ಮಂಗಳೂರು, ಮಡಿಕೇರಿ, ಬೆಳಗಾಂ) ಈ ನೋಟ ಇಲ್ಲವೇ ಇಲ್ಲ. ಚಂದ್ರೋದಯ ಆಗುವಾಗಲೇ ಪಾರ್ಶ್ವಗ್ರಹಣ ಮುಗಿದುಹೋಗಿರುತ್ತದೆ.

೧೭ರ ಸಂಜೆ ಚಂದ್ರೋದಯಕ್ಕಾಗಿ ಗುಡ್ಡ ಏರುತ್ತೀರಲ್ಲಾ ಆಗ ಪಶ್ಚಿಮದತ್ತಲೂ ಕಣ್ಣು ಹಾಯಿಸಿ. ಶುಕ್ರ-ಜ್ಯೇಷ್ಠಾಗಳ ಜೋಡಿಯನ್ನು ಗುರುತಿಸಬಹುದು.

ಈ ತಿಂಗಳಲ್ಲಿ ಎರಡು ಉಲ್ಕಾವೃಷ್ಟಿಗಳಿವೆ. ೮ರಂದು ಡ್ರಾಕೊನಿಡ್ಸ್ ಎಂಬುದು ಗರಿಷ್ಠ ಮುಟ್ಟುತ್ತದೆ. ಆದರೂ ಗಂಟೆಗೆ ಹತ್ತಿಪ್ಪತ್ತು ಉಲ್ಕೆಗಳು ಕಾಣಬಹುದಷ್ಟೇ. ಡ್ರಾಕೊ (ಸುಯೋಧನ) ಪುಂಜದಿಂದ ಹೊರಟಂತೆ ಕಾಣುವುವು. ಹ್ಯಾಲಿ ಧೂಮಕೇತುವಿನ ತುಣುಕುಗಳು ವೃಷ್ಟಿಯನ್ನುಂಟುಮಾಡುವುದು ೨೧ರಂದು. ಒರೈಯನ್ (ಮಹಾವ್ಯಾಧ) ದಿಕ್ಕಿನಿಂದ ಹೊರಟಂತೆ ಇವು ಕಾಣುವುದರಿಂದ ಒರಿಯನಿಡ್ಸ್ ಎಂಬ ಹೆಸರಿದೆ. ಗಂಟೆಗೆ ೩೦-೪೦ ಉಲ್ಕೆಗಳು ಕಾಣುವುವು.

## ಖಗೋಳ ದಿನಚರಿ

೧ ಮಂಗಳ ಗ್ರಹದ ಹಿನ್ನಡೆ ಆರಂಭ.
೩ ಅಮಾವಾಸ್ಯೆ ಸೂರ್ಯಗ್ರಹಣ* ೪:೨೧ರಿಂದ ಸೂರ್ಯಾಸ್ತದವರೆಗೆ
೭ ಚಂದ್ರ-ಶುಕ್ರ ನಡುವೆ ಕನಿಷ್ಠಕೋನ*
೮ ಡ್ರಾಕೊನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೧೦ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೪ ಚಂದ್ರ-ಭೂಮಿ ನಡುವೆ ಕನಿಷ್ಠ ದೂರ*
೧೬ ಶುಕ್ರ-ಜ್ಯೇಷ್ಠಾ ನಡುವೆ ಕನಿಷ್ಠ ಕೋನ *
೧೭ ಹುಣ್ಣಿಮೆ ಪಾರ್ಶ್ವ ಚಂದ್ರಗ್ರಹಣ* (ಚಂದ್ರೋದಯದಲ್ಲಿ ಕೇವಲ ೫-೬ ನಿಮಿಷ ಮಾತ್ರ)
೧೯ ಮಂಗಳ-ಚಂದ್ರ ನಡುವೆ ಕನಿಷ್ಠ ಕೋನ*
೨೧ ಒರಿಯನಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೪ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೫ ಚಂದ್ರ-ಶನಿ ನಡುವೆ ಕನಿಷ್ಠ ಕೋನ
೨೬ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
೨೯ ಮಂಗಳ-ಭೂಮಿ ನಡುವೆ ಕನಿಷ್ಠ ದೂರ. ಮಂಗಳದ ಗರಿಷ್ಠ ಪ್ರಕಾಶ
* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

---

*೪೫ನೇ ಪುಟದಿಂದ* ***ಊರ್ಮಿಳೆಯ ಸ್ವಗತದಲ್ಲಿ***

ಎಂಬಂತೆ ಹಿಡಿದುಕೊಂಡು ಸ್ವದೇಶಿ ಶಂಖದಲ್ಲಿ ವಿದೇಶಿ ತೀರ್ಥವನ್ನು ಮಕ್ಕಳ ಮೆದುಳಿಗೆ ಬಿಡಲಾಗುತ್ತಿರುವುದು ಸಮಕಾಲೀನ ವಿಪರ್ಯಾಸವೂ ಗುಲಾಮಗಿರಿಯ ಸಂಕೇತವೂ ಆಗಿದೆ. ಲಂಕೆಯ ಮಕ್ಕಳ ಮೇಲೆ ಹೇರಲಾದ ಪುರೋಹಿತಶಾಹಿ ಆರ್ಯ ಧರ್ಮದ ಪ್ರತಿಪಾದನೆಯ ಎಲ್ಲಾ ರೂಪರೇಷೆಗಳೂ ರೂಪ ಬದಲಾಯಿಸಿಕೊಂಡು ಇಂದಿನ ನಮ್ಮ ಮಕ್ಕಳ ಪಠ್ಯಕ್ರಮದಲ್ಲೂ ವಿಜೃಂಭಿಸುತ್ತಿವೆ. ''ರಾಮಾಯಣವಾದರೇನು, ಪ್ರಜಾಪ್ರಭುತ್ವಾಯಣ ವಾದರೇನು ? ಶೋಷಕ ವ್ಯವಸ್ಥೆಯಲ್ಲಿ ಶೋಷಣೆಯ ಸ್ವರೂಪಗಳು ಬೇರೆಯಾಗಿರುತ್ತವೆಯೇ ಹೊರತು ಶೋಷಣೆ ನಿಲ್ಲಲು ಸಾಧ್ಯವೇ ಇಲ್ಲ,'' ಎಂಬುದನ್ನು ಊರ್ಮಿಳೆಯ ಮಾತುಗಳನ್ನು ಸಮಕಾಲೀನ ಪರಿಸ್ಥಿತಿಗೆ ಹೋಲಿಸಿ ನೋಡಿದಾಗ ಜಾಗತಿಕ ಸತ್ಯವೆನಿಸುತ್ತದೆ.

''ಲೋಕಹಿತಕ್ಕಾಗಿ ಸ್ವಹಿತವನ್ನು ಬಲಿಕೊಡಬೇಕು ಊರ್ಮಿಳಾ... ಅದು ಆರ್ಯಧರ್ಮ...!'' ಎಂದು ಪತಿ ಲಕ್ಷ್ಮಣ ಹೇಳಿದಾಗ ಉರಿದೆದ್ದುಹೋದ ಊರ್ಮಿಳಾ ಬಹಳ ಮಾರ್ಮಿಕವಾಗಿ ''ಬಲಿಕೊಡಿ... ಬಲಿಕೊಡಿ, ಅದು ಆರ್ಯರ ಪರಂಪರಾಗತ ಪದ್ಧತಿ ಅಲ್ವೇ ...? ಆಡು ಕೇಳಿ ಯಾರಾದ್ರೂ ಅಡುಗೆ ಗಿಡ್ತಾರಾ ?'' ಎಂದು ಪ್ರಶ್ನಿಸುತ್ತಾ ಮಹಿಳೆಯರನ್ನು ಬಲಿ ಪಶು ಮಾಡುವ ಆರ್ಯಧರ್ಮಕ್ಕೆ ಧಿಕ್ಕಾರ ಹೇಳುತ್ತಾ ತನ್ನ ವ್ಯಂಗ್ಯ ಮಾತುಗಳಿಂದ ಲಕ್ಷ್ಮಣನನ್ನು ನೆಪವಾಗಿರಿಸಿ ಪ್ರೇಕ್ಷಕರನ್ನೇ ಪ್ರಶ್ನಿಸುವ ಮೂಲಕ ನೋಡುಗರೆದೆಯಲ್ಲಿ ತಳಮಳವನ್ನು ಹುಟ್ಟಿಸುವುದರಲ್ಲಿ ಸಫಲಳಾಗುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆಯೊಳಗಿನ ಸ್ತ್ರೀ ಶೋಷಣೆಗೆ ಊರ್ಮಿಳೆ ಅದೆಷ್ಟು ರೋಸಿಹೋಗಿದ್ದಾಳೆಂದರೆ ಕೊನೆಗೆ ''ಗಂಡಿನ ಹಂಗು ಇಲ್ಲದೇ ಹೆಣ್ಣು ಗೃಹಸ್ಥ ಧರ್ಮ ನಡೆಸಬಹುದು'' ಎಂಬ ನಿಲುವನ್ನು ಪ್ರತಿಪಾದಿಸುವ ಮೂಲಕ ಪುರುಷ ಪಕ್ಷಪಾತಿ ಆರ್ಯ ಧರ್ಮಕ್ಕೆ ತನ್ನ ಪ್ರತಿಭಟನೆ ತೋರುತ್ತಾಳೆ. ಸಮಕಾಲೀನ ಶೋಷಕ ವ್ಯವಸ್ಥೆಯ ಬಗ್ಗೆಯೂ ಬೆಳಕು ಚೆಲ್ಲುತ್ತಾ ನಾಟಕದಾದ್ಯಂತ ತನ್ನ ತಣ್ಣನೆಯ ಚೂರಿಯಂತಹ ಹರಿತ ಮಾತುಗಳಿಂದ ನೋಡುಗರ ಆತ್ಮಸಾಕ್ಷಿಯನ್ನೇ ತಿವಿದು ವಿಚಾರ ಸಂಘರ್ಷಕ್ಕೆ, ರಾಮಾಯಣದ ಮರು ವ್ಯಾಖ್ಯಾನಕ್ಕೆ, ವಸ್ತುನಿಷ್ಠ ತಿಳುವಳಿಕೆಗೆ ಒತ್ತಾಯಿಸುತ್ತಾಳೆ. ಯಾವುದೇ ವಿವಾದ ಸೃಷ್ಟಿಸದೆ ತಣ್ಣನೆಯ ಧ್ವನಿಯಲ್ಲಿ ರಾಮಾಯಣವನ್ನು ವಿಶ್ಲೇಷಿಸಿ ಆರ್ಯಧರ್ಮದ ಒಳ ಮರ್ಮಗಳನ್ನು ಪ್ರೇಕ್ಷಕರೆದುರು ಬೆತ್ತಲೆಗೊಳಿಸುವಲ್ಲಿ 'ಊರ್ಮಿಳೆ' ರಂಗ ಪ್ರಯೋಗವು ಸಾರ್ಥಕತೆಯನ್ನು ಪಡೆದು ಕೊಂಡಿದ್ದು, ಅದನ್ನು ತರ್ಕಬದ್ಧವಾಗಿ ರಚಿಸಿದ ವೆಂಕಟೇಶ ಮೂರ್ತಿಯವರು ಹಾಗೂ ರಂಗದಂಗಳಕ್ಕೆ ತಂದು ಸಾರ್ವತ್ರಿಕಗೊಳಿಸುತ್ತಾ ನಿರ್ದೇಶಿಸಿ ಅಭಿನಯಿಸಿದ ಎನ್. ಮಂಗಳಾರವರು ಅಭಿನಂದನಾರ್ಹರು. ಎಲ್ಲಾ ಮಿತಿಗಳನ್ನು ಮೀರಿ ಭಾವಪರವಶತೆಯನ್ನು ಪ್ರತಿಪಾತ್ರಕ್ಕೂ ಹಂಚಿ ವಾಚ್ಯವಾಗದ ಮಾತು, ಲಯಬದ್ಧ ಚಲನೆ, ಭಾಷಾ ಸ್ಪಷ್ಟತೆ, ಧ್ವನಿಯ ಏರಿಳಿತಗಳ ಜೊತೆಗೆ ತಮ್ಮೆಲ್ಲಾ ಪ್ರತಿಭೆಯನ್ನು ಪಾತ್ರಕ್ಕೆ ಧಾರೆ ಎರೆದು ಅಭಿನಯಿಸಿದ ಮಂಗಳಾರವರು 'ಊರ್ಮಿಳಾ' ಪಾತ್ರಕ್ಕೆ ನ್ಯಾಯ ಒದಗಿಸಿದ್ದಾರೆ. ಕೊನೆಯ ಹಂತದಲ್ಲಂತೂ ಅವರ ಅಭಿನಯದ ಭಾವಾಭಿವ್ಯಕ್ತಿಗೆ ಪ್ರೇಕ್ಷಕರ ಕಣ್ಣುಗಳು ತೇವವಾಗಿ ಹೃದಯ ಭಾರವಾಗಿದ್ದು ಮಂಗಳಾರವರ ಅಭಿನಯಕ್ಕೆ ಸಾಕ್ಷಿಯಾಗಿದ್ದವು.

ಸಂಗೀತ (ಗಜಾನನ ನಾಯಕ) ನಾಟಕದ ಯಶಸ್ಸಿಗೆ ಪೂರಕವಾಗಿದ್ದು, ಸಂಗೀತಕ್ಕೆ ತಕ್ಕ ಹೆಜ್ಜೆ, ಹೆಜ್ಜೆಗೆ ತಕ್ಕ ಹಾಡು, ಹಾಡಿಗೆ ತಕ್ಕ ನಟನೆಗಳು ಊರ್ಮಿಳೆಯನ್ನು ಪ್ರೇಕ್ಷಕರೆದೆಯಲ್ಲಿ ಅಚ್ಚಳಿಯದಂತೆ ಒತ್ತಿಬಿಟ್ಟವು. ಬೆಳಕು (ಅನಿಲ್) ಮಾಂತ್ರಿಕತೆಯನ್ನುಂಟುಮಾಡುವಂತಿದ್ದು ನಾಟಕದ ಯಶಸ್ಸಲ್ಲಿ ಪಾಲು ಕೇಳುವಂತಿತ್ತು. ಕಾಲ, ಸ್ಥಳ ಮತ್ತು ದೃಶ್ಯ ಬದಲಾವಣೆಗಳನ್ನು ಗೊಂದಲವಾಗದಂತೆ ತೋರುವಲ್ಲಿ ಹಿನ್ನೆಲೆ ಸಂಗೀತ ಮತ್ತು ಬೆಳಕು ಪ್ರಧಾನ ವಾಗಿದ್ದವು. ಕೊನೆಯದಾಗಿ, ಬಳಸಲಾದ ಹಸಿರು ಮತ್ತು ಕೆಂಪು ಬಟ್ಟೆಯ ಮರ ಮತ್ತು ಹೂಗಳ ಕಲ್ಪನೆ ಇಡೀ ನಾಟಕದೊಳಗಿನ ಊರ್ಮಿಳೆಯ ಆಶಯವನ್ನು ಬಿಂಬಿಸುವಂತಿದ್ದು ನಾಟಕ ಯಶಸ್ವಿಯಾಯಿತು.

**ಎಸ್. ಶಶಿಕಾಂತ ಯಡಹಳ್ಳಿ**
ನಂ. ೧೩೧, ಪ್ರಗತಿ ನಿವಾಸ, ರಾಮಮಂದಿರ ರಸ್ತೆ, [illegible]
ಬೆಂಗಳೂರು - ೫೬೦ ೦[illegible]

# ಚಲನಚಿತ್ರ ಸಂಸ್ಕೃತಿ
# ಗಿರೀಶ್ ಕಾಸರವಳ್ಳಿ ಮತ್ತು 'ಹಸೀನಾ'

**ಎನ್. ವಿದ್ಯಾಶಂಕರ್**

"ಸಮೂಹ ಸಂಸ್ಕೃತಿಯು ಕಳಪೆತನ ಮತ್ತು ದಡ್ಡತನಗಳನ್ನು ಹುಟ್ಟುಹಾಕುತ್ತದೆ; ಸಾಂಪ್ರದಾಯಿಕ ನೈತಿಕತೆ ಮತ್ತು ಬೌದ್ಧಿಕ ಅವಲೋಕನಗಳನ್ನು ಈಗ ಜನತಾ ಅಭಿಪ್ರಾಯವೆನ್ನುವುದು ನುಂಗಿ ಹಾಕಿದೆ. ಒಂದಷ್ಟು ಭೌತಿಕ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರೆ ಸಾಕು, ಅದರಿಂದ ತೃಪ್ತರಾಗಿ ಸಮುದಾಯಗಳು ನಿಶ್ಚೇಷ್ಟ ಹಾಗೂ ಅಶಿಸ್ತಿನ ಕೂಪಗಳಾಗುತ್ತವೆ. ಆಗ ಸರ್ವಾಧಿಕಾರಿ ನಾಯಕರು ಅವರನ್ನು ಗೊಂಬೆಗಳಂತೆ ಹೇಗೆ ಬೇಕೋ ಹಾಗೆ ಆಡಿಸಿಬಿಡಬಹುದು. ಇದನ್ನು ತಪ್ಪಿಸಬೇಕಾದರೆ ಸಮಾಜದಲ್ಲಿ ಮೌಲ್ಯ ಮತ್ತು ವ್ಯವಸ್ಥೆ ಸಕ್ರಮವಾಗಿ ಬೆಳೆಯುವಂತೆ ಬೌದ್ಧಿಕ ಮತ್ತು ನೈತಿಕ ಶ್ರೀಮಂತಿಕೆಗಳನ್ನು ವಿವೇಕದಿಂದ ಸಮುದಾಯಗಳಿಗೆ ನೀಡಿ ಮಾರ್ಗದರ್ಶನ ಮಾಡಬೇಕು."

ಸ್ಪಾನಿಷ್ ಚಿಂತಕ ಆರ್ಟೆಗಾ ಗ್ಯಾಸೆ ೧೯೨೯ರಲ್ಲಿ ಈ ಮಾತುಗಳನ್ನು ಹೇಳಿದಾಗ ಚಲನಚಿತ್ರವೂ ಸೇರಿದಂತೆ ಸಮೂಹ ಮಾಧ್ಯಮಗಳು ಈಗಿನಷ್ಟು ಪ್ರಭಾವಶಾಲಿಯಾಗಿರಲಿಲ್ಲ. ಹಾಗೆಯೇ, ಸಮೂಹ ಮಾಧ್ಯಮಗಳನ್ನು ಪೋಷಿಸುವ, ಆರಾಧಿಸುವ ಮಧ್ಯಮವರ್ಗವೂ ಕೂಡ ಸಂಖ್ಯೆಯ ದೃಷ್ಟಿಯಿಂದಲಾಗಲಿ, ರಾಜಕೀಯ ಬಲದ ದೃಷ್ಟಿಯಿಂದಲಾಗಲಿ ಶಕ್ತಿಶಾಲಿಯಾಗಿರಲಿಲ್ಲ. ೭೫ ವರ್ಷಗಳ ಬದಲಾವಣೆಯ, ಬೆಳವಣಿಗೆಯ ವಿವಿಧ ಹಂತಗಳಲ್ಲಿ ಗ್ಯಾಸೆಯ ಮಾತುಗಳನ್ನು ಸುಳ್ಳು ಮಾಡಬಹುದಾದ ಅವಕಾಶವಿದ್ದರೂ ಸಹ ಎಲ್ಲ ಸಮೂಹ ಮಾಧ್ಯಮಗಳು ಕಳಪೆತನ ಮತ್ತು ಅಜ್ಞಾನವನ್ನು ಪೋಷಿಸುವ, ಬೆಳೆಸುವ ಸ್ಥಿತಿಯಲ್ಲೇ ಉಳಿದಿರುವುದು ನಾಗರಿಕತೆಯ ದುರಂತ. ಚಲನಚಿತ್ರ, ದೂರದರ್ಶನ ಸಾಂಸ್ಕೃತಿಕ ಮಾಧ್ಯಮಗಳಾಗಿ ಬೆಳೆಯುವ ಬದಲು ಬೃಹತ್ ಕೈಗಾರಿಕೋದ್ಯಮಗಳಾಗಿ ಬೆಳೆದಿರುವುದು ಎಲ್ಲ ಸಾಂಸ್ಕೃತಿಕ ಪರಿಕರಗಳಿಗೂ ಅತೀವ ಹಾನಿಯನ್ನುಂಟುಮಾಡಿದೆ. ಬದುಕಿಗಿಂತ ಥಳುಕು, ತಂತ್ರಕ್ಕಿಂತ ತಾಂತ್ರಿಕ, ವಸ್ತುಗಿಂತ ವಿನ್ಯಾಸ ಇಂದಿನ ಸಮೂಹ ಮಾಧ್ಯಮಗಳ ಮೂಲಮಂತ್ರ. ಜನರ ನಿತ್ಯದ ಜೀವನದ ಮೇಲೆ, ಮನಸ್ಸಿನ ಮೇಲೆ ಅವು ಬೀರಿರುವ ತೀವ್ರ ಪರಿಣಾಮಗಳಿಂದಾಗಿ, ಜೀವನಶೈಲಿ ಮಾತ್ರವಲ್ಲ, ಶಿಕ್ಷಣ, ಜ್ಞಾನದ ಅನ್ವೇಷಣೆ, ಅಧ್ಯಾತ್ಮದ ಹುಡುಕಾಟ, ಮನುಷ್ಯ-ಮನುಷ್ಯ ಸಂಬಂಧಗಳು ಎಲ್ಲವೂ ನಕಾರಾತ್ಮಕವಾಗಿ ಪಲ್ಲಟಗೊಂಡಿರುವುದನ್ನು ನಾವು ಕಾಣಬಹುದು. ಪಾರಂಪರಿಕ ದೈವಿಕ ಕಲ್ಪನೆಗಳನ್ನು ಮೀರಿದ ನಾಯಕ-ನಾಯಕಿಯರು, ರಾಕ್ಷಸರನ್ನು ಮೀರಿಸುವ ದುಷ್ಟ ಪಾತ್ರಗಳು, ನರಕದ ಕಲ್ಪನೆಯನ್ನು ಕುಬ್ಜಗೊಳಿಸುವ ಕ್ರೌರ್ಯ ಇಂದಿನ ಸಮೂಹ ಮಾಧ್ಯಮಗಳ ಸರಕಾಗಿರುವಾಗ, ಸಾಮಾನ್ಯ ಮನುಷ್ಯರನ್ನೊಳಗೊಂಡ, ಆರೋಗ್ಯಕರ ಮನುಷ್ಯ ಸಂಬಂಧಗಳನ್ನು ಕುರಿತಾದ, ಪರಿಸರ, ನಿಸರ್ಗದ ಬಗ್ಗೆ ಕಾಳಜಿ ತೋರುವ ವಿಷಯಗಳನ್ನು ಶೋಧಿಸಬಲ್ಲ ಸೃಜನಶೀಲ ಚಲನಚಿತ್ರ ನಿರ್ದೇಶಕ/ನಿರ್ಮಾಪಕರುಗಳು ಬಹಳ ವಿರಳ. ಚಲನಚಿತ್ರ ಕೇವಲ ಮಾರಾಟದ ವಸ್ತುವಲ್ಲ, ಅವಕ್ಕೂ ಕಲಾತ್ಮಕ ಸಾಧ್ಯತೆಗಳಿವೆ, ಸಾಮಾಜಿಕ ಜವಾಬ್ದಾರಿಗಳಿವೆ ಎಂದು ನಂಬಿರುವವರಂತೂ ಇನ್ನೂ ವಿರಳ. ಇಂತಹ ಸನ್ನಿವೇಶದಲ್ಲಿ ಕಳೆದ ೩೦ ವರ್ಷಗಳಿಂದಲೂ ಈ ನಂಬಿಕೆಗೆ ನಿಷ್ಠರಾಗಿ, ಬದ್ಧರಾಗಿ, ವೈಯಕ್ತಿಕ ನೆಲೆಯಲ್ಲೂ ಇಂಟೆಗ್ರಿಟಿಯನ್ನು ಉಳಿಸಿಕೊಂಡಿರುವ ನಿರ್ದೇಶಕರಲ್ಲಿ ಕನ್ನಡದ ಗಿರೀಶ್ ಕಾಸರವಳ್ಳಿಯವರು ಪ್ರಮುಖರು.

ಕಳೆದ ಮೂರು ದಶಕಗಳಿಂದ ಗಿರೀಶ್ ಹತ್ತಾರು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಹಲವಾರು ಪ್ರಾದೇಶಿಕ, ರಾಷ್ಟ್ರೀಯ, ಅಂತರ ರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಆದರೆ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯ ಚರ್ಚೆಗಳ ಕೇಂದ್ರದಲ್ಲಿ ಇವರ ಕೃತಿಗಳ ಜಿಜ್ಞಾಸೆ ಅಷ್ಟಾಗಿ ಕಾಣಬರುವುದಿಲ್ಲ. ನಮ್ಮ ಸಂಸ್ಕೃತಿಯಲ್ಲಿ ಚಲನಚಿತ್ರದ ಬಗ್ಗೆ ಇರುವ ಪೂರ್ವಗ್ರಹಗಳು ಇದಕ್ಕೆ ಮುಖ್ಯ ಕಾರಣವಿರಬಹುದು. ಹಾಗೆಯೇ, ಚಲನಚಿತ್ರಗಳು ಜನಸಮೂಹದ ಮೇಲೆ ಬೀರುವ ತೀವ್ರ ಭಾವುಕ ಪರಿಣಾಮದಿಂದ ಅವುಗಳನ್ನು ಕಲಾತ್ಮಕ ಚೌಕಟ್ಟಿನಲ್ಲಿ ಗ್ರಹಿಸಲು ಬೌದ್ಧಿಕ ವರ್ಗಗಳಿಗೂ ಸಾಧ್ಯವಾಗದೇ ಉಳಿದಿರುವ ಸ್ಥಿತಿಯೂ ಕಾರಣವಿರಬಹುದು. ಗಿರೀಶ್ ಕನ್ನಡದ ಪ್ರಮುಖ, ಸದಭಿರುಚಿಯ ಕಲಾತ್ಮಕ ಅಭಿವ್ಯಕ್ತಿಯ, ಒಳ್ಳೆಯ ನಿರ್ದೇಶಕರು ಅಂತ ಒಪ್ಪಿಕೊಂಡಾಗಲೂ ಅವರು ಪಡೆದಿರುವ ಪ್ರಶಸ್ತಿಗಳ ಬಗ್ಗೆ ಹೆಮ್ಮೆಪಡುವಾಗಲೂ ಸಹ ಬಹಳಷ್ಟು ಅವರ ಚಿತ್ರಗಳು ಕರ್ನಾಟಕದಲ್ಲಿ ಪ್ರದರ್ಶಿತಗೊಂಡಿಲ್ಲವೆಂಬುದು ಕೇವಲ ಆರ್ಥಿಕ ಕಾರಣಗಳಿಗಾಗಿ ಎಂದು ನಿರ್ಧರಿಸುವುದು ಸರಿಯಲ್ಲವೇನೋ. ಕೆಲವು ಸಾಂಸ್ಕೃತಿಕ ಕಾರಣಗಳ ಜೊತೆಗೆ ಚಿತ್ರಗಳ ಮಿತಿಯೂ ಇರಬಹುದೇನೋ ಎಂಬುದನ್ನು ಪರಿಶೀಲಿಸುವ ಅಗತ್ಯ ಇದೆ.

ಗಿರೀಶರ ಹೊಸಚಿತ್ರ 'ಹಸೀನಾ' ಬಿಡುಗಡೆಯಾಗಿದೆ. ಬಿಡುಗಡೆ ಅನ್ನುವುದಕ್ಕಿಂತ ಸಾರ್ವಜನಿಕವಾಗಿ ಪ್ರದರ್ಶಿತವಾಗುತ್ತಿದೆ ಎನ್ನುವುದು ಸೂಕ್ತ. ಯಾಕೆಂದರೆ ಗಿರೀಶರ ಚಿತ್ರಗಳು ಪ್ರಶಸ್ತಿಗಳ



ಹೊರೆಯಿಂದ, ಕಲಾತ್ಮಕ, ಗಂಭೀರ, ಮನರಂಜನೆಯ ವಿರೋಧೀ ಎಂಬ ಹಣೆಪಟ್ಟಿಗಳಿಂದ ಬಿಡುಗಡೆಯನ್ನು ಪಡೆಯಬೇಕಾಗಿದೆ. ಅವರ ಚಿತ್ರಗಳು ಹೆಚ್ಚು ಹೆಚ್ಚು ವೇದಿಕೆಗಳಲ್ಲಿ ಚಿತ್ರಮಂದಿರಗಳಲ್ಲಿ ಪ್ರದರ್ಶಿತಗೊಂಡರೆ ಒಂದಲ್ಲ ಒಂದು ದಿನ ಜನಮಾನಸದಲ್ಲಿನ ಪೂರ್ವಗ್ರಹಗಳಿಂದ ಬಿಡುಗಡೆ ಪಡೆದು ನಿಜವಾದ ಅರ್ಥದಲ್ಲಿ ಬಿಡುಗಡೆಯಾಗಬಹುದೇನೋ. ಏಕೆ ಪ್ರಶಸ್ತಿಗಳೂ 'ಹೊರೆ'ಯಾಗಿವೆ ಎಂದರೆ, ಇತ್ತೀಚಿನ ದಿನಗಳಲ್ಲಿ ಪ್ರಶಸ್ತಿಗಳು, ಅದರಲ್ಲೂ ಚಲನಚಿತ್ರದ ಸಂದರ್ಭದಲ್ಲಿ ಪ್ರಶಸ್ತಿಗಳು ಒಂದು ವಿಪರ್ಯಾಸದ ಸನ್ನಿವೇಶವನ್ನು ಸೃಷ್ಟಿಸಿವೆ. ಸಾಮಾನ್ಯವಾಗಿ ಮಿಕ್ಕೆಲ್ಲ ಸೃಜನಶೀಲ ಚಟುವಟಿಕೆಗಳಲ್ಲಿ ಒಂದು ಕೃತಿ ತಾನು ಹುಟ್ಟಿದ ಸಾಂಸ್ಕೃತಿಕ ಲೋಕದಲ್ಲಿ ತನ್ನ ಅಸ್ತಿತ್ವವನ್ನು ಪ್ರಚುರಪಡಿಸಿ, ಚರ್ಚೆಯನ್ನು ಸಾಧ್ಯವಾದಲ್ಲಿ ಹುಟ್ಟುಹಾಕಿ ಬೆಳೆಸಿ ಕಾಲಾಂತರದಲ್ಲಿ ಅದು ಗಟ್ಟಿಯಾಗಿ ಉಳಿದರೆ ಪ್ರಶಸ್ತಿಗೆ ಅರ್ಹವಾಗುತ್ತದೆ. ಆದರೆ ಚಲನಚಿತ್ರ ಎಷ್ಟೋ ಬಾರಿ ತನ್ನ ಸಾಂಸ್ಕೃತಿಕ ಜಗತ್ತಿನಲ್ಲೇ ನೆಲೆಗೊಳ್ಳದೆ ಕೆಲವೇ ತಜ್ಞರ ಪ್ರಮಾಣದ ಮೇಲೆ ಶ್ರೇಷ್ಠತೆಯ 'ಹೊರೆ' ಹೊತ್ತುಕೊಳ್ಳಬೇಕಾಗುತ್ತದೆ. ಇತ್ತೀಚೆಗೆ ಪ್ರಶಸ್ತಿಗಳನ್ನು ಸಾರ್ವಜನಿಕರ ಅಭಿಪ್ರಾಯದ ಮೇರೆಗೆ ಮತಗಣನೆಯ ಆಧಾರದ ಮೇಲೆ ನಿರ್ಧರಿಸುತ್ತಿರುವುದು ಇನ್ನೂ ದೊಡ್ಡ ವಿಪರ್ಯಾಸದ ಸಂಗತಿ. ಗಿರೀಶ್‌ರ ಹಲವು ಚಿತ್ರಗಳ ಪ್ರಮುಖ ಕಾಳಜಿ, ನಮ್ಮ ಸಮಾಜದಲ್ಲಿನ ಮಹಿಳೆಯ ಸ್ಥಿತಿಯನ್ನು ಸೂಕ್ಷ್ಮ ನೆಲೆಗಳಲ್ಲಿ ಸಾದರಪಡಿಸುವಂತಹುದು. 'ಘಟಶ್ರಾದ್ಧ'ದ ಯಮುನಕ್ಕನಿಂದ ಆರಂಭಿಸಿ 'ಹಸೀನಾ'ಳವರೆಗೆ ಗಿರೀಶ್ ಬೇರೆ ಬೇರೆ ಸಮುದಾಯಗಳಲ್ಲಿ ಬೇರೆ ಬೇರೆ ಆರ್ಥಿಕ, ಸಾಮಾಜಿಕ

ಹಿನ್ನೆಲೆಯಲ್ಲಿ ಸ್ತ್ರೀ ಪಾತ್ರಗಳನ್ನು ಇಟ್ಟು ಅವರ 'ಸ್ಥಿತಿ'ಯನ್ನು, ಅದರ ಮೂಲಕ ವಾಸ್ತವದಲ್ಲಿ ಹೆಣ್ಣಿನ ಬಗ್ಗೆ ಪುರುಷ ಪ್ರಧಾನ ಸಮಾಜದಲ್ಲಿರುವ ಧೋರಣೆಗಳನ್ನು ಸೂಚಿಸುವುದಾಗಿದೆ. ಬಹುಪಾಲು ಚಿತ್ರಗಳಲ್ಲಿ ಅವರ ಈ ಪ್ರಯತ್ನ ಬಹಳ ಯಶಸ್ವಿಯಾಗಿದೆಯೆಂದೇ ಹೇಳಬೇಕು. ಇದು ಅವರ ಕುಶಲತೆಗೆ ಸಂದಿರುವ ಯಶಸ್ಸು. ಬಹುಶಃ ಭಾರತದಲ್ಲೇ ಗಿರೀಶರಷ್ಟು ಸಮರ್ಪಕವಾಗಿ ಚಿತ್ರ ನಿರ್ಮಿತಿಯ ಕೌಶಲ್ಯವನ್ನು ಪಡೆದಿರುವವರು ಅಪರೂಪ. ಮಾಧ್ಯಮದ ಬಗ್ಗೆ ಅವರಿಗಿರುವ ಅಪರಾಧವಾದ ಅಕೆಡೆಮಿಕ್ ತಿಳುವಳಿಕೆ, ತರಬೇತಿ, ಕನ್ನಡ ಸಾಹಿತ್ಯದ ಬಗೆಗಿನ ಪ್ರೀತಿ ಮತ್ತು ವಿಮರ್ಶಾತ್ಮಕ ನಿಲುವುಗಳು ಅವರ ಕುಶಲತೆಯನ್ನು ಹೆಚ್ಚಿಸಿದೆ. ಆದರೆ ಜಾಗತಿಕ ಮಟ್ಟದ ಬೌದ್ಧಿಕ ಲೋಕದ ಸಮಕಾಲೀನ ಜಿಜ್ಞಾಸೆಗಳು ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಚರ್ಚೆಯ ಭಾಗವಾಗದೇ ಇರುವುದು ಅವರ ಚಿತ್ರಗಳಿಗೆ ಒಂದು ಸೀಮಿತ ಚೌಕಟ್ಟನ್ನು ಒದಗಿಸಿದೆ. 'ಹಸೀನಾ' ಚಿತ್ರವನ್ನು ಹಿನ್ನೆಲೆಯಾಗಿಟ್ಟುಕೊಂಡು ಈ ವಿಷಯವನ್ನು ಇನ್ನೂ ಹೆಚ್ಚು ಸ್ಥೂಲವಾಗಿ ಪ್ರಸ್ತಾಪಿಸಬಹುದು.

'ಹಸೀನಾ' ಮುಸ್ಲಿಂ ಸಮಾಜದ ಹಿನ್ನೆಲೆಯಲ್ಲಿ ಮಹಿಳೆಯ ಸ್ಥಿತಿಯನ್ನು ಅದರ ಶೋಷಿತ ನೆಲೆಗಳಲ್ಲಿ ಅನಾವರಣಗೊಳಿಸುವ – ನಿರ್ದೇಶಕನ ಆಶಯವಾಗಿ ಆ ಸ್ಥಿತಿಯಿಂದ ಬಿಡುಗಡೆ ಪಡೆಯಲು ಧರ್ಮನಿರಪೇಕ್ಷ ಆಯುಧವಾದ 'ಸತ್ಯಾಗ್ರಹ'ವನ್ನು ಪ್ರತಿಭಟನೆಯ ಅಸ್ತ್ರವಾಗಿ ಬಳಸುವ – ಒಂದು ಪ್ರಸಂಗ. ಇಲ್ಲಿನ 'ಸತ್ಯ' ಮೂಲಭೂತ ವಾದದ್ದು. ಧಾರ್ಮಿಕ ಪಂಥಗಳ ಸಾಪೇಕ್ಷ ಸತ್ಯವಲ್ಲ. ಆದ್ದರಿಂದಲೇ ಇಲ್ಲಿನ ಮುಖ್ಯ ಪಾತ್ರ ಮುಸ್ಲಿಂ ಮಹಿಳೆಯಾದರೂ 'ಹಸೀನಾ' ಮುಸ್ಲಿಂ ಹೆಣ್ಣಿಗೆ ಮಾತ್ರ ಪ್ರತೀಕವಲ್ಲ, ಎಲ್ಲ ಮಹಿಳೆಯರ ಪ್ರತೀಕ. ಹಾಗೆಯೇ ಇಲ್ಲಿನ ಪುರುಷ ಪಾತ್ರಗಳಿಗೂ ಸಹ ಧರ್ಮದ ಹಂಗೇನೂ ಇಲ್ಲ. ಹಸೀನಾಳ ಗಂಡ, ಧರ್ಮಗುರುಗಳು ಎಲ್ಲರೂ ಪುರುಷ ಪ್ರಧಾನ ಸಮಾಜದ ಸೂತ್ರಗಳೇ. ಈ ಚಿತ್ರಕ್ಕೆ ಮುಸ್ಲಿಂ ಸಮಾಜ ಒಂದು ವಿವರ ಅಷ್ಟೇ. ಆ ಕಾರಣಕ್ಕಾಗಿಯೇ ಮುಸ್ಲಿಂ ಸಮಾಜವನ್ನು ಹಿನ್ನೆಲೆಯಾಗಿ ಆಯ್ಕೆ ಮಾಡಿಕೊಂಡಿರುವ ಗಿರೀಶರ ಉದ್ದೇಶವಾಗಲೀ, ವಿಶೇಷತೆಯಾಗಲೀ ಸ್ಪಷ್ಟವಾಗುವುದಿಲ್ಲ. ಈ ಹೊತ್ತು ಜಗತ್ತಿನಾದ್ಯಂತ ವಿಸ್ತೃತವಾಗಿ ಸ್ಫೋಟಗೊಂಡಿರುವ ಮುಸ್ಲಿಂ-ಮುಸ್ಲಿಂಯೇತರ ನಾಗರಿಕತೆಗಳ, ಇಸ್ಲಾಂ ಧರ್ಮ – ಇತರೆ ಧರ್ಮಗಳ ಸಂಘರ್ಷಗಳ ಹಿನ್ನೆಲೆಯಲ್ಲಿ ಮುಸ್ಲಿಂ ಸಮಾಜದ ಒಳ ವಿವರಗಳಿಗಷ್ಟೆ, ಧಾರ್ಮಿಕ ಸಾಂಸ್ಕೃತಿಕ ರಾಜಕೀಯಗಳಿಗಷ್ಟೇ ಒಂದು ಕಲಾಕೃತಿ ಸೀಮಿತಗೊಂಡರೆ ಅದು ಕೇವಲ ಉಪಪಠ್ಯವಾಗೇ ಉಳಿಯು ತ್ತದೆಯೇ ಹೊರತು ಮುಖ್ಯ ಪಠ್ಯವಾಗುವುದಿಲ್ಲ. ಸಂಸ್ಕೃತಿಯ ಕೇಂದ್ರ ಜಿಜ್ಞಾಸೆಗಳ ಭಾಗವಾಗುವುದಿಲ್ಲ. ಹಿನ್ನೋಟದಲ್ಲಿ ಗಮನಿಸಿದಾಗ ಗಿರೀಶರ ಹಿಂದಿನ ಚಿತ್ರಗಳಲ್ಲೂ ಈ ರೀತಿಯ ಉಪಪಠ್ಯಕ್ರಮವನ್ನು ಗುರುತಿಸಬಹುದು.



ಗಿರೀಶರು ಹಲವಾರು ಪತ್ರಿಕಾ ಸಂದರ್ಶನಗಳಲ್ಲಿ, ಮಾತುಕತೆಗಳಲ್ಲಿ ತಮ್ಮ ಸೃಜನ ಶೀಲತೆಯ ನಿಲುವುಗಳನ್ನು ಸ್ಪಷ್ಟಪಡಿಸಿದ್ದಾರೆ. ಅದರಲ್ಲಿ ಒಂದು ಅವರ 'ವಸ್ತುನಿಷ್ಠ' ನಿಲುವು. ಅವರ ಪ್ರಕಾರ ಯಾವುದೇ ವಸ್ತುವನ್ನಾದರೂ ವಿವಿಧ ದೃಷ್ಟಿಕೋನಗಳಿಂದ ಅರ್ಥೈಸುವುದು ಅವರ ಕ್ರಮ. ಹಾಗಾಗಿಯೇ ಅವರ ಎಲ್ಲ ಪಾತ್ರಗಳು ಸಮಾಜದ ಶೋಷಿತರೂ ಹೌದು, ಶೋಷಕ ಸಮಾಜದ ಭಾಗವೂ ಹೌದು. ತಾನು ಯಾರ ಪರವೂ ಅಲ್ಲ, ವಿರೋಧಿಯೂ ಅಲ್ಲ. ಎಲ್ಲರೂ ಸಮಾಜದ ಕಾಲದ ನಿರಂತರ ತುಳಿತಕ್ಕೆ ಒಳಗಾ ದವರೇ ಎನ್ನುವ ಧೋರಣೆ ರಾಜಕೀಯ ಸರಿದಾರಿಯೆಂದು ಗಿರೀಶರು ಕಂಡುಕೊಂಡಿರುವ ಮಾರ್ಗ ಇರಬಹುದು. ಇದರಿಂದಾಗಿಯೇ, ಪ್ರಜ್ಞಾವಂತರ, ಪ್ರಗತಿಶೀಲ ಮಹಿಳಾ ಸಂಘಟನೆಗಳ ಮೆಚ್ಚಿಗೆಯನ್ನು 'ಹಸೀನಾ' ಮತ್ತು ಇತರ ಚಿತ್ರಗಳು ಪಡೆದುಕೊಂಡಿವೆ. ಆದರೆ ಕೆಲವೊಮ್ಮೆ ಈ ಧೋರಣೆ ನಕಾರಾತ್ಮಕ ಪ್ರತಿಕ್ರಿಯೆಗಳಿಗೂ ಕಾರಣವಾಗಿದೆ. ಈ ವರ್ಷ 'ಹಸೀನಾ' ಚಿತ್ರಕ್ಕೆ ಬಂದಿರುವ ರಾಷ್ಟ್ರೀಯ ಪ್ರಶಸ್ತಿ 'ಉತ್ತಮ ಕುಟುಂಬ ಕಲ್ಯಾಣ ಚಿತ್ರ' ಎನ್ನುವ ಶೀರ್ಷಿಕೆಯಡಿ. ಗಿರೀಶರ ಆಶಯಗಳಿಗೆ ತದ್ವಿರುದ್ಧವಾದ ಪ್ರತಿಕ್ರಿಯೆ ಇದಾಗಿದೆ. ದೃಷ್ಟಿಕೋನಗಳ 'ವೈವಿಧ್ಯತೆ', 'ವಸ್ತುನಿಷ್ಠತೆ'ಯಿಂದ ಆಗಿರಬಹುದಾದ ಅನಾಹುತ ಇದು. ಕುಟುಂಬ ಯೋಜನೆಯ ಪ್ರಚಾರಕ್ಕೆ ಸೂಕ್ತ ಎಂದು ಗುರುತಿಸಿದ ತೀರ್ಪುಗಾರರ, ಮುಸ್ಲಿಂ ಸಮಾಜದೊಳಗಿನ ಮೂಲಭೂತವಾದಿ ವರ್ಗಕ್ಕೆ ಮಾತ್ರ ಸಂವಾದಿಯಾಗಿರುವ ಮತಾಂಧ ಹಿಂದುಗಳ ಪೂರ್ವಾಗ್ರಹಗಳಿಗೆ, ತಳಮೇಲು ಚಿಂತನೆ ಗಳಿಗೆ ನಿರುದ್ದಿಶ್ಯವಾಗಿ ಗ್ರಾಸ ಒದಗಿಸಿದಂತೆ ಕಾಣುತ್ತದೆ ಈ ಚಿತ್ರ. ಇಂತಹ ಸಂದರ್ಭದಲ್ಲೇ ಗಿರೀಶ್ ತಮ್ಮ ಚಿತ್ರಗಳಲ್ಲಿ ಇನ್ನೂ ಹೆಚ್ಚು ಖಚಿತವಾದ ನಿಲುವನ್ನು ತೆಗೆದುಕೊಳ್ಳಬೇಕು ಎಂಬುದರ ಒತ್ತಾಸೆಯಾಗುವುದು. ಯಾವುದೇ ಕಲಾಕೃತಿ ಬಹುಮುಖೀ ಅರ್ಥವನ್ನು ಕೊಡಬೇಕೇ ಹೊರತು ಅನುಕೂಲಕರ ಅರ್ಥಗಳನ್ನು ಹುಟ್ಟುಹಾಕಬಾರದು. ಈ ಹಿನ್ನೆಲೆಯಲ್ಲಿ ಈಗಲ್‌ಟನ್ ಎಂಬ ಸಾಹಿತ್ಯದ ಚಿಂತಕ ನಮ್ಮ ಕಾಲದಲ್ಲಿ ಹೆಚ್ಚು ಮೌಲಿಕ ವಾದದ್ದೆಂದು ಗುರುತಿಸಲ್ಪಟ್ಟಿರುವ ವೈವಿಧ್ಯತೆ (ಬಹುತ್ವ) ಯನ್ನು ಪ್ರಶ್ನೆ ಮಾಡುವುದು.

'ಹಸೀನಾ' ವಸ್ತುವಿನ ದೃಷ್ಟಿಯಿಂದ ಗಿರೀಶ್‌ಗೆ ಹೊಸದಲ್ಲವಾದರೂ ಚಿತ್ರ ನಿರ್ಮಾಣದ ಇತರ ಅಂಶಗಳಲ್ಲಿ ಇನ್ನೂ ಪ್ರಯೋಗಾತ್ಮಕವಾಗಿಯೇ ಇದೆ. ಆದ್ದರಿಂದಲೆ ಕೆಲವು ಕಣ್ಣಿಗೆ ರಾಚುವಂತಹ ತೊಡಕುಗಳಿವೆ. ವಸ್ತ್ರವಿನ್ಯಾಸ ಮತ್ತು ಇತರೆ ಭೌತಿಕ ಪರಿಕರಗಳ ಬಗ್ಗೆ ಸೂಕ್ತ ಆಸಕ್ತಿ ತೋರಿಸುವ ಗಿರೀಶ್ ಚಿತ್ರ ಸಾಹಿತ್ಯ ಮತ್ತು ಸಂಭಾಷಣೆಯಲ್ಲಿ ಬಹಳ ಅನನ್ವಿತವಾಗಿದ್ದಾರೆ. ಒಂದು ಉತ್ತಮ ಚಿತ್ರದಲ್ಲಿ ಸಾಹಿತ್ಯ-ಸಂಭಾಷಣೆ-ಭಾಷೆ ಸ್ವಾಯತ್ತ ಸ್ಥಿತಿಯನ್ನೂ ತಲುಪಬಲ್ಲದು ಎಂಬ ವಿಷಯ ಗಿರೀಶರಿಗೆ ತಿಳಿಯದ ವಿಷಯವೇನಲ್ಲ. ಹಾಗೆಯೇ ಸಂಗೀತ, ಸಂಕಲನ, ನಟನೆ ಮುಂತಾದ ಅಂಶಗಳ ಬಗ್ಗೆಯೂ ಗಿರೀಶ್ ಅಷ್ಟಾಗಿ ಗಮನ ಹರಿಸಿದಂತಿಲ್ಲ. ಮುಖ್ಯ ಸ್ತ್ರೀ ಪಾತ್ರಗಳಿಗೆ ತಮ್ಮ ದೃಷ್ಟಿಯನ್ನೆಲ್ಲ ಕೇಂದ್ರೀಕರಿಸುವುದರಿಂದ ಮಿಕ್ಕ ಹಲವು ಪಾತ್ರಗಳು ಹ್ರಾಸಚಿತ್ರ ಗಳಾಗಿ ಪ್ರತಿಮೆಗಳಾಗಿ ಕಾಣುವ ಸಾಧ್ಯತೆಯಿದೆ. ಚಿತ್ರದುದ್ದಕ್ಕೂ ಹಸೀನಾ ಮತ್ತು ಇತರ ಸ್ತ್ರೀ ಪಾತ್ರಗಳು ರಕ್ತ ಮಾಂಸದ ಜೀವಂತ ಪಾತ್ರಗಳಾಗಿ ಕಂಡರೆ ಬಹುಪಾಲು ಪುರುಷ ಪಾತ್ರಗಳು ಶೋಷಕ ಸಮಾಜದ ಜೀವರಹಿತ ಪ್ರತಿಮೆಗಳಾಗಿ ಕಾಣುವುದು ಇದಕ್ಕೆ ಉದಾಹರಣೆ.

ಈ ಕಿರುಟಿಪ್ಪಣಿ ಕೇವಲ 'ಹಸೀನಾ' ಚಿತ್ರಕ್ಕೆ ಸೀಮಿತವಾಗಿಲ್ಲ. ನಮ್ಮ ಸಮಕಾಲೀನ ಸಂಸ್ಕೃತಿಯ ಸಂದರ್ಭದಲ್ಲಿ ಗಿರೀಶ್ ಕಾಸರವಳ್ಳಿಯಂತಹ ಸೃಜನಶೀಲ ನಿರ್ದೇಶಕರ ಕೊಡುಗೆ ಮತ್ತು ಅಗತ್ಯವನ್ನು ಗುರುತಿಸುವುದು ಮತ್ತು ಅವರ ಚಿತ್ರಗಳು ಉಪ ಪಠ್ಯವಾಗೇ ಉಳಿಯದೆ ಮುಖ್ಯ ಪಠ್ಯವಾಗುವ ಆಶಯವನ್ನು ಸೂಚಿಸುವುದು. ತಮ್ಮ ವೃತ್ತಿ ಜೀವನದ ಪ್ರಾರಂಭದ ದಿನಗಳಿಂದಲೂ ಸಾಮಾಜಿಕ ವೈಷಮ್ಯಗಳನ್ನು, ಅಸಮಾನತೆ ಗಳನ್ನು ಪ್ರಬುದ್ಧ ವಿಮರ್ಶಾ ದೃಷ್ಟಿಯಿಂದ ನೋಡುವ ಕ್ರಮವನ್ನು ಗಿರೀಶ್ ರೂಢಿಸಿ ಕೊಂಡಿದ್ದಾರೆ. ಅದನ್ನು ಮೀರಿ ಒಟ್ಟು ಬದುಕನ್ನು ಒಂದು ವಿಶಾಲ ಚೌಕಟ್ಟಿನಲ್ಲಿ ನೋಡುವ ಅಗತ್ಯವಿದೆ. ಆಗ ಮಾತ್ರವೇ ಅವರ ಚಿತ್ರಗಳಿಗೆ ಸ್ವಾಯತ್ತ ಅಭಿವ್ಯಕ್ತಿಯ ಸ್ವರೂಪ ಸಾಧ್ಯವಾಗಬಲ್ಲದು. ಇಲ್ಲದಿದ್ದರೆ ಅವು ಕೇವಲ ವಾಣಿಜ್ಯ ಕಾಳಜಿಗಳ ಸಮೂಹ ಮಾಧ್ಯಮಗಳಿಗೆ ಪ್ರತಿವಾದಿಯಾಗಿ ಮಾತ್ರ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವಂತಾಗುತ್ತದೆ.


ಎನ್. ವಿದ್ಯಾಶಂಕರ್

ಕೃಷ್ಣಾ ಗ್ಲೇಡ್, ೧೦೫/೧, ಶೇಷಾದ್ರಿಪುರಂ ಮುಖ್ಯರಸ್ತೆ, ಬೆಂಗಳೂರು - ೫೬೦ ೦೨೦

# ಇಂಗ್ಲಿಷ್ ಬೋಧನೆಯಲ್ಲಿ ಇಬ್ಬಂದಿತನ

ಡಾ|| ಎನ್. ಸುಕುಮಾರ ಗೌಡ

ಸರಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ದ್ವಿತೀಯ ಭಾಷೆಯಾಗಿ ಇಂಗ್ಲಿಷನ್ನು ಕಲಿಸುವುದೆಂದು ಸರ್ಕಾರ ನಿರ್ಧರಿಸಿ ನಾಲ್ಕು ವರ್ಷಗಳು ಕಳೆದುವು. ಈ ವಿಷಯಕ್ಕೆ ಸಂಬಂಧಿಸಿ ಅಲ್ಲಲ್ಲಿ ಗೋಷ್ಠಿಗಳೂ, ಮಾಧ್ಯಮಗಳ ಮೂಲಕ ವಿಚಾರ ಪ್ರಚಾರಗಳು ಸಾಕಷ್ಟು ನಡೆದಿವೆ.

ಪರಿಸ್ಥಿತಿ ಹೀಗಿರುವಾಗ ಗೊಂದಲಕ್ಕೀಡಾದ ನಮ್ಮ ಸರಕಾರ ಏನೂ ತೀರ್ಮಾನವನ್ನು ಕೈಗೊಳ್ಳದೆ, ''ಇದರ ಕುರಿತಾಗಿ ನಮ್ಮ ಬುದ್ಧಿಜೀವಿಗಳ ಸಲಹೆಯನ್ನು ಪಡೆದು ಕೇಬಿನೆಟ್ ನಿರ್ಧಾರ ಕೈಗೊಳ್ಳುವೆವು'' ಎಂದು ಪ್ರಕಟಣೆ ಹೊರಡಿಸಿದೆ. ಇದೊಂದು ಗೊಂದಲದ ಗೋಜಲಿನ ಸಂದಿಗ್ಧ ಪರಿಸ್ಥಿತಿ. ಆದರೆ ಇದರ ಬೆನ್ನಲ್ಲಿರುವ ತಿಳಿಯದ ವಿಚಾರ ಇನ್ನೂ ಇದೆ. ಇದನ್ನು ಕುರಿತ ಅರಿವಿನ ಕೊರತೆಯಿದೆ, ತಾರ್ಕಿಕ ಆವಶ್ಯಕತೆಯಿದೆ. ಭಾಷಾ ವಿಜ್ಞಾನ, ಮನೋವಿಜ್ಞಾನ, ಮನೋಭಾಷಿಕ ವಿಜ್ಞಾನ, ಶಿಕ್ಷಣ ಶಾಸ್ತ್ರ ಇವುಗಳ ನೆಲೆಯಲ್ಲಿ ಸಮಸ್ಯೆಯನ್ನು ವಿಶ್ಲೇಷಿಸಬೇಕಾಗಿದೆ. ಭಾಷೆ ಎಂದರೇನು ? ಭಾಷೆಯ ರಚನೆ, ಕ್ರಿಯೆ-ಪ್ರಕ್ರಿಯೆಗಳೇನು ? ಮಗುವಿನ ಮನಸ್ಸು ಮತ್ತು ಭಾಷೆಗಳೊಳಗಿನ ಕಾರ್ಯ ಸಂಬಂಧವೇನು ? ಮಗು ತನ್ನ ಮಾತೃಭಾಷೆಯನ್ನು ಹೇಗೆ ಕಲಿಯುತ್ತದೆ? ಭಾಷಾ ಕಲಿಕೆಯ ಕ್ರಿಯೆ-ಪ್ರಕ್ರಿಯೆಗಳೇನು ? ಹಾಗೇ, ದ್ವಿತೀಯ ತೃತೀಯ ಭಾಷೆಗಳನ್ನು ಕಲಿಯುವ ಪ್ರಕ್ರಿಯಾತ್ಮಕ ಅಂಶಗಳೇನು ? ಸಮಸ್ಯೆಗಳೇನು ? ಈ ಎಲ್ಲಾ ವಿಚಾರಗಳ ಕುರಿತು ಸಾಕಷ್ಟು ಅರಿವಿಲ್ಲದೆ, ಸೈದ್ಧಾಂತಿಕ - ಸಂಶೋಧನಾತ್ಮಕ ತಳಹದಿಯಿಲ್ಲದೆ, ಪೂರ್ವಗ್ರಹಪೀಡಿತರಾಗಿ ಕೇವಲ ಜಾಣತನದ ವಾಗ್ಮಿತ್ವದಿಂದ ಏನನ್ನೂ ಸಾಧಿಸಲಾರೆವು. ಶಿಕ್ಷಣ ಶಾಸ್ತ್ರದ ವೈಜ್ಞಾನಿಕ ಮಾರ್ಗದಲ್ಲಿ ಈ ವಿಷಯ ಕುರಿತು ಕೆಲವು ವಿಷಯಗಳ ಚರ್ಚೆ ಈ ಲೇಖನದ ಉದ್ದೇಶ.

**ಇಂಗ್ಲಿಷ್ ಭಾರತದ ಭಾಷೆ** : ಭಾರತಕ್ಕೆ ಸ್ವಾತಂತ್ರ್ಯ ದೊರಕಿ ೫೮ ವರ್ಷಗಳಾದರೂ ''ಇಂಗ್ಲಿಷ್ ಪರಕೀಯರ ಭಾಷೆ, ಭಾರತಕ್ಕೆ ಬಡಿದ ಮೆಕಾಲೆಯ ಶಾಪ, ಪಾರತಂತ್ರ್ಯದ ಪಳೆಯುಳಿಕೆ, ಅದೊಂದು ಪಿಶಾಚಿ, ಕನ್ನಡ ಭಾಷೆ-ಸಾಹಿತ್ಯಕ್ಕೆ ಪಾರ್ಥೇನಿಯಂ ಇದ್ದಂತೆ'' ಎಂಬಿತ್ಯಾದಿ ದೋಷಾರೋಪಣೆ ಆಗಾಗ್ಗೆ ಕೇಳಿ ಬರುತ್ತದೆ. ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಇಂದಿಗೂ ಇಂಗ್ಲಿಷ್ ಭಾಷೆಯನ್ನು ಅವಹೇಳನ ಮಾಡುವುದು, ಅದಕ್ಕೆ ಹಿಡಿ ಶಾಪ ಹಾಕುವುದು ಒಂದು ಪರಿಪಾಠವಾಗಿದೆ. ಹಾಗೆ ಮಾಡಿದರೇನೇ ತಮ್ಮ ಭಾಷಾ ಅಭಿಮಾನ ವ್ಯಕ್ತವಾಗುವುದೆಂದು ನಂಬಿದವರು ಹಲವರು ಇರುವರು.

ನಮ್ಮವರೇ ಆದ, ನಮ್ಮ ದೇಶ, ಸಂಸ್ಕೃತಿಯ ಬಗ್ಗೆ ಅಪಾರ ಗೌರವಾದರ ಇದ್ದ ಸಿ. ರಾಜಗೋಪಾಲಾಚಾರಿಯವರು ''ಇಂಗ್ಲಿಷ್ ಸೈತಾನನಲ್ಲ, ಅದು ಸರಸ್ವತಿಯ ವರ, ನಮ್ಮ ಭಾಗ್ಯ'' ಎಂದು ಸ್ಪಷ್ಟವಾಗಿ ಹೇಳಿರುವರು. ಮುಂಬೈ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದ, ಭಾರತೀಯರೇ ಆದ ಎಂ. ಸಿ. ಚಾಗ್ಲಾ ಅವರು ೧೯೫೫ರಲ್ಲಿ ನೀಡಿದ ತೀರ್ಪೊಂದರಲ್ಲಿ ''ಇಂಗ್ಲಿಷ್ ಭಾರತೀಯ ಭಾಷೆ'' ಎಂದಿರುವರು. ಆ ತೀರ್ಪು ಇಂದಿಗೂ ಸಿಂಧುವೇ. ಗೋಖಲೆ, ಗಾಂಧೀಜಿ, ಟಾಗೋರ್, ಅಂಬೇಡ್ಕರ್, ಕೆ. ಎಂ. ಮುನ್ಶಿ ಮೊದಲಾದವರು, ಕನ್ನಡ ನಾಡಿನ ಕುವೆಂಪು, ಕೈಲಾಸಂ, ಮಾಸ್ತಿ, ಬಿ.ಎಂ.ಶ್ರೀ., ಡಿ.ವಿ.ಜಿ., ಕಾರಂತ, ಗೋಕಾಕರೇ ಮೊದಲಾದ ನೂರಾರು ವರಿಷ್ಠರು, ನೇತಾರರು, ದೇಶಾಭಿಮಾನಿಗಳು ''ಇಂಗ್ಲಿಷಿನ ಬಗ್ಗೆ ದ್ವೇಷ ಸಲ್ಲದು, ಇಂಗ್ಲಿಷಿನಿಂದ ನಮಗೆ, ನಮ್ಮ ಸಾಹಿತ್ಯ ಸಂಸ್ಕೃತಿಗೆ ಲಾಭವೇ ಹೊರತು ಹಾನಿಯಿಲ್ಲ'' ಎಂದು ಪದೇ ಪದೇ ಹೇಳಿರುವರು. ಆದರೆ, ಮಕ್ಕಳ ಬಾಲ್ಯ ಶಿಕ್ಷಣ ಮಾತೃಭಾಷೆಯಲ್ಲಿ ಆಗುವುದು ಹಿತಕರ ಎಂದು ಇವರೆಲ್ಲರೂ ಎಚ್ಚರಿಸುವರು. ಇವರೆಲ್ಲಾ ವಿಚಾರವಂತರಾಗಿರಲಿಲ್ಲವೇ, ಸ್ವದೇಶ ಪ್ರೇಮಿಗಳಾಗಿರಲಿಲ್ಲವೇ ? ಇವರಲ್ಲಿ ಯಾರೂ 'ಪರಕೀಯತನ' ಬಾಧಿತರಾಗಿರಲಿಲ್ಲ.

ಭಾರತೀಯ ಭಾಷೆಗಳ ಮೂಲಕ್ಕೆ ಸೇರದಿದ್ದರೂ, ಇಂಗ್ಲಿಷ್ ಅಳವಡಿಸಿಕೊಂಡ ಭಾರತದ ಭಾಷೆ. ಆಧುನಿಕ ಭಾರತದ ಭಾಷಾ ಸಾಹಿತ್ಯಕ್ಕೆ ಅದರ ಕೊಡುಗೆ ಮಹತ್ವದ್ದಾಗಿದೆ. ಹಾಗೇ ಭಾರತೀಯ ಭಾಷಾ ಸಾಹಿತ್ಯವೂ ಇಂಗ್ಲಿಷಿನ ಮೇಲೆ ತನ್ನ ಪ್ರಭಾವವನ್ನು ಬೀರಿ ಆಂಗ್ಲೋ-ಇಂಡಿಯನ್ ಸಾಹಿತ್ಯ ಎಂಬ ಮಹತ್ವದ ಪ್ರಭೇದ ಮೂಡಲಿಲ್ಲವೇ ?

ಹಾಗಿರುವಾಗ ಇಂಗ್ಲಿಷಿನ ಬಗ್ಗೆ ಯಾಕೆ ಈ ಶಂಕೆ, ಭಯ, ದ್ವೇಷ ಭಾವ ? ಈ ರೀತಿಯ ದ್ವೇಷ ಭಾವದ ನಡುವೆ ಹುಟ್ಟಿ ಬೆಳೆಯುವ ನಮ್ಮ ಮಕ್ಕಳು ಇಂಗ್ಲಿಷನ್ನು ಹೇಗೆ ಪ್ರೀತಿಸಬಲ್ಲರು ? ಕಲಿಯಬಲ್ಲರು ? ಒಂದು ಭಾಷೆ ಇನ್ನೊಂದನ್ನು ನುಂಗಲು ಸಾಧ್ಯವಿಲ್ಲ. ಇಂಗ್ಲಿಷಿನಿಂದ ಕನ್ನಡಕ್ಕೆ ಏನೂ ಬಾಧೆಯಿಲ್ಲ. ಬಾಧೆಯಿರುವುದಿದ್ದರೆ ಅದು ನಮ್ಮ ಜನರಿಂದಲೇ. ಭಾಷೆಯನ್ನು ಬಳಸುವವರಿಂದಲೇ. ನಮ್ಮವರ ಮನೋವೃತ್ತಿ, ನಡೆ ನುಡಿ, ಜೀವನ ಶೈಲಿ, ಶಿಕ್ಷಣದ ಗುಣಮಟ್ಟ, ಬೋಧನಾ ಕ್ರಮ, ಸರಕಾರದ ನೀತಿ ಧೋರಣೆ, ಆಡಳಿತ ಯಂತ್ರಗಳಿಂದ ಎರಡೂ ಭಾಷೆಗಳು ಸೊರಗಿವೆ, ಸತ್ವಹೀನವಾಗಿವೆ.

**೨. ಪಠ್ಯ ವಿಷಯವಾಗಿ ಇಂಗ್ಲಿಷ್** : ಇಲ್ಲಿ ನಾವು ಗಮನಿಸಬೇಕಾದುದು ''ಇಂಗ್ಲಿಷ್ ದ್ವಿತೀಯ ಭಾಷೆ'' ಎಂಬ ವಿಚಾರವನ್ನು. ಇದರ ಅರ್ಥವೇನು ? ಒಂದು ಅರ್ಥದಲ್ಲಿ, ಭಾರತೀಯ/ಪ್ರಾದೇಶಿಕ ಮೊದಲ ಭಾಷೆಯ ನಂತರದ ಸ್ಥಾನವುಳ್ಳ ಭಾಷೆ ಎಂದು ಅರ್ಥ. ಎರಡನೆಯ ಭಾಷೆ ಅನ್ನುವುದು ಮೊದಲಿನ ಭಾಷೆಯನ್ನು ಪ್ರಾರಂಭಿಸಿದ ಪ್ರಾಥಮಿಕ ಹಂತದ ಸ್ವಲ್ಪ ನಂತರ ಪ್ರಾರಂಭಿಸಬೇಕಾದುದು. ತ್ರಿಭಾಷಾ ಸೂತ್ರದ ಸಂದರ್ಭದಲ್ಲಿ ಅದಕ್ಕೆ ತನ್ನದೇ ಆದ ಆನ್ವಯಿಕ ಶಿಕ್ಷಣ ಶಾಸ್ತ್ರೀಯ ವಿವರಣೆ ನೀಡಿದೆ. ಹಾಗಿರುವಾಗ ಇಂಗ್ಲಿಷನ್ನು ಎರಡನೆಯ ಭಾಷೆಯೆಂದು ಪಠ್ಯ ವಿಷಯವಾಗಿ ಪ್ರಥಮ ಭಾಷೆ ಕನ್ನಡದ ಜೊತೆಗೇ ಕಲಿಸುವುದೇ ಯಾ ನಂತರದ ವರ್ಷಗಳಲ್ಲಿ ಕಲಿಸುವುದೇ ಎಂಬ ಶೈಕ್ಷಣಿಕ ಜಿಜ್ಞಾಸೆ ಹುಟ್ಟುತ್ತದೆ.

ಇಂಗ್ಲಿಷನ್ನು ದ್ವಿತೀಯ ಭಾಷೆಯಾಗಿ ಕಲಿಯುವ ವಿಚಾರದಲ್ಲಿ ನಾವು ಗಮನಿಸಬೇಕಾದುದು ಕಲಿಯುವಾತನ ಜೈವಿಕ, ಮಾನಸಿಕ, ಬೌದ್ಧಿಕ ಅಂಶಗಳನ್ನು - ಅವುಗಳ ಬೆಳವಣಿಗೆ, ಪಕ್ವತೆ, ಕಲಿಕೆಗೆ ಸೂಕ್ತವಾದ ನಿರ್ಣಾಯಕ ವಯಸ್ಸು. ಸರ್ವಸಾಮಾನ್ಯವಾಗಿ ೩ರಿಂದ ಹರಯಾರಂಭದವರೆಗಿನ ಕಾಲವು ಭಾಷಾ ಕಲಿಕೆಗೆ ಪ್ರಶಸ್ತವಾದ ವಯಸ್ಸು ಎಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪಿಯಾಜೆಯವರ ಪ್ರಕಾರ ಸುಮಾರು ೭-೧೧ ವರ್ಷದ ಕಾಲಾವಧಿ ವಿಶಿಷ್ಟವಾಗಿ ವಿಕಾಸವಾಗುತ್ತ, ಮಗುವಿನಲ್ಲಿ ಅಮೂರ್ತ ಕಲ್ಪನೆಗಳು ಮತ್ತು ಘನ ವಿಚಾರಗಳು ರೂಪು ತಳೆಯುವ ಕಾಲ. ಈ ಸೈದ್ಧಾಂತಿಕ ನಿಲುವಿಗೆ ಎರಿಕ್ ಲೆನ್‌ಬರ್ಗ್, ಪೆನ್‌ಫೀಲ್ಡ್, ಸ್ಕೊವೆಲ್ ಮೊದಲಾದವರ ಮೆದುಳ ದ್ವಿದಳ ರಚನೆಯ ಅಭಿಪ್ರಾಯಗಳೂ ಒತ್ತುಕೊಡುತ್ತವೆ. ಇದರ ಪ್ರಕಾರ ಎಳೇ ವಯಸ್ಸಿನಲ್ಲಿ ಮಕ್ಕಳು ದ್ವಿತೀಯ ಭಾಷೆಯನ್ನು ಕಲಿಯಲಾರರು ಎಂದು ಹೇಳಲಾಗದು. ಆದರೆ ಇಲ್ಲಿ ಕಲಿಯುವ ಭಾಷೆಯ ರಚನೆ ಇತ್ಯಾದಿ ಮಕ್ಕಳ ಪ್ರಥಮ ಭಾಷೆಯ ರಚನೆಗೆ ಸಮಾನವಾಗಿದ್ದರೆ ಸಮಸ್ಯೆಯಾಗದು. ತಮ್ಮಲ್ಲಿ ಅಂತರ್ಜನ್ಯವಾಗಿರುವ ಭಾಷಾ ರಚನಾ ವ್ಯವಸ್ಥೆಯ ಸಾರ್ವತ್ರಿಕ ವ್ಯಾಕರಣ ಪ್ರಕ್ರಿಯೆ ನೆರವಿನಿಂದ, ತಮ್ಮ ಪ್ರಥಮ ಭಾಷೆಗೆ ಸರಿ ಹೊಂದುವ ಒಂದೋ ಎರಡೋ ಭಾಷೆಗಳನ್ನು ಕಲಿಯಬಹುದು. ಆದರೆ ಪ್ರಥಮ ಭಾಷೆಯ ಪದ್ಧತಿಗೆ ಭಿನ್ನವಾದ ಭಾಷೆಯಾಗಿದ್ದರೆ ಪಿಯಾಜೆಯವರ ಪ್ರಕಾರ ಅಸಮತೋಲನ ಉಂಟಾಗುವುದು, ಸಹಜವಾದ ಕಲಿಕಾ ಪ್ರಕ್ರಿಯೆಗೆ ತೊಡಕಾಗುವುದು. ಏನಿದ್ದರೂ, ಶಾಲೆಯಲ್ಲಿ ಶಿಕ್ಷಕರ, ಮನೆಯಲ್ಲಿ ಹೆತ್ತವರ ಒತ್ತಡಕ್ಕೆ ಬಲಿಯಾಗಿ ಮನನ-ಅನುಕರಣೆ ಪದ್ಧತಿಯಿಂದ 'ಕಲಿಯುವರು' ಅಥವಾ ಕಲಿತಂತೆ ನಟಿಸುವರು. ಆಸುಬೆಲ್‌ರವರ ಪ್ರಕಾರ ಅದು ಬಾಯಿಪಾಠದ ಉರುಹೊಡೆವ ಕಲಿಕೆ. ಆದರೆ ಇನ್ನು ಮುಂದೆ ೭ರಿಂದ ೧೧ ವರ್ಷದ ಕಾಲಾವಧಿಯಲ್ಲಿ ಮಕ್ಕಳು 'ಸಾಮ್ಯ-ಸಾಮಾನ್ಯೀಕರಣ ವಿಧಾನ'ದಿಂದ ಕಲಿಯುವರು. ತನ್ಮೂಲಕ ಕಲಿಕೆ ಭದ್ರವಾಗುವುದು, ಅರ್ಥಪೂರ್ಣವಾಗುವುದು.

ಭಾಗ - ೨

**೩. ಇಂಗ್ಲಿಷ್ ಕಲಿಕಾ ಪ್ರಕ್ರಿಯೆ, ಸಮಸ್ಯೆಗಳು** : ಮಹನೀಯರೊಬ್ಬರು ಇತ್ತೀಚೆಗೆ ಭಾಷಾ ಕಲಿಕೆಯ ವಿಚಾರವಾಗಿ ಭಾಷಾ ವಿಜ್ಞಾನಿ ನೋಮ್ ಚೋಂಸ್ಕಿಯವರ ಅಭಿಪ್ರಾಯವನ್ನು ಹೀಗೆ ಉದ್ಧರಿಸಿರುವರು – ''೩ರಿಂದ ೭ ವರ್ಷದ ಮಕ್ಕಳು ಕನಿಷ್ಠ ಮೂರು ಭಾಷೆಗಳನ್ನು ಕಲಿಯಬಲ್ಲರು. ಆದುದರಿಂದ ಹೊಸ ಭಾಷೆಯನ್ನು ಕಲಿಯುವುದು ಮಗುವಿಗೆ ಹೊರೆಯಾಗದು'' (ವಿಜಯ ಟೈಮ್ಸ್, ಜುಲೈ ೭, ೨೦೦೫). ಚೋಂಸ್ಕಿಯವರ ಅಭಿಪ್ರಾಯದ ಕುರಿತು ಇಲ್ಲಿ ವಿವಾದವಿಲ್ಲ. ಆದರೆ ಅದನ್ನು ಹೇಳಿದ ಸಂದರ್ಭಕ್ಕೆ

ಹೊರತಾದ ಈ ಉದ್ಧರಣೆ ಎಷ್ಟು ಸಮಂಜಸ? ಆಶ್ಚರ್ಯವೇನೆಂದರೆ, ನಮ್ಮ ಶಾಲೆಗಳು, ಶಿಕ್ಷಕರು, ಶಿಕ್ಷಕ ತರಬೇತಿ ಕ್ರಮ, ಪಠ್ಯಪದ್ಧತಿ, ಪರೀಕ್ಷಾ ಪದ್ಧತಿ ಎಲ್ಲಾ ನೂರರಲ್ಲಿ ನೂರು ಸ್ಕಿನರನ ಭಾಷಾವರ್ತನವಾದ, ವರ್ತನ ಬಲವರ್ಧನೆ ರೂಢಿಸುವಿಕೆ, ಆಧಾರದಲ್ಲೇ ಇಂದಿಗೂ ವಿಧ್ಯುಕ್ತವಾಗಿ ನಡೆಯುತ್ತಿರುವಾಗ, ಚೋಂಸ್ಕಿಯವರ ಮನೋವಿಜ್ಞಾನ ಜನ್ಯ ಸಿದ್ಧಾಂತದ ಮೂಲ ಅಂತಸ್ಥವೆಂಬ ವಿಚಾರ ಎಷ್ಟು ಪ್ರಸ್ತುತ? ಚೋಂಸ್ಕಿಯವರ ವಾದ ಮಾತೃಭಾಷೆ/ಪ್ರಥಮ ಭಾಷೆ, ಅದರಲ್ಲೂ ಏಕಭಾಷೀಯ ಪರಿಸ್ಥಿತಿಗೆ ಸಂಬಂಧಿಸಿದುದಾಗಿದೆ. ಅವರ ಪ್ರಕಾರ ಮಗುವಿನ ಮಾತೃಭಾಷೆಯ ಭಾಷಾತ್ಮಕ ಸಾರ್ವತ್ರಿಕಗಳು ಬಹುಪಾಲು ಮಗುವಿನ ೪-೫ ವರ್ಷದ ಹೊತ್ತಿಗೆ ಗಣನೀಯ ಪ್ರಮಾಣದಲ್ಲಿ ರೂಪುಗೊಂಡು ಹುರಿಗೊಂಡಿರುವುದು. ತತ್ಪರಿಣಾಮವಾಗಿ ಅಲ್ಲಿಂದ ಮುಂದೆ ಭಾಷಾ ಸೃಜನಕ್ರಿಯೆ ಆರಂಭಗೊಳ್ಳುತ್ತದೆ. ಅಂದರೆ, ತನ್ನಲ್ಲಿ ಈಗಾಗಲೇ ರೂಪುಗೊಂಡಿರುವ ಅಂತರ್ಜನ್ಯ ವ್ಯಾಕರಣದ ಸಹಾಯದಿಂದ ತಾನು ಇಷ್ಟರವರೆಗೆ ಕೇಳಿರದ ನವ ನವೀನ ವಾಕ್ಯಗಳನ್ನು ಭಾಷಾ ಪ್ರಯೋಗಗಳನ್ನು ಮಗು ಅರ್ಥೈಸಿಕೊಳ್ಳಲು ಹಾಗೂ ರಚಿಸಲು ಸಾಧ್ಯವಾಗುವುದು. ಮಗು ಬೆಳೆದಂತೆ, ಅಂದರೆ ತನ್ನಲ್ಲಿ ಹುದುಗಿದ ಸಾರ್ವತ್ರಿಕ ವ್ಯಾಕರಣ ಪದ್ಧತಿ ಬಲಿತಂತೆ ಅದರ ನೆರವಿನಿಂದ ಆ ಭಾಷಾ ಮಾದರಿಗೆ ಸರಿಹೊಂದುವ ಅನ್ಯಭಾಷೆಗಳನ್ನು ಕಲಿಯಲು ಸಾಧ್ಯವಾಗುತ್ತದೆ. ಆದರೆ ಆ ಭಾಷೆಗಳು ಅದರದೇ ಸಮುದಾಯದ ಭಾಷೆಯಾಗಿದ್ದು ಮಗು ಆ ಭಾಷೆಗಳಿಂದ ಆವೃತ್ತವಾಗಿದ್ದರೆ ಮಾತ್ರ ಸಾಧ್ಯ.

ಚೋಂಸ್ಕಿಯವರ ವಾದದ ಪ್ರಕಾರ ಮಗುವು $L_1$ನ್ನು ಯಾರೋ ಕಲಿಸುವುದರ ಫಲವಾಗಿ ಕಲಿಯುವುದಿಲ್ಲ. ತನ್ನಲ್ಲಿ ಹುದುಗಿರುವ 'ಭಾಷೆಯನ್ನು ಸಂಗ್ರಹಿಸಿಕೊಳ್ಳುವ ಪರಿಕರ' ಎಂಬ ಯಂತ್ರದ ನೆರವಿನಿಂದ ತನ್ನ ಭಾಷಾ ಸಮುದಾಯ ತಂತಾನೇ ಭಾಷಾ ತುಣುಕುಗಳನ್ನು ಸಂಪಾದಿಸಿಕೊಳ್ಳುವುದು. ಶಾಲೆಗೆ ಸೇರುವ ಮೊದಲೇ ಮಗುವು ಪರಿಸರದಲ್ಲಿ ಒದಗುವ ಭಾಷೆಯನ್ನು ಅನಾಯಾಸವಾಗಿ ಸಾಕಷ್ಟು ಸಂಗ್ರಹಿಸಿ ಸ್ವಂತೀಕರಿಸಿಕೊಳ್ಳುತ್ತದೆ. ಶಾಲೆಯಲ್ಲಿ ಏನಿದ್ದರೂ ಅದರ ಪರಿಷ್ಕರಣೆಯ ಮತ್ತು ಅಭಿವೃದ್ಧಿಯ ಕಾರ್ಯ ನಡೆಯಬೇಕಾಗುವುದು. ಇದು ಪ್ರಥಮ ಭಾಷೆಗೆ ಸಂಬಂಧಿಸಿದ ಭಾಷಾ ಸಂಗ್ರಹಣಾ ಸಿದ್ಧಾಂತ. ಆದರೆ ದ್ವಿತೀಯ ಭಾಷೆ ಎನಿಸುವ ಇಂಗ್ಲಿಷ್ ವಿಚಾರ ಹಾಗಲ್ಲ, ಇಲ್ಲಿ 'ಸಂಪಾದನೆ'ಗಿಂತ 'ಕಲಿಕಾ' ಕಾರ್ಯವೇ ಮುಖ್ಯ. ಅಂದರೆ ಪರಿಸರದಲ್ಲಿ ಆ ಭಾಷೆಯನ್ನು ಹೆಚ್ಚಾಗಿ ಬಳಸದೆ ಇರುವುದರಿಂದ ಮಗುವು ಅದನ್ನು ತಾನು ತಾನಾಗಿಯೇ ಸಂಪಾದಿಸಲು ಸಾಧ್ಯವಿಲ್ಲ. ಇದನ್ನು ಕಲಿಸಬೇಕಾಗಿದೆ, ಯೋಜಿತ ಬೋಧನಾಕ್ರಮ ಬೇಕಾಗಿದೆ, ಸ್ವಚ್ಛವಾಗಿ, ಸ್ಪಷ್ಟವಾಗಿ ಇಂಗ್ಲಿಷ್ ಮಾತಾಡಬಲ್ಲ ದಕ್ಷ ಅಧ್ಯಾಪಕರು ಬೇಕಾಗಿದ್ದಾರೆ. ಆದರೆ ಆ ಹೊತ್ತಿಗೆ ಪ್ರಥಮ ಭಾಷೆಯ ಜ್ಞಾನದ ಆಂತರಿಕ ವ್ಯವಸ್ಥೆ ಬಲಗೊಂಡಿರಬೇಕು. ಏಕೆಂದರೆ, ಆ ಬಲ ಪ್ರಥಮ ಭಾಷೆಯನ್ನು ಕಲಿಯಲು ಸಹಾಯವಾಗುತ್ತದೆ. ಹಾಗಿಲ್ಲದಿದ್ದರೆ, ಪ್ರಥಮ ಭಾಷೆ ಮುಖ್ಯವಾಗಿರುವಾಗ ಅದರ ತಿಳಿವು ಇನ್ನೂ ಗಟ್ಟಿಯಾಗದಿರುವಾಗ ದ್ವಿತೀಯ ಭಾಷೆ ಪ್ರಾರಂಭಿಸಿದರೆ ಅದು ಪ್ರಥಮದ ತಿಳಿವಳಿಕೆಯನ್ನು ಕೆಡಿಸುತ್ತದೆ. ದ್ವಿತೀಯವನ್ನು ಕಲಿಯಲೂ ಕಷ್ಟವಾಗುತ್ತದೆ.

ನಮ್ಮದು ಬಹುಮಾತಿನ, ಬಹು ಭಾಷೆಯ ಸಮುದಾಯ ಎಂದು ಸಮರ್ಥವಾಗಿ ವಾದಿಸಿದ್ದರೂ, ರಾಜ್ಯಾಂಗದಲ್ಲಿ ಅದನ್ನು ಭಾರತದ ಭಾಷೆ ಎಂದು ಪರಿಗಣಿಸಲಾಗಿದ್ದರೂ ಅದು ಮೂಲತಃ ಭಾರತೀಯ ಭಾಷೆಗಳ ಬುಡಕಟ್ಟಿಗೆ ಸೇರಿದುದಲ್ಲ, ಇಂಗ್ಲಿಷ್ ಭಾಷಾ ರಚನೆ ಭಾರತೀಯ ಭಾಷೆಗಳ ರಚನೆಯಂತಲ್ಲ, ಅಪರಿಚಿತ ಪದಗಳು ಮಾತ್ರವಲ್ಲ, ಇಂಗ್ಲಿಷ್‌ನಲ್ಲಿರುವ ಲಿಪಿ-ಧ್ವನಿಗಳ ವ್ಯತ್ಯಯ, ಹಿರಿ-ಕಿರಿ ಲಿಪಿಗಳು ಈ ಎಲ್ಲಾ ಸಮಸ್ಯೆಗಳು ಆ ಭಾಷೆಯ ಕಲಿಕೆಗೆ ಆರಂಭದಲ್ಲಿ ತಡೆ ತಾರವೇ? 'ಸಾಮ್ಯ-ಸಾಮಾನ್ಯೀಕರಣ'ದಿಂದ ಕಲಿಯಲು ಕಷ್ಟಸಾಧ್ಯ. ಕಲಿಕಾ ಪ್ರಕ್ರಿಯೆಯಲ್ಲಿ, ಪಿಯಾಜೆಯವರ ತರ್ಕದಂತೆ ಅಸಮಾನತೆ ಉಂಟಾಗಿ ಕಲಿಯುವಾತನಿಗೆ ಗೊಂದಲವಾಗದೆ? ಕಲಿಕೆಗೆ ಪೂರ್ವಸಿದ್ಧತೆಯಿಲ್ಲದೆ ಬರೇ ಅನುಭವಕ್ಕೆ ತೆಗೆದುಕೊಳ್ಳುವುದರಿಂದ ಮಗು ಕಲಿಯುತ್ತದೆ ಎನ್ನುವುದಕ್ಕೆ ಆಧಾರವಿಲ್ಲ. ಕಲಿಕೆಗೆ ಅರಿವೇ ಆಧಾರ; ಅರ್ಥೈಸಿಕೊಳ್ಳಲಾರದ ಕಲಿಕೆ ನಿಜವಾದ ಕಲಿಕೆಯಾಗದು. ಹಾಗಿರುವಾಗ ಚೋಂಸ್ಕಿಯವರ ವಾದವನ್ನು (ಪೂರ್ಣವಾಗಿ ಅರಿತೋ ಅರಿಯದೆಯೋ) ಮುಂದಿಡುವವರು ಮಗುವಿನ ಕಲಿಕೆ ಮತ್ತು ಭಾಷಾ ಕಲಿಕೆಯ ಸೈದ್ಧಾಂತಿಗಳಾದ ಪಿಯಾಜೆ, ವ್ಯಾಗೋಸ್ಕಿ, ಬ್ರೂನರ್, ಮಾಕ್‌ನೀಲ್, ಲೆನ್‌ಬರ್ಗ್, ಪೆನ್‌ಫೀಲ್ಡ್ ಮೊದಲಾದವರ, ಅದರಲ್ಲೂ ದ್ವಿತೀಯ ಭಾಷಾ ಸಿದ್ಧಾಂತಿಗಳಾದ ಆಸುಬೆಲ್, ಸ್ಟರ್ನ್, ಕ್ರಶನ್, ಸ್ಕೊವೆಲ್ ಅವರ ವಿಚಾರಗಳನ್ನು ಪ್ರಸ್ತಾಪಿಸುವುದಿಲ್ಲವೇಕೆ? ಮೌಢ್ಯವೋ, ಪೂರ್ವಗ್ರಹವೋ?




ಹೆಚ್ಚಿನ ನಮ್ಮ ಗ್ರಾಮೀಣ ಮಕ್ಕಳ (ಉದಾ : ದಕ್ಷಿಣ ಕನ್ನಡ, ಉಡುಪಿ, ಕೊಡಗು ಮೊದಲಾದ ಪ್ರದೇಶಗಳಲ್ಲಿ) ಮನೆ ಭಾಷೆ ನೆರೆ ಭಾಷೆ (ತುಳು, ಕೊಂಕಣಿ, ಕೊಡವ, ಮಲಯಾಳ, ಮರಾಠಿ) ಆಗಿದ್ದು ಶಾಲೆಯಲ್ಲಿ ಪ್ರಪ್ರಥಮವಾಗಿ ಕನ್ನಡ ಕಲಿಯುವ ಹೊತ್ತಿಗೆ, ಅವರ ಪ್ರಥಮ ಭಾಷೆಯ ಅಂತಸ್ಥ ವ್ಯಾಕರಣ ರೂಪುಗೊಳ್ಳುವುದಕ್ಕೆ ಮುಂಚೆಯೇ ಭಿನ್ನ ಭಾಷಾ ನಿಯಮಾವಳಿಗೊಳಗಾದ ಇಂಗ್ಲಿಷ್ ಭಾಷೆಯನ್ನು ಸಮೀಕರಿಸಿ, ಅಂತಸ್ಥಗೊಳಿಸಿಕೊಳ್ಳಲು ತೊಡಕಾದೀತು. ಭಾಷೆಯೆಂಬುದು ನಿಯಮಾವಳಿಗೊಳಗಾಗುವ ವರ್ತನೆ. ಅದೊಂದು ಮನೋಭಾಷಿಕ, ಮನೋಸಾಮಾಜಿಕ ಕ್ರಿಯೆ. ಯಾಂತ್ರಿಕವಾಗಿ ಗಿಳಿ ಬಾಯಿಪಾಠ ಮಾಡಿಸಿ, ಮನನ-ಅನುಕರಣ ವಿಧಾನದಿಂದ ಕಲಿಸುವಂಥಾ ವಿಷಯವಲ್ಲ.

ಮಕ್ಕಳು ಹಲವು ಭಾಷೆಗಳನ್ನು ಕಲಿಯುವುದಿಲ್ಲ, ಕಲಿಯಲಾರರು ಎಂದು ಇಲ್ಲಿ ಹೇಳುತ್ತಿಲ್ಲ. ಭಾಷೆ ಪ್ರಕೃತಿ ಸಹಜವಾಗಿದ್ದರೆ, ಅರ್ಥಪೂರ್ಣವಾಗಿದ್ದರೆ, ಅವಶ್ಯಕತೆಯಿದ್ದರೆ ಅಂದರೆ ಒಟ್ಟನಲ್ಲಿ ಆಂತರಿಕ ಪ್ರಚೋದನೆ ಬಲವಾಗಿದ್ದರೆ, ಎರಡೋ ಮೂರೋ ಭಾಷೆಗಳನ್ನು ಮಕ್ಕಳು ತಾವು ತಾವಾಗಿಯೇ ಆಲಿಸಿ, ಅರ್ಥೈಸಿ ಮಾತಾಡಲು ಕಲಿಯುವರು. ಲಿಖಿತ ಭಾಷೆಯ ಪರಿಚಯ ಶಾಲೆಯಲ್ಲಿ ಆಗಬೇಕಾಗಿದೆ.

ಹಾಗಿರುವಾಗ "ಪಠ್ಯಪುಸ್ತಕ ಇಲ್ಲ, ಟೆಸ್ಟ್‌ಗಳಿಲ್ಲ, ವಾಚನ ಲೇಖನ ಇಲ್ಲ, ಕೇವಲ ವಚನ ಭಾಷೆ. ಪಾಠ ಇಲ್ಲ, ಹೆಚ್ಚಿನ ಪದಗಳು ಅವರಿಗೆ ಈಗಾಗಲೇ ಗೊತ್ತಿರುವುದರಿಂದ ಇದು ಕೇವಲ ತೆರೆದುಕೊಳ್ಳುವಿಕೆ ಅಷ್ಟೆ. ಆದುದರಿಂದ ಇಂಗ್ಲಿಷ್ ಕಲಿಕೆ ಹೊರೆಯಾಗದು. ಅದು ಮೋಜಿನ ಚಟುವಟಿಕೆ" ಎನ್ನುವ ಹೇಳಿಕೆ ಗೊಂದಲವನ್ನುಂಟುಮಾಡುತ್ತದೆ. ಆಡು ಕನ್ನಡವನ್ನು ಲಿಖಿತ ಕನ್ನಡವನ್ನು ಪಠ್ಯಪುಸ್ತಕದ ನೆರವಿನಿಂದ ಶಿಕ್ಷಕರ ಬೋಧನೆಯ ಫಲವಾಗಿ ಕಲಿಯುವ ಹೊತ್ತಿಗೆ ಕೆಜಿ ಮಕ್ಕಳಿಗೆ ಭಾಷೆಯನ್ನು ಕಲಿಸುವ ರೀತಿಯಲ್ಲಿ, ವಾಚನ ಲೇಖನವಿಲ್ಲದೆ ಕೇವಲ ಇಂಗ್ಲಿಷಿನ ವಚನ ರೂಪವನ್ನು ಆರಂಭದ ಎರಡು ವರ್ಷಗಳಲ್ಲಿ ಬೋಧಿಸುವ ವಿಧಾನ ಒಂದು ರೀತಿಯಲ್ಲಿ ಕಲಿಯುವವರನ್ನು ಡಿಗ್ರೇಡ್ ಮಾಡಿದಂತಲ್ಲವೇ? ಕನ್ನಡ, ಗಣಿತ, ಪರಿಸರ ಅಧ್ಯಯನ ಫಾರ್‌ವರ್ಡ್ ಗೇರ್‌ನಲ್ಲಿರುವಾಗ ಇಂಗ್ಲಿಷ್ ಕಲಿಕೆ ರಿವರ್ಸ್ ಗೇರ್‌ನಲ್ಲಿ ಇದ್ದಂತೆ ಅಲ್ಲವೇ? ಮಕ್ಕಳ ವಯಸ್ಸು, ಸಾಮಾನ್ಯ ಜ್ಞಾನದ ಮಟ್ಟ, ಕಲಿಕಾ ಸಾಮರ್ಥ್ಯವನ್ನು ಕಡೆಗಣಿಸಿದಂತಲ್ಲವೇ? ಕ್ಲಿಫರ್ಡ್ ಪ್ರೇಟರ್ ಎಂಬ ಇಂಗ್ಲಿಷ್ ಭಾಷಾ ಶಿಕ್ಷಣತಜ್ಞನು ಹೇಳುವುದನ್ನು ಗಮನಿಸಿರಿ : "ಎರಡನೇ ಭಾಷೆಯ ತರಗತಿ ವಿದ್ಯಾರ್ಥಿಗಳಿಗೆ ಆ ಭಾಷೆಯ ಲಿಖಿತ ಸ್ವರೂಪದ ಪರಿಚಯ ಮಾಡಿಸುವ ಕೆಲಸವನ್ನು ಬಹಳಕಾಲ ಮುಂದೂಡುವುದರಿಂದ ಅನೇಕ ದುಷ್ಪರಿಣಾಮಗಳೇ ಆಗುತ್ತವೆ ಎಂದು ಹೇಳುವುದಕ್ಕೆ ಸಾಕಷ್ಟು ಆಧಾರವಿದೆ" (೧೯೬೯). ಆ ವಯಸ್ಸಿನ ಮಕ್ಕಳಿಗೆ ಶ್ರವಣ ಮಾಧ್ಯಮದ ಪದಗಳನ್ನು ಲಿಖಿತ ರೂಪದಲ್ಲಿ ನೋಡುವುದು, ಹಾಗೇ ಅದನ್ನು ಬರಹ ರೂಪದಲ್ಲಿ ಮೂಡಿಸಲು ಪ್ರಯತ್ನಿಸುವುದು ಒಂದು ಸಹಜ ಪ್ರವೃತ್ತಿಯಾಗಿರುತ್ತದೆ. ಅದಕ್ಕೆ ಅದೇ ಸಂದರ್ಭದಲ್ಲಿ ಶೈಕ್ಷಣಿಕ $L_2$ನ್ನು ಮುಂದೂಡಿ ತಡೆ ತರುವುದು ಶೈಕ್ಷಣಿಕ ಮನೋಶಾಸ್ತ್ರದ ಪ್ರಕಾರ ಹಿತಕರವಲ್ಲ. ಇನ್ನು 'No Test' ಅಂದರೇನು? ಯಾರನ್ನು ಸಂತೈಸಲು ಯಾ ಒಲಿಸಲು ಈ ಆಶ್ವಾಸನೆ? ಕಲಿಯುವವನಿಗೂ ಕಲಿಸುವಾತನಿಗೂ ತಾವು ತೊಡಗಿದ ಕ್ರಿಯೆಯಲ್ಲಿ ಸಾಧಿಸಿದ ಪ್ರಗತಿಯನ್ನು ಅರಿಯುವುದು ಬೇಡವೇ? ಅದನ್ನೇ ಒಂದು ಪ್ರೇರೇಪಣ ಶಕ್ತಿಯಾಗಿ ಬಳಸುವ ಸುಧಾರಿತ/ಅನೌಪಚಾರಿಕ ಮೌಲ್ಯಮಾಪನ ವಿಧಾನಗಳಿಲ್ಲವೇ? ಬೇಕಾದಷ್ಟು ಇವೆ. ಸಾಂಪ್ರದಾಯಿಕವಾಗಿ ನಡೆದುಬಂದ 'ಪೇಪರ್-ಪೆನ್ಸಿಲ್ ಪರೀಕ್ಷೆ' ಎಂಬ ಜಡಕ್ರಿಯೆಯಿಂದಲೇ ಆಗಬೇಕೇನು? ಸೂಕ್ಷ್ಮವಾಗಿ ನೋಡಿದರೆ, ಇದೊಂದು ಅವೈಜ್ಞಾನಿಕ ಪಠ್ಯನೀತಿ, ಮುಂಗೈಗೆ ಬೆಲ್ಲ ಹಚ್ಚುವ ಸರಕಾರದ

ಜನಪ್ರಿಯ ಕಾರ್ಯಕ್ರಮ ಎಂದು ಹೇಳಬೇಕಾಗುವುದು.

ತಂತಮ್ಮ ಮಕ್ಕಳನ್ನು ಯೋಗ್ಯ ಶಿಕ್ಷಣ ಸಂಸ್ಥೆಗಳಿಗೆ ದಾಖಲಾಯಿಸಿ ಯೋಗ್ಯ ಶಿಕ್ಷಣವನ್ನು ಸೂಕ್ತ ಭಾಷಾ ಮಾಧ್ಯಮದಲ್ಲಿ ಕೊಡಿಸುವುದು ಪ್ರತಿಯೊಬ್ಬ ಪಾಲಕನ ಹಕ್ಕು ಹಾಗೂ ಕರ್ತವ್ಯವಾಗಿದೆ. ಹಾಗೇ, ಪ್ರತಿಯೊಬ್ಬ ಮಗುವಿಗೂ ತನ್ನ ಆಸಕ್ತಿಯ ವಿಷಯವನ್ನು ಆಯ್ಕೆ ಮಾಡಿ ತನಗರಿಯುವ ಭಾಷೆಯ ಮೂಲಕ ಕಲಿಯುವ ಹಕ್ಕೂ ಇರುವುದು. ಹಾಗೆ ಕಲಿಯುವ ಪ್ರಕ್ರಿಯೆಗೆ ಅದರದ್ದೇ ಆದ ಇತಿಮಿತಿಗಳಿವೆ. ಈ ಇತಿಮಿತಿಗಳಿಗನುಗುಣವಾಗಿ ಕಲಿಕೆ ನಡೆದರೆ ಅದು ಅರ್ಥಪೂರ್ಣವಾದೀತು. ಕಲಿಕೆಯ ಹಲವು ಪ್ರಕ್ರಿಯೆಗಳ ತಾಳ ಮೇಳಗಳಲ್ಲಿ ವ್ಯತ್ಯಯವಾದರೆ ಅದು ಅರ್ಥಪೂರ್ಣವಾಗದು. ಕಲಿಕೆಯ ವಸ್ತು ವಿಚಾರಗಳು ಮಗುವಿನ ವಯೋಮಾನ-ಬೌದ್ಧಿಕ ಮಟ್ಟಕ್ಕೆ ಅನುಗುಣವಾಗಿರಬೇಕು. ಆಗಿರದಿದ್ದರೆ ಕಲಿಕೆ ನಡೆಯದೇ? ನಡೆಯುವುದು. ಸಹಜ ಕಲಿಕೆಯಲ್ಲ, ಬಲವಂತದ ಮಿಥ್ಯಾ ಕಲಿಕೆಯಾಗುವುದು. ಪಡೆದ ಕಲಿಕೆ ಊನವಾಗಿರುವುದು.

ಸರಕಾರಿ ಶಾಲೆಗಳಲ್ಲಿ ಪ್ರಥಮ ತರಗತಿಯಲ್ಲೇ ಇಂಗ್ಲಿಷನ್ನು ಕಲಿಸಿದರೆ ಸಾಮಾಜಿಕ ತಾರತಮ್ಯ ತೊಲಗೀತು ಎಂಬ ವಿಚಾರ ಒಂದು ಭ್ರಮೆ. ಚರ್ಚೆಯನ್ನು ಮುಂದುವರೆಸದೆ, ಇದರಿಂದ ಖಂಡಿತವಾಗಿಯೂ ಸಾಮಾಜಿಕ ಅಂತರ ತೊಲಗದು ಎಂದು ಮಾತ್ರ ಇಲ್ಲಿ ಹೇಳ ಬಯಸುತ್ತೇನೆ. ಕಾರಣ ಸಾಮಾಜಿಕ ತಾರತಮ್ಯದ ಮೂಲ ಇದಲ್ಲ.

**೪. ಅನ್ಯ ಮಾರ್ಗವಿಲ್ಲವೇ?:** ಈ ಯೋಜನೆ ಅನಗತ್ಯ, ಇದನ್ನು ಇಲ್ಲಿಗೆ ಕೈ ಬಿಡಬೇಕೆಂದು ಇಲ್ಲಿ ಹೇಳುತ್ತಿಲ್ಲ. ಹಾಗಂತ ದುಡುಕಿ ದಿಢೀರಾಗಿ ಪ್ರಾರಂಭಿಸುವುದೂ ಅಲ್ಲ. ಇದೊಂದು ಮಹತ್ವವಾದ ಶೈಕ್ಷಣಿಕ ವಿಚಾರ. ಇಂಗ್ಲಿಷ್ ಪ್ರಮುಖ ಭಾಷೆ. ನಮ್ಮ ಮಕ್ಕಳು ಇಂಗ್ಲಿಷನ್ನು ಕಲಿಯಬೇಕಾದುದು ಅಗತ್ಯ; ಸರಿಯಾಗಿ ಕಲಿಯಬೇಕಾದುದು, ಚೆನ್ನಾಗಿ ಕಲಿಯಬೇಕಾದುದು ಅತೀ ಅಗತ್ಯ. ಇದರ ಕುರಿತಾಗಿ ಸರಕಾರ ಏನೇ ನಿರ್ಧಾರವನ್ನು ತೆಗೆದುಕೊಳ್ಳುವುದಿದ್ದರೂ, ಅದು ಕೇವಲ ಜನಾಭಿಪ್ರಾಯ ಸಂಗ್ರಹದ ಮೂಲಕವಾಗಲೀ, ಕೆಲವೇ ಪ್ರತಿಷ್ಠಿತ ವ್ಯಕ್ತಿಗಳ ಅನಿಸಿಕೆಗಳ ಆಧಾರದಿಂದಾಗಲೀ ಆಗಕೂಡದು. ಸಂಶೋಧನಾ/ಪ್ರಯೋಗಾಧಾರಿತ ಸಾಕ್ಷ್ಯಗಳ ಆಧಾರದ ಮೇಲೆ ಆಗಬೇಕಾಗಿದೆ. ಈ ವಿಷಯದ ಸತ್ಯಾಸತ್ಯತೆಯನ್ನು ಯೋಜನೆಯ ಸಾಧ್ಯಾಸಾಧ್ಯತೆಯನ್ನು ಪ್ರಾಯೋಗಿಕವಾಗಿ ನಿರ್ಣಯಿಸಬೇಕಾಗಿದೆ. ಹಾಗೆ ಎದುರಾಗುವ ಸಮಸ್ಯೆಯ ವಿವಿಧ ಆಯಾಮಗಳನ್ನು ವಿಶ್ಲೇಷಿಸಬೇಕಾಗಿದೆ. ಆದುದರಿಂದ ವಿಳಂಬ ಮಾಡದೆ ಈ ವರ್ಷದಿಂದಲೇ ಎರಡು ವರ್ಷಗಳ ಕಾಲವಾದರೂ ಜಿಲ್ಲೆಗೆ ಒಂದೋ ಎರಡರಂತೆ ಕೆಲವು ಆಯ್ದ ಶಾಲೆಗಳಲ್ಲಿ ಪ್ರಾಯೋಗಿಕ ಅಧ್ಯಯನ ಆರಂಭಿಸುವುದು ಒಳ್ಳೆಯದು. ಅಧ್ಯಯನದ ಫಲಿತಾಂಶ ಉತ್ತೇಜನಕಾರಿಯಾಗಿದ್ದಲ್ಲಿ ಮುಂದಕ್ಕೆ ವಿಸ್ತೃತ ಯೋಜನೆಯನ್ನು ಕೈಗೊಳ್ಳಬಹುದು. ಜೊತೆಯಲ್ಲೇ ಯೋಜನೆಯ ಇನ್ನೊಂದು ಅಂಗವಾಗಿ ಆಯ್ದ ಶಿಕ್ಷಕರ ಆಂಗ್ಲ ಭಾಷಾ ಪರಿಣತಿಯ 'ಸುಧಾರಣಾ' ಕಾರ್ಯಕ್ರಮ ನಡೆಯಬೇಕು. ಸಿದ್ಧಗೊಳಿಸಿದ ಪಠ್ಯ ವಸ್ತುವನ್ನೇ ಬೋಧಿಸುವ ತಂತ್ರಗಾರಿಕೆಯ 'ತರಬೇತಿ' ಕಾರ್ಯಕ್ರಮ ಉಪಯುಕ್ತವಾಗದು.

ಒಂದನೇ ತರಗತಿಯಲ್ಲಿ ನಮ್ಮ ಮಕ್ಕಳು, ಮುಖ್ಯವಾಗಿ ಗ್ರಾಮೀಣ ಮಕ್ಕಳು, ಇಂಗ್ಲಿಷನ್ನು ಅರ್ಥವತ್ತಾಗಿ ಕಲಿಯಲಾರರು. ಹಾಗಂತ, ತಡವಾಗಿ ಕಲಿಸುವುದರಿಂದ ನಮ್ಮ ಮಕ್ಕಳಿಗೆ ಮುಂದಕ್ಕೆ ಶೈಕ್ಷಣಿಕವಾಗಿ ತೊಡರಾಗುತ್ತದೆ ಎಂದು ವಾದಿಸುವ ಜನ ಬಹಳಷ್ಟು ಇರುವುದರಿಂದ ಮೊದಲ ವರ್ಗದಿಂದಲೇ ಪ್ರಾರಂಭಿಸಬೇಕೆಂಬುದನ್ನೇ ಕಾರಣವಾಗಿ ಇರಿಸಿಕೊಂಡರೆ, ಭಾಷಾ ಬೋಧನೆಯ ವಿಧಾನದ ಕುರಿತಾಗಿ ನನ್ನದೊಂದು ಸಲಹೆ ಇರುವುದು. ಇದು ಸರ್ವಮಾನ್ಯ, ಸರ್ವಸತ್ಯ, ಅಂತಿಮವೆಂದು ಖಂಡಿತವಾಗಿಯೂ ಹೇಳಲಾರೆ. ಇದೊಂದು ಪ್ರಯೋಗಾರ್ಹವಾದ ವಿಧಾನ. ಭಾಷಾ ಪ್ರಯೋಗಕ್ಕೆ ಬೇಕಾದುದು ವಾಕ್ಯರಚನಾ ಸಾಮರ್ಥ್ಯ; ವಾಕ್ಯರಚನೆಗೆ ಬೇಕಾದುದು ವಿವಿಧ ಪದಗಳ, ಪದಪುಂಜಗಳ ಪರಿಚಯ. ಆದುದರಿಂದ ಆರಂಭದ ಹಂತದಲ್ಲಿ ಮಕ್ಕಳಿಗೆ ಇಂಗ್ಲಿಷ್ ಪದಗಳ, ಪದಪುಂಜಗಳ ಪರಿಚಯವಾಗಬೇಕಾಗಿದೆ. ಅಂದರೆ ಕಲ್ಪನೆಗಳಿಗೆ, ಕಲ್ಪನಾ ತುಣುಕುಗಳಿಗೆ (concepts) ಸಮವಾದ ಭಾಷಾ ಸಂಕೇತಗಳನ್ನು ಅಂದರೆ ಪದಗಳನ್ನು ಜೋಡಿಸುವ ಕ್ರಿಯೆ. ಇಂಗ್ಲಿಷನ್ನು ೧, ೨ ತರಗತಿಗಳಲ್ಲಿ ಪ್ರತ್ಯೇಕವಾದ ಪಠ್ಯ ವಿಷಯವಾಗಿ ಬೋಧಿಸುವುದರ ಬದಲಿಗೆ, ಈಗಿರುವ ಕನ್ನಡ, ಗಣಿತ, ಪರಿಸರ ಅಧ್ಯಯನ ವಿಷಯಗಳ ಪಾಠದಲ್ಲಿ ಬರುವ ಮುಖ್ಯವಾದ ಸಾಂದರ್ಭಿಕ ಅರ್ಥ ಹೊತ್ತ ಪದಗಳಿಗೆ ಸಮಾನವಾದ/ವಿರೋಧ ಅರ್ಥವುಳ್ಳ ಇಂಗ್ಲಿಷ್ ಪದಗಳನ್ನು ಸಾಧ್ಯವಾದಲ್ಲೆಲ್ಲಾ ಶಿಕ್ಷಕರು ಬಳಸಲಿ. ಮಕ್ಕಳ ವಿಷಯ ಗ್ರಹಣೆಗೆ, ವಿಷಯ ಜ್ಞಾನಕ್ಕೆ ಏನೂ ತೊಂದರೆಯಾಗದು. ಜೊತೆಯಲ್ಲಿ ವಿಷಯಾಧಾರಿತ ಇಂಗ್ಲಿಷ್ ಪದಗಳ ಪರಿಚಯವೂ ಆಗುವುದು. ಇದೊಂದು ಸಮ್ಮಿಳಿತ ಪಠ್ಯಕ್ರಮ. ಜೊತೆಯಲ್ಲೇ ದಿನನಿತ್ಯದ ಸರಳ ಸಂಭಾಷಣೆ ಕಾರ್ಯ ತ್ರಾಸವಾಗದ ರೀತಿಯಲ್ಲಿ ನಡೆಯಲಿ. ಈ ಪಠ್ಯಕ್ರಮದ ಉಪಯುಕ್ತತೆಯ ಕುರಿತಾಗಿ, ಇದರ ಸಾಧ್ಯಾಸಾಧ್ಯತೆಯನ್ನು ಕಂಡುಹುಡುಕಲು ಒಂದು ಪ್ರತ್ಯೇಕವಾದ, ವ್ಯವಸ್ಥಿತ ಕ್ರಮದಲ್ಲಿ ರಾಜ್ಯಮಟ್ಟದಲ್ಲಿ ಅಧ್ಯಯನ ನಡೆಯಲಿ.

**ಕೊನೆಯದಾಗಿ, ನಾನು ಹೇಳಬಯಸುವುದಿಷ್ಟೆ :** ಈ ಎಲ್ಲಾ ಸಮಸ್ಯೆಗಳಿಗೆ ಮೂಲ ಕಾರಣ ಏನೆಂದರೆ, ಸರಕಾರಿ-ಸರಕಾರೇತರ ಶಾಲೆಗಳ ನಡುವಿನ ಅಂತರ. ದಕ್ಷತೆಯಲ್ಲಿ ಸರಕಾರಿ ಶಾಲಾ ಶಿಕ್ಷಕರು ಖಾಸಗಿ ಶಾಲಾ ಶಿಕ್ಷಕರಿಗಿಂತ ಏನೂ ಕಡಿಮೆಯಿಲ್ಲ, ಆದರೆ ಶಾಲಾ ಮೂಲಭೂತ ಸೌಕರ್ಯಗಳಲ್ಲಿ ಸರಕಾರಿ ಶಾಲೆಗಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿರುವುವು. ಆದುದರಿಂದ ಪಟ್ಟಣಗಳ ಥಳುಕು ಪಳುಕಿನ ಆಂಗ್ಲ ಮಾಧ್ಯಮ ಶಾಲೆಗಳನ್ನು ಮೀರಿಸುವ ರೀತಿಯಲ್ಲಿ ಸರ್ಕಾರಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯವನ್ನು ಒದಗಿಸಬೇಕು. ಸುಸಜ್ಜಿತವಾದ ಶಾಲಾ ಕೊಠಡಿಗಳು, ಪೀಠೋಪಕರಣಗಳು, ಕುಡಿಯುವ ನೀರು, ಶೌಚಾಲಯ, ಆಟದ ಬಯಲು, ೩೦ ಮಕ್ಕಳಿಗೆ ಒಬ್ಬ ಅಧ್ಯಾಪಕರಂತೆ ಕಡ್ಡಾಯವಾಗಿ ಹಳ್ಳಿ ಹಳ್ಳಿಗಳ ಶಾಲೆಗಳಿಗೆ ಒದಗಿಸಬೇಕು. ಜೊತೆಯಲ್ಲೇ ನಮ್ಮ ಪಠ್ಯಕ್ರಮದ ಸುಧಾರಣೆಯಾಗಬೇಕು. ಶೈಕ್ಷಣಿಕ ಗುಣಮಟ್ಟ ಉತ್ತಮವಾಗಬೇಕಾದರೆ ಪಠ್ಯವಿಷಯಗಳ ಶ್ರೀಮಂತಿಕೆ ಆಗಲೇಬೇಕಾಗಿದೆ. ಶಾಲೆಗಳು ಆಕರ್ಷಕವಾಗಿದ್ದು, ಪಠ್ಯಕ್ರಮ ಆಸೆ ಹುಟ್ಟಿಸುವಂತಾಗಿದ್ದರೆ, ಖಾಸಗಿ-ಸರಕಾರಿ ಶಾಲೆಗಳ ಅಂತಸ್ತಿನ ಅಂತರ ತೊಲಗಿ ನಮ್ಮ ಶಿಕ್ಷಣ ವ್ಯವಸ್ಥೆಯ ಸಮಸ್ಯೆ ಖಂಡಿತ ನಿವಾರಣೆಯಾದೀತು.

ಡಾ|| ಎನ್. ಸುಕುಮಾರ ಗೌಡ
ಸ್ಥಾಪಕ-ನಿರ್ದೇಶಕರು, ಶಿಕ್ಷಣ ಅಧ್ಯಯನ ಕೇಂದ್ರ, 'ಮಕ್ಕಳ ಮಂಟಪ', ದರ್ಬೆ, ಪುತ್ತೂರು, ದಕ್ಷಿಣ ಕನ್ನಡ - ೫೭೪ ೨೦೨

# ಮಹಾಭಾರತದ ಕುಂತಿ – ರಾಜಕೀಯ ಪ್ರಜ್ಞೆ

■ ಶೈಲಜ ಅಂಚನ್



ಶೂರಸೇನನ ಮಗಳು ಕುಂತಿಯ ಹುಟ್ಟು ಹೆಸರು ಪೃಥೆ. ಈಕೆಯ ಸಾಕುತಂದೆ ಕುಂತಿಭೋಜ. ಹೀಗೆ ಈಕೆಯ ರೂಢಿಗತ ಹೆಸರು ಕುಂತಿ. ಕುಂತಿ ಶಸ್ತ್ರ ಮತ್ತು ಶಾಸ್ತ್ರ ಎರಡೂ ವಿದ್ಯೆಯನ್ನು ಬಲ್ಲ ಸಮರ್ಥೆ. ಹಸ್ತಿನಾವತಿಯ ರಾಜ ಪಾಂಡುವಿನ ಬಾಳಸಂಗಾತಿ. ಕುಂತಿ ಬದುಕಿದ್ದ ಕಾಲದಲ್ಲಿ ರಾಜಪರಿವಾರದಲ್ಲಿ ಹೆಣ್ಣುಮಕ್ಕಳಿಗೆ ಅಸ್ತ್ರವಿದ್ಯೆ ಮತ್ತು ಶಾಸ್ತ್ರವಿದ್ಯೆಗಳನ್ನು ಕಲಿಯುವ ಅವಕಾಶವಿತ್ತು. ಆದರೆ ಮುಂದೆ ದೀರ್ಘಕಾಲ ಸ್ತ್ರೀಯರಿಗೆ ಶಿಕ್ಷಣ ನಿಷಿದ್ಧವಾದ ಕರಾಳ ಚರಿತ್ರೆ ನಮ್ಮದು. ಆದರೆ ಆ ಚರ್ಚೆ ಇಲ್ಲಿ ಅನಗತ್ಯ. ಬ್ರಿಟಿಷರು ಭಾರತದಲ್ಲಿ ಸಾರ್ವಜನಿಕ ಶಿಕ್ಷಣವನ್ನು ಕಾಯ್ದೆಯಾಗಿಸದೇ ಇರುತ್ತಿದ್ದರೆ, ಮಹಾತ್ಮಾ ಜ್ಯೋತಿರಾವ್ ಫುಲೆ, ಸಾವಿತ್ರಿ ಬಾಯಿ, ಫಾತಿಮಾ ಖಾನ್, ಮಹರ್ಷಿ ಕರ್ವೆ, ಇರಾವತಿಯವರು ಸ್ತ್ರೀ ಶಿಕ್ಷಣದ ಬಗ್ಗೆ ಚಳವಳಿ ನಡೆಸದೇ ಹೋಗಿದ್ದರೆ, ಇಂದಿಗೂ ಭಾರತದಲ್ಲಿ ಸ್ತ್ರೀಯರು ಅಕ್ಷರ ಸಂಸ್ಕೃತಿಯಿಂದ ವಂಚಿತರಾಗಿಯೇ ಇರುತ್ತಿದ್ದರು. ಆದರೆ ಮಹಾಭಾರತದ ಕುಂತಿಗೆ ಈ ಬಗೆಯ ಸಂದರ್ಭ ಇರಲಿಲ್ಲ.

ಕುಂತಿ ಬಾಲ್ಯದಿಂದಲೂ ಕ್ರಿಯಾಶೀಲ ಮಹಿಳೆ. ತನ್ನ ಕನಸುಗಳಿಗೆ ಸಾಧನೆಯ ಕಸುವಿತ್ತು ಅದನ್ನು ನನಸಾಗಿಸುವ ಛಲವಂತೆ. ದುರ್ವಾಸರ 'ವರ' ಎನ್ನುವ ಛತ್ರಛಾಯೆಯಲ್ಲಿ ಆಕೆ ಸಾಮಾಜಿಕ ಕಟ್ಟುಕಟ್ಟಳೆಯನ್ನು ಮೀರುತ್ತಾಳೆ. ಆಕೆಯ ಕನಸುಗಳಿಗೆ ಕಾವು ನೀಡುತ್ತಾಳೆ; ತನ್ನ ಗುರಿಯನ್ನು ಸಾಧಿಸುತ್ತಾಳೆ. ತನ್ನ ಖಾಸಗಿ ಬದುಕಿನ ಖಾಸಗೀತನವನ್ನು ಹೇಗೆ ಕಾಯ್ದುಕೊಳ್ಳಬೇಕು ಎನ್ನುವುದಕ್ಕೆ ಕುಂತಿಗಿಂತ ಶ್ರೇಷ್ಠ ಉದಾಹರಣೆ ದೊರೆಯುವುದು ದುರ್ಲಭ. ಮದುವೆಯ ಪೂರ್ವದಲ್ಲಿ ಸೂರ್ಯನಿಂದ 'ಕರ್ಣ'ನನ್ನು ಪಡೆಯುತ್ತಾಳೆ. ಲೋಕಾಪವಾದಕ್ಕೆ ಹೆದರಿ ನವಜಾತ ಶಿಶುವನ್ನು ಬುಟ್ಟಿಯಲ್ಲಿಟ್ಟು ಗಂಗೆಯಲ್ಲಿ ಬಿಡುತ್ತಾಳೆ. ಮುಂದೆ ಅದೇ ಕರ್ಣ, ಮಹಾರಥಿಯಾಗಿ ತನ್ನ ಮಕ್ಕಳ ಪ್ರತಿಸ್ಪರ್ಧಿಯಾಗಿ ಬೆಳೆದಾಗಲೂ, ಕರ್ಣ ತನ್ನ ಮಗನೆಂಬ ರಹಸ್ಯವನ್ನು ಕುಂತಿ ಬಹಿರಂಗಪಡಿಸುವುದಿಲ್ಲ. ಹಸ್ತಿನಾವತಿಯ ಶಸ್ತ್ರವಿದ್ಯಾ ಪರೀಕ್ಷಾಕಣದಲ್ಲಿ , ಕರ್ಣ ಅರ್ಜುನನಿಗೆ ಪಂಥಾಹ್ವಾನ ನೀಡಿದಾಗ, ಕುಂತಿ ಮೂರ್ಛೆಹೋಗುತ್ತಾಳೆ. ತನ್ನ ಕರುಳ ಕುಡಿಗಳಿಬ್ಬರು ವಿರೋಧಿಗಳಾಗಿ ನಿಲ್ಲುವುದು ಆಕೆಯ ಅಂತರಂಗವನ್ನು ಕಲಕಿದರೂ ಆಕೆಯ ರಾಜಕೀಯ ಜಾಣ್ಮೆ ತನ್ನ ಬಾಲ್ಯದ ರಹಸ್ಯವನ್ನು ಬಿಟ್ಟುಕೊಡುವುದಿಲ್ಲ. ಕುಂತಿಗೆ ತನ್ನ ಕರುಳ ಕುಡಿಯ ಮಮತೆಗಿಂತಲೂ ತನ್ನ ರಾಜಕೀಯ ಕನಸು. ಇಲ್ಲಿ ಮುಖ್ಯವೆನಿಸುತ್ತದೆ. ಪ್ರಾಯಶಃ ಈ ಮಮಕಾರವನ್ನು ಮೀರುವ ಕುಂತಿಯ ಮನೋಧರ್ಮವೇ ಆಕೆಯ ಮಕ್ಕಳಿಗೆ ಮುಂದೊಂದು ದಿನ ಹಸ್ತಿನಾವತಿಯ ರಾಜಗದ್ದುಗೆಯನ್ನು ನೀಡುತ್ತದೆ. ಹಿಂದೊಮ್ಮೆ ಮಹಾರಾಣಿಯಾಗಿದ್ದ ಕುಂತಿ ಮಗದೊಮ್ಮೆ ರಾಜಮಾತೆಯಾಗಿ ನಮ್ಮ ಪುರಾಣ ಪ್ರಪಂಚದ ಹೊಸತೊಂದು ಅಧ್ಯಾಯಕ್ಕೆ ನಾಂದಿ ಹಾಡುತ್ತಾಳೆ. ''ತಾಯಿಗಿಂತ ಮಿಗಿಲಾದ ಬಂಧುವಿಲ್ಲ, ಉಪ್ಪಿಗಿಂತ ರುಚಿಯಾದ ವಸ್ತುವಿಲ್ಲ'' ಎಂಬ ಚಾಲ್ತಿಯ ಮಾತನ್ನೇ ಮರುಚಿಂತನೆಗೆ ಒಡ್ಡುವಂತೆ ಮಾಡಿದವಳು ಕುಂತಿ.

ಕುಂತಿ ಯಾವತ್ತೂ ಭಾವುಕ ಬದುಕಿಗೆ ಬಲಿಯಾದವಳಲ್ಲ. ಈಕೆ ತನ್ನ ಬೌದ್ಧಿಕ ಶಕ್ತಿಯನ್ನು ವಾಸ್ತವದ ನೆಲೆಯಲ್ಲಿ ರೂಪಿಸುವ ಪ್ರಯೋಗಶೀಲೆ. ಹಸ್ತಿನಾವತಿಯಲ್ಲಿದ್ದು ಪತಿ ಪಾಂಡುರ ರೋಗಿ ಪಾಂಡುವಿನಿಂದ ಮಕ್ಕಳನ್ನು ಪಡೆಯದ, ಇಲ್ಲಾ ಭಯಗೊಂಡು ಇದರಿಂದ ದೂರನಿಂತ ಕುಂತಿ ಆ ಬಳಿಕ ವಾನಪ್ರಸ್ಥಾಶ್ರಮದಲ್ಲಿ ಪಾಂಡು ಮತ್ತು ಸವತಿ ಮಾದ್ರಿಯೊಂದಿಗೆ

ಕುರುವಂಶದ ರಕ್ಷಕನಾದ ಕೊನೆಯ ಔರಸ ಸಂತಾನ ಭೀಷ್ಮಾಚಾರ್ಯ ಕೂಡ ಪರಿಸ್ಥಿತಿಗೆ ತಲೆಬಾಗುತ್ತಾನೆ. ಗಾಂಧಾರಿ ಪುತ್ರರು ಸಂಪೂರ್ಣ ಗರ್ಭದಲ್ಲಿರದೆ ಪತನಗೊಂಡ ಶತಛಿದ್ರ ಪಿಂಡಗಳು ಎನ್ನುವುದು ಇಲ್ಲಿ ಗಮನಾರ್ಹ. ಇಲ್ಲೂ ಕುಂತಿ ತನ್ನ ರಾಜಕೀಯ ಚಾಣಾಕ್ಷತೆಯನ್ನು ಮೆರೆಯುತ್ತಾಳೆ. ಮುಂದೆ ಜೂಜಿನ ಪ್ರಸಂಗ, ದ್ರೌಪದಿಯ ವಸ್ತ್ರಾಪಹರಣ, ಪಾಂಡವರ ವನವಾಸ ಎಲ್ಲವೂ ನಡೆಯುತ್ತದೆ. ಹಿಂದೊಮ್ಮೆ ಪತಿಯೊಡನೆ ಕಾಡಿನಲ್ಲಿ ವನವಾಸದಲ್ಲಿದ್ದಾಗ ಕುಂತಿ ಮಾತ್ರ ತನ್ನ ಏರು ವಯಸ್ಸಿನ ನೆಪವೊಡ್ಡಿ ಹಸ್ತಿನಾವತಿಯಲ್ಲೆ ಉಳಿಯುತ್ತಾಳೆ. ಒಂದೊಮ್ಮೆ ಕುಂತಿ ಕಾಡಿಗೆ ಹೋಗುತ್ತಿದ್ದರೆ ಹಸ್ತಿನಾವತಿಯ ಜನತೆ ಪಾಂಡವರನ್ನು ಮರೆಯುವ ಸಾಧ್ಯತೆ ಇತ್ತು. ಹೀಗಾಗದಂತೆ ಕುಂತಿ ಎಚ್ಚರವಹಿಸಿದ್ದನ್ನು ಉಲ್ಲೇಖಿಸಬಹುದು. ವಿದುರನ ಮುಖೇನ ಪಾಂಡವರಿಗೆ ಹೋಗುತ್ತಿದ್ದ ಗುಪ್ತ ಸಂದೇಶಗಳು ಕುಂತಿಯ ಚಾಣಾಕ್ಷತೆಗೆ ಕನ್ನಡಿ ಹಿಡಿದಂತಿದೆ.

ಕಾಡಿನಲ್ಲಿರುತ್ತಾಳೆ. ಕಾಡಿನಲ್ಲಿದ್ದು ಹಸ್ತಿನಾವತಿಯ ಅಧಿಕಾರವನ್ನು ಮರೆಯದೆ, ಸಂತಾನ ಪಡೆಯುವ ಮಂತ್ರಾಲೋಚನೆಯಲ್ಲಿ ಪಾಂಡುವಿಗೆ ಸಲಹೆ ನೀಡಿದ ವಿವೇಕಿ ಕುಂತಿ –

''ನಮಗೆ ಔರಸ ಪುತ್ರರನ್ನು ಪಡೆಯುವ ಭಾಗ್ಯವಿಲ್ಲ. ನಿಮ್ಮ ದೈಹಿಕ ರೋಗ ಅದಕ್ಕೆ ಆಸ್ಪದ ನೀಡಲಾರದು. ಆದರೆ ಕ್ಷೇತ್ರಜ ಸಂತಾನವನ್ನು ನಾವು ಪಡೆಯುವುದು ಸಾಧ್ಯ. ಈ ಹಿಂದೆ ನಿಮ್ಮ ಹಾಗೂ ನಿಮ್ಮಣ್ಣ ಧೃತರಾಷ್ಟ್ರನ ಹುಟ್ಟೂ ಕ್ಷೇತ್ರಜ ಸಿದ್ಧಾಂತದಿಂದಲೇ ನಡೆದದ್ದು. ನಿಮ್ಮ ತಂದೆ ವಿಚಿತ್ರವೀರ್ಯ ಸ್ವರ್ಗಸ್ಥರಾದ ಬಳಿಕ ನಿಮ್ಮ ಅಜ್ಜಿ ಸತ್ಯವತಿಯ ಆದೇಶದಂತೆ ತಾಯಂದಿರಾದ ಅಂಬಿಕೆ-ಅಂಬಾಲಿಕೆಯರು ವೇದವ್ಯಾಸರಿಂದ ನಿಮ್ಮನ್ನು ಪಡೆಯುತ್ತಾರೆ. ಹೀಗೆ ಹಸ್ತಿನಾವತಿಗೆ ಉತ್ತರಾಧಿಕಾರಿಗಳನ್ನು ಕೊಡುತ್ತಾರೆ. ಹಾಗೆಯೇ ದುರ್ವಾಸ ಮುನಿಗಳ ವರದಿಂದ ನಾನು ಯಮ, ವಾಯು, ಇಂದ್ರ ಹಾಗೂ ಅಶ್ವಿನಿ ದೇವತೆಗಳನ್ನು ಬರಮಾಡಿ, ತಮಗಾಗಿ ಮತ್ತು ಕುರುಕುಲಕ್ಕಾಗಿ ಕ್ಷೇತ್ರಜ ಸಂತಾನವನ್ನು ನೀಡಬಲ್ಲೆ. ಈ ವಿದ್ಯೆಯನ್ನು ನನ್ನ ತಂಗಿ ಮಾದ್ರಿಗೂ ಕಲಿಸಿಕೊಡಬಲ್ಲೆ'' ಕುಂತಿಯ ಈ ಮಾತುಗಳನ್ನು ಕೇಳಿದಾಗ ಅಂದು ಪಾಂಡುರ ರೋಗಿ ಪಾಂಡುವಿನ ಮನಸ್ಸೇ ಕಂಪಿಸಿರಬಹುದು. ಆತನ ಭಯಗೊಂಡ ಮುಖಕ್ಕೆ ಕುಂತಿ ಎಸೆಯುವ ಸವಾಲು ನೋಡಿ :

''ಮಹಾರಾಜರೇ, ಯಾಕೆ ಭಯಗೊಳ್ಳುತ್ತೀರಿ ? ಆಚಾರ್ಯ ಭೀಷ್ಮರ ನಂತರ ಕುರು ಕುಲದಲ್ಲಿ ಒಂದೇ ಒಂದು ಔರಸ ಸಂತಾನವಿಲ್ಲ. ಏನಿದ್ದರೂ ಅದು ಕ್ಷೇತ್ರಜ ಸಂತಾನ. ಹಾಗಿರುವಾಗ ಇದರ ಇನ್ನೊಂದು ಪ್ರಯೋಗ ಧರ್ಮನಿಷಿದ್ಧವಂತೂ ಖಂಡಿತಾ ಅಲ್ಲ. ತಮ್ಮ ಸಮಚಿತ್ತದ ಆಲೋಚನೆ ಮತ್ತು ಚಾಣಾಕ್ಷತೆ ನಮಗೆ ಸಂತಾನ ಭಾಗ್ಯವನ್ನೂ, ಹಸ್ತಿನಾವತಿಯ ಅಧಿಕಾರವನ್ನೂ ಕೊಡಬಹುದು. ನಮ್ಮ ಈ ಕಾಡಿನ ಗುಡಿಸಲಲ್ಲಿ ಪುಟ್ಟ ಕಂದಗಳು ನಮ್ಮ ತೊಡೆಯೇರಿ ನಮ್ಮ ಬದುಕಿಗೆ ಹೊಸ ಚೇತನ ನೀಡಬಹುದು.'' ಇಷ್ಟೆಲ್ಲಾ ಕನಸುಗಳನ್ನು ಪಾಂಡುವಿನೊಡನೆ ಹಂಚಿಕೊಂಡ ಕುಂತಿ, ಈ ಮೊದಲು ಸೂರ್ಯನಿಂದ ಕರ್ಣನೆಂಬ ಮಗನನ್ನು ಪಡೆದಿದ್ದೇನೆಂಬ ರಹಸ್ಯ ಮಾತ್ರ ಬಿಟ್ಟುಕೊಡುವುದಿಲ್ಲ. ಪತಿಯೇ ದೇವರೆಂಬ ಅವಾಸ್ತವ ಆದರ್ಶವನ್ನು ಸಹಜವಾಗಿ ಮೀರುವ ಕುಂತಿ, ಮುಂದೆ ತನಗೆ ಪರಿಚಿತರಾದ ಯಮ ಧರ್ಮನಿಂದ ಯುಧಿಷ್ಠಿರ, ವಾಯುವಿನಿಂದ ಭೀಮ, ಇಂದ್ರನಿಂದ ಅರ್ಜುನರನ್ನು ಮಕ್ಕಳಾಗಿ ಪಡೆದರೆ, ಆಕೆಯ ಮಾರ್ಗದರ್ಶನದಲ್ಲಿ ಅಶ್ವಿನಿ ದೇವತೆಗಳಿಂದ ಮಾದ್ರಿ ನಕುಲ ಸಹದೇವ ರನ್ನು ಪಡೆಯುತ್ತಾಳೆ. ಈ ಐದು ಮಂದಿ ಪಾಂಡುಪುತ್ರರಾಗಿ ಕಾಡಿನಲ್ಲಿ ಬೆಳೆಯುತ್ತಾರೆ.

ರೋಗಿಯಾದ ಪಾಂಡು, ಕಾಡಿನಲ್ಲಿ ಮಾಡಬಾರದನ್ನು ಮಾಡಿ ಕಣ್ಣುಮುಚ್ಚುತ್ತಾನೆ. ಆತನ ಅತಿ ಕಾಮುಕತೆಯನ್ನು ನಮ್ಮ ಪುರಾಣ ಪ್ರಪಂಚ 'ಋಷಿ ಶಾಪದ' ಉದಾತ್ತೀಕರಣಕ್ಕೆ ಕೊಂಡೊಯ್ದಿದ್ದರೂ ಅದು ವಾಸ್ತವವಾಗಿ ನಿರ್ವೀರ್ಯನೊಬ್ಬನ ಸಹಜ ಸಾವು. ಈ ಸಹಜ ಸಾವಿಗೆ ಭಾವುಕಳಾದ ಮಾದ್ರಿ ಪತಿಯೊಡನೆ ಚಿತೆಯೇರಿ ಸಹಗಮನ ಮಾಡುತ್ತಾಳೆ. ಆದರೆ ಮಾದ್ರಿಯ ಆತ್ಮ, ಕುಂತಿ ಮಕ್ಕಳ ಹೊಣೆಗಾರಿಕೆಯ ನೆಪದಲ್ಲಿ ಸಹಗಮನ ಮಾಡುವುದಿಲ್ಲ. ಇಲ್ಲೂ ಸತಿ ಸಹಗಮನದ ಪರಂಪರೆಗೆ ಕುಂತಿಯ ಪ್ರತಿಭಟನಾರಹಿತ ಚಾಲಾಕಿತನ ಎದ್ದು ಕಾಣುತ್ತದೆ. ಅದು ಅಲ್ಲಿಗೇ ಮುಗಿಯದೆ ಮಕ್ಕಳ ಜೊತೆ ಕುಂತಿ ಪುನರಪಿ ಹಸ್ತಿನಾವತಿ ಸೇರುವುದು ಮಹಾಭಾರತದ ಚರಿತ್ರೆಗೇನೆ ಒಂದು ಹೊಸ ತಿರುವು.

ಹಸ್ತಿನಾವತಿಯಲ್ಲಿ ಕುಂತಿಯ ಮರು ಪ್ರವೇಶ, ಅದೂ ವಾನಪ್ರಸ್ಥಾಶ್ರಮದಿಂದ ಅಂದಿನ ರಾಜಕೀಯ ಸಿದ್ಧಾಂತವನ್ನೇ ಅಲುಗಾಡಿಸುತ್ತದೆ. ಅಲ್ಲಿಯವರೆಗೆ ಯುವರಾಜನಂತೆ ಭೀಷ್ಮ ದ್ರೋಣರಿಂದ ಪ್ರೀತಿಸಲ್ಪಟ್ಟ ಸುಯೋಧನ, ಮುಂದೆ ದುರ್ಯೋಧನನಾಗಿ ಹಿರಿಯರ ಪ್ರೀತಿಯನ್ನು ಕಳಕೊಳ್ಳುತ್ತಾನೆ. ಇದರಿಂದಾಗಿ ತನ್ನದಾಗಬೇಕಾಗಿದ್ದ ಯುವರಾಜನ ಪಟ್ಟವು ಕುಂತಿಯ ಮಗ ಯುಧಿಷ್ಠಿರನಿಗೆ ಸಲ್ಲುತ್ತದೆ. ಇದು ಕುಂತಿ ತನ್ನ ಮಕ್ಕಳನ್ನು ರೂಪಿಸಿದ ಹಿನ್ನೆಲೆಯಲ್ಲಿದೆ. ಕುಂತಿಯ ಮಕ್ಕಳು ಭೀಷ್ಮ-ದ್ರೋಣ-ಕೃಷ್ಣರೂ ಸೇರಿ ಎಲ್ಲರಿಗೂ ಪ್ರಿಯರಾದರೆ ಗಾಂಧಾರಿಯ ಮಕ್ಕಳಲ್ಲಿ ಎಲ್ಲರೂ ದೋಷವನ್ನು ಹುಡುಕುತ್ತಾರೆ. ಮುಂದೆ ಹಸ್ತಿನಾವತಿಯ ಅರಮನೆಯ ಎದುರು ಇಂದ್ರಪ್ರಸ್ಥದಲ್ಲಿ ಇನ್ನೊಂದು ಅರಮನೆ ಪಾಂಡವರಿಗಾಗಿ ಸಿದ್ಧಪಡಿಸಲಾಗುತ್ತದೆ. ಕುರುವಂಶ ವಿಭಜಿಸಲ್ಪಡುತ್ತದೆ. ಕುರುವಂಶದ ರಕ್ಷಕನಾದ ಕೊನೆಯ ಔರಸ ಸಂತಾನ ಭೀಷ್ಮಾಚಾರ್ಯ ಕೂಡ ಪರಿಸ್ಥಿತಿಗೆ ತಲೆಬಾಗುತ್ತಾನೆ. ಗಾಂಧಾರಿ ಪುತ್ರರು ಸಂಪೂರ್ಣ ಗರ್ಭದಲ್ಲಿರದೆ ಪತನಗೊಂಡ ಶತಛಿದ್ರ ಪಿಂಡಗಳು ಎನ್ನುವುದು ಇಲ್ಲಿ ಗಮನಾರ್ಹ. ಇಲ್ಲೂ ಕುಂತಿ ತನ್ನ ರಾಜಕೀಯ ಚಾಣಾಕ್ಷತೆಯನ್ನು ಮೆರೆಯುತ್ತಾಳೆ. ಮುಂದೆ ಜೂಜಿನ ಪ್ರಸಂಗ, ದ್ರೌಪದಿಯ ವಸ್ತ್ರಾಪಹರಣ, ಪಾಂಡವರ ವನವಾಸ ಎಲ್ಲವೂ ನಡೆಯುತ್ತದೆ. ಒಂದೊಮ್ಮೆ ಪತಿಯೊಡನೆ ಕಾಡಿನಲ್ಲಿ ವನವಾಸದಲ್ಲಿದ್ದಾಗ ಕುಂತಿ ಮಾತ್ರ ತನ್ನ ಮುದಿ ವಯಸ್ಸಿನ ನೆಪವೊಡ್ಡಿ ಹಸ್ತಿನಾವತಿಯಲ್ಲೇ ಉಳಿಯುತ್ತಾಳೆ. ಆಗ ಆಕೆಯನ್ನು ಹಸ್ತಿನಾವತಿಯಲ್ಲಿ ಯಾರೂ ತಮ್ಮ ಮನೆಗೆ ಆಮಂತ್ರಿಸದಾಗ ವಿದುರನ ಮನೆಯಲ್ಲಿ ಆಶ್ರಯ ಪಡೆಯುತ್ತಾಳೆ. ಹಸ್ತಿನಾವತಿಯಲ್ಲಿದ್ದೇ ಪಾಂಡವರ ಬಗ್ಗೆ ಜನಾಭಿಪ್ರಾಯವನ್ನು ರೂಪಿಸುತ್ತಾಳೆ. ಒಂದೊಮ್ಮೆ ಕುಂತಿ ಕಾಡಿಗೆ ಹೋಗುತ್ತಿದ್ದರೆ ಹಸ್ತಿನಾವತಿಯ ಜನತೆ ಪಾಂಡವರನ್ನು ಮರೆಯುವ ಸಾಧ್ಯತೆ ಇತ್ತು. ಹೀಗಾಗದಂತೆ ಕುಂತಿ ಎಚ್ಚರವಹಿಸಿದ್ದನ್ನು ಉಲ್ಲೇಖಿಸಬಹುದು. ವಿದುರನ ಮುಖೇನ ಪಾಂಡವರಿಗೆ ಹೋಗುತ್ತಿದ್ದ ಗುಪ್ತ ಸಂದೇಶಗಳು ಕುಂತಿಯ ಚಾಣಾಕ್ಷತೆಗೆ ಕನ್ನಡಿ ಹಿಡಿದಂತಿದೆ.

ಇಲ್ಲಿ ಇನ್ನೊಂದು ಘಟನೆಯನ್ನು ಚರಿತ್ರೆಯ ಆಸಕ್ತರು ಮರೆಯಬಾರದು. ಕುಂತಿ ಮಕ್ಕಳನ್ನು ಕರಕೊಂಡು ಹಸ್ತಿನಾವತಿಗೆ ಬಂದ ದಿನವೇ ಆಕೆಯ ಅತ್ತೆಯರಾದ ಅಂಬಿಕೆ, ಅಂಬಾಲಿಕೆಯರು; ಇವರಿಬ್ಬರ ಅತ್ತೆ ಮಹಾಮಾತೆ ಸತ್ಯವತಿಯವರು ಹಸ್ತಿನಾವತಿಯಿಂದ ಕಾಡಿಗೆ ಹೋಗುತ್ತಾರೆ. ಇಲ್ಲಿ ಸತ್ಯವತಿಯ ಬಾಯಿಯಿಂದ ಬರುವ ಉದ್ಗಾರ ನೋಡಿ : ''ಇನ್ನು ಮುಂದೆ ಹಸ್ತಿನಾವತಿಯ ಅರಮನೆಯಲ್ಲಿ ಒಳ್ಳೆಯ ದಿನಗಳನ್ನು ಕಾಣಲಾರೆವು''. ಈವರೆಗೆ ಅವಿಭಕ್ತ ಕುಟುಂಬ ಪರಂಪರೆಯ ಆದರ್ಶವು ಭೀಷ್ಮ, ಸತ್ಯವತಿಯರಿಂದ ಮೊದಲ್ಗೊಂಡು, ಗಾಂಧಾರಿಯವರೆಗೆ ಹಸ್ತಿನಾವತಿಯಲ್ಲಿ ಪರಿಪೋಷಿಸಲ್ಪಟ್ಟಿದ್ದರೆ, ಅದು ಕುಂತಿಯಿಂದ ನಿರ್ನಾಮವಾಗಬಹುದು ಎಂಬ ಸುಳಿವೇ ಮಹಾಮಾತೆ ಸತ್ಯವತಿಯ ನಿರ್ಗಮನಕ್ಕೆ ಕಾರಣವಾಗಿರಬಹುದು. ಚರಿತ್ರೆಯುದ್ದಕ್ಕೂ ತನಗಿಂತ ರೂಪವತಿ ಸವತಿ ಮಾದ್ರಿಯನ್ನು ಒಲಿಸಿಕೊಂಡ ಕುಂತಿ, ಗಾಂಧಾರ ದೇಶದ ರಾಜಕುಮಾರಿ, ನೇರ ನುಡಿಯ ಗಾಂಧಾರಿಯನ್ನು ಅಕ್ಕನ ಸ್ಥಾನದಲ್ಲಿಟ್ಟು ಗೌರವಿಸಿದ ಉದಾಹರಣೆಗಳು ಮಹಾಭಾರತದಲ್ಲಿ ದೊರೆಯುವುದಿಲ್ಲ. ಇದಕ್ಕೆ ಕಾರಣಗಳು ಹಲವು ಇದ್ದರೂ ಅವಿಭಕ್ತ ಕುಟುಂಬದ ಹಸ್ತಿನಾವತಿಯ ಮಹಾರಾಣಿಯಾದ ಗಾಂಧಾರಿಯನ್ನು ತಾತ್ವಿಕವಾಗಿ ತನ್ನಿಂದ ದೂರವಾಗಿಸಿಕೊಂಡ ಮಾತ್ರವಲ್ಲದೆ ತನ್ನ ಮಕ್ಕಳಲ್ಲೂ ಆ ದೂರವನ್ನು ಕಾಯ್ದುಕೊಂಡ ಕುಂತಿಯ ತಂತ್ರ, ಪಾಂಡವರು ಅಧಿಕಾರವನ್ನು ಪಡೆಯಲು ಒಂದು ಕೇಂದ್ರಬಿಂದುವಾಗುತ್ತದೆ. ತನ್ನ ಸೋದರ ಅತ್ತೆಯ ಮಗ ಕೃಷ್ಣನ ಶಕ್ತಿ ಸಾಮರ್ಥ್ಯವನ್ನು ತನ್ನ ಮಕ್ಕಳ ಅಭ್ಯುದಯಕ್ಕೆ ಬಳಸಿಕೊಂಡು ಕುರುಕ್ಷೇತ್ರದ ಯುದ್ಧದಲ್ಲಿ ತನ್ನವರ ಗೆಲುವಿಗೆ ಕಾರಣಳಾಗುತ್ತಾಳೆ. ತನ್ನ ಐದು ಮಕ್ಕಳಿಗೂ ದ್ರೌಪದಿಯನ್ನು ಮಡದಿಯಾಗಿಸಿ ಬಹುಪತಿತ್ವದ ನೆಲೆಗಟ್ಟಿನಲ್ಲಿ ಮಕ್ಕಳ ಒಗ್ಗಟ್ಟನ್ನು ಕಾಯ್ದುಕೊಂಡ ಕುಂತಿ ತಲೆ ಮಹಾತಲೆಯೇ ಹೌದು.

ಕುರುಕ್ಷೇತ್ರದಲ್ಲಿ ತನ್ನ ಮಕ್ಕಳು ಗೆಲ್ಲಬೇಕೆನ್ನುವ ಕನಸನ್ನು ನನಸಾಗಿಸುವ ಹಾದಿಯಲ್ಲಿ ಆಕೆ ತಾಯಿಯ ಮಮಕಾರವನ್ನೂ ಧಿಕ್ಕರಿಸಿ ಏಕಾಂಗಿಯಾಗಿ ನಡುರಾತ್ರಿಯಲ್ಲಿ ತನ್ನ ಹಿರಿಯ ಮಗ ಕರ್ಣನನ್ನು ಭೇಟಿಯಾಗುತ್ತಾಳೆ. ಈವರೆಗೆ ಯಾರಲ್ಲೂ ಬಿಚ್ಚಿಕೊಳ್ಳದ ತನ್ನ ವಿವಾಹಪೂರ್ವದ ಚರಿತ್ರೆಯನ್ನು ಧೈರ್ಯವಾಗಿ ಕರ್ಣನಲ್ಲಿ ಬಿಚ್ಚಿಕೊಳ್ಳುತ್ತಾಳೆ :

''ನೀನು ನನ್ನ ಹಿರಿಯ ಮಗ. ನೀನೇ ನಮ್ಮ ಕುರುಕುಲಕ್ಕೆ ಅರಸನಾಗಬೇಕು. ನೀನು ಅರಸನಾದರೆ ಯುಧಿಷ್ಠಿರನು ಮಂತ್ರಿಯಾಗುತ್ತಾನೆ. ಭೀಮನು ಸೇನಾಧಿಪತಿಯಾಗುತ್ತಾನೆ. ಅರ್ಜುನನು ಸಾರಥಿಯಾಗುತ್ತಾನೆ. ನಕುಲ ಸಹದೇವರು ನಿನಗೆ ಚಾಮರ ಬೀಸುತ್ತಾರೆ. ನೂರುಮಂದಿ ಕೌರವರು ನಿನ್ನ ಆಜ್ಞಾವರ್ತಿಗಳಾಗುತ್ತಾರೆ. ನೀನು ನನ್ನ ಜೊತೆ ಬಾ'' ಎಂದು ಕರೆಯುತ್ತಾಳೆ. ಹಿಂದೊಮ್ಮೆ ಜಾತಿಯ ಪ್ರಶ್ನೆ ಮುಂದಾಗಿ, ಕರ್ಣ ಸೂತಪುತ್ರನೆಂದು ಲೋಕ ಜರೆದಾಗ ಕುಂತಿ ಏನನ್ನೂ ಮಾಡದೆ ಮೂರ್ಛೆಹೋಗುತ್ತಾಳೆ. ಕನಿಷ್ಠ ಸಾಮಾಜಿಕ ನ್ಯಾಯಕ್ಕಾಗಿಯಾದರೂ ಆಕೆ ಎಂದೂ ಧ್ವನಿಯೆತ್ತಿದವಳಲ್ಲ. ಆದರೆ ಈಗ ತನ್ನ ಮಕ್ಕಳಾದ ಪಾಂಡವರಿಗೆ ಅಧಿಕಾರ ಗಳಿಸಿಕೊಡಲು ತನ್ನ ಹಿರಿಯ ಮಗನ ಬಲಿ ತೆಗೆದುಕೊಳ್ಳಲು ಆಕೆಯ ಚಾಲಾಕಿತನ ಅಧ್ಯಯನಯೋಗ್ಯವಾದುದು. ಇದು ಆಕೆಯ ಪ್ರಗಲ್ಭ ರಾಜಕೀಯ ಮನೋ ಧರ್ಮಕ್ಕೆ ಪ್ರತಿಮೆಯಾಗಿದೆ. ನಮ್ಮ ಪುರಾಣದ ಕುಂತಿ, ಜನಪರ ನಿಲುವಿನ ಕುಂತಿಯಂತೂ ಖಂಡಿತಾ ಅಲ್ಲ. ಆದರೆ ಸ್ತ್ರೀ ಸ್ವಾಭಿಮಾನದ ದೃಷ್ಟಿಯಲ್ಲಿ ಆಕೆ ಸಂಪ್ರದಾಯವನ್ನು ಮೀರುವ ದಿಟ್ಟ ಹೆಣ್ಣಾಗಿ ನಮಗೆ ಆದರಣೀಯಳಾಗುತ್ತಾಳೆ. ಅದೇ ರೀತಿ ಲಿಂಗ ಅಸಮಾನತೆಯ ಸಮಾಜದಲ್ಲಿ ಸಾವಿರಾರು ಹೆಣ್ಣುಗಳ ಕನಸುಗಳು ಮಣ್ಣುಗೂಡುತ್ತಿರುವಾಗ ಅದನ್ನು ಪಡೆಯುವ ಶಕ್ತಿಕೇಂದ್ರ ವಾಗಿ ಚರಿತ್ರೆಯ ಅಧ್ಯಯನ ಯಾವತ್ತೂ ಶಕ್ತಿಶಾಲಿಯಾಗಿದೆ. ಕುಂತಿಯಿಂದ ಲಿಂಗ ಸಮಾನತೆಯ ಆಶಯಗಳನ್ನು ಅರಿಯುತ್ತಾ ನಮ್ಮ ಸ್ತ್ರೀ ಸಮುದಾಯ ಸಮ ಸಂಸ್ಕೃತಿಯ ಸಮಾಜ ವನ್ನು ಕಟ್ಟಬೇಕಾಗಿದೆ. ಮನೆಯ ಒಳಗೂ ಮನೆಯ ಹೊರಗೂ ನಿರಂತರ ದುಡಿಯುವ, ಹೀಗೆ ದುಡಿದೂ ತಮ್ಮ ಕನಸುಗಳನ್ನು ಮಣ್ಣುಗೂಡಿಸುತ್ತಿರುವ ಇಂದಿನ ಸ್ತ್ರೀಯರು ಕುಂತಿಯಿಂದ ಸ್ತ್ರೀ ಸಮಾನತೆಯನ್ನು ಅಂತೆಯೇ ಕುಂತಿ ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ ಸತ್ಯವತಿ ಪ್ರತಿಪಾದಿಸುತ್ತಿದ್ದ ಸಾಮಾಜಿಕ ಸಮಾನತೆಯನ್ನು ಕಾಯಾ ವಾಚಾ ಮನಸಾ ಮೈಗೂಡಿಸಿ ಕೊಳ್ಳದಿದ್ದರೆ, ಶೋಷಣೆಯ ಬೆಂಕಿ ಸ್ತ್ರೀ ಸಮುದಾಯವನ್ನೇ ಸುಟ್ಟುಬಿಡಬಹುದು.

*(ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಗೋರೆಗಾಂವ್ ಕರ್ನಾಟಕ ಸಂಘದ ಮಹಿಳಾ ವಿಭಾಗ ಆಯೋಜಿಸಿದ ಗೋಷ್ಠಿಯೊಂದರಲ್ಲಿ ನೀಡಿದ ಉಪನ್ಯಾಸ.)*

**ಶೈಲಜ ಅಂಚನ್**
ಬಿ-೮೦೮, ಟ್ವಿನ್ ಟವರ್ಸ್, ಮಾನಿಷ್ ಪಾರ್ಕ್, ಪಂಪ್ ಹೌಸ್, ಅಂಧೇರಿ (ಪೂರ್ವ), ಮುಂಬೈ - ೪೦೦ ೦೯೩

# ಪದವಿ ತರಗತಿಗಳಲ್ಲಿ ಕನ್ನಡ ಭಾಷೆ ಮತ್ತು ಬೋಧನೆ

◇ ಡಾ|| ಕೆ. ವಿ. ನಾರಾಯಣ

**ಪ**ದವಿ ತರಗತಿಗಳಲ್ಲಿ ಕನ್ನಡ ಭಾಷಾ ಪಠ್ಯಗಳನ್ನು ಏಕೆ ಬೋಧಿಸಬೇಕು ಎಂಬ ಪ್ರಶ್ನೆಗೆ ಒಂದು ಸಾಮಾನ್ಯ ಉತ್ತರವನ್ನು ನೀಡುವುದು ಕಷ್ಟ. ವಿದ್ಯಾರ್ಥಿಗಳು ತಾವು ಏಕೆ ಪದವಿ ತರಗತಿಗಳಲ್ಲಿ ಕನ್ನಡವನ್ನು ಓದಬೇಕು ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಅದಕ್ಕೆ ಅವರಲ್ಲೂ ಉತ್ತರಗಳಿರುವಂತೆ ತೋರುತ್ತಿಲ್ಲ. ಪರಿಸ್ಥಿತಿ ಹೀಗಿರುವಾಗ ಪಠ್ಯಕ್ರಮದ ನಿರ್ಧಾರ, ಪಾಠ್ಯಗಳ ಆಯ್ಕೆ, ಬೋಧನ ವಿಧಾನಗಳ ನಿರ್ಧಾರ ಮತ್ತು ಮೌಲ್ಯಮಾಪನ ವಿಧಾನಗಳ ಬಗ್ಗೆ ಯಾವ ನಿರ್ಣಯವನ್ನೂ ನಾವು ಮಾಡುವ ಸ್ಥಿತಿಯಲ್ಲಿ ಇಲ್ಲ. ಈ ಪರಿಸ್ಥಿತಿ ಇಂದು ನಿನ್ನೆಯದಲ್ಲ. ಹಲವಾರು ದಶಕಗಳಿಂದಲೂ ಇದೇ ಸ್ಥಿತಿ ಇದೆ. ಈ ಹೊಂದಾಣಿಕೆ ಇಲ್ಲದ ಅವಸ್ಥೆಯಲ್ಲಿ ಅಧ್ಯಾಪಕರು ತಮ್ಮದೇ ದಾರಿಯನ್ನು ಕಂಡುಕೊಂಡು ಹೇಗೋ ಮುಂದೆ ಸಾಗುತ್ತಿದ್ದಾರೆ ಅಥವಾ ದಾರಿಗಾಣದೆ ಹತಾಶರಾಗಿದ್ದಾರೆ. ನಾವೀಗ ವಿದ್ಯಾರ್ಥಿಗಳ ಕೊರತೆ, ಉತ್ತಮ ಪಾಠ್ಯಗಳ ಕೊರತೆ, ವಿದ್ಯಾರ್ಥಿಗಳ ನಿರಾಸಕ್ತಿ, ಅಧ್ಯಾಪಕರ ಸಿದ್ಧತೆಯ ಕೊರತೆ ಮುಂತಾದ ಸಮಸ್ಯೆಗಳನ್ನು ಕುರಿತು ಚರ್ಚಿಸುವುದು ನಿರುಪಯುಕ್ತವೆಂದೇ ನನ್ನ ತಿಳುವಳಿಕೆ. ಇಡೀ ಪರಿಸ್ಥಿತಿಯೇ ಒಂದು ಮರು ಅವಲೋಕನವನ್ನು ಅಪೇಕ್ಷಿಸುತ್ತದೆ.

ನಾನೀಗ ಈ ಸಮಸ್ಯೆಯನ್ನು ಭಾಷೆಯ ನಿಟ್ಟಿನಿಂದ ನೋಡಲು ಉದ್ದೇಶಿಸಿದ್ದೇನೆ. ಕನ್ನಡ ಪಾಠ್ಯಗಳನ್ನು ಕನ್ನಡ ಸಾಹಿತ್ಯ ಸಂಸ್ಕೃತಿಯನ್ನು ವಿದ್ಯಾರ್ಥಿಗಳಿಗೆ ಪರಿಚಯಿಸಲು ಮತ್ತು ಕನ್ನಡ ಭಾಷಾ ಕೌಶಲಗಳ ಅಭಿವೃದ್ಧಿಗಾಗಿ ಬೋಧಿಸುತ್ತೇವೆ ಎಂಬ ಗುರಿಯನ್ನು ನಾವೀಗ ಕಲ್ಪಿಸಿಕೊಳ್ಳೋಣ. ಮೊದಲ ಗುರಿಯು ಒಂದು ಇಕ್ಕಟ್ಟನ್ನು ರೂಪಿಸಿಕೊಳ್ಳುತ್ತದೆ. ಏಕೆಂದರೆ ವಿದ್ಯಾರ್ಥಿಗಳು ಕಡ್ಡಾಯವಾಗಿ ಇಂಗ್ಲಿಷನ್ನೂ ಓದುತ್ತಿದ್ದಾರೆ. ಅಲ್ಲಿಯೂ ಸಾಹಿತ್ಯ ಸಂಸ್ಕೃತಿಯ ಪರಿಚಯವೇ ಗುರಿಯಾಗಿರುತ್ತದೆ. ಹಾಗಿದ್ದಲ್ಲಿ ಇದು ಸಮಯ ಶ್ರಮಗಳ ಅಪವ್ಯಯವೇ ಅಲ್ಲವೇ ? ಅಥವಾ ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯ ಸಂಸ್ಕೃತಿಗಳು ಬೇರೆ ಬೇರೆಯೇ ? ಈ ಭಿನ್ನತೆಯನ್ನು ವಿದ್ಯಾರ್ಥಿಗಳು ಅರಿತುಕೊಳ್ಳುತ್ತಿದ್ದಾರೆಯೇ ? ಇದೂ ಕೂಡ ಒಂದು ಗೊಂದಲವನ್ನು ಸೃಷ್ಟಿಸುವ ಪರಿಸ್ಥಿತಿಯೇ ಆಗಿದೆ. ಸದ್ಯ ನಾನೀಗ ಈ ಪ್ರಶ್ನೆಯನ್ನು ಮೈಮೇಲೆ ಎಳೆದುಕೊಳ್ಳುವುದಿಲ್ಲ. ಎರಡನೆಯ ಗುರಿಯನ್ನು ಗಮನಿಸೋಣ. ಭಾಷಾ ಕೌಶಲಗಳ ಅಭಿವೃದ್ಧಿ ಎಂದರೇನು ? ಓದುವ, ಬರೆಯುವ, ಮಾತಾಡುವ ಮತ್ತು ಆಲಿಸಿ ತಿಳಿದುಕೊಳ್ಳುವ ಕೌಶಲಗಳನ್ನು ಪಡೆದುಕೊಳ್ಳುವುದು ಭಾಷಾ ಕಲಿಕೆಯ ಗುರಿಯಾಗಿದೆ. ಭಾಷಾ ಪಾಠ್ಯಗಳ ಮೂಲಕ ಈ ಗುರಿಯನ್ನು ಸಾಧಿಸುವುದು ಮೂಲ ಉದ್ದೇಶವಾಗಿದೆ ಎಂದು ತಿಳಿಯಬೇಕಾಗಿದೆ. ಕನ್ನಡವನ್ನು ಮನೆಯ ಮಾತಾಗಿ, ಮೊದಲ ಭಾಷೆಯಾಗಿ ಪಡೆದ ಮಕ್ಕಳಿಗೆ ಈ ಕೌಶಲಗಳಲ್ಲಿ ಎರಡು (ಮಾತಾಡುವುದು ಮತ್ತು ಆಲಿಸಿ ತಿಳಿದುಕೊಳ್ಳುವುದು) ಶಾಲಾ ಶಿಕ್ಷಣದ ಹೊರಗೂ ಅನೌಪಚಾರಿಕವಾಗಿ ಲಭ್ಯವಿರುತ್ತದೆ. ಶಾಲೆಯಲ್ಲಿ ಔಪಚಾರಿಕ ಕಲಿಕೆಯ ಮೂಲಕ ಓದುವುದು ಮತ್ತು ಬರೆಯುವುದು ವಿದ್ಯಾರ್ಥಿಗಳಿಗೆ ದೊರಕುತ್ತದೆ. ಪದವಿ ತರಗತಿಗಳಿಗೆ ಬರುವ ಮೊದಲು ಹನ್ನೆರಡು ವರ್ಷಗಳ ಕಾಲ ಕನ್ನಡವನ್ನು ಶಾಲೆಗಳಲ್ಲಿ ವಿದ್ಯಾರ್ಥಿಗಳು ಓದಿರುತ್ತಾರೆ. ಹಾಗಾಗಿ ಅವರಲ್ಲಿ ಈ ಕೌಶಲಗಳನ್ನು ಹೊಸದಾಗಿ ಮೂಡಿಸುವ ಜವಾಬ್ದಾರಿಯನ್ನು ಪದವಿ ತರಗತಿಗಳಲ್ಲಿ ನಿರ್ವಹಿಸುವ ಅಗತ್ಯವಿರಲಿಕ್ಕಿಲ್ಲ. ಇಲ್ಲಿ ಆ ಕೌಶಲಗಳ ಸೂಕ್ತ ಬಳಕೆಗೆ ಅಗತ್ಯವಾದ ಪರಿಸರವನ್ನು ರೂಪಿಸುವ ಯತ್ನವನ್ನು ನಾವು ಮಾಡಬಹುದು ಅಷ್ಟೆ. ಈ ಗುರಿಯನ್ನು ಸಾಧಿಸಲು ಅನುಕೂಲವಾಗುವಂತೆ ಪದವಿ ತರಗತಿಗಳ ಕನ್ನಡ ಬೋಧನೆ ಮತ್ತು ಕಲಿಕೆಗಳು ನಡೆಯುತ್ತಿವೆಯೇ ಎಂಬುದಷ್ಟೇ ಈಗ ನಮ್ಮ ಪ್ರಶ್ನೆಯಾಗಿದೆ.

ನಮ್ಮ ಬಹುಪಾಲು ಅಧ್ಯಾಪಕರ ದೂರನ್ನು ಗಮನಿಸೋಣ. ವಿದ್ಯಾರ್ಥಿಗಳಿಗೆ ಪದವಿ ತರಗತಿಗಳಿಗೆ ಬಂದಿದ್ದರೂ ಕಾಗುಣಿತ ದೋಷವಿಲ್ಲದೆ ಕನ್ನಡವನ್ನು ಬರೆಯಲು ಬರುವುದಿಲ್ಲ. ಕನ್ನಡದಲ್ಲಿ ಎರಡು ವಾಕ್ಯಗಳನ್ನು ಮಾತಾಡಲು ಅವರಿಗೆ ಸಾಧ್ಯವಾಗುವುದಿಲ್ಲ. ಇನ್ನು ಕೇಳಿದ್ದನ್ನು ಮತ್ತು ಓದಿದ್ದನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾರೋ ಇಲ್ಲವೋ ಎಂಬುದನ್ನು ಕುರಿತು ನಮ್ಮ ಗೊಣಗಾಟಗಳು ಅಷ್ಟಿಲ್ಲ. ಏಕೆಂದರೆ ಆ ಕೌಶಲಗಳನ್ನು ಕುರಿತು ನಾವು ಹೆಚ್ಚು ತಲೆಕೆಡಿಸಿಕೊಳ್ಳುವುದಿಲ್ಲ. ಹೀಗಿದ್ದಲ್ಲಿ ವಿದ್ಯಾರ್ಥಿಗಳಲ್ಲಿ ಭಾಷಾ ಕೌಶಲಗಳು ಅಭಿವೃದ್ಧಿ ಹೊಂದಿಲ್ಲವೆಂದೇ ಅರ್ಥ. ವಿದ್ಯಾರ್ಥಿಗಳಲ್ಲಿ ಈ ಕೌಶಲಗಳು ಅಭಿವೃದ್ಧಿ ಹೊಂದಿಲ್ಲವೆಂದರೆ ಅವರು ಆ ಕೌಶಲಗಳನ್ನು ಪಡೆಯಲು ಅಸಮರ್ಥರೆಂದು ತಿಳಿಯೋಣವೇ ಅಥವಾ ಅವರಲ್ಲಿ ಆ ಕೌಶಲಗಳನ್ನು ಬೆಳೆಸಲು ನಾವು ಸಮರ್ಥರಾಗಿಲ್ಲ ಮತ್ತು ನಮ್ಮ ಶಿಕ್ಷಣ ಪದ್ಧತಿ ಅಸಮರ್ಥವಾಗಿದೆ ಎನ್ನೋಣವೇ ? ಅಥವಾ ಈಗಿನ ವಿದ್ಯಾರ್ಥಿಗಳಿಗೆ ಈ ಕೌಶಲಗಳು ಹೇಗೆ ಅಗತ್ಯವಾಗಿವೆಯೋ ಹಾಗೆ ಅವನ್ನು ಅವರಲ್ಲಿ ಬೆಳೆಸಲು ನಮಗೆ ಸಾಧ್ಯವಾಗಿಲ್ಲ ಎಂದು ತಿಳಿಯೋಣವೇ ? ಬಹುಶಃ ಕೊನೆಯ ಸಾಧ್ಯತೆಯೇ ಸರಿ ಎಂದು ನನಗೆ ತೋರುತ್ತಿದೆ. ಹೋಗಲಿ ಈಗ ಇವುಗಳನ್ನು ಬೆಳೆಸಲು ಮತ್ತು ಬಳಸಲು ಅನುಕೂಲವಾಗುವ ರೀತಿಯಲ್ಲಿ ನಾವು ಏನಾದರೂ ಮಾಡುತ್ತಿದ್ದೇವೆಯೇ ?

ಈಗ ಇನ್ನೂ ಒಂದು ಸಮಸ್ಯೆಯ ಕಡೆಗೆ ನಿಮ್ಮ ಗಮನವನ್ನು ಸೆಳೆಯುತ್ತೇನೆ. ಕಳೆದ ನಾಲ್ಕೈದು ದಶಕಗಳಲ್ಲಿ ಕನ್ನಡ ಬಳಕೆಯ ವಿಧಾನಗಳು ಬಹುವಾಗಿ ಹೆಚ್ಚಿವೆ. ಬೇರೆ ಬೇರೆ ವಲಯಗಳಲ್ಲಿ ಕನ್ನಡವನ್ನು ಬಳಸುವ ಅಗತ್ಯ ಈಗ ಹಿಂದೆಂದಿಗಿಂತಲೂ ಹೆಚ್ಚಾಗಿರುವುದನ್ನು ಯಾರಾದರೂ ಗಮನಿಸಬಹುದಾಗಿದೆ. ಹಾಗೆಯೇ ಹಿಂದೆ ಕನ್ನಡ ಬಳಕೆಯಾಗುತ್ತಿದ್ದ

ಪದವಿ ತರಗತಿಗಳಲ್ಲಿ ಕನ್ನಡ ಭಾಷಾ ಪಠ್ಯಗಳನ್ನು ಏಕೆ ಬೋಧಿಸಬೇಕು ಎಂಬ ಪ್ರಶ್ನೆಗೆ ಒಂದು ಸಾಮಾನ್ಯ ಉತ್ತರವನ್ನು ನೀಡುವುದು ಕಷ್ಟ. ವಿದ್ಯಾರ್ಥಿಗಳು ತಾವು ಏಕೆ ಪದವಿ ತರಗತಿಗಳಲ್ಲಿ ಕನ್ನಡವನ್ನು ಓದಬೇಕು ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಅದಕ್ಕೆ ಅವರಲ್ಲೂ ಉತ್ತರಗಳಿರುವಂತೆ ತೋರುತ್ತಿಲ್ಲ. ಪರಿಸ್ಥಿತಿ ಹೀಗಿರುವಾಗ ಪಠ್ಯಕ್ರಮದ ನಿರ್ಧಾರ, ಪಾಠ್ಯಗಳ ಆಯ್ಕೆ, ಬೋಧನ ವಿಧಾನಗಳ ನಿರ್ಧಾರ ಮತ್ತು ಮೌಲ್ಯಮಾಪನ ವಿಧಾನಗಳ ಬಗ್ಗೆ ಯಾವ ನಿರ್ಣಯವನ್ನೂ ನಾವು ಮಾಡುವ ಸ್ಥಿತಿಯಲ್ಲಿ ಇಲ್ಲ. ಈ ಪರಿಸ್ಥಿತಿ ಇಂದು ನಿನ್ನೆಯದಲ್ಲ. ಹಲವಾರು ದಶಕಗಳಿಂದಲೂ ಇದೇ ಸ್ಥಿತಿ ಇದೆ. ಈ ಹೊಂದಾಣಿಕೆ ಇಲ್ಲದ ಅವಸ್ಥೆಯಲ್ಲಿ ಅಧ್ಯಾಪಕರು ತಮ್ಮದೇ ದಾರಿಯನ್ನು ಕಂಡುಕೊಂಡು ಹೇಗೋ ಮುಂದೆ ಸಾಗುತ್ತಿದ್ದಾರೆ ಅಥವಾ ದಾರಿಗಾಣದೆ ಹತಾಶರಾಗಿದ್ದಾರೆ. ನಾವೀಗ ವಿದ್ಯಾರ್ಥಿಗಳ ಕೊರತೆ, ಉತ್ತಮ ಪಾಠ್ಯಗಳ ಕೊರತೆ, ವಿದ್ಯಾರ್ಥಿಗಳ ನಿರಾಸಕ್ತಿ, ಅಧ್ಯಾಪಕರ ಸಿದ್ಧತೆಯ ಕೊರತೆ ಮುಂತಾದ ಸಮಸ್ಯೆಗಳನ್ನು ಕುರಿತು ಚರ್ಚಿಸುವುದು ನಿರುಪಯುಕ್ತವೆಂದೇ ನನ್ನ ತಿಳುವಳಿಕೆ. ಇಡೀ ಪರಿಸ್ಥಿತಿಯೇ ಒಂದು ಮರು ಅವಲೋಕನವನ್ನು ಅಪೇಕ್ಷಿಸುತ್ತದೆ.

ವಲಯಗಳು ಈಗ ಕುಗ್ಗಿರುವ ಉದಾಹರಣೆಗಳು ಇವೆ. ಕನ್ನಡ ಮಾತಿರಲಿ, ಬರಹವಿರಲಿ ಅವು ಈಗ ಹೆಚ್ಚು ವ್ಯಾಪಕ ನೆಲೆಯ ಬಳಕೆಯನ್ನು ಪಡೆದಿರುವುದಂತೂ ನಿಜ. ಈ ಅಗತ್ಯಗಳಿಗೆ ತಕ್ಕಂತೆ ನಮ್ಮ ವಿದ್ಯಾರ್ಥಿಗಳು ಕನ್ನಡವನ್ನು ಬಳಸಲು ಸಿದ್ಧರಾಗುತ್ತಿದ್ದಾರೆಯೇ ? ನಮ್ಮ ಕನ್ನಡ ಬೋಧನೆ ಅವರನ್ನು ಈ ಸಿದ್ಧತೆಗಳಿಗೆ ಅನುಗುಣವಾಗಿ ಸನ್ನದ್ಧರನ್ನಾಗಿ ಮಾಡುತ್ತಿದೆಯೇ ? ನಾವು ತರಗತಿಗಳಲ್ಲಿ ಓದಲು ತೊಡಗಿಸುವ ಕನ್ನಡ ಸಂಕಥನಗಳು ಈ ಸಿದ್ಧತೆಗೆ ತಕ್ಕ ಸಾಮಗ್ರಿಗಳನ್ನು ಒದಗಿಸಲು ತಕ್ಕಂತಿವೆಯೇ ? ಈ ಎಲ್ಲ ಪ್ರಶ್ನೆಗಳನ್ನು ನಾವೀಗ ಕೇಳಿಕೊಳ್ಳಬೇಕಾಗಿದೆ.

ಭಾಷೆಯನ್ನು ಕಲಿಯುವುದು ಎಂದರೆ ಅದರ ನಿಯಮಾವಳಿಗಳನ್ನು ಅದರ ಶುದ್ಧಾಶುದ್ಧ ರೂಪಗಳನ್ನು ತಿಳಿದುಕೊಳ್ಳುವುದು ಎಂದಷ್ಟೇ ನಾವು ತಿಳಿದಿದ್ದೇವೆ ನಿಜ. ಇದೂ ಭಾಷೆಯ ಕಲಿಕೆಯೇ ಸರಿ. ಆದರೆ ಅದನ್ನೂ ಮೀರಿ ಅದರ ಜೊತೆಗೇ ಸಂವಹನ ಸಾಮರ್ಥ್ಯವನ್ನೂ ವಿದ್ಯಾರ್ಥಿಗಳು ಪಡೆದುಕೊಳ್ಳಬೇಕಾಗುತ್ತದೆ. ಸಂವಹನ ಸಾಮರ್ಥ್ಯ ಎಂದು ಹೇಳಿದೆ. ಹಾಗಂದರೇನು ಎಂದು ವಿವರಿಸಿಕೊಳ್ಳುವ ಅಗತ್ಯವಿದೆ. ವಿವಿಧ ವಲಯಗಳಲ್ಲಿ ಕನ್ನಡ ಭಾಷೆಯನ್ನು ಬಳಸುವ ಕೌಶಲ್ಯಗಳನ್ನು ಪಡೆದುಕೊಳ್ಳುವುದೇ ಸಂವಹನ ಸಾಮರ್ಥ್ಯದ ಗಳಿಕೆಯಾಗಿದೆ. ಇದು ಮೇಲುನೋಟಕ್ಕೆ ಸರಳವಾಗಿ ಕಾಣುವ ಗುರಿಯಂತೆ ತೋರುತ್ತದೆ. ಆದರೆ ಅದು ಹಾಗಿಲ್ಲ. ಏಕೆಂದರೆ ಭಿನ್ನ ವಲಯಗಳ ಅಪೇಕ್ಷೆಗಳು ಎಷ್ಟು ಬೇರೆ ಬೇರೆಯಾಗಿವೆ ಎಂದರೆ ಒಂದು ವಲಯದಲ್ಲಿ ನಾವು ಬಳಸುವ ಕೌಶಲಗಳು ಇನ್ನೊಂದು ವಲಯದಲ್ಲಿ ನಿರುಪಯುಕ್ತವಾಗುತ್ತಿರುತ್ತವೆ. ಮಾತಾಡುವ ಕೌಶಲವನ್ನೇ ತೆಗೆದುಕೊಳ್ಳಿ. ನಾವು ಕೇವಲ ಮಾತಾಡುತ್ತಿರುವುದಿಲ್ಲ. ಇನ್ನೊಬ್ಬರ ಮಾತನ್ನು ಕೇಳಿಸಿಕೊಳ್ಳುತ್ತಲೂ ಇರುತ್ತೇವೆ. ಹಾಗೆ ಕೇಳಿಸಿಕೊಳ್ಳುವ ಮೂಲಕ ನಮ್ಮ ಮಾತಿನ ರೀತಿ ನೀತಿಗಳೂ ಬದಲಾಗುತ್ತಿರುತ್ತವೆ. ಅಲ್ಲದೆ ನಾವೇ ಮಾತನಾಡುತ್ತಿರುವಾಗಲೂ ಉದಾಹರಣೆಗೆ, ಭಾಷಣ ಮಾಡುತ್ತಿರುವಾಗ – ಪ್ರತಿಕ್ರಿಯೆಯನ್ನು ಅವಲಂಬಿಸಿ ನಮ್ಮ ಮಾತಿನ ಕ್ರಮ ಕೂಡ ನಿರ್ದೇಶಿತವಾಗುತ್ತಿರುತ್ತದೆ. ಅಂದರೆ ಮಾತನಾಡುವ ಕೌಶಲ ಕೇವಲ ಮಾತಾಡುವುದಕ್ಕೆ ಮಾತ್ರ ಸಂಬಂಧಿಸಿರುವುದಿಲ್ಲ. ಹಾಗೆಯೇ ನಾವು ಸದಾ ಕಾಲ ಕೇಳಿಸಿಕೊಳ್ಳುವವರಾಗಿರುವುದೂ ಸಾಧ್ಯವಿಲ್ಲ. ನಮ್ಮ ಆಲಿಸುವ ಕೌಶಲ ನಮ್ಮ ಮಾತಿನ ಮೇಲೂ ಪ್ರಭಾವ ಬೀರಿರುತ್ತದೆ. ಈ ಎಲ್ಲ ಸಂಬಂಧಗಳು ನಾವು ಯಾವ ವಲಯದಲ್ಲಿ ಭಾಷೆಯನ್ನು ಬಳಸುತ್ತಿದ್ದೇವೆ ಎನ್ನುವುದನ್ನು ಅವಲಂಬಿಸಿ ಬದಲಾಗುತ್ತಿರುತ್ತದೆ. ನಾವು ಟೆಲಿಫೋನ್ ಸಂಭಾಷಣೆಯಲ್ಲಿ ಮಾತಾಡುವ ಮತ್ತು ಕೇಳಿಸಿಕೊಳ್ಳುವ ರೀತಿಗೂ ಮುಖಾಮುಖಿಯಾಗಿ ಮಾತನಾಡುವಾಗ ಈ ಕೌಶಲಗಳನ್ನು ಬಳಸುವುದಕ್ಕೂ ವ್ಯತ್ಯಾಸವಿದೆ. ಒಂದು ವಲಯದ ಬಳಕೆಯ ಬಗೆಗಳನ್ನು ಇನ್ನೊಂದು ವಲಯಕ್ಕೆ ರವಾನಿಸಲು ಬರುವುದಿಲ್ಲ. ಎಲ್ಲ ಬಗೆಗಳಿಗೂ ಬೇರೆ ಬೇರೆ ಬಗೆಯ ತರಬೇತನ್ನು ಪಡೆಯುವುದು ಈಗ ಅಗತ್ಯವಾಗಿದೆ.

ಸಮೂಹ ಸಂಪರ್ಕ ಮಾಧ್ಯಮಗಳ ಸ್ವರೂಪ ಮತ್ತು ವ್ಯಾಪಕ ಬಳಕೆಯಿಂದಾಗಿ ಈಗ ಉಂಟಾಗಿರುವ ಸಂಪರ್ಕ ಪಲ್ಲಟಗಳು ನಮ್ಮ ಭಾಷಾ ಬಳಕೆಯನ್ನು ಇನ್ನಿಲ್ಲದಂತೆ ಪ್ರಭಾವಿಸಿವೆ. ಇದು ಭಾಷೆಯ ಎಲ್ಲ ಕೌಶಲಗಳಿಗೂ ಅನ್ವಯಿಸುವ ಮಾತಾಗಿದೆ. ಈಗ ನಾವು ಹೆಚ್ಚು ಕೇಳಿಸಿಕೊಳ್ಳುವ ಅಥವಾ ಓದುವ ಸಮುದಾಯವಾಗಿ ಬದಲಾಗುತ್ತಿದ್ದೇವೆ. ಮಾತನಾಡುವ ಮತ್ತು ಬರೆಯುವ ಕೌಶಲಗಳ ಬಳಕೆ ಮೊದಲೆರಡಕ್ಕೆ ಹೋಲಿಸಿದರೆ ತುಂಬಾ ಕಡಿಮೆಯಾಗುತ್ತಿದೆ ಎಂದೇ ಹೇಳಬೇಕು. ಅಂದರೆ ಮಾತನಾಡುವ ಸಂದರ್ಭಗಳು ಹೆಚ್ಚು ತಜ್ಞತೆಯನ್ನು ಬೇಡುತ್ತವೆ. ಅಲ್ಲದೆ ಮಾತನಾಡುವುದು ಎಂದರೆ ಈಗ ವಿಶಿಷ್ಟ ಬಗೆಯಲ್ಲಿ ಓದುವುದೂ ಎಂದೇ ತಿಳಿಯಬೇಕಾಗಿದೆ. ಓದು ಎಂಬ ಕನ್ನಡದ ಕ್ರಿಯಾಪದಕ್ಕೆ ಇರುವ ಎರಡು ಅರ್ಥಗಳನ್ನು ನೆನಪಿಸಿಕೊಳ್ಳಿ. ಓದು ಎಂದಾಗ ನಾನು ಓದಿಕೊಳ್ಳುವುದು ಎಂದು ಅರ್ಥವಾಗುವಂತೆ ಬೇರೆಯವರಿಗೆ ಕೇಳುತ್ತಿರುವ ಹಾಗೆ ಓದುವುದು ಎಂಬ ಅರ್ಥವೂ ಬರುತ್ತದೆ. ಮೊದಲನೆಯದರಲ್ಲಿ ಧ್ವನ್ಯಂಗಗಳ ಬಳಕೆ ಅನಿವಾರ್ಯವೇನಲ್ಲ. ಆದರೆ ಎರಡನೆಯ ಬಗೆಯಲ್ಲಿ ಅದು ಅಗತ್ಯ ಮತ್ತು ಅನಿವಾರ್ಯ. ಈ ಎರಡನೆಯ ಬಗೆ ಓದುವ ಬಗೆಯನ್ನು – ಅಂದರೆ ಬೇರೆಯವರಿಗಾಗಿ ಓದುವುದನ್ನು ನಿಯಂತ್ರಿಸುವ ರೀತಿಯನ್ನು ನಾವು ಎಚ್ಚರದಿಂದ ತಿಳಿದುಕೊಳ್ಳಬೇಕಾಗಿದೆ. ಏಕೆಂದರೆ, ಇಲ್ಲಿ ಓದುವ ಮತ್ತು ಮಾತನಾಡುವ ಎರಡೂ ಕೌಶಲಗಳು ಒಂದೇ ಸಂದರ್ಭದಲ್ಲಿ ಬಳಕೆಯಾಗುತ್ತಿರುತ್ತವೆ. ಮುದ್ರಿತ ಅಥವಾ ಬರೆದ ಪಠ್ಯವನ್ನು ನಾವು ಓದುತ್ತಿರುತ್ತೇವೆ. ಜೊತೆಗೆ ನಾವು ಓದಿದ್ದು ಇನ್ನೊಬ್ಬರು ಕೇಳಿಸಿಕೊಳ್ಳುತ್ತಿರುತ್ತಾರೆ. ಹಾಗಾಗಿ ಓದುವುದು ಎಂದಾಗ ಅದು ಮಾತನಾಡುವ ಬಗೆಯೂ ಆಗಿರುತ್ತದೆ.

ಇನ್ನೂ ಸಂಕೀರ್ಣವಾದ ಸಂದರ್ಭವೆಂದರೆ ನಮ್ಮ ಮಾತನ್ನು ಕೇಳಿಸಿಕೊಳ್ಳುವವರು ನಮ್ಮ ಕಣ್ಣೆದುರಿಗೆ ಇರುವ ಸಂದರ್ಭಗಳ ಜೊತೆಗೆ ಅವರು ನಮ್ಮ ಎದುರು ಇಲ್ಲದಿರುವ ಸಂದರ್ಭಗಳು ಹೆಚ್ಚಾಗುತ್ತಿವೆ. ನಾವು ಮಾತನಾಡಿದ್ದು ಈಗಲೇ ಎದುರಿದ್ದವರಿಗೆ ಕೇಳಿಸುವ ಸಂದರ್ಭಗಳ ಜೊತೆಗೆ ನಮಗೆ ಗೊತ್ತಿಲ್ಲದ ಯಾರಿಗೋ ಯಾವಾಗಲೋ ಎಲ್ಲೋ ಕೇಳಿಸುವ ಸನ್ನಿವೇಶಗಳು ಹೆಚ್ಚಾಗುತ್ತಿವೆ. ಇಂತಹ ಕಡೆಗಳಲ್ಲಿ ನಮ್ಮ ಮಾತಿನ ಬಗೆಗಳು ಬದಲಾಗುತ್ತಿರಬೇಕಾಗುತ್ತದೆ. ಟಿವಿಯ ಲಂಗರುಗಾರರನ್ನು ನೋಡಿ. ಅವರು ನೋಡುವವರ/ಕೇಳುವವರ ಎದುರಿಗೆ ಇರುವುದಿಲ್ಲ. ಆದರೂ ಅವರ ಮಾತನ್ನು ಕೇಳಿಸಿಕೊಳ್ಳುವವರು ಎದುರಿಗೆ ಇದ್ದಾರೆ ಎಂಬಂತೆ ಭಾವಿಸಿ ಮಾತನಾಡಬೇಕಾಗುತ್ತದೆ. ಇವೆಲ್ಲವೂ ಸರಳವಾದ ಸಂಗತಿಗಳಲ್ಲ. ವಿಶೇಷ ತರಬೇತನ್ನು ಬಯಸುವ ಕೌಶಲಗಳಾಗಿವೆ.

ಬರೆಯುವ ಕೌಶಲವನ್ನು ಕುರಿತು ಗಮನಿಸಿ. ಈಗ ಬರೆಯುವುದು ಎಂಬ ಮಾತಿನ ಅರ್ಥವೇ ಬದಲಾಗುತ್ತದೆ. ಹಲಗೆ ಬಳಪ ಹಿಡಿಯದ ಅಗ್ಗಳಿಕೆ ಈಗ ಗೇಲಿಯ ಮಾತಲ್ಲ. ಇದೀಗ ಬದಲಾದ ತಂತ್ರಜ್ಞಾನದ ಒತ್ತಡ. ಬರೆದದ್ದು ಅಂದರೆ ಅಕ್ಷರ ರೂಪದಲ್ಲಿ ಈಗ ರೂಪು ತಳೆಯುತ್ತಿರುವ ಭಾಷೆ ವಾಸ್ತವವಾಗಿ ಮಾತಿನಷ್ಟೇ ತ್ವರಿತವಾಗಿ ಪ್ರವಹಿಸುತ್ತದೆ. ಅಷ್ಟೇ ತ್ವರಿತವಾಗಿ ಮಾಯವಾಗುತ್ತದೆ. ಈ ಅರ್ಥದಲ್ಲಿ ಮಾತಿಗೂ ಬರಹಕ್ಕೂ ಈಗ ವ್ಯತ್ಯಾಸ ಉಳಿದಿಲ್ಲ. ಹಾಗಾಗಿ ಬರಹದ ನಿಯಂತ್ರಣ ಬಿಂದುಗಳು ಬದಲಾಗುತ್ತಿವೆ. ಹೀಗಾಗಿ ಹೊಸ ಬಗೆಯ ಬರವಣಿಗೆಯ ವಿಧಾನಗಳಿಗೆ ಎಲ್ಲರನ್ನೂ ಅಲ್ಲದಿದ್ದರೂ ಆಸಕ್ತರನ್ನು ಮತ್ತು ಅಪೇಕ್ಷೆಯುಳ್ಳವರನ್ನು ಸಿದ್ಧಪಡಿಸುವುದು ನಮ್ಮ ಭಾಷಾ ಬೋಧನೆಯ ತರಗತಿಗಳ ಗುರಿಯಾಗಬೇಕಿದೆ.

ತಂತ್ರಜ್ಞಾನದ ಪರಿಣಾಮವಾಗಿ ಭಾಷೆಯ ಬಳಕೆಯ ನೆಲೆಗಳು ಹೇಗೆ ಪಲ್ಲಟಗೊಳ್ಳುತ್ತವೆ ಎನ್ನುವುದಕ್ಕೆ ಇನ್ನೊಂದು ಉದಾಹರಣೆಯನ್ನು ಅಂತರ್ಜಾಲದ ಸನ್ನಿವೇಶದಿಂದ ನಾನೀಗ ಉಲ್ಲೇಖಿಸುತ್ತಿದ್ದೇನೆ. ಜಾಲ ಹರಟೆಯ ಸನ್ನಿವೇಶವನ್ನು ಗಮನಿಸಿ. ಅದು ವಾಸ್ತವವಾಗಿ ಇಬ್ಬರು ಅಥವಾ ಹಲವರು 'ಮಾತನಾಡುವ' ಪ್ರಸಂಗ. ಆದರೆ ಮಾತುಗಳನ್ನು 'ಬರೆಯು'ತ್ತಿರುತ್ತಾರೆ. ಹೀಗೆ ಬರೆದ ಮಾತುಗಳನ್ನು ಇನ್ನೊಂದು ತುದಿಯಲ್ಲಿ ಇರುವವರು ಓದುತ್ತಾರೆ. ಮಾತಿನ ಸಾಮಾನ್ಯ ಲಕ್ಷಣಗಳು ಇಲ್ಲಿ ಗೈರುಹಾಜರಾಗಿವೆ. ಏಕೆಂದರೆ ಮಾತಿಗೆ ಮಾತು ಎಂಬ ಸರಣಿಯೇ ಇಲ್ಲಿ ಕಡಿದುಹೋಗುತ್ತದೆ. ಒಂದು ತುದಿಯಿಂದ ಬರೆಯುತ್ತಿರುವವರ ಮಾತಿಗೆ ಇನ್ನೊಂದು ತುದಿಯಲ್ಲಿ ಇರುವವರು ಪ್ರತಿಕ್ರಿಯಿಸುವುದು 'ಕೇಳಿಸಿಕೊಂಡ' ಕೂಡಲೇ ಅಲ್ಲ. ಸಮಯದ ಹರಿವಿನ ಸರಣಿಗೂ ಮಾತಿನ ಓಟಕ್ಕೂ ಪರಸ್ಪರ ತಾಳಮೇಳವೇ ಇಲ್ಲದಂತಿರುತ್ತದೆ. ಆದರೂ ಈ ಬಗೆಯ ಭಾಷಾ ಬಳಕೆಗಳಲ್ಲಿ ಚಿಕ್ಕವರು ತೊಡಗಿಕೊಳ್ಳುತ್ತಿದ್ದಾರೆ. ಈ ಹೊಸ ಸವಾಲುಗಳಿಗೆ ಅನುಗುಣವಾಗಿ ಕನ್ನಡವನ್ನು ಬಳಸುವ ಸಿದ್ಧತೆಗೆ ನಾವು ಅನುವು ಮಾಡಿಕೊಡಬೇಕಾಗಿದೆ.

ಇನ್ನೊಂದು ಸಮಸ್ಯೆಯ ಕಡೆಗೆ ಈಗ ಗಮನಹರಿಸೋಣ. ಕನ್ನಡ ಹೊಂದಿರುವ ಹಲವಾರು ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳಿಗೆ ಸಂಬಂಧಿಸಿದ ಸಮಸ್ಯೆ




**ಬೃಹತ್ ಪುಸ್ತಕ ಮೇಳ ಮತ್ತು ಕೃತಿಗಳ ಲೋಕಾರ್ಪಣೆ**

ಮಂಗಳೂರಿನಲ್ಲಿ ೧೦.೯.೦೫ರಂದು ಪ್ರಾರಂಭವಾದ ಪುಸ್ತಕಮೇಳದಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಮಕ್ಕಳಿಗೆ ಮೌಲ್ಯಶಿಕ್ಷಣ', 'ಜೀವನಕೌಶಲಗಳು, 'ಆಡಿಕಲಿಯೋಣ ಕನ್ನಡ', 'ಇಂಗ್ಲಿಷ್ ಪದಸಂಪತ್ತು', 'ಮಾತಿನಮಾತು', 'ನನ್ನ ಮಿತ್ರ ಸೋರಣ್ಣ', 'ಕಬ್ಬಿಣದ ಕಾಚಾಗಳು', 'ಸರಸ್ವತೀ ನದಿ' 'ವಿದ್ಯುಚ್ಛಕ್ತಿ ಮತ್ತು ಬಳಕೆದಾರರು' ಹಾಗೂ 'ಈ ಭೂಮಿ ಈ ಸಸ್ಯ' – ಈ ಹತ್ತು ಪುಸ್ತಕಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಚಿತ್ರದಲ್ಲಿ (ಎಡದಿಂದ-ಬಲಕ್ಕೆ) ಡಾ॥ ಸತ್ಯನಾರಾಯಣ ಮಲ್ಲಿಪಟ್ಣ (ಪುಸ್ತಕ ಬಿಡುಗಡೆ), ಶ್ರೀ ಪಿ. ಎಂ. ನಾರಾಯಣ ಮೂರ್ತಿ (ಅಧ್ಯಕ್ಷತೆ), ಶ್ರೀ ಬಿ. ವಿ. ಕಕ್ಕಿಲ್ಲಾಯ, ಶ್ರೀ ಅರವಿಂದ ಚೊಕ್ಕಾಡಿ, ಶ್ರೀ ನಾಗೇಶ್ ಮತ್ತು ಶ್ರೀ ಹರೀಶ್.

ಇದು. ಕರ್ನಾಟಕ ರಾಜ್ಯ ಎಂಬುದು ರೂಪುಗೊಂಡು ಐವತ್ತು ವರ್ಷಗಳು ಕಳೆದರೂ ಈ ಉಪಭಾಷೆಗಳ ನಡುವೆ ಒಂದು ಆರೋಗ್ಯಕರ ಸಂವಾದವನ್ನು ಏರ್ಪಡಿಸುವುದು ನಮಗೆ ಸಾಧ್ಯವಾಗಿಲ್ಲ. ಈ ನೆಲೆಯಲ್ಲಿ ಸೋಲಿನ ಹೊಣೆಗಾರಿಕೆಯನ್ನು ಶಿಕ್ಷಣ ಕ್ಷೇತ್ರವೇ ಹೊರಬೇಕಾಗಿದೆ. ಅದರಲ್ಲೂ ರಾಜ್ಯವ್ಯಾಪ್ತಿಯ ಏಕರೂಪದ ಪಾಠ್ಯಗಳನ್ನು ನಿರ್ಧರಿಸುವ ಶಾಲಾ ಹಂತ ಮತ್ತು ಪದವಿ ಪೂರ್ವ ಹಂತದ ಶೈಕ್ಷಣಿಕ ಆಡಳಿತಗಾರರು ಈ ಬಗೆಗೆ ತಲೆಕೆಡಿಸಿಕೊಂಡಂತೆ ತೋರುತ್ತಿಲ್ಲ. ಇದರಿಂದಾಗಿ ಪದವಿ ತರಗತಿಗಳಿಗೆ ಬರುವ ವಿದ್ಯಾರ್ಥಿಗಳಿಗೆ ಉಪಭಾಷೆಗಳ ನಡುವಣ ಸಂಬಂಧದ ಸ್ವರೂಪ ಅನ್ಯತ್ರ ಪರಿಚಿತವಾಗಿರಬೇಕೇ ಹೊರತು ಶೈಕ್ಷಣಿಕ ನೆಲೆಯಲ್ಲಿ ಅಲ್ಲ. ಅನ್ಯತ್ರ ಎಂದರೆ ಸಮೂಹ ಮಾಧ್ಯಮಗಳು ಎಂದು ಸದ್ಯ ತಿಳಿಯೋಣ. ಈ ಮಾಧ್ಯಮಗಳು ಪ್ರಾದೇಶಿಕ ಉಪಭಾಷಿಕರನ್ನು ಸಿದ್ಧ ಮಾದರಿಗಳಲ್ಲಿ ನಿರೂಪಿಸುತ್ತವೆ. ಸಾಮಾಜಿಕ ಉಪಭಾಷೆಗಳನ್ನು ಆಡುವವರನ್ನು ನಿರ್ದಿಷ್ಟ ಬಗೆಯ ಶ್ರೇಣೀಕರಣದಲ್ಲಿ ಇರಿಸಲಾಗುತ್ತಿದೆ. ಈ ನೆಲೆಯಿಂದ ಹೊರಬರುವ ದಾರಿಗಳು ವಿದ್ಯಾರ್ಥಿಗಳಿಗೆ ಕಾಣುತ್ತಿಲ್ಲ. ಈ ಅಂಶವೇ ಈಗ ಇಂಗ್ಲಿಷ್ ಪರವಾದ ವಾದಕ್ಕೆ ಅನಿವಾರ್ಯವಾದ ಒತ್ತಾಸೆಯಾಗಿದೆ ಎಂಬುದನ್ನೂ ಪ್ರಾಸಂಗಿಕವಾಗಿ ಗಮನಿಸಬೇಕು. ಕನ್ನಡದ ಉಪಭಾಷೆಗಳ ಇಕ್ಕಟ್ಟುಗಳಿಂದ ಹೊರಬರಲು ಇಂಗ್ಲಿಷ್ ಹೊರದಾರಿಯನ್ನು ಕಲ್ಪಿಸುವ ಭಾಷೆಯಾಗಿಬಿಟ್ಟಿದೆ. ಈ ಸನ್ನಿವೇಶವನ್ನು ನಾವು ಪದವಿ ತರಗತಿಗಳಲ್ಲಿ ಎದುರಿಸುತ್ತಿದ್ದೇವೆ. ಇಲ್ಲಿ ಪರಿಹಾರಗಳು ಸಾಧ್ಯವೆಂದು ನನಗೆ ತೋರುತ್ತಿಲ್ಲ. ಆದರೆ ಇಂತಹದೊಂದು ಸಮಸ್ಯೆ ಇದೆ ಎಂಬ ಬಗೆಗೆ ಮಾತ್ರ ಎಚ್ಚರ ಅಗತ್ಯವಾಗಿದೆ.

ಉಪಭಾಷೆಗಳ ಸಮಸ್ಯೆಯ ಮಾದರಿಯಲ್ಲಿಯೇ ದ್ವಿ/ಬಹು ಭಾಷಿಕತೆಯ ಸಂದರ್ಭ ಕೂಡ ಇದೆ. ಈ ಬಗೆಗೆ ನಾವು ಹೆಚ್ಚು ತಲೆ ಕೆಡಿಸಿಕೊಂಡಿಲ್ಲ. ಶಾಲಾ ಶಿಕ್ಷಣದಲ್ಲಿ ಕನ್ನಡದ ದ್ವಿಭಾಷಿಕರನ್ನು ಅಂದರೆ ಕನ್ನಡವನ್ನು ಎರಡನೆಯ ಭಾಷೆಯನ್ನಾಗಿ ಕಲಿತವರನ್ನು 'ಒಳಗೊಳ್ಳುವ' ಮಾದರಿಗಿಂತ 'ಹೊರಗಿಡುವ' ಮಾದರಿಗೆ ನಾವು ಶರಣಾಗಿದ್ದೇವೆ. ಬರಹವಿಲ್ಲದ ಭಾಷೆಗಳ ಆಡುಗರು ಮಾತ್ರ ಕನ್ನಡ ಪ್ರಥಮ ಭಾಷೆಯಲ್ಲದಿದ್ದರೂ ಪದವಿ ತರಗತಿಗಳಲ್ಲಿ ಕನ್ನಡವನ್ನು ಓದುವ ಆಯ್ಕೆಯನ್ನು ಮಾಡಿಯಾರು. ಉಳಿದವರು ಕನ್ನಡಕ್ಕೆ ಹೊರತಾಗಿಯೇ ಉಳಿಯುತ್ತಾರೆ. ಇದು ನೇರವಾಗಿ ತರಗತಿಯ ಸಮಸ್ಯೆಯಲ್ಲದಿದ್ದರೂ ನಮ್ಮ ಭಾಷಾ ನೀತಿ ಮತ್ತು ನಿರ್ವಹಣೆಯ ಕೊರತೆಗಳನ್ನು ನಿಮ್ಮ ಗಮನಕ್ಕೆ ತರಲೆಂದು ಈ ಅಂಶವನ್ನು ಪ್ರಸ್ತಾಪಿಸಿದ್ದೇನೆ.

ಈಗ ಉಂಟಾಗಿರುವ ಸಾಮಾಜಿಕ ಪಲ್ಲಟಗಳಿಂದಾಗಿ ಕನ್ನಡ ಭಾಷೆಯ ಪಿಸು ಮಾತಿನ ವಲಯ ಕುಗ್ಗಿಹೋಗಿದೆ. ಎಲ್ಲವೂ ಸಾಮಾಜಿಕ ವಲಯದ ತೆರೆದ ದನಿಯ ಬಳಕೆಗಳಾಗತೊಡಗಿವೆ. ಮಾತಾಡುವುದು ಮತ್ತು ಬರೆಯುವುದು ಎರಡೂ ಏಕಾಂತದ ನೆಲೆಯಲ್ಲಿ ಈಗ ಉಳಿದಿಲ್ಲ. ಉದಾಹರಣೆಗೆ, ಆಪ್ತವಲಯದ ಪತ್ರ ವ್ಯವಹಾರದ ನೆಲೆಯನ್ನೇ ನೋಡಿ. ದೀರ್ಘವಾದ ಬರವಣಿಗೆಯ ಪತ್ರಗಳು ಆಪ್ತರ ನಡುವೆ ಇಲ್ಲವಾಗುತ್ತಿವೆ. ಮಾತಿನಲ್ಲೂ ಈಗ ಸ್ವಗತಗಳಿಲ್ಲ. ಎಲ್ಲವೂ ಭಾಷಣಗಳು ಇಲ್ಲವೇ ಸಂಭಾಷಣೆಗಳು. ಇಲ್ಲಿಯೂ ಆಪ್ತವಲಯದ ಏಕಾಂತದ ಅನುಭವಕ್ಕೆ ತಕ್ಕ ಭಾಷಾ ಬಳಕೆ ದೊರೆಯದಾಗಿದೆ. ಇದು ಕನ್ನಡ ಮಾತನಾಡುವವರ ಮಾನಸಿಕ ಮತ್ತು ಸಾಮಾಜಿಕ ಆರೋಗ್ಯಕ್ಕೆ ಉಪಕಾರಕವಾದ ಸಂಗತಿಯಲ್ಲ. ಆದ್ದರಿಂದ ಈ ಇಕ್ಕಟ್ಟಿನಿಂದ ಹೊರಬರಲು ಸೂಕ್ತವಾದ ನೆಲೆಗಳನ್ನು ನಾವು ತರಗತಿಯ ಪಾಠ್ಯಗಳ ಮೂಲಕ ಮತ್ತು ಬೋಧನೆಯ ಮೂಲಕ ಕಲಿಸಿಕೊಡಬೇಕಾಗಿದೆ. ಇಲ್ಲಿ ಸಾಹಿತ್ಯದ ನೆರವು ನಮಗೆ ದೊರೆಯಬಲ್ಲುದೆಂದು ತೋರುತ್ತದೆ. ಕೃತಿಗಳ ಆಶಯ, ಸಾಮಾಜಿಕ ನೆಲೆಗಳಿಗಿಂತ ಅವುಗಳ ಭಾಷಾ ಬಳಕೆಯಲ್ಲಿ ಲಭ್ಯವಿರುವ ಏಕಾಂತದ ಒಳದಾರಿಗಳನ್ನು ವಿದ್ಯಾರ್ಥಿಗಳಿಗೆ ನಾವು ತೋರಿಸಬಲ್ಲೆವಾದರೆ, ಆ ಬಗೆಯ ಭಾಷಾ ಬಳಕೆಯ ಮಹತ್ವದ ಅರಿವನ್ನು ಅವರಿಗೆ ತಿಳಿಸಿಕೊಡಬಲ್ಲೆವಾದರೆ, ಆ ಆಪ್ತ ಬಳಕೆಗಳಿಗೆ ಅವರನ್ನು ಸಿದ್ಧಗೊಳಿಸ ಬಲ್ಲೆವಾದರೆ ಅದಕ್ಕಿಂತ ಹೆಚ್ಚಿನ ಸಾಧನೆಯೊಂದು ಸದ್ಯ ನನಗೆ ತೋರುತ್ತಿಲ್ಲ.

(ಬೆಂಗಳೂರು ವಿಶ್ವವಿದ್ಯಾಲಯದ ಕಾಲೇಜು ಕನ್ನಡ ಅಧ್ಯಾಪಕರ ಒಕ್ಕೂಟದಲ್ಲಿ ೨೦ ಜುಲೈ ೨೦೦೫ರಂದು ಮಂಡಿಸಿದ ಪ್ರಬಂಧ).

**ಡಾ|| ಕೆ. ವಿ. ನಾರಾಯಣ**
ಪ್ರಾಧ್ಯಾಪಕರು, ಕನ್ನಡ ಭಾಷಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

# ಸ್ಥಿತ್ಯಂತರ



೧

ಬಿದ್ದ ಮರ
ಅಷ್ಟುದ್ದ
ಹೆದ್ದಾರಿಯನ್ನೇ ತಬ್ಬಿ ಮಲಗಿದೆ

ಎಷ್ಟು ವರ್ಷದ ಜೀವ!
ಹೊಸ ಗಾಳಿಯೊತ್ತಡಕೆ
ಹೀಗೆ ಹಠಾತ್ತನೆ ಕುಸಿಯಿತಲ್ಲ!

ನೆರಳಿನ ಸೂರೀಗ ಹೋಗಿ
ಉದ್ದೋ ಉದ್ದ ಬಟಾಬಯಲು
ಆಕಾಶದ ಹಾಗೆ.

ಎತ್ತಿ ನಿಲ್ಲಿಸೊ ಧೈರ್ಯವಂತ
ನಾಲ್ಕು ಹನಿ ಕಣ್ಣೀರು ಸುರಿಸೋ ಕರುಣಾಳು
ಇಬ್ಬರನ್ನೂ ಕಾಣೆ.

ಒಂದು ಹಗಲು ಒಂದು ರಾತ್ರಿ
ಯುಗದ ಒಂದು ಕ್ಷಣವಷ್ಟೆ ಮೀಸಲು
ಈ ದೈನ್ಯಸ್ಥಿತಿಗೆ

೨

ಮರವನ್ನು
ತುಂಡುತುಂಡಾಗಿ ಕತ್ತರಿಸಿ
ಪಕ್ಕಕ್ಕೆಸೆದ ಜನ
ಸಂಚಾರ ಸುಗಮಗೊಳಿಸಿದ್ದಾರೆ.

ತಡೆಯಿರದ
ಹೆದ್ದಾರಿಯೀಗ ನಿರಾಳ
ದೂರದ ದೆಹಲಿವರೆಗೂ
ಅದರ ಕೊಂಡಿಗಳೂ ಇನ್ನೆಲ್ಲಿವರೆಗೋ?

**ಡಾ|| ಸಂತೋಷ ಚೊಕ್ಕಾಡಿ**
೬೭೭/೮, ವಿಶ್ವಮಾನವ ಜೋಡಿ ರಸ್ತೆ
ಸರಸ್ವತಿಪುರಂ, ಮೈಸೂರು - ೫೭೦ ೦೦೯

ಹೊಸ ಓದು



## ವಿಚಾರಭಾರತಿ

ಸಂ. ಶ್ರೀನಿವಾಸ ಜೋಕಟ್ಟೆ

**ಪುಟ :** ೯೪ **ಬೆಲೆ : ರೂ.** ೬೦

**ಗೋರೆಗಾಂವ್ ಕರ್ನಾಟಕ ಸಂಘ,** ಬಿ-೫/೬ ಪ್ರೇಮ ಬಿಂದು, ೧ನೇ ಅಡ್ಡರಸ್ತೆ, ಎಂ.ಜಿ. ರಸ್ತೆ, ಗೋರೆಗಾಂವ್ ಪಶ್ಚಿಮ, ಮುಂಬಯಿ - ೪೦೦ ೦೬೨

ಮುಂಬಯಿ ನಗರದ ಗೋರೆಗಾಂವ್ ಕರ್ನಾಟಕ ಸಂಘ 'ವಿಚಾರ ಸಾಹಿತ್ಯ'ದ ಸಮ್ಮೇಳನಗಳನ್ನು ನಡೆಸಿದ್ದಲ್ಲದೇ ಆ ಸಮಾರಂಭಗಳ ಅಧ್ಯಕ್ಷರ ಭಾಷಣಗಳನ್ನು ಪುಸ್ತಕ ರೂಪದಲ್ಲಿ ತಂದಿರುವುದು ಮೆಚ್ಚಬೇಕಾದ ಸಂಗತಿ. ಇಲ್ಲಿನ ಏಳು ಲೇಖನಗಳು ಹಲವು ಸಾಮಾಜಿಕ ಸಂಗತಿಗಳನ್ನು ಗಂಭೀರವಾಗಿ ಪರಿಶೀಲಿಸುತ್ತವೆ. ಶ್ರಮ ಸಂಸ್ಕೃತಿಯ ಪ್ರಾಮುಖ್ಯತೆಯನ್ನು ಬರಗೂರು ಅವರ ಪ್ರಬಂಧ ಸಮರ್ಥವಾಗಿ ತಿಳಿಸುತ್ತದೆ. ಭಯೋತ್ಪಾದನೆಯ ಹಲವು 'ಅವ್ಯಕ್ತ' ಮುಖಗಳನ್ನು ಜಿ. ಆರ್. ಅವರು ಸರಿಯಾಗಿ ಗುರುತಿಸಿದ್ದಾರೆ. ಜಾಗತೀಕರಣ ಜಾನಪದ, ವೈಚಾರಿಕತೆಯ ಸೃಜನಶೀಲ ಗುಣದ ಬಗ್ಗೆ ಮೂರು ಬರಹಗಳಿವೆ. ಸಿದ್ಧಲಿಂಗಯ್ಯ ಹಾಗೂ ಚಂದ್ರಶೇಖರ ಪಾಟೀಲ ಅವರ ಲೇಖನಗಳು ಆತ್ಮೀಯ ಶೈಲಿಯಲ್ಲಿ ತಮ್ಮ ವಿಚಾರಗಳನ್ನು ಮಂಡಿಸುತ್ತವೆ.

## ಕೆರೂರುನಾಮಾ (ಕಾದಂಬರಿ)

ಚಂದ್ರಕಾಂತ ಕುಸನೂರ

**ಪುಟ :** xii+೧೪೪ **ಬೆಲೆ : ರೂ.** ೬೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಬಾಬರ್‌ನಾಮಾ, ಅಕ್ಬರ್‌ನಾಮಾಗಳನ್ನು ನೆನಪಿಗೆ ತರುವ ಕೆರೂರುನಾಮಾ ಚಂದ್ರಕಾಂತ ಕುಸನೂರ ಅವರ ಕಾದಂಬರಿ. ಹಳ್ಳಿಯ ಸಾಮಾನ್ಯ ವ್ಯಕ್ತಿಗಳ ವಿಶಿಷ್ಟ ಸ್ವಭಾವಗಳನ್ನು ಕಾದಂಬರಿ ಸ್ವಾರಸ್ಯವಾಗಿ ಕಟ್ಟಿಕೊಡುತ್ತದೆ. ತುಳಸಕ್ಕನಂಥ ವಿಧವೆಯ ಧೈರ್ಯದ ಸ್ವಭಾವವನ್ನು ಚಿತ್ರಿಸುವ ಸಂದರ್ಭದಲ್ಲಿಯೇ ಲೇಖಕರು ಅರ್ಥಹೀನ ಸಾಂಪ್ರದಾಯಿಕ ನಡವಳಿಕೆಗಳನ್ನು ವಿಡಂಬನೆಗೆ ಗುರಿಪಡಿಸುತ್ತಾರೆ. ಲೇಖಕರ ಆಶಯದಂತೆ ಕಾದಂಬರಿಯ ಓದು 'ಪ್ರಬುದ್ಧ ಮನರಂಜನೆ'ಯನ್ನು ಓದುಗರಿಗೆ ಕೊಡುತ್ತದೆ. ಆದರೆ ಕೆಲವು ಕಡೆ ಅತಿ ವಾಸ್ತವತೆಯ ವರ್ಣನೆಗಳು, ರಂಜಕ ಶೈಲಿ ಲೇಖಕರ ವಿಚಾರಗಳನ್ನು ದಾರಿತಪ್ಪಿಸುವುದುಂಟು. ಆದರೂ ಹಲವಾರು ವಿಶಿಷ್ಟ ಪಾತ್ರಗಳ ಮೂಲಕ ಉತ್ತರ ಕರ್ನಾಟಕದ ಬದುಕಿನ ಸಹಜ ಚಿತ್ರಣವನ್ನು ಕೊಡುವಲ್ಲಿ ಕಾದಂಬರಿ ಯಶಸ್ಸನ್ನು ಪಡೆದಿದೆ.

## ಹಾರಾಡುವ ತಟ್ಟೆಗಳು (ವೈಜ್ಞಾನಿಕ ಲೇಖನಗಳು)



ಜೆ. ಆರ್. ಲಕ್ಷ್ಮಣ ರಾವ್

**ಪುಟ :** ೧೩೬ **ಬೆಲೆ : ರೂ.** ೫೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೮೪, ಬೆಂಗಳೂರು - ೧

ಇಪ್ಪತ್ತು ವೈಜ್ಞಾನಿಕ ಲೇಖನಗಳ ಸಂಗ್ರಹ ಈ ಕೃತಿ. ವೈಜ್ಞಾನಿಕ ದೃಷ್ಟಿ, ಪರಿಸರ, ಪರಮಾಣು ಶಕ್ತಿ, ಸಂಕೀರ್ಣ – ಎಂಬ ನಾಲ್ಕು ಭಾಗಗಳಲ್ಲಿ ಬರಹಗಳಿವೆ. ವೈಜ್ಞಾನಿಕ ಸಂಗತಿಗಳನ್ನು ಪರಿಣಾಮಕಾರಿಯಾಗಿ, ಖಚಿತವಾಗಿ ಮತ್ತು ಸರಳವಾಗಿ ಬರೆಯುವ ಜೆ. ಆರ್. ಲಕ್ಷ್ಮಣ ರಾವ್ 'ಜನಪ್ರಿಯ ವಿಜ್ಞಾನ' ಬರಹಗಾರರಲ್ಲಿ ಬಹಳ ಮುಖ್ಯರು. ಇವರ ಬಹುಪಾಲು ಲೇಖನಗಳು ಯಾವುದೋ ವಿಜ್ಞಾನದ ಮಾಹಿತಿ ಕೊಡುವುದಕ್ಕಿಂತ ಹೆಚ್ಚಾಗಿ ವಿಜ್ಞಾನವು ಸಮಾಜದ ಒಳಿತಿಗಾಗಿ ದುಡಿಯಬೇಕೆಂಬ ಹಂಬಲವನ್ನು ಹೊಂದಿರುತ್ತವೆ. ಪ್ರಳಯದ ಕಲ್ಪನೆ, ಅಂತರ್ಜಲ, ಪರಮಾಣುಶಕ್ತಿಯನ್ನು ಕುರಿತ ಬರಹಗಳಲ್ಲಿ ವೈಜ್ಞಾನಿಕ ಮನೋಧರ್ಮದ ಪ್ರಾಮುಖ್ಯತೆಯನ್ನು ವ್ಯಕ್ತಪಡಿಸುತ್ತಾರೆ. ವಿಜ್ಞಾನದ ಸದುಪಯೋಗದಲ್ಲಿ ಜನಸಾಮಾನ್ಯರು ವಹಿಸಬೇಕಾದ ಎಚ್ಚರದ ಬಗ್ಗೆಯೂ ಲೇಖಕರು ಗಮನ ಸೆಳೆಯುತ್ತಾರೆ. ಕೆಲವು ಪಾರಿಭಾಷಿಕ ಪದಗಳು ತಕ್ಷಣ ಅರ್ಥವಾಗುವುದಿಲ್ಲ. ಅವುಗಳ ಪರ್ಯಾಯ ಇಂಗ್ಲಿಷ್ ಪದಗಳನ್ನು ಸೂಚಿಸಬಹುದಿತ್ತು.



## ಶಿವಾಜಿ ಯಾರು ?

ಗೋವಿಂದ ಪಾನಸರೆ ಅನು : ಚಂದ್ರಕಾಂತ ಪೋಕಳೆ

**ಪುಟ :** ೮೦ **ಬೆಲೆ : ರೂ.** ೨೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೮೪, ಬೆಂಗಳೂರು - ೧

ಶಿವಾಜಿಗಿಂತ 'ಶಿವಸೇನೆ'ಯೇ ವಿಜೃಂಭಿಸುತ್ತಿರುವ ಇಂದಿನ ಸಂದರ್ಭದಲ್ಲಿ ಶಿವಾಜಿಯ ವ್ಯಕ್ತಿತ್ವವನ್ನು ವಸ್ತುನಿಷ್ಠವಾಗಿ ಈ ಕೃತಿ ಕಟ್ಟಿಕೊಡುತ್ತದೆ. 'ಹಿಂದೂವಾದಿ'ಯಾಗಿ ಮಾತ್ರ ಶಿವಾಜಿ ಕಾಣದೆ ಉತ್ತಮ ಆಡಳಿತಗಾರನಾಗಿ, ಮಾನವತಾವಾದಿಯಾಗಿ ಇಲ್ಲಿ ಕಂಡುಬರುತ್ತಾನೆ. ಹಿಂದೂ ಮುಸ್ಲಿಂ ರಾಜರ ಸಂಘರ್ಷ ಧಾರ್ಮಿಕ ಕಾರಣದ್ದಲ್ಲ ಎಂಬ ಅಂಶವನ್ನು ಈ ಪುಸ್ತಕ ಪ್ರಸ್ತುತಪಡಿಸುತ್ತದೆ. ಪುಸ್ತಕದ ಅನುಬಂಧವಾಗಿ ಶಿವಾಜಿ ಬರೆದ ಪತ್ರಗಳು, ಉಲ್ಲೇಖಗಳು ಉಪಯುಕ್ತವಾಗಿವೆ. ಶಿವಾಜಿಯನ್ನು ತಿರಸ್ಕರಿಸದೆ, ವೈಭವೀಕರಿಸದೆ ಈ ಪುಸ್ತಕ ಅವನ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. ಮರಾಠಿಯಲ್ಲಿ ಹದಿನಾರು ಮುದ್ರಣವನ್ನು ಕಂಡಿರುವ ಈ ಕೃತಿಯನ್ನು ಚಂದ್ರಕಾಂತ ಪೋಕಳೆ ಸಮರ್ಥವಾಗಿ ಅನುವಾದಿಸಿದ್ದಾರೆ. 'ಶಿವಾಜಿ ಯಾರು ?' ಎಂಬ ಪುಸ್ತಕದ ಹೆಸರು ಸ್ವಲ್ಪ ವಿಚಿತ್ರವಾಗಿದೆ. ಆತನ ಸರ್ವಾಂಗೀಣ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುವ ಮತ್ತು ಇತಿಹಾಸದ ಸತ್ಯವನ್ನು ಶೋಧಿಸುವ ದೃಷ್ಟಿಯಿಂದ ಈ ಹೆಸರು ಬಂದಿದೆ.



## ಶಬರಿ (ಕಾದಂಬರಿ)

ಬರಗೂರು ರಾಮಚಂದ್ರಪ್ಪ

**ಪುಟ :** ೨೭೨ **ಬೆಲೆ : ರೂ.** ೧೫೦

**ಅಂಕಿತ ಪುಸ್ತಕ,** ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

ಅರ್ಥಹೀನ ಸಂಪ್ರದಾಯ ಮತ್ತು ಆಧುನಿಕತೆ, ಶೋಷಣೆ ಹಾಗೂ ಬಂಡಾಯಗಳ ಮುಖಾಮುಖಿಯ ಸ್ವರೂಪಗಳ ಶೋಧನೆ ಬರಗೂರು ರಾಮಚಂದ್ರಪ್ಪನವರ ಕತೆ-ಕಾದಂಬರಿಗಳ ಪ್ರಧಾನ ಆಸಕ್ತಿ. 'ಶಬರಿ' ಕಾದಂಬರಿ ಸಹ ಇದಕ್ಕೆ ಅಪವಾದವಲ್ಲ. ಗಾರ್ಕಿ-ಬ್ರೆಕ್ಟ್‌ನ 'ತಾಯಿ'ಯಂತೆ ಇಲ್ಲಿನ ಶಬರಿ ಸಹ ಅನಕ್ಷರಸ್ಥ ನೆಲೆಯಿಂದ ದಿಟ್ಟತನದ ವ್ಯಕ್ತಿತ್ವವನ್ನು ಪಡೆಯುವ ಕ್ರಮ ಕಾದಂಬರಿಯ ಕೇಂದ್ರ. ಕಾಯುವಿಕೆ – 'ಕುದುವಿಕೆ'ಯ ರೂಪಕವಾಗಿ ಶಬರಿ ಕಾಣುತ್ತಾಳೆ. ವೈಚಾರಿಕತೆ ಮತ್ತು ಜೀವನಾನುಭವಗಳ ಒಟ್ಟಾರೆ ಚಿತ್ರ ಎಷ್ಟೋ ಪ್ರಗತಿಶೀಲ ಕಾದಂಬರಿಗಳಂತೆ ಇಲ್ಲಿಯೂ ಸಾರ್ಥಕ ಓದಿನ ಅನುಭವ ಕೊಡುವುದಿಲ್ಲ. ಕಾದಂಬರಿಯ ಕಥನದ ಒಡಲಲ್ಲಿ ಸೇರಿಹೋಗಿರುವ ಕಾವ್ಯದ ಸಾಲುಗಳು, ಅಕ್ಕಮಹಾದೇವಿಯ ವಚನಗಳು 'ಪ್ರಯೋಗ'ದ ಹಂತಕ್ಕೆ ಸೀಮಿತವಾಗಿದೆ ಎನಿಸುತ್ತದೆ. 'ಜನಸಂಸ್ಕೃತಿ ಹಾಗೂ ಜನಪರ ರಾಜಕಾರಣದ ಅಂತರ್‌ಸಂಬಂಧ'ದ ಸ್ವರೂಪವನ್ನು ಹಲವು ನೆಲೆಗಳಲ್ಲಿ ಚರ್ಚಿಸುವ ಪ್ರಗತಿಪರ ಕಾದಂಬರಿಯಾಗಿ 'ಶಬರಿ' ಗಮನ ಸೆಳೆಯುತ್ತದೆ.

## ಬದುಕು (ಕಾದಂಬರಿ)



ಗೀತಾ ನಾಗಭೂಷಣ

**ಪುಟ :** xviii+೪೯೬ **ಬೆಲೆ : ರೂ.** ೨೦೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಕನ್ನಡದ ಲೇಖಕಿ ಗೀತಾ ನಾಗಭೂಷಣ. ಅವರ 'ಬದುಕು' ಕಾದಂಬರಿ ಈ ಸಂದರ್ಭದಲ್ಲಿ ಎರಡನೆಯ ಮುದ್ರಣವನ್ನು ಹೊಂದಿದ್ದು ಸಾಕಷ್ಟು ಚರ್ಚೆಗೆ ಒಳಪಟ್ಟಿದೆ. ಕೊಳಗೇರಿಯ ಬದುಕಿನ ನೋವು-ನಲಿವುಗಳನ್ನು ಅಧಿಕೃತವಾಗಿ ಈ ಕಾದಂಬರಿ ಚಿತ್ರಿಸುತ್ತದೆ. ಮೂರು ತಲೆಮಾರಿನ ಬದುಕನ್ನು ಪರಿಶೀಲಿಸುವ ಈ ಕೃತಿ ಕೆಳವರ್ಗದ ಬದುಕಿನ ವಿಶಿಷ್ಟ ಜಗತ್ತನ್ನು ಕಣ್ಣ ಮುಂದೆ ತರುತ್ತದೆ. ಆಡುಮಾತಿನ ಶಕ್ತಿಯುತವಾದ ಶೈಲಿ ಕಾದಂಬರಿಯ ಜೀವಾಳವಾಗಿದೆ. ಆದರೂ ಕೆಲವು ಕಡೆ ವರ್ಣನೆಯ ಅತಿರಂಜಕತೆ ಚಮತ್ಕಾರದ ಮಟ್ಟದಲ್ಲಿಯೇ ನಿಲ್ಲುತ್ತದೆ. ಮತ್ತೆ ಕೆಲವು ಕಡೆ 'ಪ್ರಗತಿಶೀಲ' ವಿಚಾರಗಳನ್ನು ಪಾತ್ರಗಳಿಗೆ ಆರೋಪಿಸಿದಂತೆ ತೋರುತ್ತದೆ. ಕುಂ. ವೀರಭದ್ರಪ್ಪನವರ ಕೃತಿಗಳಂತೆ 'ಬದುಕು' ಕಾದಂಬರಿ ಸಹ ಒಂದು ವಿಶಿಷ್ಟ ಅನುಭವವನ್ನು ತಂದುಕೊಡುವಲ್ಲಿ ಯಶಸ್ವಿಯಾಗಿದೆ.

**— ಎಚ್ಚೆಸ್ಸೆಮ್**

# ಜಾಗತೀಕರಣ ಮತ್ತು ಪುಸ್ತಕ ಸಂಸ್ಕೃತಿ

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಕಳೆದ ಶತಮಾನದಿಂದೀಚೆಗೆ ವಿಶ್ವದ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳ ನಿರ್ವಹಣೆಯಲ್ಲಿ ಯೂರೋಪ್ ರಾಷ್ಟ್ರಗಳು ನಿರ್ಣಾಯಕ ಪಾತ್ರವನ್ನು ವಹಿಸುತ್ತಾ ಬಂದಿವೆ. ಇದಕ್ಕೆ ಕಾರಣ, ಯೂರೋಪ್‌ನಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿ. ಈ ಹಿನ್ನೆಲೆಯಲ್ಲಿ ಇವು ತಮ್ಮ ದೊಡ್ಡ ಪ್ರಮಾಣದ ಉತ್ಪಾದನೆಯ ಮಾರಾಟಕ್ಕಾಗಿ ಹೊಸ ಮಾರುಕಟ್ಟೆಗಳನ್ನು ಹುಡುಕಿಕೊಳ್ಳುವುದು ಅನಿವಾರ್ಯವಾಗಿ ಜಗತ್ತಿನ ಅನೇಕ ದೇಶಗಳನ್ನು ತಮ್ಮ ವಸಾಹತುಗಳನ್ನಾಗಿ ಮಾಡಿಕೊಂಡುಬಂದಿವೆ. ಇಲ್ಲಿ ಏರ್ಪಟ್ಟ ಅನಾರೋಗ್ಯಕರವೂ ಎನ್ನಬಹುದಾದ ಸ್ಪರ್ಧೆಯೇ ಮೊದಲ ಹಾಗೂ ಎರಡನೆಯ ಮಹಾಯುದ್ಧಕ್ಕೆ ಕಾರಣವಾಯಿತು ಎಂಬ ಹಲವು ಸಂಗತಿಗಳನ್ನು ಮೊದಲಿಗೆ ಗಮನಿಸುವುದು ಸೂಕ್ತವೆನಿಸುತ್ತದೆ.

**ಭಾರತ : ಜಾಗತೀಕರಣದ ಹಿನ್ನೆಲೆ**

ಈ ಎರಡನೆಯ ಮಹಾಯುದ್ಧ ಮುಗಿದ ಕೂಡಲೆ ಜಗತ್ತಿನ ಅನೇಕ ದೇಶಗಳು ಪರದೇಶೀ ಸರಕುಗಳ ವಿಚಾರದಲ್ಲಿ ತೀವ್ರ ಆಮದು ಸುಂಕವನ್ನು ಹೇರುತ್ತಾ ಹೋದವು. ಇದರ ಪರಿಣಾಮವಾಗಿ ಜಾಗತಿಕ ಮಾರುಕಟ್ಟೆಯು ತೀವ್ರ ಬಿಕ್ಕಟ್ಟಿಗೆ ಒಳಗಾಯಿತು. ಇದರಿಂದ ಹೆಚ್ಚು ಆತಂಕವನ್ನು ಅನುಭವಿಸಿದ್ದು ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳಲ್ಲಿ ಮುಂಚೂಣಿಯಲ್ಲಿದ್ದ ಕೈಗಾರಿಕಾ ಪ್ರಧಾನ ರಾಷ್ಟ್ರಗಳಾಗಿದ್ದವು. ಇವುಗಳಲ್ಲಿ ಬಹುತೇಕ ರಾಷ್ಟ್ರಗಳು ಯೂರೋ-ಅಮೆರಿಕನ್ ಜಗತ್ತಿನವೇ ಆಗಿದ್ದವು. ಹಾಗಾಗಿ ನಿರ್ಬಂಧಿತ ಮಾರುಕಟ್ಟೆ ವ್ಯವಸ್ಥೆಯ ಬದಲಿಗೆ ಮುಕ್ತ ಮಾರುಕಟ್ಟೆ ವ್ಯವಸ್ಥೆಯ ಅಪೇಕ್ಷೆ ಸದರಿ ದೇಶಗಳಿಗೆ ಆದ್ಯತೆಯ ವಿಚಾರವಾಯಿತು. ಆದ್ದರಿಂದ ಈ ಅನೇಕ ರಾಷ್ಟ್ರಗಳು ಒಂದುಗೂಡಿ ಸುಂಕ ಮತ್ತು ವ್ಯಾಪಾರಗಳನ್ನು ಕುರಿತು ಸಾರ್ವತ್ರಿಕ ಒಪ್ಪಂದ (General Agreement on Tariffs and Trade-1948)ವನ್ನು ಮಾಡಿಕೊಂಡವು. ಇದನ್ನು ಸಂಕ್ಷಿಪ್ತವಾಗಿ ಗ್ಯಾಟ್ (GATT) ಎಂದು ಕರೆಯಲಾಗುತ್ತದೆ. ಅನಂತರದಲ್ಲಿ ಇದು ವಿಶ್ವ ವಾಣಿಜ್ಯ ಸಂಘಟನೆಯಾಗಿ ಪರಿವರ್ತನೆಗೊಂಡಿದೆ. ಇದರಲ್ಲಿ ೧೯೯೪ರ ಹೊತ್ತಿಗೆ ೧೦೮ ಸದಸ್ಯ ರಾಷ್ಟ್ರಗಳಿದ್ದವು. ಇವುಗಳಲ್ಲಿ ೧೬ ರಾಷ್ಟ್ರಗಳು ನಿರ್ದೇಶನಾತ್ಮಕ ಸ್ಥಾನವನ್ನು ಪಡೆದ ಸದಸ್ಯ ರಾಷ್ಟ್ರಗಳಾಗಿವೆ. ಈ ಒಕ್ಕೂಟಕ್ಕೆ ಭಾರತವು ೧೯೯೧ರಲ್ಲಿ ಸದಸ್ಯ ರಾಷ್ಟ್ರವಾಯಿತು.

ಇದಕ್ಕೂ ಮೊದಲು ಭಾರತವು ತನ್ನ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳ ವಿಚಾರದಲ್ಲಿ ಹೆಚ್ಚಿನ ಸಾರ್ವಭೌಮತೆಯನ್ನು ಪಡೆದಿತ್ತು. ಆದರೆ ಇಲ್ಲಿ ಗ್ಯಾಟ್‌ಗೆ ಸಹಿ ಹಾಕುವ ಮೂಲಕ ಆ ಸಾರ್ವಭೌಮ ಅಧಿಕಾರವನ್ನು ವಿಶ್ವ ವಾಣಿಜ್ಯ ಸಂಘಟನೆಗೆ ಹಸ್ತಾಂತರಿಸಿತು. ಇದರ ಪರಿಣಾಮವಾಗಿ ವಿಶ್ವದ ಆರ್ಥಿಕ ಚಟುವಟಿಕೆಗಳಿಗೆ ನಮ್ಮ ರಾಷ್ಟ್ರದ (ಹಾಗೆಯೇ ಅನೇಕ ರಾಷ್ಟ್ರಗಳ) ಸರಹದ್ದುಗಳು ಗೌಣಗೊಂಡಿವೆ.

ಹೀಗೆ ಗ್ಯಾಟ್ ಮತ್ತು ವಿಶ್ವ ವಾಣಿಜ್ಯ ಸಂಘಟನೆಯ ಹಿನ್ನೆಲೆಯಲ್ಲಿ ಕೈಗಾರಿಕಾಪ್ರಧಾನ ಬಂಡವಾಳಶಾಹಿ ರಾಷ್ಟ್ರಗಳು, ಅದರಲ್ಲೂ ಯೂರೋ-ಅಮೆರಿಕನ್ ರಾಷ್ಟ್ರಗಳು ವಿಶೇಷವಾಗಿ ಒತ್ತಾಸೆಯಾಗಿವೆ. ಹಾಗಾಗಿ ಜಾಗತೀಕರಣ ಎಂಬುದು ವಾಸ್ತವವಾಗಿ ಪಶ್ಚಿಮೀಕರಣವೇ ಆಗಿದೆ. ಈ ಜಾಗತಿಕ ಗ್ರಾಮವು ಅಂತಿಮವಾಗಿ ಬಂಡವಾಳಶಾಹಿಗಳ ಆಡುಂಬೊಲವಾಗಿ ಪರಿವರ್ತನೆಗೊಂಡಿರುವುದರಿಂದ ಭಾರತವನ್ನು ತನ್ನ ಸಂವಿಧಾನಕ್ಕಿಂತ ಗ್ಯಾಟ್‌ನ ಅರ್ಥಸಂಹಿತೆಗಳು ಹೆಚ್ಚು ನಿಯಂತ್ರಿಸುವಂತಾಗಿದೆ. ಆದ್ದರಿಂದ, ಇವತ್ತು ಭಾರತದಲ್ಲಿ Democracyಯ ಜಾಗದಲ್ಲಿ Gattocracy ನೆಲೆಯಾಗಿದೆ ಎನ್ನಬಹುದು.

ಭಾರತವು ಗ್ಯಾಟ್‌ಗೆ ಸಹಿ ಹಾಕದೇ ಇದ್ದಿದ್ದರೆ ಅದರ ಸ್ವರೂಪ ಏನಾಗುತ್ತಿತ್ತು ಎಂಬುದು ಊಹೆಯ ಮತ್ತು ಇಲ್ಲಿಯ ಚರ್ಚೆಗೆ ಅನಗತ್ಯವಾದ ವಿಚಾರವಾಗಿದೆ. ಉದಾರೀಕರಣದ ಭಾಗವಾಗಿ ದೇಶಕ್ಕೆ ದೊಡ್ಡ ಪ್ರಮಾಣದ ವಿದೇಶಿ ಬಂಡವಾಳ ಹರಿದುಬರುತ್ತಿರುವುದು ಇಂದಿನ ವಾಸ್ತವ. ದೇಶದಲ್ಲಿ ಈಗಾಗಲೇ ಇರುವ ಕಪ್ಪು ಹಣವನ್ನು ಹೊರಕ್ಕೆ ತೆಗೆಸುವ ಇಚ್ಛಾಶಕ್ತಿಯನ್ನು ಪ್ರಕಟಿಸದ ಆಳುವ ವರ್ಗದ ಪುಕ್ಕಲುತನ ಇದು. ಈ ಪ್ರಕ್ರಿಯೆಯಲ್ಲಿ ಸಮಾಜವಾದೀ ನೆಲೆಯಲ್ಲಿ ಕುಗ್ಗುತ್ತ ಹೋಗಬೇಕಾಗಿದ್ದ ವರ್ಗ ತಾರತಮ್ಯದ ಕಂದರ ಹೆಚ್ಚುತ್ತಾ ಹೋಗಿರುವುದು ವೇದ್ಯವಾಗುತ್ತದೆ. ಹಾಗಾಗಿ 'ಸಮಾಜವಾದ' ಎಂಬ ಪರಿಭಾಷೆಯು ಸಂವಿಧಾನದ ಪುಸ್ತಕಕ್ಕೆ ಸೀಮಿತವಾಗಿ ಸಮಾಜದಲ್ಲಿ ಗೈರುಹಾಜರಾಗುವಂತಾಗಿದೆ.

ಹೀಗೆ ಜಾಗತೀಕರಣಕ್ಕೆ ಒಳಗಾಗಿರುವ ಭಾರತದಲ್ಲಿ ಆರ್ಥಿಕ, ರಾಜಕೀಯ, ಸಾಮಾಜಿಕ, ಭಾಷಿಕ ಮುಂತಾದ ಎಲ್ಲಾ ನೆಲೆಗಳಲ್ಲಿ ಮಹತ್ತರ ಪಲ್ಲಟಗಳು ಸಂಭವಿಸುತ್ತಿವೆ. ಇದರ ಸೀಮಿತ ಭಾಗವಾಗಿ ಪುಸ್ತಕ ಸಂಸ್ಕೃತಿ ಇದೆ.

ಜಾಗತೀಕರಣಕ್ಕೆ ಒಳಗಾಗದ ದೇಶಗಳ ಪುಸ್ತಕ ಸಂಸ್ಕೃತಿಯಲ್ಲಿ ಸಹ ಮಹತ್ತರ ಪಲ್ಲಟಗಳು ಸಂಭವಿಸುತ್ತಿವೆ. ಕಾರಣ, ಅಲ್ಲಿ ವಿದ್ಯುನ್ಮಾನ ಸಮೂಹ ಮಾಧ್ಯಮಗಳಲ್ಲಿ ಉಂಟಾದ ಮಹತ್ತರ ಕ್ರಾಂತಿ. ಉದಾಹರಣೆಗೆ, ಚೈನಾ, ಜಪಾನ್ ಇತ್ಯಾದಿ. ಇಂತಹ ದೇಶಗಳಲ್ಲಿ ಸಹಜವಾಗಿಯೇ ಎಲೆಕ್ಟ್ರಾನಿಕ್ ಪುಸ್ತಕ ಮತ್ತು ದೂರದರ್ಶನಗಳ ಸಂಸ್ಕೃತಿ ಬೆಳೆದಿದ್ದು, ಇವುಗಳ ಎದುರು ಪುಸ್ತಕ ಸಂಸ್ಕೃತಿಯು ಪಲ್ಲಟಗೊಳ್ಳುತ್ತಿದೆ. ಇದೇ ನೆಲೆಯಲ್ಲಿ ಭಾರತವು ಸಹ ಜಾಗತೀಕರಣದ ಪೂರ್ವದಿಂದಲೂ ದೂರದರ್ಶನ ಮತ್ತು ಮಾಹಿತಿ ತಂತ್ರಜ್ಞಾನ



ಕ್ಷೇತ್ರಗಳಲ್ಲಿ ಗಣನೀಯ ಬೆಳವಣಿಗೆಗಳನ್ನು ತೋರಿಸಿದೆ. ಆದರೆ ಈ ನಡಿಗೆ ಆಗ ಮಂದಗಾಮಿಯಾಗಿತ್ತು. ಗ್ಯಾಟ್‌ನ ಒಪ್ಪಂದಗಳಿಗೆ ಸಹಿ ಹಾಕಿದ ತರುವಾಯ ಉದಾರೀಕರಣದ ಭಾಗವಾಗಿ ಅನೇಕ ವಿದೇಶಿ ಕಂಪನಿಗಳು ವಾಯು ಮಾರ್ಗದ ಮೂಲಕವಾಗಿ ನಮ್ಮ ದೇಶವನ್ನು ಮುಕ್ತವಾಗಿ ಪ್ರವೇಶಿಸುವ ರಹದಾರಿಯನ್ನು ಪಡೆದವು. ಇದರಿಂದ ನೂರಾರು ವಿದೇಶಿ ಖಾಸಗಿ ಚಾನೆಲ್‌ಗಳು ಭಾರತ ಮತ್ತು ನಮ್ಮ ನಡುಮನೆಗಳನ್ನು ಪ್ರವೇಶಿಸಿದವು. ಇಲ್ಲಿ ಏರ್ಪಟ್ಟ ನಮ್ಮ ವೀಕ್ಷಣಾ ಸಂಸ್ಕೃತಿಯು ಸಹಜವಾಗಿಯೇ ಪುಸ್ತಕ ಸಂಸ್ಕೃತಿಯ ಕಂಪನಕ್ಕೆ ಕಾರಣವಾಗಿ ಮಾರ್ಪಟ್ಟಿದೆ.

**ಉಪಗ್ರಹ ಆಧಾರಿತ ಖಾಸಗಿ ಟಿ. ವಿ. ಚಾನೆಲ್‌ಗಳು ಮತ್ತು ಪುಸ್ತಕ ಸಂಸ್ಕೃತಿ**

ದೂರದರ್ಶನ ಸಂಸ್ಕೃತಿಯು ತನ್ನದೇ ಆದ ಉಪಯುಕ್ತತೆಯ ಗುಣದಿಂದಾಗಿ ಮಹತ್ವವನ್ನು ಪಡೆದಿದೆ. ಆದರೆ ಇದರ ಔಚಿತ್ಯ ಮೀರಿದ ಬಳಕೆ ಮಾತ್ರ ದುಷ್ಪರಿಣಾಮವನ್ನು ಪ್ರಕಟಿಸುತ್ತದೆ. ಹಾಗಾಗಿ ಇದರ ಉಪಯೋಗ ಮತ್ತು ಅಪಾಯ, ಎರಡೂ ಮಾನವನ ವಿವೇಕಯುತ ಬಳಕೆಗೆ ಸಂಬಂಧಿಸಿದ ವಿಚಾರಗಳಾಗಿವೆ. ಇಂತಹ ದೂರದರ್ಶನ ಸಂಸ್ಕೃತಿಯು ಕಳೆದ ಶತಮಾನದ ೮೦ರ ದಶಕಕ್ಕಿಂತ ಮೊದಲು ಸರ್ಕಾರೀ ಚಾನೆಲ್‌ಗಳ ಮೂಲಕ ಗುಣಾತ್ಮಕ ಪರಿಣಾಮಗಳನ್ನು ಪ್ರಕಟಿಸುತ್ತಿತ್ತು. ಈ ನೆಲೆಯಲ್ಲಿ ಕನ್ನಡ ಕಾರ್ಯಕ್ರಮಗಳ ಅವಧಿ ಹೆಚ್ಚಾಗಬೇಕು ಎಂಬ ಹೋರಾಟಗಳು ಬೆಂಗಳೂರು ದೂರದರ್ಶನ ಕೇಂದ್ರದ ಎದುರು ನಡೆಯುತ್ತಿದ್ದುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಆದರೆ ಇವತ್ತು ಅನೇಕ ಖಾಸಗಿ ಚಾನೆಲ್‌ಗಳ ಎದುರು ಕನ್ನಡ ಭಾಷೆಯಲ್ಲಿಯೇ ಪ್ರಸಾರಗೊಳ್ಳುವ (ಕ್ರೈಂ ಡೈರಿ, ಕ್ರೈಂ ಸ್ಟೋರಿ) ಕಾರ್ಯಕ್ರಮಗಳ ವಿರುದ್ಧ ಹೋರಾಟಗಳು ನಡೆದ ಪ್ರಸಂಗವನ್ನು ಕಂಡಿದ್ದೇವೆ. ಇನ್ನು ನಮಗೆ ದೂರವಿರುವ ಎಷ್ಟೋ ಟಿ. ವಿ. ಕೇಂದ್ರಗಳಿವೆ. ಅವುಗಳ ವಿರುದ್ಧ ಇಂತಹ ಹೋರಾಟ ಹೇಗೆ ಸಾಧ್ಯ ? ಇದು ಇಂದಿನ ವಿಚಾರವಂತರ ಅಸಹಾಯಕತೆ ಮತ್ತು ದೂರದರ್ಶನ ಸಂಸ್ಕೃತಿಗಳ ಸ್ವರೂಪವಾಗಿದೆ.



ಇಂತಹ ಬೆಳವಣಿಗೆಗಳು ವಿಶೇಷವಾಗಿ ಉದಾರೀಕರಣದ ಭಾಗವಾಗಿ ಹೆಚ್ಚಾಗಿರುವುದನ್ನು ಗಮನಿಸಬೇಕು. ಅನೇಕ ವಿದೇಶಿ ಚಾನೆಲ್‌ಗಳು ದೇಶದ ಸೀಮಿತ ನಿರ್ಬಂಧಗಳನ್ನು ಮೀರಿ ನಮ್ಮ ನಡುಮನೆಗಳನ್ನು ಪ್ರವೇಶಿಸಿರುವುದರಿಂದ ನಮ್ಮ ಶತ್ರು ಇಂದ್ರಜಿತ್‌ನಂತೆ ಯುದ್ಧ ಮಾಡುವ ಅಶರೀರಿಯಾಗಿದ್ದಾನೆ. ಇಲ್ಲಿಯ ಜನಪ್ರಿಯ ಕಾರ್ಯಕ್ರಮಗಳ ಪ್ರಾಯೋಜಕರು ಮತ್ತು ಟಿ.ವಿ. ಕಂಪನಿಗಳ ಮಾಲೀಕರು ಬಂಡವಾಳಶಾಹಿ ಪ್ರಭುಗಳೇ ಆಗಿದ್ದು, ಇವರು ಜನರ ನಾಡಿ ಮಿಡಿತವನ್ನು ಅರಿತಿದ್ದು, ಅದಕ್ಕೆ ಪೂರಕವಾಗಿ ತಮ್ಮ ಸರಕುಗಳ ಉತ್ಪಾದನೆ ಮತ್ತು ಮಾರಾಟದ ಜಾಲವನ್ನಾಗಿ ಈ ದೂರದರ್ಶನದ ಸಂಸ್ಕೃತಿಯನ್ನು ಬಳಸಿಕೊಳ್ಳುತ್ತಿದ್ದಾರೆ. ಈ ನೆಲೆಯಲ್ಲಿ ಅಪಾಯಕಾರಿಯಾಗುವ ಮಟ್ಟದಲ್ಲಿ ಜಾಹೀರಾತು ಸಂಸ್ಕೃತಿಯೂ ಇದೆ. ಈ ಜಾಹೀರಾತುಗಳ ನಡುವೆ ಜನರ ಸ್ಥಾಪಿತ ಹಿತಾಸಕ್ತಿಗಳಾದ ಧರ್ಮ, ದೈವ, ವೈಚಾರಿಕ ಕ್ರಾಂತಿಗೆ ದೂರವಾದ ಕೌಟುಂಬಿಕ ಜನಪ್ರಿಯ ಜಗತ್ತು, ಸಿನೆಮಾ, ಸಂಗೀತ, ನೃತ್ಯ – ಇವೇ ಮುಂತಾದ ನೆಲೆಗಳ ಸುತ್ತ ಕಾರ್ಯಕ್ರಮಗಳು ಗಿರಕಿ ಹೊಡೆಯುವಂತಾಗಿದೆ. ಇವುಗಳಿಗಾಗಿ ಹಾತೊರೆಯುವ ಶಿಕ್ಷಿತ ಮನಸ್ಸುಗಳು ಸಹ ಅನಿವಾರ್ಯತೆಯ ಓದು ಮತ್ತು ಬರಹವನ್ನು ಸೀಮಿತ ಅವಧಿಯಲ್ಲಿ ತ್ವರಿತವಾಗಿ ಪೂರೈಸಿ ಟಿ.ವಿ.ಗಳ ಮುಂದೆ ಕುತೂಹಲದಿಂದ ಬಂದು ಕೂರುವ ಪ್ರವೃತ್ತಿಯನ್ನು ತೋರುತ್ತಿವೆ. ಇಲ್ಲಿ ಹಳ್ಳಿ-ನಗರ, ಮಧ್ಯಮ-ಮೇಲ್ಮಧ್ಯಮ ಮುಂತಾದ ತಾರತಮ್ಯಗಳಲ್ಲದೆ ವಯಸ್ಸು ಮತ್ತು ಲಿಂಗ ಸಂಬಂಧಿಯಾದ ಸಾಮಾಜಿಕ ತಾರತಮ್ಯಗಳಿಗೂ ಅವಕಾಶವಿಲ್ಲ. ಹೀಗೆ ಎಲ್ಲ ತಾರತಮ್ಯಗಳನ್ನು ಮೀರಿದ ನೆಲೆಯಲ್ಲಿ ಬಹುತೇಕ ಮನುಷ್ಯ ವರ್ಗವೇ ಟಿ.ವಿ. ಎದುರು ಕುಳಿತಿದೆ. ಇಲ್ಲಿ ಆಲೋಚನಾಪ್ರಜ್ಞೆಯ ಸ್ಥಗಿತತೆ, ದೈಹಿಕ ನಿಷ್ಕ್ರಿಯತೆ ಮೊದಲಾದವುಗಳಲ್ಲದೆ ಪುಸ್ತಕ ಸಂಸ್ಕೃತಿಯೂ ಆತಂಕಕ್ಕೆ ಒಳಗಾಗಿದೆ. ಈ ನಿಟ್ಟಿನಲ್ಲಿ ಕೆಲವು ಅಧ್ಯಯನಗಳು ಸಹ ನಡೆದಿವೆ.

ಕೆನಡಾದ ಖ್ಯಾತ ಮನಃಶಾಸ್ತ್ರಜ್ಞ ಡಾ॥ ಟೆನ್ನಿಸ್ ಮ್ಯಾಕಬೆತ್ ವಿಲಿಯಮ್ಸ್ ಅವರು ತಮ್ಮ ದೇಶದಲ್ಲಿ ನಡೆಸಿದ ನೋಟಲ್ ಪ್ರಯೋಗವು ದೂರದರ್ಶನದ ಖಾಸಗಿ ಚಾನೆಲ್‌ಗಳ ಬಹುಮುಖೀ ದುಷ್ಪರಿಣಾಮದತ್ತ ಬೆಳಕು ಬೀರಿದೆ. ಇದರ ಪ್ರಕಾರ, ಕೆನಡಾದಲ್ಲಿ ದೂರದರ್ಶನವನ್ನು ವೀಕ್ಷಿಸುವ ಮತ್ತು ವೀಕ್ಷಿಸದ ಎರಡು ಪ್ರತ್ಯೇಕ ಗುಂಪುಗಳನ್ನು ಕುರಿತು ವಿಶ್ಲೇಷಣೆಯನ್ನು ನಡೆಸಿದಾಗ ದೂರದರ್ಶನದ ಕಾರ್ಯಕ್ರಮಗಳನ್ನು ಅವಿರತವಾಗಿ ನೋಡದ ಗುಂಪು ಹೆಚ್ಚು ಕ್ರಿಯಾಶೀಲವಾಗಿದ್ದು, ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವಲ್ಲಿ ಯಶಸ್ವಿಯಾಗಿಯೂ, ಇತರೆ ಸಾರಸ್ವತ ಕ್ಷೇತ್ರಗಳಲ್ಲಿ ಪ್ರತಿಭಾ ಸಂಪನ್ನವಾಗಿಯೂ ಇದ್ದದ್ದು ವೇದ್ಯಗೊಂಡಿದೆ. ಇದಕ್ಕೆ ತದ್ವಿರುದ್ಧವಾಗಿ ಇನ್ನೊಂದು ಗುಂಪು ಪರಿವರ್ತನೆಗೊಂಡಿತ್ತು. ಅದರ ಸ್ವರೂಪವಾಗಿ ದೈಹಿಕ ಕುಬ್ಜತೆ, ಮಾತಿನಲ್ಲಿ ಸಿಡುಕು, ಓದುವ ಪ್ರತಿಭೆಯಲ್ಲಿ ಮಂಕು – ಇವೇ ಮೊದಲಾದ ಸಂಗತಿಗಳು ಅರಿವಿಗೆ ಬಂದವು. ಇಲ್ಲಿ ಅವಿರತ ವೀಕ್ಷಣೆ ಸಾಧ್ಯವಾಗುತ್ತಿರುವ ದೊಡ್ಡ ಜನಸಮೂಹಕ್ಕೆ ದೂರದರ್ಶನದ ವೀಕ್ಷಣಾ ಸಂಸ್ಕೃತಿಯಿಂದ ಆಗುತ್ತಿರುವ ದುಷ್ಪರಿಣಾಮ ಹಾಗೂ ಅದರ ಅವಿಭಾಜ್ಯ ಭಾಗವಾಗಿ ಪುಸ್ತಕ (ಓದುವ) ಸಂಸ್ಕೃತಿಗೆ ಒದಗುತ್ತಿರುವ ಅವಸ್ಥಾಂತರಗಳನ್ನು ಒಟ್ಟಿಗೆ ಗಮನಿಸಬೇಕಾದ ಅವಶ್ಯಕತೆ ಇದೆ.

ಇಂತಹ ಖಾಸಗಿ ಅಥವಾ ಸ್ಯಾಟಲೈಟ್ ಚಾನೆಲ್‌ಗಳ ಬಂಡವಾಳಶಾಹಿ ನಿರ್ಧಾರಿತ ಕಾರ್ಯಕ್ರಮಗಳ ಮುಖ್ಯ ಆಸಕ್ತಿ ಮಾನವ ಸಮುದಾಯದ ಸಹಜ ಸೆಲೆಯಾಗಿರುವ ಲೈಂಗಿಕತೆ ಮತ್ತು ಹಿಂಸೆ ಆಗಿದೆ. ಇಂತಹ ಕಾರ್ಯಕ್ರಮಗಳು ದಿನದ ಇಪ್ಪತ್ನಾಲ್ಕು ಗಂಟೆಗಳ ಕಾಲವೂ ಪ್ರಸಾರಗೊಳ್ಳುವಲ್ಲಿ ಅವಿರಾಮವನ್ನು ತೋರುತ್ತಿವೆ. ಒಂದು ಅಂಕಿ ಅಂಶದ ಪ್ರಕಾರ ಮಕ್ಕಳಿಗಾಗಿಯೇ ತಯಾರಿಸುವ ಕಾರ್ಯಕ್ರಮಗಳಲ್ಲಿ ಒಂದು ಗಂಟೆಯ ಅವಧಿಯಲ್ಲಿ ಮೂವತ್ತೆರಡು ಹಿಂಸೆಯ ದೃಶ್ಯಗಳನ್ನು ತೋರಿಸಲಾಗುತ್ತದೆ. ಅಮೆರಿಕಾದ ಮಕ್ಕಳು ೧೬ನೇ ವಯಸ್ಸಿಗೆ ಬರುವ ವೇಳೆಗೆ ೧೮,೦೦೦ ಗಂಟೆಗಳನ್ನು ದೂರದರ್ಶನದ ಮುಂದೆ ಕಳೆಯುತ್ತಾರೆ. ಈ ೧೮,೦೦೦ ಗಂಟೆಗಳಲ್ಲಿ ೩೩,೦೦೦ ಕೊಲೆ ಹಾಗೂ ೨,೦೦,೦೦೦ ಹಿಂಸಾ ದೃಶ್ಯಗಳನ್ನು ಇವರು ನೋಡಿರುತ್ತಾರೆ.

**ಕಾಗದರಹಿತ ಪುಸ್ತಕ ಭಂಡಾರ**

ಒಟ್ಟಾರೆ ಖಾಸಗಿ ಟಿ.ವಿ. ಚಾನೆಲ್‌ಗಳು ವೀಕ್ಷಣಾ ಸಂಸ್ಕೃತಿ ಮತ್ತು ಪುಸ್ತಕ ಸಂಸ್ಕೃತಿ ಎರಡರ ಸಾಧ್ಯತೆಗಳು ಭಿನ್ನವೆನಿಸಿದರೂ ಇವತ್ತಿನ ಸಮುದಾಯದ ಹೆಚ್ಚು ವೇಳೆ ವೀಕ್ಷಣಾ ಸಂಸ್ಕೃತಿಯಲ್ಲಿ ಕಂಡುಬರುತ್ತಿರುವುದು ಅಧ್ಯಯನಗಳ ಹಾಗೂ ಅನೇಕರ ಅನುಭವದ ವಿಚಾರಗಳಾಗಿವೆ. ಈ ಹಿನ್ನೆಲೆಯಲ್ಲಿ ಪುಸ್ತಕ ಸಂಸ್ಕೃತಿಯು ಸಹಜವಾಗಿಯೇ ಕ್ಷೀಣಗೊಳ್ಳುತ್ತಿದೆ. ವಿದ್ಯುನ್ಮಾನ ಮಾಹಿತಿ ತಂತ್ರಜ್ಞಾನ ಸಂಸ್ಕೃತಿಯು ಜಾಗತೀಕರಣ ಪ್ರಕ್ರಿಯೆಯ ಭಾಗವಾಗಿ ಭಾರತದಲ್ಲಿ ಕ್ಷಿಪ್ರವಾಗಿ ಬೆಳೆಯುತ್ತಿದೆ. ಇದು ಹಿಂದಿನ ಮತ್ತು ಇಂದಿನ ಎಲ್ಲ ಉದ್ದಿಮೆಗಳನ್ನು ಮೀರುತ್ತಿದೆ. ಉದಾರೀಕರಣವು ಇದಕ್ಕೆ ಇಂಬು ಆಗಿರುವುದರಿಂದ ಜಗತ್ತಿನ ಅನೇಕ ಕೃತಿಗಳು, ಅಸಂಖ್ಯ ಮಾಹಿತಿಗಳು ವಿವಿಧ ವೆಬ್‌ಸೈಟ್‌ಗಳ ಮೂಲಕ ಕಂಪ್ಯೂಟರ್ ಎಂಬ ಪುಟ್ಟ ಯಂತ್ರದಲ್ಲಿ ಕಾಣಲು ಸಾಧ್ಯವಾಗಿದೆ. ಕಾಗದಾಧಾರಿತ ಪುಸ್ತಕ ಭಂಡಾರಗಳು ಕಾಗದರಹಿತ ಪುಸ್ತಕ ಭಂಡಾರಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಗೋಡೆ ಸಹಿತವಾದ ಗ್ರಂಥಾಲಯಗಳ ಜಾಗದಲ್ಲಿ ಗೋಡೆಗಳಿಲ್ಲದ ಗ್ರಂಥಾಲಯವನ್ನು ಕೈಯಲ್ಲಿ ತೂಗಿಕೊಂಡು ಹೋಗುವ ಲ್ಯಾಪ್‌ಟ್ಯಾಪ್ ಗ್ರಂಥಾಲಯದಲ್ಲಿ ನೋಡುತ್ತಿದ್ದೇವೆ. ಇದಕ್ಕೆ ಪೂರಕವಾಗಿ ಇ-ಬುಕ್ (ಸಿಡಿ ರೋಮ್) ಸಿದ್ಧಗೊಂಡಿದೆ. ಸೀಮಿತ ಸ್ಥಳಾವಕಾಶ, ಜೋಡಣಾ ವ್ಯವಸ್ಥೆ, ಮಾಹಿತಿ ಪಡೆಯುವ ಸುಲಭ ಮಾರ್ಗ, ಕುಳಿತಲ್ಲಿಯೇ ಮಾಹಿತಿಯನ್ನು (ಇ-ಬುಕ್ಕನ್ನು) ವೆಬ್‌ಸೈಟ್‌ನ ಮೂಲಕವಾಗಿ ಪಡೆಯುವ ಅವಕಾಶ ಇಲ್ಲಿ ಸಾಧ್ಯವಾಗಿದೆ. ಆದ್ದರಿಂದ ಇವತ್ತು ಪುಸ್ತಕ ಸಂಸ್ಕೃತಿಯೊಂದಿಗೆ ಕಂಪ್ಯೂಟರ್ ಸಂಸ್ಕೃತಿಯೂ ನೆಲೆಯಾಗುತ್ತಿದೆ. ಇವೆರಡೂ ಮಾಹಿತಿ ಮೂಲ ಸಾಧನಗಳಾಗಿರುವುದರಿಂದ, ಎರಡರ ಅಸ್ತಿತ್ವವೂ ಇವತ್ತು ಇರುವುದರಿಂದ ಹಾಗೂ ಈ ಎರಡರ ಸಾಧ್ಯತೆಗಳೂ ವಿಭಿನ್ನವಾಗಿ ಇರುವುದರಿಂದ ಎರಡರ ಅಗತ್ಯತೆ ಸದ್ಯಕ್ಕೆ ಇವತ್ತಿನದಾಗಿದೆ. ಸದ್ಯಕ್ಕೆ ಎಂದು ಯಾಕೆ ಹೇಳುತ್ತಿದ್ದೇನೆಂದರೆ ವಿದ್ಯುನ್ಮಾನ ಜಗತ್ತು ವಿಸ್ತರಿಸಿದಂತೆಲ್ಲಾ ಅಲ್ಲಿ ಕಂಪ್ಯೂಟರ್ ಸಂಸ್ಕೃತಿ ನೆಲೆಗೊಳ್ಳುತ್ತಾ ಕ್ರಮೇಣ ಕಂಪ್ಯೂಟರ್ ಸಂಸ್ಕೃತಿಯೇ ಹೆಚ್ಚು ಸುಲಭವೂ ಸರಳವೂ ಖಚಿತವೂ ಆದ ಮಾಹಿತಿ ಸಾಧನವಾಗಿ ಮಾರ್ಪಟ್ಟರೆ, ಪುಸ್ತಕ ಸಂಸ್ಕೃತಿ ಎಂಬುದು ಅವಸಾನದತ್ತ ಹೋಗಬಹುದು. ಹಿಂದೆ ಇದೇ ಪುಸ್ತಕದ ನೆಲೆಯಲ್ಲಿ ತಾಳೆ ಪ್ರತಿಗಳು ಇದ್ದುದನ್ನು ನೆನೆಪಿಸಿಕೊಳ್ಳಬೇಕು. ಕೈಗಾರಿಕಾ ಕ್ರಾಂತಿಯ ಭಾಗವಾಗಿ ಕಾಗದೋದ್ಯಮವು ಕಾಣಿಸಿಕೊಂಡಿದ್ದರಿಂದ ತಾಳೆಪ್ರತಿ ಸಂಸ್ಕೃತಿಯ ಜಾಗದಲ್ಲಿ




ಪುಸ್ತಕ ಸಂಸ್ಕೃತಿ ನೆಲೆಯೂರಿತು. ಇಲ್ಲಿ ತಾಳೆಪ್ರತಿ ಸಂಸ್ಕೃತಿಯು ಸನಾತನವಾದುದು, ಪವಿತ್ರವಾದುದು ಎಂಬ ಒಣ ಅಭಿಮಾನದ ವಿಚಾರಗಳಾಗಲೀ ವ್ಯಾಮೋಹದ ಸಂಬಂಧಗಳಾಗಲೀ ಉಳಿಯಲಿಲ್ಲ. ಸುಲಭ ಬಳಕೆ, ಅಗತ್ಯತೆ, ಅನಿವಾರ್ಯತೆ ಮೊದಲಾದ ಸಂಗತಿಗಳನ್ನು ಆಧರಿಸಿ ಈ ಸಾವಿರಾರು ವರ್ಷಗಳಿಂದ ನೆಲೆಯೂರಿದ್ದ ಈ ತಾಳೆಪ್ರತಿಗಳು ಧೂಳು ಹಿಡಿಯತೊಡಗಿದವು. ಪುಸ್ತಕಗಳು ಕ್ರಾಂತಿಯೋಪಾದಿಯಲ್ಲಿ ಪ್ರವೇಶ ಮಾಡಿಬಂದವು. ಇದರಂತೆಯೇ ಇವತ್ತು ಕಂಪ್ಯೂಟರ್ ಮೂಲವಾಗಿ ಇ-ಬುಕ್ ಪ್ರವೇಶ ಮಾಡಿದೆ. ಇದನ್ನು ಬಳಸುವ ಮಂದಿ ಪುಸ್ತಕದಲ್ಲಿರುವ ಮಾಹಿತಿಗಳೆಲ್ಲವನ್ನೂ ಕಂಪ್ಯೂಟರ್‌ನಲ್ಲಿ ಪಡೆದುಕೊಳ್ಳಲು ಸಾಧ್ಯವಾಗುವ ಸನ್ನಿವೇಶ ಬಂದರೆ ಪುಸ್ತಕ ಪರಿಸ್ಥಿತಿಯನ್ನು ಹಿಡಿದಿಡುವವರು ಯಾರು? ಬಹಳ ಹಳೆಯ ಫೋಟೋಗಳಲ್ಲಿ ವಿದ್ಯಾಧಿದೇವತೆಯೆಂದು ನಮ್ಮ ಸ್ಥಗಿತ ಸಂಸ್ಕೃತಿಯಲ್ಲಿ ಪ್ರತೀತಿಗೊಂಡಿರುವ ಸರಸ್ವತಿಯ ಕೈಯಲ್ಲಿ ಕಮಲವಿತ್ತು. ಕಾಲಕ್ರಮೇಣ ಈ ಕಮಲದ ಜಾಗದಲ್ಲಿ ಪುಸ್ತಕ ಬಂದು ಕುಳಿತುಕೊಂಡಿತು. ನಾಳೆ ಅದೇ ಪುಸ್ತಕದ ಜಾಗದಲ್ಲಿ ಸಿಡಿ ರೋಮ್ (ಇ-ಬುಕ್) ಬಂದು ಕುಳಿತರೆ ಅದಕ್ಕಾಗಿ ಆಶ್ಚರ್ಯಪಡಬೇಕಾದ ಪ್ರಮೇಯವಿರುವುದಿಲ್ಲ. ಈ ನಿಟ್ಟಿನಲ್ಲಿ ಭಾರತವು ಓಡುತ್ತಿದೆ. ತಡೆಯುವವರು ಯಾರು? ಮತ್ತೆ ಯಾಕೆ ತಡೆಯಬೇಕು? ಇಲ್ಲಿ ಸರಳ ತೀರ್ಮಾನಗಳಿಲ್ಲ; ಚರ್ಚೆಗೆ ಅವಕಾಶವಿದೆ.

**ಶಿಕ್ಷಣ ಮತ್ತು ಪುಸ್ತಕ ಸಂಸ್ಕೃತಿ**

ಭಾರತದ ವಾಣಿಜ್ಯ, ವ್ಯಾಪಾರ, ಶಿಕ್ಷಣ ಮೊದಲಾದ ಅನೇಕ ರಂಗಗಳಲ್ಲಿ ಕಂಪ್ಯೂಟರೀಕರಣವು ನೆಲೆಯಾಗುತ್ತಿದೆ. ಇದರ ಭಾಗವಾಗಿ ಶಿಕ್ಷಣದ ಅನೇಕ ಹಂತಗಳಲ್ಲಿ ಕಂಪ್ಯೂಟರ್ ಶಿಕ್ಷಣವು ಕಡ್ಡಾಯಗೊಳ್ಳುತ್ತಿದೆ. ಈ ನಿಟ್ಟಿನಲ್ಲಿ ಪ್ರಾತಿನಿಧಿಕವಾಗಿ ಬೆಂಗಳೂರು ವಿಶ್ವವಿದ್ಯಾಲಯವನ್ನು ಗುರುತಿಸುವುದಾದರೆ, ತಾನು ತನ್ನ ಎಲ್ಲ ಸ್ನಾತಕೋತ್ತರ ಕೋರ್ಸುಗಳಲ್ಲಿ ಕಂಪ್ಯೂಟರ್ ಶಿಕ್ಷಣವನ್ನು ನಿರ್ದಿಷ್ಟ ಅಂಕಗಳಿಗೆ ಕಡ್ಡಾಯಗೊಳಿಸಿದೆ. ಇದರ ಒತ್ತಾಯ ಅಧ್ಯಾಪಕರಿಗೂ ಇದೆ. ಹಾಗಾಗಿ ಎಲ್ಲಾ ಅಧ್ಯಾಪಕರಿಗೂ ಅಂತರ್ಜಾಲದ ಸಂಪರ್ಕ ವ್ಯವಸ್ಥೆಯಿರುವ ಪ್ರತ್ಯೇಕ ಕಂಪ್ಯೂಟರ್‌ಗಳನ್ನು ನೀಡಲಾಗಿದೆ. ಹಾಗಾಗಿ ಈ ವರ್ಗ ತನ್ನ ಜ್ಞಾನ ಸಂಪಾದನಾ ಮೂಲದ ಸಾಧನವನ್ನಾಗಿ ಕೇವಲ ಪುಸ್ತಕಗಳನ್ನಷ್ಟೇ ಅವಲಂಬಿಸಿದರೆ ತಾನು ಬೌದ್ಧಿಕವಾಗಿ ಅಂಗವಿಕಲತೆಯನ್ನು ಪಡೆಯುತ್ತದೆ. ಆದ್ದರಿಂದ ಸದ್ಯಕ್ಕೆ ಪುಸ್ತಕ ಸಂಸ್ಕೃತಿ ಮತ್ತು ಕಂಪ್ಯೂಟರ್ ಸಂಸ್ಕೃತಿ ಎರಡೂ ಈ ವರ್ಗಕ್ಕೆ ಅನಿವಾರ್ಯವೆನಿಸಿದೆ. ನಮ್ಮ ಹಿಂದಿನ ಅಧ್ಯಾಪಕ ಮತ್ತು ವಿದ್ಯಾರ್ಥಿ ತಲೆಮಾರಿಗೆ ಪುಸ್ತಕ ಸಂಸ್ಕೃತಿಯೊಂದೇ ಅಂತಿಮವಾದ ಜ್ಞಾನವಾಹಿನಿಯಾಗಿತ್ತು. ಆದರೆ ಇವತ್ತು ಅದರೊಂದಿಗೆ ಕಂಪ್ಯೂಟರ್ ಸಂಸ್ಕೃತಿಯೂ ಗುಣಾತ್ಮಕವಾಗಿ ಅಸ್ತಿತ್ವವನ್ನು ಪಡೆಯುತ್ತಿದೆ. ಇದು ಸದ್ಯಕ್ಕೆ ಪುಸ್ತಕ ಸಂಸ್ಕೃತಿ ಯನ್ನು ತಲ್ಲಣಗೊಳ್ಳುವಂತೆ ಮಾಡುತ್ತಿದೆ.

ಒಟ್ಟಾರೆ ಶಿಕ್ಷಣ ವ್ಯವಸ್ಥೆಯಲ್ಲಿ ಅದರಲ್ಲೂ ವೃತ್ತಿ ಮತ್ತು ಸಾಮಾನ್ಯ ಎಂಬ ವರ್ಗೀಕರಣಕ್ಕೆ ಎಟುಕುವ ಒಟ್ಟು ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಪುಸ್ತಕ ಸಂಸ್ಕೃತಿಯ ಜಾಗವನ್ನು ಕೊಂಚ ಕೊಂಚವಾಗಿ ಕಂಪ್ಯೂಟರ್ ಸಂಸ್ಕೃತಿಯು ಪಡೆದುಕೊಳ್ಳುತ್ತಿದೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಇದೇ ನಿಟ್ಟಿನಲ್ಲಿ ಅಲ್ಲವೇ ಪುಸ್ತಕ ಸಂಸ್ಕೃತಿ ಮತ್ತು ಜಾಗತೀಕರಣ ಎಂಬ ವಿಷಯವನ್ನು ನಿಗದಿಗೊಳಿಸಿ, ಜಾಗತೀಕರಣದ ಸಂದರ್ಭದಲ್ಲಿ ಪುಸ್ತಕ ಸಂಸ್ಕೃತಿಯು ಆತಂಕಗಳನ್ನು ಅನುಭವಿಸುತ್ತಿದೆ ಎಂಬ ಸುಪ್ತ ಮನಸ್ಸಿನ ಹೊಳಹುಗಳನ್ನು ಇಲ್ಲಿ ಪರೋಕ್ಷವಾಗಿ ವ್ಯಕ್ತ ಮಾಡಲಾಗಿರುವುದು ?

ಇದಕ್ಕೆ ಪೂರಕವಾಗಿ ಮತ್ತೊಂದು ಅಂಶ. ಆರ್ಥಿಕವಾಗಿ ಮುಂದುವರೆದ ಅಮೆರಿಕಾದಂತಹ ದೇಶಗಳಲ್ಲಿ ಉನ್ನತ ಶಿಕ್ಷಣದ ಅನೇಕ ತರಗತಿಗಳಲ್ಲಿ ಅಧ್ಯಾಪಕರ ಅಸ್ತಿತ್ವವೇ ಇಲ್ಲವಾಗಿದೆ. ಅದರ ಬದಲು ನಾಲ್ಕು ಗೋಡೆಗಳ ನಡುವಿನ ತರಗತಿಗಳಲ್ಲಿ ಪಾಠ ಪ್ರವಚನಗಳು ಧ್ವನಿ ಮತ್ತು ದೃಶ್ಯ ಮುದ್ರಿತ ತಂತ್ರಜ್ಞಾನದ ಮೂಲಕ ನಡೆಯುತ್ತಿದೆ. ಇಲ್ಲಿಯ ವಿದ್ಯಾರ್ಥಿಗಳಿಗೆ ಪ್ರಶ್ನೆ ಮತ್ತು ಸಂದೇಹಗಳೇನಾದರೂ ಇದ್ದರೆ ಅವುಗಳನ್ನು ಬರೆದು, ಆ ಚೀಟಿಗಳನ್ನು ನಿರ್ದಿಷ್ಟ ಡಬ್ಬಿಗಳಲ್ಲಿ ಹಾಕಿ, ಸೂಕ್ತ ಸಮಯದಲ್ಲಿ ಉತ್ತರಗಳನ್ನು ಪಡೆಯುವ ವ್ಯವಸ್ಥೆಯಿದೆ.

**ಪತ್ರಿಕಾರಂಗ**

ಲೇಖನಿ ಮತ್ತು ಕಾಗದವೇ ಬೆನ್ನೆಲುಬಾಗಿದ್ದ ಪತ್ರಿಕಾ ರಂಗದಲ್ಲಿ ಇಂದು ಅವೆರಡೂ ಸಾಧನಗಳು ಪಳೆಯುಳಿಕೆಗಳಾಗಿವೆ. ಹಾಗೊಮ್ಮೆ ಅವುಗಳನ್ನು ಯಾರಾದರೊಬ್ಬರು ಡೆಸ್ಕ್‌ನಲ್ಲಿ ಬಳಸುತ್ತಿದ್ದರೆ ಅವರನ್ನು ಪರಂಪರೆಯ ಪಳೆಯುಳಿಕೆಯನ್ನಾಗಿ ನೋಡುವ ಪರಿಪಾಠವಿದೆ.

ಒಟ್ಟಾರೆ, ಯಾವುದೇ ಉದ್ದಿಮೆ ಅದರಲ್ಲೂ ವ್ಯಾಪಾರ, ಬ್ಯಾಂಕಿಂಗ್, ಶಿಕ್ಷಣ, ಪತ್ರಿಕೆ ಮೊದಲಾದ ಯಾವುದೇ ರಂಗಗಳಲ್ಲಿಯೂ ಆರ್ಥಿಕವಾದ ಉನ್ನತ ಅವಸ್ಥೆಗಳಲ್ಲಿ ಕಂಪ್ಯೂಟರ್ ಸಂಸ್ಕೃತಿಯು ನೆಲೆಯಾಗುತ್ತಾ ಪುಸ್ತಕ ಸಂಸ್ಕೃತಿ ಗೌಣಗೊಳ್ಳುತ್ತಿದೆ. ಇದು ಈಗಾಗಲೇ ಪ್ರಸ್ತಾಪಿಸಿರುವಂತೆ ಅನುಕೂಲತೆಯ ವಿಚಾರವೇ ಹೊರತು ಅಭಿಮಾನ-ನಿರಭಿಮಾನವೆಂಬ ವಿಚಾರಗಳದ್ದಲ್ಲ.

ಇವತ್ತಿನ ವಿದ್ಯಾವಂತ ತಲೆಮಾರಿಗೆ (ಯಾವುದೇ ರಂಗದ) ಪುಸ್ತಕ ಸಂಸ್ಕೃತಿ ಮತ್ತು ಕಂಪ್ಯೂಟರ್ ಸಂಸ್ಕೃತಿ ಎರಡೂ ಅನಿವಾರ್ಯವಾಗಿದೆ. ಇದು ವಾಸ್ತವ. ಸದ್ಯದ ಈ ಎರಡು ಬಳಕೆಯ ಸಂಸ್ಕೃತಿಗಳ ಭವಿಷ್ಯದಲ್ಲಿ ಕಂಪ್ಯೂಟರ್ ಸಂಸ್ಕೃತಿ ವ್ಯಾಪಕವಾಗಿ, ಪುಸ್ತಕ ಸಂಸ್ಕೃತಿ ಹೆಚ್ಚು ಗೌಣವಾಗುವ ಸಾಧ್ಯತೆ ಕಂಡುಬರುತ್ತಿದೆ.

**ಕೆಲವು ವಿರೋಧಾಭಾಸಗಳು**

ಭಾರತವು ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಿಕೊಂಡಿಲ್ಲ. ಇಂತಹ ಸಂದರ್ಭದಲ್ಲಿ ಕಂಪ್ಯೂಟರ್ ಸಂಸ್ಕೃತಿಯು ಸರ್ಕಾರಕ್ಕೆ ಅಗತ್ಯತೆಯ ವಿಚಾರವಾಗಿ ಕಾಣುವ ಬದಲು ಆದ್ಯತೆಯ ವಿಚಾರವಾಗಿ ಕಾಣುತ್ತಿರುವುದು ಮೊದಲ ವಿರೋಧಾಭಾಸವೆನಿಸುತ್ತದೆ. ಪುಸ್ತಕ ಕೇಂದ್ರಿತ ಅನಕ್ಷರತೆಯ ಜಾಗದಲ್ಲಿ ಕಂಪ್ಯೂಟರ್ ನಿರಕ್ಷರತೆಯೂ ಕಾಣುತ್ತಿರುವುದು ಇದೇ ವಿರೋಧಾಭಾಸದ ಉಪವಿರೋಧಾಭಾಸವೆನಿಸುತ್ತದೆ.

ಸಿಂಗಲ್ ಫೇಸ್ ವಿದ್ಯುಚ್ಛಕ್ತಿಗಾಗಿ ಹಾತೊರೆಯುತ್ತಿರುವ ಭಾರತದ ಗ್ರಾಮೀಣ ಜಗತ್ತಿನಲ್ಲಿ ಮಾಹಿತಿ ತಂತ್ರಜ್ಞಾನದ ಕ್ರಾಂತಿ ಸಂಪೂರ್ಣವಾಗಿ ಸಾಧ್ಯಗೊಳಿಸಿ ಈ ಮೂಲಕ ಅಲ್ಲಿಯ ಪುಸ್ತಕ ಸಂಸ್ಕೃತಿಯನ್ನು ಅಲುಗಿಸಲು ದೀರ್ಘಕಾಲವೇ ಬೇಕು ಎಂಬುದು ಸ್ವತಂತ್ರ ಭಾರತದ ಐವತ್ತೆಂಟು ವರ್ಷಗಳ ರಾಜಕೀಯ ಮತ್ತು ಅಧಿಕಾರಶಾಹಿ ಮಾಡಿಬಂದ ದೇಶದ ಪ್ರಗತಿಯನ್ನು ಗಮನಿಸಿದಾಗ ವೇದ್ಯಗೊಳ್ಳುವ ಸಂಗತಿಯಾಗುತ್ತದೆ. ಇದು ಇನ್ನೊಂದು ವಿರೋಧಾಭಾಸ.

ಹೀಗೆ ಅನೇಕ ವಿರೋಧಾಭಾಸಗಳ ನಡುವೆಯೂ ಭಾರತವನ್ನು ಪ್ರವೇಶಿಸಿರುವ ಕಂಪ್ಯೂಟರ್ ಸಂಸ್ಕೃತಿಯು ದೇಶದ ಎಲ್ಲ ಪ್ರದೇಶಗಳಲ್ಲಿ ಹಾಗೂ ವಲಯಗಳಲ್ಲಿ ಇವತ್ತು ಏಕರೂಪದಲ್ಲಿಲ್ಲ. ಇಂತಹ ಅಸಮತೋಲನವು ಭವಿಷ್ಯದಲ್ಲಿಯೂ ಮುಂದುವರೆಯುವ ಸಾಧ್ಯತೆಯಿದೆ. ಈ ಹಿನ್ನೆಲೆಯಲ್ಲಿ ಕಂಪ್ಯೂಟರ್ ಸಂಸ್ಕೃತಿ ಎಂಬುದು ಆರ್ಥಿಕವಾಗಿ ಮುಂದುವರೆದ ಪ್ರದೇಶಗಳಲ್ಲಿ ಮತ್ತು ಪುಸ್ತಕ ಸಂಸ್ಕೃತಿ ಎಂಬುದು ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ ಪ್ರಧಾನವಾಗಿ ಅಸ್ತಿತ್ವನ್ನು ಪಡೆದಿರುತ್ತವೆ ಎಂಬುದು ಇಲ್ಲಿಯ ದೂರಗಾಮಿ ಗ್ರಹಿಕೆಯಾಗಿದೆ. ಇಲ್ಲಿ ಪ್ರಧಾನವೆಂದಾಗ ಅಪ್ರಧಾನವಾಗಿ ಇನ್ನೊಂದು ಸಂಸ್ಕೃತಿಯೂ ನೆಲೆಗೊಂಡಿರುತ್ತದೆ ಎಂಬುದು ಸ್ಪಷ್ಟ. ಇಂತಹ ವಿಂಗಡಣೆ ಹಳ್ಳಿ-ನಗರದಂತಹ ವಿಂಗಡಣೆಯನ್ನು ಮೀರಿದೆ. ಆರ್ಥಿಕ ಪ್ರಾಬಲ್ಯ ಮತ್ತು ದೌರ್ಬಲ್ಯ ಎಂಬ ನೆಲೆಗಟ್ಟುಗಳನ್ನು ಆಧರಿಸಿದ ವಿಂಗಡಣೆ ಇದಾಗಿದೆ ಎಂಬುದನ್ನು ಗಮನಿಸಬೇಕು. ಇಂತಹ ವಿಂಗಡಿತ ನೆಲೆಗಳು ಒಂದೇ ಪ್ರದೇಶದಲ್ಲಿ ಏಕಕಾಲದಲ್ಲಿ ಸಹ ಇರಲು ಸಾಧ್ಯ. ಇಂತಹ ಅಸಮತೋಲನದ ನಿವಾರಣೆಯಲ್ಲಿ ಚಿಂತೆ ಬೇಕಿಲ್ಲ, ಚಿಂತನೆ ಮುಖ್ಯ. ಆಗ ಮಾತ್ರ ನಮ್ಮ ಚಿಂತನೆ ಬೌದ್ಧಿಕ ಲೋಲುಪತೆಯನ್ನು ಮೀರಿದ ಸಾಮಾಜಿಕ ಬದ್ಧತೆಯ ನೆಲೆಯಲ್ಲಿ ಅರ್ಥಪೂರ್ಣಗೊಳ್ಳುತ್ತದೆ.

ಒತ್ತಾಸೆ : ಎಸ್. ಬಿ. ಆರ್. ಆರ್. ಮಹಾಜನ ಪ್ರಥಮ ದರ್ಜೆ ಕಾಲೇಜು ಮೈಸೂರಿನಲ್ಲಿ ವ್ಯವಸ್ಥೆ ಮಾಡಿದ್ದ ಯುಜಿಸಿ ಪ್ರಾಯೋಜಿತ 'ಜಾಗತೀಕರಣ ಮತ್ತು ಕನ್ನಡ ಸಾಹಿತ್ಯ' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ, ವಿಚಾರಗಳನ್ನೊಳಗೊಂಡ ಪ್ರಬಂಧವಿದು.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಹಿರಿಯ ಶ್ರೇಣಿ ಉಪನ್ಯಾಸಕ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ
ಬೆಂಗಳೂರು - ೫೬



# ಇಂದ್ರಿಯಗಳು

ಸೃಷ್ಟಿ ಜೀವಿಗಳಿಗೆ ನೀಡಿರುವ ವರ ಎಂದರೆ ಪಂಚೇಂದ್ರಿಯಗಳು. ಅವುಗಳೆಂದರೆ ಕಣ್ಣು, ಕಿವಿ, ಮೂಗು, ನಾಲಗೆ ಹಾಗೂ ಚರ್ಮ. ಈ ಸೃಷ್ಟಿಯೂ ಕೂಡ ಪಂಚಭೂತಗಳು, ಎಂದರೆ, ಪೃಥ್ವಿ, ಅಪ್ಪು, ತೇಜಸ್ಸು, ವಾಯು ಹಾಗೂ ಆಕಾಶ ಇವುಗಳಿಂದ ಆಗಿದೆ. ಈ ಸೃಷ್ಟಿಯನ್ನು ಅರಿತು ಅನುಭವಿಸಲು ಪಂಚೇಂದ್ರಿಯಗಳನ್ನು ನಿಸರ್ಗ ನಮಗೆ ವರವಾಗಿ ಕರುಣಿಸಿದೆ. ಆದರೆ ನಾವು ಆ ಪಂಚೇಂದ್ರಿಯಗಳನ್ನು ಸದ್ವಿನಿಯೋಗಪಡಿಸಿಕೊಳ್ಳುತ್ತಿದ್ದೇವೆಯೇ? ಎನ್ನುವ ಪ್ರಶ್ನೆಗೆ ಸಮಂಜಸ ಉತ್ತರ ಸಿಗಲಾರದು. ಏಕೆಂದರೆ, ನಾವು ಕಣ್ಣಿದ್ದೂ ಕುರುಡರಾಗಿದ್ದೇವೆ. ಕಿವಿಯಿದ್ದೂ ಕಿವುಡರಾಗಿದ್ದೇವೆ. ಯಾವುದನ್ನು ಕಾಣಬಾರದೋ ಅದನ್ನು ಧಾವಿಸಿ ಕಾಣುವ ಧಾವಂತಕ್ಕೆ ಒಳಗಾಗಿದ್ದೇವೆ. ಯಾವುದನ್ನು ಕೇಳಬಾರದೋ ಅದನ್ನು ಕೇಳುವ ಕಾತುರಕ್ಕೆ ಒತುಕೊಂಡಿದ್ದೇವೆ. ಯಾವುದನ್ನು ಆಡಬಾರದೋ ಅದನ್ನು ಮನಸೋ ಇಚ್ಛೆ ಆಡುವ ಆತುರ ನಮಗೆ ಅಭ್ಯಾಸವಾಗಿಹೋಗಿದೆ. ಮನುಷ್ಯನ ಮನಸ್ಸು ಈ ಸ್ಥಿತಿಯಲ್ಲಿ ಇರುವುದರಿಂದಲೇ ಗಾಂಧೀಜಿ ಅವರು ಕೆಟ್ಟದ್ದನ್ನು ಕೇಳಬೇಡ, ಕೆಟ್ಟದ್ದನ್ನು ನೋಡಬೇಡ, ಕೆಟ್ಟದ್ದನ್ನು ಆಡಬೇಡ ಎಂದು ಮೂರು ಮಂಗಗಳ ಮೂಲಕ ತಿಳಿಯಹೇಳಿದರು. ಆದರೂ ಮನುಷ್ಯನ ಮಂಗ ಪ್ರವೃತ್ತಿ ಇಂಗುತ್ತಲೇ ಇಲ್ಲ.

ನಿಜ, ನಿಸರ್ಗ ನಮಗೆ ಕೇಳಲೆಂದೇ ಕಿವಿಗಳನ್ನು ಕರುಣಿಸಿದೆ. ಆದರೆ ನಾವು ಏನನ್ನು ಕೇಳುತ್ತಿದ್ದೇವೆ? ಮನೆಯ ಮುಂದೆ ದೇವತೆಯಂತೆ ಒಂದು ಮರದಲ್ಲಿ ಕುಳಿತು ತನ್ನ ಸುಮಧುರ ಕಂಠದಿಂದ ಕೂಗುವ ಕೋಗಿಲೆಯ ಧ್ವನಿಗೆ ನಮ್ಮ ಕಿವಿ ತೆರೆಯುತ್ತಿದೆಯೇ? ವಿವಿಧ ಸ್ವರ ರಾಗಗಳಲ್ಲಿ ಚಿಲಿಪಿಲಿಗುಡುವ ಹಕ್ಕಿಗಳ ಮಧುರ ಸ್ವರಗಳು ಇಂಚರಗಳು ನಮ್ಮ ಕಿವಿಗಳನ್ನು ಹೊಕ್ಕು ಆನಂದವನ್ನು ನೀಡಲು ಹವಣಿಸುತ್ತಿದ್ದರೂ ನಮ್ಮ ಕಿವಿಗಳು ಅವಕ್ಕೆ ಒಗೊಡುತ್ತಿವೆಯೆ? ಸೂಯ್ ಎಂದು ಸುಂಯ್ ಗುಡುವ ಸಮೀರನ ಸವಿಗಾನಕ್ಕೆ ಕಿವಿಯನ್ನು ತೆರೆಯುತ್ತಿದ್ದೇವೆಯೆ? ಝುಳಝುಳನೆ ಹರಿವ ನೀರಿನ ಮಂಜುಳ ನಾದಕ್ಕೆ ಪುಳಕಿತರಾಗುತ್ತಿದ್ದೇವೆಯೆ? ಇಲ್ಲಾ ನಿಶ್ಶಬ್ದತಾ ಶಾಂತಿಯ ನೀರವ ಮೌನದಲ್ಲಿ ಮಾತ್ರ ಕೇಳುವ ಆಕಾಶದ ದಿವ್ಯ ಧ್ವನಿಗೆ ನಾವು ನಮ್ಮ ಎದೆಗಿವಿಯನ್ನು ತೆರೆದು ಆಲಿಸಿದ್ದೇವೆಯೆ?

ಬಣ್ಣಗಳ ಬೆಡಗು ಎಂಬುದು ಸೃಷ್ಟಿ ನಮಗೆ ಇತ್ತಿರುವ ಮತ್ತೊಂದು ಮಹಾನ್ ವರ. ಬೆಳಕಿನಿಂದ ಬಂದು ವಿವಿಧ ಬಣ್ಣಗಳನ್ನು ಬೀರಿ ಮತ್ತೆ ಬೆಳಕಾಗುವ ಸೃಷ್ಟಿಯ ವಿಸ್ಮಯ ಲೋಕದಲ್ಲಿ ಜೀವಿಗಳು ಬದುಕುತ್ತಿವೆ. ವೈವಿಧ್ಯತೆಯೆ ನಿಸರ್ಗದ ಅಂತರಂಗ. ಅಂತಹ ವೈವಿಧ್ಯತೆಯಿಂದ ಮನೆಯ ಮುಂದೆ ಮೊಗವರಳಿ ನಿಲ್ಲುವ ಭಗವಂತ ರೂಪಿಯಾದ ಪುಷ್ಪಗಳನ್ನು ಕಣ್ತೆರೆದು ಕಂಡಿದ್ದೇವೆಯೆ? ಸೃಷ್ಟಿಯ ಅದ್ಭುತ ಲೀಲೆಯಾಗಿ ವಿವಿಧ ಬಣ್ಣಗಳಿಂದ ಬಗೆಗೊಂಡು ಮೂಡುವ ಮಳೆಯ ಬಿಲ್ಲಿಗೆ ಮನ ತೆರೆದಿದ್ದೇವೆಯೆ? ಮೈಯೆಲ್ಲ ಕಣ್ಣಾದ ನವಿರು ಬಣ್ಣಗಳಿಂದ ಮೆರೆವ ನವಿಲಿನ ನರ್ತನ ನಮ್ಮ ಕಣ್‌ಮನಗಳನ್ನು ಸೆಳೆದಿದೆಯೆ? ಹುಣ್ಣಿಮೆಯ ಚಂದಿರನ ಚುಂಬಕ ಬೆಳಕಿಗೆ ಮೈಯೊಡ್ಡಿ ಪುಳಕಿತರಾಗುತ್ತಿದ್ದೇವೆಯೆ? ನೀರವ ರಾತ್ರಿಯ ತಿಳಿಯಾಕಾಶದಲ್ಲಿ ಮಿರುಮಿರನೆ ಮಿರುಗುವ ಲೆಕ್ಕಕ್ಕೆಟುಕದ ಲಕ್ಷೋಪಲಕ್ಷ ನಕ್ಷತ್ರಗಳತ್ತ ಒಮ್ಮೆ ದೃಷ್ಟಿ ಹರಿಸುತ್ತಿದ್ದೇವೆಯೆ? 'ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣೋ' ಎನ್ನುವ ಕವಿವಾಣಿಯಂತೆ ಸೂರ್ಯೋದಯ ಸೂರ್ಯಾಸ್ತಮಾನಗಳ ದಿವ್ಯಾಕರ್ಷಣೆಗಳತ್ತ ನಮ್ಮ ದೃಷ್ಟಿ ಹರಿಸಿದ್ದೇವೆಯೆ? ಅವುಗಳನ್ನು ಕಂಡು ಕನಿಷ್ಠ ನಾವು ನಮ್ಮೊಳಗೆ ಪ್ರಶಂಸಿಸಿಕೊಂಡಿದ್ದೇವೆಯೆ? ಇಲ್ಲ, ಏಕೆಂದರೆ, ವಿಲಿಯಂ ವರ್ಡ್ಸ್‌ವರ್ತ್ ಹೇಳುವಂತೆ – The world is too much with us. ನಮ್ಮಲ್ಲಿ ಪ್ರಾಪಂಚಿಕತೆ ಎನ್ನುವುದು ಅತಿಯಾಗಿ ತುಂಬಿಕೊಂಡಿದೆ. ನಾವು ನಮ್ಮ ದಿವ್ಯನೇತ್ರಗಳನ್ನು ಕೃತಕತೆಗೆ ನೀಡಿದ್ದೇವೆ. ಆ ಕೃತಕತೆಗೆ ಒಲಿದ ಕಣ್ಣುಗಳು ದಿವ್ಯವಾದುದನ್ನು ಭವ್ಯವಾದುದನ್ನು ಕಾಣುವ ತನ್ನತನವನ್ನೇ ಕಳೆದುಕೊಂಡು ಕಳಾಹೀನವಾಗಿವೆ. ನಮ್ಮ ಕಿವಿಗಳನ್ನು ಕೇವಲ ಶಬ್ದಗಳಿಗೆ ನೀಡಿ ಅದು ಕೇಳಬೇಕಾದ ದಿವ್ಯಧ್ವನಿಯಿಂದ ದೂರ ಮಾಡಿ ವಂಚಿಸಿ, ನಾವೂ ವಂಚಿತರಾಗಿದ್ದೇವೆ. ಸ್ಪರ್ಶದ ಹರ್ಷದಿಂದ ದೂರವಾಗಿ ಕೇವಲ ಮುಟ್ಟುವ ಮುಟ್ಟಿಸಿಕೊಳ್ಳುವ ಕೃತಕ ಕ್ರಿಯೆಯಲ್ಲಿ ಹಿತಗೊಂಡಿದ್ದೇವೆ. ಪ್ರಾಪಂಚಿಕತೆಯನ್ನು ಮೈಮನಗಳ ತುಂಬ ತುಂಬಿಕೊಂಡು ಕೃತಕತೆಯ ಕ್ರೂರ ಹಿಡಿತಕ್ಕೆ ಸಿಕ್ಕಿ ಬಂಧಿಗಳಾಗಿದ್ದೇವೆ. ಇದರಿಂದಾಗಿ ದೈವ ನಮಗೆ ಕರುಣಿಸಿರುವ ದಿವ್ಯವಾದ ಪಂಚೇಂದ್ರಿಯಗಳು ಇದ್ದೂ ಇಲ್ಲದ ಪರಿಸ್ಥಿತಿಯನ್ನು ನಾವು ನಮ್ಮ ಅಜ್ಞಾನದಿಂದಾಗಿ ಪ್ರಾಪ್ತ ಮಾಡಿಕೊಂಡಿದ್ದೇವೆ.

ಮನುಷ್ಯನನ್ನು ಬಿಟ್ಟರೆ ಸೃಷ್ಟಿಯ ಮತ್ತಾವ ಜೀವಿಗಳೂ ಪ್ರಕೃತಿಯ ವರದಿಂದ ವಂಚಿತವಾಗಿಲ್ಲ. ಅವು ನಿಸರ್ಗದೊಂದಿಗೆ ಒಂದಾಗಿ ನಿಸರ್ಗ ನಿಯಮದಂತೆ ಮುಕ್ತವಾಗಿ ಬದುಕಿ ಆನಂದಿಸುತ್ತವೆ. ಸೂರ್ಯೋದಯ ಸೂರ್ಯಾಸ್ತಮಗಳ ಸಮಯದಲ್ಲಿ ಆ ಅಮೃತಮಯ ಪ್ರಕೃತಿಯೊಂದಿಗೆ ಒಂದಾಗಿ ನಲಿದು ನರ್ತಿಸುತ್ತವೆ. ನಲಿವೆ ನಾಕ, ನೋವೆ ನರಕ ಎಂಬುದು ಮನುಷ್ಯನನ್ನು ಬಿಟ್ಟು ಮಿಕ್ಕೆಲ್ಲ ಜೀವಿಗಳು ಅರಿತು ನಿಸರ್ಗದೊಂದಿಗೆ ಒಂದಾಗಿವೆ. ಅವುಗಳ ಆ ನಲಿವನ್ನು ಮನುಷ್ಯ ಪ್ರಾಪ್ತಿ ಮಾಡಿಕೊಂಡರೆ ಈ ಲೋಕವೆ ನಾಕವಾಗುತ್ತದೆ.

ಅಂತಹ ನಾಕವನ್ನು ಕಂಡು ಅನುಭವಿಸಲೆಂದೆ ಸೃಷ್ಟಿ ನಮಗೆ ಪಂಚೇಂದ್ರಿಯಗಳನ್ನು ಕರುಣಿಸಿದೆ. ಸೃಷ್ಟಿಯ ಕಣಕಣಗಳಲ್ಲಿ ಆ ರಸಾನಂದವೆ ಅನವರತ ಉಕ್ಕುತ್ತಿದೆ. ತಮ್ಮ ತಪೋಮಯ ದೃಷ್ಟಿಯಲ್ಲಿ ಅದನ್ನು ಕಂಡ ಕುವೆಂಪು ಅವರು ತೆಗೆವ ಉದ್ಗಾರ ಎಂದರೆ,

ಆಹಾ, ನಾಕವೆ ನಮ್ಮ ಲೋಕಕೆ ಕಳಚಿ ಬಿದ್ದಿದೆ ಬನ್ನಿರಿ.
ತುಂಬಿಕೊಳ್ಳಲು ನಿಮ್ಮ ಹೃದಯದ ಹೊನ್ನ ಬಟ್ಟಲ ತನ್ನಿರಿ

ಎನ್ನುವುದು. ಅರಿವಿನಿಂದ ಕಣ್ಣು ತೆರೆದು ಕಂಡರೆ ಪಂಚೇಂದ್ರಿಯಗಳು ಕರುಣಿಸುವುದು ಈ ಪರಮವನ್ನೆ. ಅದನ್ನು ಪಡೆದುಕೊಳ್ಳುವ ಪುಣ್ಯದ ಪ್ರಾಪ್ತಿ ನಮ್ಮದಾಗಲಿ.

ಜ. ಹೊ. ನಾರಾಯಣಸ್ವಾಮಿ
ವಕೀಲರು, ೨೦೬೪/ಎ, ಉತ್ತರ ಬಡಾವಣೆ, ಹಾಸನ - ೫೭೩ ೨೦೧



## ನೆಲ್ಸನ್ ಮಂಡೇಲ

ಹಕ್ಕೊತ್ತಾಯ ಮಾಡಿದ ತಪ್ಪಿಗೆ ಸೆರೆಯಾದ ನೆಲ್ಸನ್
ಹೋರಾಟದ ದಿಕ್ಕುದೆಸೆ ಕುರಿತು ಪರಿತಪಿಸುತ್ತಿದ್ದ
ದಕ್ಷಿಣ ಆಫ್ರಿಕಾದ ಸೆರೆಮನೆಯ ಸುತ್ತೆಲ್ಲ ತಿರುಗುತ್ತಿತ್ತು
ಹದ್ದುಗಣ್ಣಿನ ಬಿಗಿ ಪಹರೆ ಶತಪಥ ಗಸ್ತು

ಕಾಲದಲೆ ಅಪ್ಪಳಿಸಿ ನೊರೆ ನೆರೆ ಮೂಡಿ
ಧ್ರುವತಾರೆಯಂತೆ ಕಣ್ಣ ಹೊಳಪು
ಒಂದೆ ಚಿತ್ತದ ಧ್ಯಾನ ಒಂದೆ ತಿಳಿವಿನ ವಚನ
ಕಾರ್ಯ ಕಾರಣ ಪುರುಷ ಮಂಡೇಲನ ಮಾತಿಗೆ
ಬಂಡೆಗಲ್ಲುಗಳ ಮನಸು ಕರಗಿ
ಶತಶತಮಾನಗಳ ಕರಾಳ ಕತ್ತಲೆ ತೊಲಗಿ
ಕಪ್ಪು ಜನಾಂಗದ ಬಯಕೆಯ ಬೆಳಕರಿಯಿತು

ಮದ್ದು ಗುಂಡು ಬಾಂಬು ಹಿಂಸೆ ದಬಾವಣೆ
ನೆಮ್ಮದಿಯ ಜಗಕ್ಕೆ ಇಂಬಿಲ್ಲ
ಸರ್ವ ಸಮಾನತೆಯ ನಂಬಿ
ಚಿತ್ತ ಸ್ವಾಸ್ಥ್ಯವ ಉಳಿಸಿಕೊಳ್ಳಲಿ ಈ ಭೂಮಂಡಲ

■ ಶಿವತೀರ್ಥನ್
೪೩, 'ಮಾಂದಳಿರು', ೨ನೇ ಹಂತ
'ಎಂ' ಬ್ಲಾಕ್, ಮೈಸೂರು - ೨೩



# ಪ್ರಸ್ತುತವಿದೆ ಹಿಂದೆಂದಿಗಿಂತಲೂ ಉತ್ತಮವಾದ ಹೊಸ ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

HOSATHU Kannada Monthly / October 2005 Rs. 12 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001. Editor : Dr G. Ramakrishna

# ಹೊಸತು ವಾಚಿಕೆ ಮಾಲಿಕೆ
# ಹದಿನೆಂಟು ಸಂಪುಟಗಳು




## ನವಕರ್ನಾಟಕದ ಅಪೂರ್ವ ಕೊಡುಗೆ




















೧/೮ ಡೆಮಿ ಆಕಾರದ
೧೩,೦೦೦ ಪುಟಗಳಿಗೂ ಹೆಚ್ಚು
ವಿಚಾರ ಪ್ರಚೋದಕ ಸಾಹಿತ್ಯ ಸಂಗ್ರಹ !

೧೯೯೯ರ ಆಗಸ್ಟ್‌ನಿಂದ ೨೦೦೪ರ ಜುಲೈ ವರೆಗಿನ ೬೦ 'ಹೊಸತು' ಸಂಚಿಕೆಗಳಿಂದ

- ಆಯ್ದ ಸಂಪಾದಕೀಯ
- ತಿಳಿವು
- ವಚನ ಸಾಹಿತ್ಯ
- ಶಿಕ್ಷಣ, ಸಂಸ್ಕೃತಿ
- ಮಹಿಳೆ
- ಆರೋಗ್ಯ, ವಿಜ್ಞಾನ
- ಇತಿಹಾಸ
- ಪ್ರಚಲಿತ ವಿದ್ಯಮಾನ
- ವೈಚಾರಿಕ ಲೇಖನಗಳು
- ಸಾಹಿತ್ಯ ಸಂವಾದ
- ಸಂದರ್ಶನಗಳು
- ಕಥೆಗಳು
- ಪ್ರಬಂಧಗಳು
- ಕವಿತೆಗಳು, ಇತ್ಯಾದಿ.

ಪ್ರತಿಯೊಂದು ಸಂಪುಟದ ಬೆಲೆ ರೂ. ೭೫
ಹದಿನೆಂಟು ಸಂಪುಟಗಳ ಬೆಲೆ ರೂ. ೧೩೫೦
ಮುಂಗಡ ನೀಡಿ ಕಾಯ್ದಿರಿಸುವವರಿಗೆ
ಪ್ರಕಟಣಪೂರ್ವ ಬೆಲೆ ರೂ. ೯೫೦
(ಅಂಚೆ ವೆಚ್ಚ ರೂ ೫೦ ಪ್ರತ್ಯೇಕ)

**ಉಳಿತಾಯ ರೂ. ೪೦೦**

ರೂ. ೨೦೦ ಮುಂಗಡ ಕಳಿಸಿ ನಿಮ್ಮ ಹೆಸರು ನೋಂದಾಯಿಸಿಕೊಳ್ಳಿ.
ಪ್ರಕಟಣಪೂರ್ವ ರಿಯಾಯಿತಿ ಪಡೆಯಿರಿ.
(ಬಾಕಿ ಹಣವನ್ನು ಪುಸ್ತಕ ಪ್ರಕಟಣೆಗೆ ಮುಂಚೆ ಒಟ್ಟಿಗೆ ಅಥವಾ ಕಂತುಗಳಲ್ಲಿ ನೀಡಿ) ನಿಮ್ಮ ಪ್ರತಿಗಳನ್ನು ಇಂದೇ ಕಾಯ್ದಿರಿಸಿ.

**ಅಮೂಲ್ಯ ಆಕರ ಗ್ರಂಥಗಳನ್ನು ನಿಮ್ಮದಾಗಿಸಿಕೊಳ್ಳಿ**

೨೦೦೫ರ ಕೊನೆಯಲ್ಲಿ ಪ್ರಕಟ

ವಿವರಗಳಿಗೆ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ೫೧೫೯
ಬೆಂಗಳೂರು - ೫೬೦ ೦೦೧ ದೂರವಾಣಿ : ೨೨೨೦೩೫೮೦/೮೧/೮೨

ಶಾಖೆಗಳು: ಬೆಂಗಳೂರು ✆ ೨೨೨೫೧೬೮೨ :: ಮಂಗಳೂರು ✆ ೨೪೪೧೦೦೬ :: ಮೈಸೂರು ✆ ೨೪ ೨೪೮೯೪ ::

# ಹೊಸತು

## ಒಳಗೇನಿದೆ ...




ಚಿತ್ರಗಳು : ಸ್ಯಾಮ್, ಶ್ರೀಹರಿ, ಎನ್. ಆರ್. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು ಜಿ. ಎಂ. ಬೊಮ್ನಳ್ಳಿ, ಸುರೇಶ್ ವಗ್ಗಾ, ಸಾಲಿ, ಚಿತ್ರ ಕೃಪೆ : ಮಕಾಳಿ, ಕೆ. ಕೆ. ಹೆಬ್ಬಾರ್

ಮುಖಚಿತ್ರ : ಮೈಸೂರು ದಸರಾ – ನೇತ್ರರಾಜು

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಕಾ**ಶ್ಮೀರದಲ್ಲಿ ಭೂಕಂಪವು ಸಹಸ್ರಾರು ಜೀವಗಳನ್ನು ಹಿಂಡಿ ಹಾಕಿತು, ಮನೆ-ರಸ್ತೆ-ಹೊಲಗಳನ್ನು ಧ್ವಂಸಮಾಡಿತು, ನೂರಾರು ಮಕ್ಕಳನ್ನು ಅನಾಥರನ್ನಾಗಿಸಿತು, ಮತ್ತು ಸರ್ಕಾರಗಳ ಹೊಣೆಯನ್ನು ಪರೀಕ್ಷೆಗೊಳಪಡಿಸಿತು. ಪ್ರಕೃತಿಯ ವಿಕೋಪದ ಮುಂದೆ ಮಾನವ ಬಹಳ ಸಣ್ಣವನು, ಬಲಹೀನ ಹಾಗೂ ವಿಸ್ಮಿತ. ಭೂಕಂಪದ ತರುವಾಯದಲ್ಲಿ ಮಳೆ, ಚಳಿ, ಸಾರಿಗೆಯ ಬಿಕ್ಕಟ್ಟು, ಮುಂತಾದ ಕಾರಣಗಳಿಂದಾಗಿ ಸಂತ್ರಸ್ತರಿಗೆ ಪರಿಹಾರ ತಲುಪುವುದರಲ್ಲಿ ನ್ಯೂನತೆಗಳು ಕಾಣಿಸಿಕೊಂಡಿವೆ. ಆದಾಗ್ಯೂ ಸರ್ಕಾರ ಹಾಗೂ ಸೈನ್ಯ ಜನರ ಅವಶ್ಯಕತೆಗಳನ್ನು ಪೂರೈಸಲು ಮಿತಿಮೀರಿ ಕೆಲಸ ಮಾಡಿವೆ. ಸಂತ್ರಸ್ತರ ಕೋಪವು ಸದಾಕಾಲ ಉಳಿಯದಂತೆ ಮಾಡಲು ಸರ್ವಪ್ರಯತ್ನಗಳನ್ನೂ ಮಾಡುವ ಕರ್ತವ್ಯ ಇಡೀ ದೇಶದ್ದಾಗಿದೆ. ಪರಿಹಾರದ ವಿತರಣೆಯಲ್ಲಿ ಮೇಲ್ವರ್ಗದವರಿಗೆ ಆದ್ಯತೆ ನೀಡಲಾಯಿತೆಂದು ಉರಿ ಮುಂತಾದ ಊರುಗಳ ಜನ ಉರಿದುಬಿದ್ದಿದ್ದಾರೆಂದು ವರದಿಯಾಗಿದೆ. ಸೈನ್ಯವು ಇದನ್ನು ಗಮನಿಸಿ ಕೂಡಲೇ ಪರಿಹಾರದ ವೈಖರಿಯನ್ನು ಬದಲಾಯಿಸಿದ್ದು ಸ್ವಾಗತಾರ್ಹ. ದುರಂತಕ್ಕೀಡಾಗಿರುವ ಎಲ್ಲ ಕುಟುಂಬಗಳಿಗೂ 'ಹೊಸತು' ತನ್ನ ಸಾಂತ್ವನ ವ್ಯಕ್ತಪಡಿಸುತ್ತದೆ ಮತ್ತು ಪರಿಹಾರದ ಕಾರ್ಯದಲ್ಲಿ ತನ್ನ ಗುಲಗಂಜಿ ತೂಕದ ಪ್ರಯತ್ನವನ್ನು ಮಾಡಲು ಉದ್ಯುಕ್ತವಾಗುತ್ತದೆ. ಅತ್ತ ಪಾಕಿಸ್ತಾನದ ಹತೋಟಿಯಲ್ಲಿರುವ ಕಾಶ್ಮೀರದಲ್ಲಿ ದುರಂತವು ಇನ್ನೂ ಭೀಕರವಾಗಿದೆ. ಭೂಕಂಪವಾಗಲಿ ಪರಮಾಣು ಅಸ್ತ್ರವಾಗಲಿ ಎರಗಿಬಂದರೆ ಒಟ್ಟಿಗೆ ನಮ್ಮೆರಡು ದೇಶಗಳೂ ಪ್ರಚಂಡ ಹಾನಿಗೊಳಗಾಗುತ್ತವೆಂಬುದನ್ನು ಮರೆಯದಿರೋಣ.

*  *  *

ದಸರಾ ನಾಡಹಬ್ಬ ಮುಗಿದಿದೆ. ಅದರ ಅರ್ಥೈಸುವಿಕೆಯ ಬಗ್ಗೆ ಜಿಜ್ಞಾಸೆ ನಡೆದಿದೆ. ಮಾನ್ಯ ಬರಗೂರರ ಮೌಲಿಕ ನಿಲುವನ್ನು ಟೀಕಿಸುವವರು ಒಂದೆಡೆಗಾದರೆ ಆಕಾಶ ಕಳಚಿಬಿದ್ದಿತೆಂದು ಹೌಹಾರಿ, ಪ್ರತಿಭಟಿಸುವುದಾಗಿ ಘೋಷಿಸಿ ತಣ್ಣಗಾದವರು ಇನ್ನೊಂದೆಡೆ. ಸಂಪ್ರದಾಯಕ್ಕೆ ಚ್ಯುತಿಯಾಯಿತೆಂದು ಹೇಳುವವರು ಒಳಿತು-ಕೆಡಕುಗಳ ಘರ್ಷಣೆಯಲ್ಲಿ ಒಳಿತಿಗೆ ಕೇಡುಂಟಾಯಿತೆಂಬ ವ್ಯಸನವನ್ನು ಬಾಯಿಮಾತಿನಲ್ಲಿ ವ್ಯಕ್ತಪಡಿಸಿದ್ದಾರೆ. ಶತಮಾನಗಳಿಂದ ಈ ಘರ್ಷಣೆ ನಡೆಯುತ್ತಿದೆಯಾದರೂ ಒಂದಲ್ಲ ಒಂದು ರೀತಿಯಲ್ಲಿ ಕೆಡುಕಿನದೇ ಮೇಲುಗೈಯಾಗಿದೆಯೆಂದು ಇಂದಿನ ವಿಶ್ವದ ವೀಕ್ಷಣೆ ಮಾಡಿದರೆ ತಿಳಿಯುತ್ತದೆ. ಅದು ಸಿನಿಕತನದ ಮಾತಲ್ಲ, ಕಟುವಾಸ್ತವ ಹಾಗಿದೆ. ಸಂಪ್ರದಾಯಕ್ಕೆ ಮಣೆ ಹಾಕುವವರ ಪೈಕಿ ನಿಜಕ್ಕೂ ಕೆಡುಕನ್ನು ವ್ಯಾವಹಾರಿಕವಾಗಿ ವಿರೋಧಿಸುವವರೆಷ್ಟು ಮಂದಿ? ಭ್ರಷ್ಟಾಚಾರ, ಮತಾಂಧತೆ, ಸ್ವಾರ್ಥ, ಕುತಂತ್ರ, ಸ್ವಜನ ಪಕ್ಷಪಾತ, ಇವಕ್ಕೆ ಪೋಷಣೆ ದೊರೆಯುವುದು ತಿರುಪತಿಯ ಹುಂಡಿಗೆ ನಾಲ್ಕು ಕೆ.ಜಿ. ಚಿನ್ನ ಹಾಕುವ ಮಂದಿಯಿಂದಲ್ಲವೆ? ಕರ್ನಾಟಕದ ಪಾಲಿಗೆ ಇನ್ನೊಂದು ಕ್ರೂರವ್ಯಂಗ್ಯವೂ ಸೇರಿಕೊಂಡಿದೆ : ಹಿಂದೆಲ್ಲಾ ವಿಜಯ ದಶಮಿಯನ್ನು ಬನ್ನಿಮಂಟಪದ ಜೊತೆ ಜಂಟಿಹಾಕಿ ವಿರಾಟನಗರದಲ್ಲಿ ಅರ್ಜುನನು ಅಸ್ತ್ರಗಳನ್ನು ಶಮಿ ವೃಕ್ಷದಿಂದ ಕೆಳಗಿಳಿಸಿದ್ದನ್ನು ಜ್ಞಾಪಿಸಲಾಗುತ್ತಿತ್ತು. ಉತ್ತರ ಭಾರತದಲ್ಲಿ ಮಾತ್ರ ರಾಮ-ರಾವಣ ಸಂಬಂಧ ಕಲ್ಪಿಸಲಾಗಿತ್ತು. ಈಗಲೂ ನಮ್ಮಲ್ಲಿ ಹಾಗೂ ಮಹಾರಾಷ್ಟ್ರದಲ್ಲಿ "ಶಮೀ ಶಮಯತೇ ಪಾಪಂ" ಎಂದೆನ್ನುತ್ತಾ ಬನ್ನಿ ಎಲೆಗಳನ್ನು ಪರಸ್ಪರ ಹಂಚಿಕೊಳ್ಳುವುದುಂಟು. ದೀಪಾವಳಿಯನ್ನು ದಿವಾಳಿ ಎಂದೆನ್ನುವಷ್ಟು ಬೌದ್ಧಿಕ – ಸಾಂಸ್ಕೃತಿಕ ದಿವಾಳಿತನ ನಮ್ಮದು. ಎಲ್ಲದರಲ್ಲೂ ಉತ್ತರ ಭಾರತದ ಕೈಂಕರ್ಯ ನಡೆಸುತ್ತಾ ನಮ್ಮ ಸಂಪ್ರದಾಯಕ್ಕೆ ಕುತ್ತುಂಟಾಯಿತೆಂದು ವ್ಯಥಿಸುವವರ ಡಾಂಭಿಕತೆ ಅಸಾಮಾನ್ಯವಾದದ್ದು. ಇದೇ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆ ಎದ್ದಿದೆ. ಉತ್ಸವದಿಂದಾಗಿ ಕೆಲವು ನುಂಗಣ್ಣಗಳು ಉದ್ಭವವಾಗುತ್ತಾರೋ ಅಥವಾ ನುಂಗಣ್ಣಗಳಿಗಾಗಿಯೇ ಉತ್ಸವವನ್ನು ಆಯೋಜಿಸಲಾಗುತ್ತದೋ? ಕಲೆಯನ್ನು ಜನಗಳಿಗೆ ಉಣಿಸುವ ಹೆಸರಿನಲ್ಲಿ ತಾರತಮ್ಯ, ಕೀಳು ಅಭಿರುಚಿ, ಪಕ್ಷಪಾತ, ಎಲ್ಲಾ ಪ್ರಕಟಗೊಂಡಿವೆಯೆಂದು ಹೇಳಲಾಗಿದೆ. ಯಾವ ಸಂಸ್ಕೃತಿ ಬದಲಾದರೂ ನಮ್ಮ ಈ ಕೊಳಕು ಪ್ರವೃತ್ತಿ ಬದಲಾಗಲಿಲ್ಲವೆಂಬ ವ್ಯಥೆ ಕಾಡುತ್ತದೆ.

ಕೆಡುಕಿನ ಮೇಲುಗೈಗೆ ಬೌದ್ಧಿಕ ದಿವಾಳಿತನ ಮತ್ತು ಖಂಡನೀಯ ನಿಷ್ಕ್ರಿಯತೆ ಮುಖ್ಯ ಕಾರಣ. ಮಣಿ ಶಂಕರ ಅಯ್ಯರ್ ಆಡುತ್ತಿರುವ ಹೊಲಸು ಆಟವನ್ನು ಗಮನಿಸಿ. ಮಂಗಳೂರಿನಲ್ಲಿ ಆರಂಭವಾಗಬೇಕಾದ ಒಂದು ತೈಲೋದ್ಯಮವನ್ನು ಹೇಗಾದರೂ ಮಾಡಿ ತಮಿಳುನಾಡಿಗೆ ಸ್ಥಳಾಂತರಿಸಬೇಕೆಂಬ ಹುನ್ನಾರ ಅವನದು. ನಮ್ಮ ರಾಜ್ಯದ ರಾಜಕೀಯದಲ್ಲಿ ಆತನ ಕುತಂತ್ರವನ್ನು ಎದುರಿಸಬೇಕೆಂಬುದಕ್ಕೆ ಆದ್ಯತೆ ಇಲ್ಲ. ಜೇಠಮಲಾನಿ, ವೆಂಕಯ್ಯನಾಡು ಅವರಂಥವರೆಂದೂ ನಮ್ಮ ರಾಜ್ಯದ ಪ್ರತಿನಿಧಿಗಳಾಗಿ ಕೆಲಸ ಮಾಡಲಿಲ್ಲ. ಅದನ್ನು ತಿಳಿದಿದ್ದೂ ದೇವೇಗೌಡರು ತಮಿಳುನಾಡಿನ ಕುದುರೆ ಜೂಜಿನ ರಾಜನನ್ನು ರಾಜ್ಯಸಭೆಗೆ ಚುನಾಯಿಸಿ ಅದೇನು ಲಾಭ ಪಡೆದರೋ ತಿಳಿದವರಾರು! ನಮ್ಮ ದೇಶದ ಎರಡು ದೊಡ್ಡ ರಾಜಕೀಯ ಪಕ್ಷಗಳಲ್ಲಿ ಒಂದು ತನ್ನೆಲ್ಲ ಚಿಂತನಾ ಜವಾಬ್ದಾರಿಯನ್ನು ನಾಗಪುರದ ಸುದರ್ಶನರಿಗೆ ವಹಿಸಿದೆ. ಇನ್ನೊಂದು ಸೋನಿಯಾ ನೇತೃತ್ವದಲ್ಲಿ ಚಿಂತನೆಯನ್ನು ಭಸ್ಮ ಮಾಡಿಬಿಟ್ಟಿದೆ. ನಮ್ಮ ವಸಾಹತು ವಿರೋಧ

ಲನೇ ಪುಟಕ್ಕೆ




ಸಂಪುಟ-೭ ಸಂಚಿಕೆ-೪ ನವೆಂಬರ್ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : nkp@bgl.vsnl.net.in**
**website : www.navakarnatakabooks.com**

# ಕರ್ನಾಟಕದೊಳಗಿನ ಕನ್ನಡನಾಡು ಎಂದೆನಿತೆಂಬ...

**ಸಂಪಾದಕೀಯ**

ಭಾರತದ ರಾಷ್ಟ್ರಕಲ್ಪನೆ ಒಂದು ಒಕ್ಕೂಟದ ಮಾದರಿ. ರಾಷ್ಟ್ರವ್ಯಾಪಿ ಸ್ವರೂಪದ ಸಾರ್ವಜನಿಕ ಸೇವೆಗಳನ್ನು ಸಂಘಟಿಸುವ, ಸಾಮಾನ್ಯ ಹಣಕಾಸು ವ್ಯವಸ್ಥೆಯನ್ನು ನಿರ್ವಹಿಸುವ, ಪರಕೀಯರ ಆಕ್ರಮಣದಿಂದ ಗಡಿಯನ್ನು ರಕ್ಷಿಸುವ ಜವಾಬ್ದಾರಿಗಳು ಕೇಂದ್ರ ಸರ್ಕಾರದ್ದು. ವಿದೇಶಗಳೊಡನೆ ಸೌಹಾರ್ದಯುತ ಸಂಬಂಧವನ್ನು ಬೆಳೆಸುವುದೂ ಅದರ ಕರ್ತವ್ಯ. ಆಂತರಿಕವಾಗಿ ರಾಜ್ಯಗಳ ನಡುವೆ ಉದ್ಭವಿಸುವ ಭಿನ್ನಾಭಿಪ್ರಾಯಗಳನ್ನು ನ್ಯಾಯಯುತವಾಗಿ ಪರಿಹರಿಸಲು ನೆರವಾಗುವುದೂ ಅದರ ಹೊಣೆಗಾರಿಕೆ. ಕಳೆದ ಹಲವು ದಶಕಗಳಲ್ಲಿ ಕೇಂದ್ರ ಆರ್ಥಿಕ ವಿಕಾಸ ಯೋಜನೆಯನ್ನು ತನ್ನ ಕಾರ್ಯಭಾರದಲ್ಲಿ ಸೇರಿಸಿಕೊಂಡಿರುವುದಕ್ಕೆ ಭಾರತದ ಒಟ್ಟಾರೆ ಬಡತನದ ಪರಿಸ್ಥಿತಿಯ ಹಿನ್ನೆಲೆ ಕಾರಣ. ಕಾಲಕ್ರಮದಲ್ಲಿ ರಾಜ್ಯಗಳ ಆರ್ಥಿಕತೆ ಪುಷ್ಟವಾದಂತೆ ಈ ಪಾತ್ರ ಕುಗ್ಗುತ್ತಾ ಹೋಗುವುದು ಅನಿವಾರ್ಯ. ನಮ್ಮ ರಾಜ್ಯಗಳು ಒಂದೊಂದೂ ಒಂದು ರಾಷ್ಟ್ರವೇ ಎಂಬಷ್ಟು ಶ್ರೀಮಂತ ಸಂಸ್ಕೃತಿಯನ್ನು, ವಿಭಿನ್ನ ವೈಶಿಷ್ಟ್ಯತೆಯನ್ನು, ಪಡೆದಿವೆ. ಯೂರೋಪಿಯನ್ ಒಕ್ಕೂಟದಲ್ಲಿರುವ ಯಾವ ರಾಷ್ಟ್ರಗಳಿಗೂ ಕಡಿಮೆಯಲ್ಲ ಈ ರಾಷ್ಟ್ರೀಯತೆಯ ಹೆಮ್ಮೆ. ಆದರೆ ಅವು ಏಕೆ ಪ್ರತ್ಯೇಕವಾಗಿ ಉಳಿಯಲಾರವು, ಏಕೆ ಭಾರತದ ಒಕ್ಕೂಟವನ್ನು ಸೇರಬೇಕು ಇತ್ಯಾದಿ ವಿಷಯಗಳು ನಮ್ಮ ಈ ಭೂಖಂಡದ ಸಾವಿರವರ್ಷಗಳ ಇತಿಹಾಸದಿಂದ ನಿರ್ದೇಶಿತವಾದುದು. ಪ್ರತ್ಯೇಕತೆಯ ಸೊಲ್ಲು ಈಗ ಸ್ವಲ್ಪ ಉಡುಗಿಹೋಗಿರುವುದೂ ಸ್ಪಷ್ಟ. ಭಾರತದ ಒಕ್ಕೂಟ ತನ್ನದೇ ವಿಭಿನ್ನತೆಯನ್ನು ಒಳಗೊಂಡ ಐಕ್ಯ ಸಂಸ್ಕೃತಿಯನ್ನು ಬೆಳೆಸುವ ಒಂದು ಮಹಾನ್ ಸಾಹಸ. ಯೂರೋಪಿಯನ್‌ಒಕ್ಕೂಟ, ಅಮೆರಿಕಾ ಸಂಯುಕ್ತ ಸಂಸ್ಥಾನದ ಪ್ರಯೋಗ, ರಷ್ಯಾದ ಒಕ್ಕೂಟದ ಪ್ರಯತ್ನ – ಈ ಎಲ್ಲದಕ್ಕಿಂತ ಮಿಗಿಲಾದ ಪ್ರಯತ್ನ ನಮ್ಮದು. ಈ ಒಕ್ಕೂಟ ಜಯಶೀಲವಾಗುವುದನ್ನು ಸಹಿಸದ ರಾಷ್ಟ್ರೀಯ-ಅಂತರರಾಷ್ಟ್ರೀಯ ದುಷ್ಟಶಕ್ತಿಗಳು ಅದನ್ನು ಒಡೆಯುವ ಹಲವಾರು ಪ್ರಯತ್ನಗಳನ್ನು ಮಾಡಿ, ಸಫಲರಾಗದೆ, ಈಗ ಅದನ್ನು ಗೌರವಿಸಲು ಪ್ರಾರಂಭಿಸಿದ್ದಾರೆ. ಇಲ್ಲಿಯ ಪ್ರಜಾಪ್ರಭುತ್ವಾತ್ಮಕ ಪ್ರಯೋಗವನ್ನು ಅನುಕರಣೀಯ ಮಾದರಿ ಎಂಬಂತೆ ಅಭ್ಯಾಸಮಾಡುತ್ತಿದ್ದಾರೆ.

ಪ್ರಸ್ತುತ ವಿಷಯ ಈ ಭಾರತದೊಳಗಿನ ಕರ್ನಾಟಕದ್ದು. ಇದನ್ನು ಕನ್ನಡನಾಡು ಎಂದೇಕೆ ಕರೆಯಲಿಲ್ಲ ನಮ್ಮ ಹಿರಿಯರು ಎಂದು ವಿಚಾರಿಸುವುದು ಉದ್ದೇಶ. ಕರ್ನಾಟಕ ಮತ್ತು ಕನ್ನಡನಾಡು ಸಮಾನ ಪದಗಳೆಂದೇನೂ ಅಲ್ಲ. ತಮಿಳುನಾಡು, ಕೇರಳ, ಆಂಧ್ರ ಪ್ರದೇಶಗಳು ಏಕಭಾಷೀಯತೆಯನ್ನು ಪ್ರತಿಬಿಂಬಿಸಿದಂತೆ ಸ್ಪಷ್ಟವಾದದ್ದಲ್ಲ ಕರ್ನಾಟಕವೆಂಬ ಪದ. ಭಾಷೆಯ ನೆಲೆಯಲ್ಲಿ ಆ ಪದದ ವ್ಯುತ್ಪತ್ತಿಯ ಬಗೆಗೇ ಒಮ್ಮತವಿಲ್ಲ. ಎಲ್ಲ ಮತಗಳೂ ಪದದ ಬಳಕೆಯ ಬಗ್ಗೆ ಸಮ್ಮತವನ್ನಂತೂ ಹೊಂದಿವೆ. ನೆರೆಹೊರೆಯ ಭಾಷಾವಾರು ಪ್ರಾಂತಗಳಲ್ಲಿ ರಾಜಕೀಯವಾಗಿ ಅನೇಕ ಒಡಕಿನ ತೊಡಕುಗಳು ಇತ್ತೀಚೆಗೆ ಹುಟ್ಟಿಕೊಂಡಿವೆ. ತಮಿಳುನಾಡಿನಲ್ಲಿ ಮೂರು ಒಳತಮಿಳು ಪ್ರಕಾರಗಳಿವೆ ! ನಮ್ಮ ಉತ್ತರ ಕರ್ನಾಟಕದ ಬಂಧುಗಳು ಕೆಲವರು ರಾಜ್ಯವಿಭಜನೆಗೆ ಸಮರ್ಥನೆ ನೀಡುತ್ತಾ ಕರ್ನಾಟಕದೊಳಗಿನ ಸಾಂಸ್ಕೃತಿಕ, ಚಾರಿತ್ರಿಕ ಅನುಭವಗಳ, ಭಾಷಾಶೈಲಿಯ ವಿಭಿನ್ನತೆಗಳನ್ನು ಸಮರ್ಥನೆಯಾಗಿ ಮುಂದೊಡ್ಡಲು ಹಿಂಜರಿಯುವುದಿಲ್ಲ. ಈ ವಾದದೊಳಗಿನ ತಥ್ಯತೆಯನ್ನು ಸಂಪೂರ್ಣ ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ. ಕರ್ನಾಟಕ ಏಕೆ ವಿಭಜನೆಯಾಗಬಾರದೆಂಬುದಕ್ಕೆ ಇನ್ನೂ ಭದ್ರಬುನಾದಿಯ ವಾದವನ್ನು ಮಂಡಿಸಬೇಕಷ್ಟೆ. ವಿಭಜನವಾದಿಗಳ ತೆರೆಮರೆಯ ಜಾತಿ ಆಧಾರಿತ ಅಧಿಕಾರದಾಹವನ್ನು ಬಯಲಿಗೆಳೆಯಬೇಕು. ಅಂಥ ಪ್ರತ್ಯೇಕತೆಯ ಸೊಲ್ಲು ಏಳಲು ಕಾರಣವಾದ ಸರ್ಕಾರದ ಅಚಾತುರ್ಯವನ್ನು ತರಾಟೆಗೆ ತೆಗೆದುಕೊಳ್ಳಬೇಕು. ಆರ್ಥಿಕ ಬೆಳವಣಿಗೆಯ ಕಾರಣಗಳನ್ನು ಸಕಾರಣವಾಗಿ ಸ್ಪಷ್ಟಪಡಿಸಬೇಕು ಮತ್ತು ಪರಿಹರಿಸಬೇಕು. ವಿಭಜನೆಯಿಂದಾಗುವ ದುಷ್ಪರಿಣಾಮಗಳನ್ನು ತೆರೆದಿಡಬೇಕು. ಈ ಎಲ್ಲ ಪ್ರಯತ್ನಗಳೂ ಪರಿಣಾಮಕಾರಿಯಾಗಿ ತಮ್ಮ ರಾಜಕೀಯ ಶುದ್ಧ ನೆಲೆಯನ್ನು ತಲುಪಬೇಕಾದರೆ ಕರ್ನಾಟಕದ ಕಲ್ಪನೆಯನ್ನು ಸೀಮಿತವಾದ 'ಕನ್ನಡನಾಡು' ಕಲ್ಪನೆಗಿಂತ ಉನ್ನತ ಮಟ್ಟಕ್ಕೆ ಒಯ್ಯುವುದು ಅಗತ್ಯ.

ಕನ್ನಡದ ಕೆಲಸ ಕರ್ನಾಟಕ ರಾಜ್ಯಸ್ಥಾಪನೆಗೆ ಕಾಯಲಿಲ್ಲ. ಕನ್ನಡಿಗರು ನೆರೆರಾಜ್ಯಗಳಲ್ಲಿ ಹಂಚಿಹೋಗಿದ್ದರೂ ಕಳೆದ ನೂರು ವರ್ಷಗಳಲ್ಲಿ ಅವರ ಮಧ್ಯೆ ಕನ್ನಡನುಡಿ, ಸಾಹಿತ್ಯ, ಸಂಸ್ಕೃತಿಯ ಕೆಲಸ ನಿರಂತರ ನಡೆದುಬಂದಿದೆ. ಹೈದರಾಬಾದಿನಲ್ಲೋ, ಮದರಾಸಿನಲ್ಲೋ, ಮುಂಬಯಿಯಲ್ಲೋ ಕನ್ನಡ ಸಾಹಿತ್ಯ ಸಮ್ಮೇಳನ ನಡೆಸಲು ಯಾವ ಯಾರ ಅಡ್ಡಿಯೂ ಇರಲಿಲ್ಲ. ಈ ಮೂರೂ ನಗರಗಳೂ ಕನ್ನಡ ಸಾಹಿತ್ಯದ ಸಾಹಿತಿಗಳ ಕ್ರಿಯಾಶೀಲ ಕೇಂದ್ರಗಳಾಗಿದ್ದುವು. ಇಂದಿಗೂ ಅಲ್ಲಿಯ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಸ್ಥಾನಮಾನವಿದೆ. ದೆಹಲಿಗೆ ಹೋಗಿ ಇಂದು ವಿಶ್ವಕನ್ನಡ ಸಮ್ಮೇಳನ ಮಾಡುತ್ತೇವೆ. ಆದರೆ ನೆರೆ ರಾಜ್ಯಗಳಲ್ಲಿ ಹಿಂದಿನಂತೆ ಇಂದೂ ಅದನ್ನು ನಡೆಸುವುದು ಇನ್ನೂ ಔಚಿತ್ಯಪೂರ್ಣವಾಗುತ್ತಿತ್ತೇ ? ಮುಂದೊಮ್ಮೆ ದುರ್ದೈವದಿಂದ ಅಲ್ಲ, ನಮ್ಮ ದುಷ್ಟ ರಾಜಕೀಯದಿಂದ ಕರ್ನಾಟಕ ಹಲವು ಪ್ರಾಂತಗಳಾಗಿ ವಿಭಜನೆಯಾದರೆ ? ನೆರೆರಾಜ್ಯಗಳೂ ಹಾಗೇ ಆಗಬಹುದು. ಕೇವಲ ಆಡಳಿತಾತ್ಮಕ ಕಾರಣಗಳಿಂದಾಗಿಯೇ ಸಾಧುವಾದ ಮಾರ್ಗವೆಂದೇ ಚಿಕ್ಕಪುಟ್ಟ ರಾಜ್ಯಗಳಾಗಿ ವಿಭಜನೆಗಳಾಗುವುದು ಎಂದೆಂದಿಗೂ ಸಾಧ್ಯವಿಲ್ಲ ಎಂದು ಹೇಳುವಂತಿಲ್ಲ. ಆಗ ಕನ್ನಡ ಸಾಹಿತ್ಯ ಮತ್ತು ಭಾಷಾಕ್ಷೇತ್ರದ ಕಾರ್ಯಕರ್ತರು ಆ ವಿಭಜಿತ ಪ್ರದೇಶಗಳಲ್ಲಿ ಸಾಹಿತ್ಯ-ಸಾಂಸ್ಕೃತಿಕ ಮೇಳ ನಡೆಸದೇ ಇರುತ್ತಾರೆಯೇ ? ಸಾಹಿತ್ಯ-ಸಾಂಸ್ಕೃತಿಕ ಸಂಬಂಧಗಳು ಭೌಗೋಳಿಕ ರಾಜಕೀಯ ಸಂಘಟನೆಗಳ ಗಡಿಯ ಮಿತಿಯನ್ನು ಮನ್ನಿಸುವುದಿಲ್ಲ. ಆ ಸಂಬಂಧಗಳಲ್ಲಿ ಮೂಲಭೂತ ಮೌಲಿಕತೆ ಇದ್ದರೆ ಅವು ನಿರಂತರ ಕಾರ್ಯಪ್ರವೃತ್ತವಾಗಿ ಇದ್ದೇ ಇರುತ್ತವೆ. ವಿಭಜನೆಯೇ ನೇರವಾಗಿ ಕನ್ನಡಕ್ಕೆ ಮಾರಕವಾಗಲಾರದು. ಆದರೆ ಏಕೀಕೃತ ಕರ್ನಾಟಕ, ಕನ್ನಡಕ್ಕೆ, ಕನ್ನಡಿಗರಿಗೆ ನವಚೇತನ ತರಬಲ್ಲದು. ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಅಪಾರ ಪ್ರಯೋಜನ ಕಂಡು, ಸಾಂಸ್ಕೃತಿಕ ಸಾಹಿತ್ಯಿಕ ನೆಲೆಗಳಿಗೆ ಅಂಗಸೌಷ್ಠವ ತುಂಬುವುದು ಐಕ್ಯತೆಯಲ್ಲಿ ಸಾಧ್ಯ ಎಂದು ಕಳೆದ ಐವತ್ತು ವರ್ಷಗಳ ಒಕ್ಕೂಟದ ಕರ್ನಾಟಕದ ಅನುಭವ ಸಾರಿಹೇಳುತ್ತದೆ. ಇಂದಿನ ಕರ್ನಾಟಕದೊಳಗಿನ ಕನ್ನಡ ಹಿಂದಿನ ಹರಿದುಹಂಚಿಹೋಗಿದ್ದ ಕನ್ನಡಕ್ಕಿಂತ ಮಿಗಿಲಾಗಿ ಅಭಿವೃದ್ಧಿಯಾಗಿರುವುದು ಪ್ರಶ್ನಾತೀತವಾದ ವಾಸ್ತವ.

ಕರ್ನಾಟಕವೆಂಬುದು ಉಳಿಸಿಕೊಳ್ಳಲು ಸಾಧ್ಯವಾದ ಒಂದು ಒಕ್ಕೂಟ. ವಿವಿಧ ರಾಜ್ಯಗಳಲ್ಲಿ ಹಂಚಿಹೋಗಿದ್ದ ಕನ್ನಡ ಮಾತನಾಡುವವರೇ ಹೆಚ್ಚಿದ್ದ ಪ್ರದೇಶಗಳನ್ನು ಅದೊಂದೇ ಕಾರಣದಿಂದ ಬೇರ್ಪಡಿಸಿ, ಹಳೆಯ ಮೈಸೂರಿನೊಡನೆ ಬೆಸೆದಿದ್ದರಿಂದ ಉಂಟಾದುದು ಈ ಕರ್ನಾಟಕ. ಯಾವುದೇ ಚಾರಿತ್ರಿಕ ಅನ್ಯಾಯವನ್ನು ಇದು ಸರಿಪಡಿಸಿತೇ ಅಥವಾ ಇಂದಿನ ಪರಿಸ್ಥಿತಿಯಲ್ಲಿ ಹಾಗೆ ಮಾಡುವುದು ತಾರ್ಕಿಕವಾಗಿ ಸಾಧುವಾದ ಮಾರ್ಗವೆಂದು ಪರಿಗಣಿಸುವುದರಿಂದಲೇ ? ಭಾರತೀಯ ಒಕ್ಕೂಟದ ಪರಿಕಲ್ಪನೆ ಸಿದ್ಧಿಸದೇ ಇದ್ದಿದ್ದರೆ ಕರ್ನಾಟಕ ಸಾಧ್ಯವಾಗುತ್ತಿತ್ತೇ? ಇತಿಹಾಸದಲ್ಲಿ ರಾಜರುಗಳು ರಾಜ್ಯ ವಿಸ್ತರಿಸಿದ್ದಾರೆ, ಕಳೆದುಕೊಂಡಿದ್ದಾರೆ. ಕನ್ನಡದ ರಾಜರ ಅಧೀನವಾಗಿ ಇತರ ಭಾಷಾ ಪ್ರದೇಶಗಳು ಬಂದಂತೆ, ಕನ್ನಡನಾಡನ್ನೂ ಇತರರು ಆಳಿದ್ದಾರೆ. ''ಕಾವೇರಿಯಿಂದಮಾ ಗೋದಾವರಿಯವರೆಮಿರ್ದನಾಡು'' ಎಂದು ಗೋದಾವರಿಯ ನಾಡನ್ನು ಈಗ ನಮ್ಮದೆನ್ನುವುದು ಹೇಗೆ ಸಾಧ್ಯ? ಬಾದಾಮಿಯ ಗುಹಾಂತರ್ದೇವಾಲಯ,

ಅಜಂತ ಎಲಿಫೆಂಟಾವರೆಗೂ ವಿಸ್ತರಿಸಿದ ಮಾತ್ರಕ್ಕೆ ಆ ಪ್ರದೇಶಗಳು ಕನ್ನಡನಾಡಾಗಿಬಿಡುವುದಿಲ್ಲ. ವಿಜಯನಗರದ ಕೀರ್ತಿಗೆ ತೆಲುಗರೂ, ದಕ್ಷಿಣ ಭಾರತದ ಎಲ್ಲರೂ ಭಾಜನರು. ಅದು ಕೇವಲ ಕನ್ನಡದ ನಾಡವರದ್ದಲ್ಲ. ಟಿಪ್ಪೂ ಕಲ್ಲಿಕೋಟೆ ಮತ್ತು ವೆಲ್ಲೂರಿನವರೆಗೂ ಆಳಿದ ಮಾತ್ರಕ್ಕೆ ಆ ಪ್ರದೇಶಗಳು ಕನ್ನಡನಾಡಾಗುವುದಿಲ್ಲ. ಪೇಶ್ವೆಗಳು ಬೆಳಗಾವಿಯವರೆಗೆ ಯಾವಾಗಲೋ ಧಾವಿಸಿದ ಮಾತ್ರಕ್ಕೆ ಅದು ಮಹಾರಾಷ್ಟ್ರವಾಗುವುದಿಲ್ಲ. ಆದರೆ ಈ ಎಲ್ಲ ಸಹಸ್ರವರ್ಷಗಳ ಇತಿಹಾಸದ ಪರಿಣಾಮವೆಂದರೆ ಕನ್ನಡಪ್ರದೇಶದೊಡನೆ ಇತರ ಭಾಷಿಕರೂ ಬೆರೆತುಹೋಗಿರುವುದು. ದಕ್ಷಿಣ ಭಾರತದಲ್ಲಿ ಹಲವು ಭಾಷಿಕರಿಂದ ಸುತ್ತುವರಿಯಲ್ಪಟ್ಟ ಕರ್ನಾಟಕದಲ್ಲಿ, ಭಾರತದ ಒಕ್ಕೂಟವಾದ ಮೇಲೆ, ಭಾರತದ ಪ್ರಜೆಗಳು ಎಲ್ಲಾದರೂ ನೆಲಸಬಹುದಾಗಿರುವ ಆ ಕಾಲದಲ್ಲಿ, ಬೇರೆಲ್ಲ ಭಾಷೀಯ ಜನರೂ ಕರ್ನಾಟಕದಲ್ಲಿ ವಿಶೇಷವಾಗಿ ನೆಲೆಸಿರುವುದು ಒಂದು ವಾಸ್ತವ. ಅದು ಅದರ ಭೌಗೋಳಿಕ ಜಾಯಮಾನ. ಇದು ಕರ್ನಾಟಕದ ವೈಶಿಷ್ಟ್ಯ. ಭಾವುಕತೆ ಬಿಟ್ಟು ಸರಿಯಾಗಿ ಗ್ರಹಿಸಿದರೆ ಒಂದು ಆಧುನಿಕ ರಾಜ್ಯವಾಗಿ ಈ ಪರಿಸ್ಥಿತಿ ಧನಾತ್ಮಕವಾದ ಅನುಕೂಲ.

ಹಳೆಯ ಮೈಸೂರಿನಲ್ಲೇ ತಮಿಳರು, ಮುಂದೊಮ್ಮೆ ಮರಾಠಿಗರು, ಬಂದು ನೆಲಸಿದ್ದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು. ನಮ್ಮ ಯದುವಂಶದ ರಾಜಮನೆತನ, ದಿವಾನರಾಗಿ ನೇಮಿಸಿಕೊಳ್ಳಲು ಸ್ಥಳೀಕರನ್ನು ನಂಬದೇ ಹೊರಗಿನಿಂದ ಅವರನ್ನು ಕರೆಸುತ್ತಿದ್ದುದು ಗುಟ್ಟೇನೂ ಅಲ್ಲ. ಆ ಕಾಲದ ಎಲ್ಲ ರಾಜರೂ ಹಾಗೇ ಮಾಡುತ್ತಿದ್ದರು. ದಿವಾನರ ಹಿಂದೆ ಅವರ ಪರಿವಾರಗಳೇ ವಲಸೆ ಬಂದುವು. ಬೆಂಗಳೂರಿನ ಹಲವಾರು ಬಡಾವಣೆಗಳು ಅವರಿಗಾಗಿಯೇ ನಿರ್ಮಾಣವಾದುವು. ಅಂದು ನಡೆದ ತಮಿಳೀಕರಣ ಇತ್ತೀಚಿನವರೆಗೂ ಮುಂದುವರಿಯಿತು. ಅಂಚೆ ಮತ್ತು ತಂತಿ ಇಲಾಖೆ ಮತ್ತು ರೈಲ್ವೆ ಇಲಾಖೆಗಳು ಮದರಾಸ್ ಕೇಂದ್ರಿತವಾಗಿದ್ದು, ಹಳೆ ಮೈಸೂರಿನ ಬೆಳವಣಿಗೆಯನ್ನು ಅವು ೧೯೬೦ರ ಮಧ್ಯ ಭಾಗದವರೆಗೂ ಕಡೆಗಣಿಸಿದ್ದವು. ಅಲ್ಲಿಯ ತೀರ ಕೆಳದರ್ಜೆಯ ನೌಕರಿಯನ್ನೂ ತಮಿಳರಿಗೇ ಕೊಡುತ್ತಿದ್ದರು. ಸ್ವಾತಂತ್ರ್ಯಾನಂತರವೂ ಬೆಂಗಳೂರನ್ನು ಕೇಂದ್ರ ಸರ್ಕಾರ ಸುಕ್ಷೇಮವಾದ ಸ್ಥಳವೆಂದು ನಿರ್ಧರಿಸಿ, ಅನೇಕ ಕೇಂದ್ರ ಕೈಗಾರಿಕೆಗಳನ್ನು, ರಕ್ಷಣಾ ಇಲಾಖೆಯ ಕೇಂದ್ರವನ್ನು ಸ್ಥಾಪಿಸಿತು. ಅವುಗಳೊಡನೆ ಅಖಿಲ ಭಾರತದ ವಿವಿಧ ಭಾಷಾ ಜನ ಇಲ್ಲಿ ತುಂಬಿಕೊಂಡರು. ಆಗಲೂ ಸ್ಥಳೀಕರಿಗೆ ನೌಕರಿಯ ಅವಕಾಶದಲ್ಲಿ ಭೀಮಪಾಲು ದೊರೆಯಲಿಲ್ಲ. ಅಂದರೆ, ಬೆಂಗಳೂರು ನಗರ ತನ್ನ ಕನ್ನಡತನ ಕಳೆದುಕೊಳ್ಳಲು ಪ್ರಾರಂಭಿಸಿ ಶತಮಾನವೇ ಆಯಿತು. ಅಲಸೂರಿನ ತಮಿಳರಿಗೆ ಕನ್ನಡ ಕಲಿಯಬೇಕೆಂದೆನಿಸಲೇ ಇಲ್ಲ. ಇತ್ತೀಚಿನ ಕೆಲವು ಬೆಳವಣಿಗೆಗಳೂ ಬೆಂಗಳೂರಿಗೆ ಇತರೇ ಜನರ ವಲಸೆಗೆ ಪ್ರೋತ್ಸಾಹಕವಾಗಿವೆ. ಅಂಥ ಒಂದು ಬೆಳವಣಿಗೆ ಭಾರತದ ವಿವಿಧ ಪ್ರದೇಶಗಳಿಂದ ಬೆಂಗಳೂರಿಗೆ, ಮೈಸೂರಿಗೆ ರೈಲು ಸಂಚಾರದ ಅಭಿವೃದ್ಧಿ. ವಿಷಯವೆಂದರೆ, ಐಟಿ-ಬಿಟಿಯ ಪ್ರಾರಂಭಕ್ಕೆ ಬಹಳ ಹಿಂದೆಯೇ ಬೆಂಗಳೂರು ತನ್ನ ಕನ್ನಡತನ ಕಳೆದುಕೊಂಡಿತು. ಏನಿದ್ದರೂ ಈಗ ಐಟಿ-ಬಿಟಿಯಿಂದಾಗಿ ತನ್ನ ಭಾರತೀಯತೆಯನ್ನು ಕಳೆದುಕೊಳ್ಳುತ್ತಾ ಅಂತರರಾಷ್ಟ್ರೀಯವಾಗುತ್ತಿದೆ. ಎಸ್. ಎಂ. ಕೃಷ್ಣ ಸಿಂಗಪೂರ ಮಾಡುತ್ತೇನೆ ಎಂದಾಗ ಅದೇ ಅರ್ಥ. ಮಂಡ್ಯದ ರೈತರು ತಮಿಳು-ಮಲೆಯಾಳಿ ಕೂಲಿಗಳನ್ನು ಏಕೆ ಬರಮಾಡಿಕೊಳ್ಳುತ್ತಾರೆ ? ಅವರು ಸ್ಥಳೀಕರಂತೆ ಗಲಾಟೆ ಮಾಡುವುದಿಲ್ಲ ಎಂದು ! ವಿಧಾನಸೌಧ ಕಟ್ಟಲು ಹೊರಗಿನಿಂದ ಕೂಲಿ ಕರೆಸಬೇಕಾದದ್ದು ಹಳೆಯ ಕಥೆ. ಕನ್ನಡಿಗರು ಎನ್ನುವವರಿಗೆ ಪೈಪೋಟಿ-ಸ್ಪರ್ಧೆಯ ಗುಣ ಕಮ್ಮಿ. ಇವರು ಬಹುವಾಗಿ ವಲಸೆ ಹೋಗುವುದಿಲ್ಲ, ಶಾಂತಿಪ್ರಿಯರು ಮುಂತಾದ ಕುಹಕಗಳ ಹಿಂದೆ ಸೋಮಾರಿಗಳು ಎಂಬ ಧ್ವನಿ ಅಡಗಿದೆ. ಹೀಗೆಲ್ಲಾ ಹಲವಾರು ಪಟ್ಟಿಗಳನ್ನು ಮಾಡಿ ಏಕೆ ಕರ್ನಾಟಕದಲ್ಲಿ ಇತರ ಭಾಷಾಜನ ತುಂಬಿಕೊಂಡಿದ್ದಾರೆ ಎಂದು ವಿವರಿಸಬಹುದು. ಆದರೆ ಇದನ್ನೆಲ್ಲಾ ಯಾರದೋ ಪಿತೂರಿ ಎಂದರೆ ಅದು ಸತ್ಯಕ್ಕೆ ದೂರವಾದ ಮಾತು. ಹೊಟ್ಟೆಪಾಡಿಗಾಗಿ ಜನ ತಮ್ಮ ತಾಯ್ನೆಲ ಬಿಟ್ಟು ವಲಸೆ ಹೋಗುತ್ತಾರೆ. ಅನುಕೂಲ ಸಿಕ್ಕಿದೆಡೆ ನೆಲೆಯೂರುತ್ತಾರೆ. ಭಾಷೆ, ಸಂಸ್ಕೃತಿ ತದನಂತರದ ಆದ್ಯತೆ. ಕೆಲವು ಕನ್ನಡ ಚಳುವಳಿಯ ಕಾರ್ಯಕರ್ತರೆನಿಸಿಕೊಳ್ಳುವವರು ಬೆಂಗಳೂರಿನಲ್ಲಿ ನೂರುವರ್ಷದಿಂದಿರುವ ಗುಜರಾತಿ, ಮಾರ್ವಾಡಿ, ಹಿಂದಿ ಜನರಿಂದ, ಅವರನ್ನೂ ಅವರ ಭಾಷೆಯಲ್ಲೇ ಮಾತನಾಡಿಸಿ, ಮಾಮೂಲಿ ವಸೂಲುಮಾಡುವ ಸುದ್ದಿ ಇದೆ. ಗುಜರಾತಿನಲ್ಲಿ ಮತಾಂಧರ ಗಲಭೆ ಉಂಟಾದಾಗ, ಇವರು ಅದರ ವಿರುದ್ಧ ಚಕಾರವೆತ್ತಲಿಲ್ಲ. ಆದರೂ ಅವರಿಗೆ ನಮ್ಮ ಕನ್ನಡ 'ಭಕ್ತ'ರಿಂದ ಏನೂ ತೊಂದರೆ ಆಗಲಿಲ್ಲ!

ಬೆಂಗಳೂರು ನಗರ ಕುರಿತು ನಡೆಯುತ್ತಿರುವ ತೀವ್ರವಾದ ಚರ್ಚೆ, ಇವುಗಳ ಬೆನ್ನಿಗೇ ಮತ್ತೆ ಮತ್ತೆ ಉದ್ಭವಿಸುತ್ತಿರುವ ಕನ್ನಡದ ಭವಿಷ್ಯದ ಬಗ್ಗೆ ಆತಂಕ ಇದು ಮುಖ್ಯ ವಿಷಯ. ಸುವರ್ಣ ಕರ್ನಾಟಕದ ಈ ವರ್ಷ ಇದೇಕೆ ನಾವು ಕನ್ನಡಿಗರು ಮುತ್ತಿಗೆಗೆ ಒಳಗಾದವರಂತೆ ಅಧೀರರಾಗುತ್ತಿದ್ದೇವೆ ? ಈ ಆತಂಕಗಳು ಸಂಪೂರ್ಣವಾಗಿ ನಿರಾಧಾರವಾದವೇನೂ ಅಲ್ಲ. ಆದರೆ ಅವಕ್ಕೆ ಮುಂದೆ ಒಡ್ಡಿರುವ ಕಾರಣಗಳು ವಾಸ್ತವ ನೆಲೆಯ ವಿಮರ್ಶೆಯ ಕೊರತೆಯನ್ನು ಸೂಚಿಸುತ್ತದೆ. ಬೆಂಗಳೂರು ಕೇಂದ್ರಿತ ಕರ್ನಾಟಕದ ದೃಷ್ಟಿಕೋನ ದೀರ್ಘದರ್ಶಿಯಲ್ಲ. ಬೆಂಗಳೂರು ನಗರದಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗಿದೆ. ಇಲ್ಲಿ ಐಟಿ-ಬಿಟಿ ಕಂಪನಿಗಳದ್ದೇ ಕಾರುಬಾರು. ಸರ್ಕಾರ ಅವರನ್ನು ತಣಿಸುವುದೇ ತನ್ನ ಕರ್ತವ್ಯವೆಂದು ಪರಿಗಣಿಸಿದೆ. ಇವು ಕೆಲವು ಆಪಾದನೆಗಳು. ಇವನ್ನು ಒಂದಿಷ್ಟು ಒಳಹೊಕ್ಕು ನೋಡೋಣ.

ಐಟಿ-ಬಿಟಿ ಕಂಪನಿಗಳ ಮಾಲಿಕರೆಲ್ಲ ಕನ್ನಡಿಗರೇ ಆಗಿದ್ದು, ಅಲ್ಲಿಯ ನೌಕರರೆಲ್ಲ ಕನ್ನಡಿಗರೇ ಆಗಿದ್ದರೂ, ಬೆಂಗಳೂರಿನ ಮೂಲಭೂತ ಸೌಕರ್ಯಗಳ ದಯನೀಯ ಪರಿಸ್ಥಿತಿ ಪರಿಹಾರ ಕಾಣದೇ ಇರಬಹುದಿತ್ತೇ? ಅಥವಾ ಕನ್ನಡಿಗರದೇ ಮೇಲುಗೈಯಾಗುವ ಅಂಥ ಪರಿಸ್ಥಿತಿಯಲ್ಲೂ, ಐಟಿ-ಬಿಟಿಯಿಂದಾಗಿ ಉಂಟಾಗುವ ಜನನಿಬಿಡತೆಯ ಸಮಸ್ಯೆ ಬಿಗಡಾಯಿಸಬಹುದಿತ್ತೇ? ಕೈಗಾರಿಕಾ ಘಟಕಗಳಿಗೆ ಇನ್ನು ಮುಂದೆ ಬೆಂಗಳೂರಿನಲ್ಲಿ ಅವಕಾಶವನ್ನೇ ಕೊಡದಿರಬಹುದೇ? ವಾಸ್ತವವೆಂದರೆ ಬೆಂಗಳೂರಿನಲ್ಲಿ ಹಿಂದೆಂದಿಗಿಂತಲೂ ಕನ್ನಡಿಗರ ಸಂಖ್ಯೆ ಹೆಚ್ಚಿದೆ. ಹಾಗೂ ಅವರು ಕರ್ನಾಟಕದ ಎಲ್ಲ ಭಾಗಗಳಿಂದ, ಹಳ್ಳಿ ಹಳ್ಳಿಗಳಿಂದ ಬಂದವರು. ಆದರೆ ಬೇರೆ ಜನರೂ ಬಂದಿದ್ದಾರೆ. ಕನ್ನಡಿಗರ ಶೇಕಡಾವಾರು ಕಡಿಮೆಯಾಗಿದೆ. ಆದರೆ ನಮಗೆ ಈ ಐಟಿ-ಬಿಟಿಗಳು ಬೇಕು, ಹಾಗೂ ಅವು ಒಡ್ಡುವ ಸವಾಲುಗಳಿಗೆ ಪರಿಹಾರವೂ ಬೇಕು. ಈ ಐಟಿ-ಬಿಟಿಗಳಿಂದ ನಮಗೆ ದೊರಕುತ್ತಿರುವ ಸರ್ಕಾರದ ವಲಯದ ಆದಾಯಕ್ಕಿಂತ ಮಿಗಿಲಾಗಿ ಅವರು ಬಯಸುವ ಮೂಲಭೂತ ಸೌಕರ್ಯಗಳ ನಿರ್ಮಾಣಕ್ಕೆ ಸದ್ಯದಲ್ಲಿ ತಗಲುವ ಖರ್ಚು ಹೆಚ್ಚಿನದು. ಕಾಲಕ್ರಮದಲ್ಲಿ ಈ ಸೌಕರ್ಯಗಳಿಗೆ ಮೀರಿದ ಆದಾಯ ಬರಬಹುದಾದರೂ, ಅಂಥ ಸೌಕರ್ಯಗಳ ಸೃಷ್ಟಿ ಅತಿಹೆಚ್ಚು ಬಂಡವಾಳ ಹೂಡಿಕೆಯನ್ನು ಕೂಡಲೇ ಅಪೇಕ್ಷಿಸುತ್ತದೆ. ಎಲ್ಲವನ್ನೂ ಖಾಸಗಿ ಮಾಡಬೇಕೆನ್ನುವ ಇಂದಿನ ಆರ್ಥಿಕ ನೀತಿಯ ರಾಜಕೀಯವು ಮೂಲಭೂತ ಸೌಕರ್ಯಗಳ ಸೃಷ್ಟಿಯೂ ಖಾಸಗಿಯವರ ಜವಾಬ್ದಾರಿ ಎಂದೇಕೆ ಹೇಳುತ್ತಿಲ್ಲ? ಐಟಿ-ಬಿಟಿಯ ಕಂಪನಿಗಳಿಗೆ ತಗಲುವ ಬಂಡವಾಳ ಹೂಡಿಕೆ ಅದರ ಅಪಾರ ಆದಾಯಕ್ಕೆ ಹೋಲಿಸಿದರೆ ತೀರ ಕಡಿಮೆ. ಅವರಿಗೆ ಬಂದದ್ದೆಲ್ಲಾ ಲಾಭವೇ. ಬೆಂಗಳೂರಿನ ಕೆಲವು ಬಹುರಾಷ್ಟ್ರೀಯ ಮಟ್ಟದ ಭಾರತೀಯ ಕಂಪನಿಗಳಲ್ಲಿ ನಗದುಹಣ ವಿಪರೀತ ಶೇಖರವಾಗಿ ಅದರ ಸಮಸ್ಯೆ ಪತ್ರಿಕೆಗಳಲ್ಲಿ

೯ನೇ ಪುಟಕ್ಕೆ






ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




> *ಅಕ್ಟೋಬರ್ ಸಂಚಿಕೆಯ ೪೯ನೇ ಪುಟದಲ್ಲಿ ಶ್ರೀ ಎನ್. ವಿದ್ಯಾಶಂಕರ್ 'ಹಸೀನಾ' ಬಗ್ಗೆ ಬರೆದಿರುವ ಲೇಖನವಿದೆ. "ಮಾಧ್ಯಮದ ಬಗ್ಗೆ ಗಿರೀಶ್ ಅವರಿಗಿರುವ ಅಪಾರವಾದ ಅಕೆಡೆಮಿಕ್ ತಿಳುವಳಿಕೆ" ಎಂದಿರಬೇಕಾದ್ದನ್ನು "ಅಪರಾಧವಾದ" ತಿಳುವಳಿಕೆ ಎಂದು ಅಚ್ಚುಮಾಡುವ ಅಪರಾಧ ವೆಸಗಿರುವುದಕ್ಕೆ ಲೇಖಕರ ಹಾಗೂ ಶ್ರೀ ಗಿರೀಶ್ ಅವರ ಕ್ಷಮೆ ಬೇಡುತ್ತೇವೆ. ಅಂತೆಯೇ ಪುಟ ೩೨ರ ಮೊದಲನೇ ಕಾಲಂನ ೩೩ನೇ ಸಾಲಿನಲ್ಲಿ 'ಚೀನಾದಲ್ಲಿ ೭೫೮.೯ ಯೂನಿಟ್‌ಗಳು' ಎಂದು ತಿದ್ದಿಕೊಳ್ಳಬೇಕು. ಅದು ೭೫೮೯ ಎಂದು ತಪ್ಪಾಗಿ ಅಚ್ಚಾಗಿದೆ.*
>
> *– ಸಂಪಾದಕ*

### ಆಡಳಿತದಲ್ಲಿ ಕನ್ನಡ

**ಪ್ರಶ್ನೆ** : ಒಂದನೆಯ ತರಗತಿಯಿಂದ ಇಂಗ್ಲಿಷ್ ಶಿಕ್ಷಣ ಬೇಕೆ ? ಅಥವಾ ಬೇಡವೇ ? ಬೇಕಿದ್ದರೆ, ಏಕೆ ಬೇಕು ? ಬೇಡವಾದರೆ ಏಕೆ ಬೇಡ ? ನಿಮ್ಮ ಅನಿಸಿಕೆ ತಿಳಿಸಿ.

**ಉತ್ತರ** : ನಮ್ಮ ನಡುವಣ ಈ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಇಡೀ ಶಿಕ್ಷಣ ಮಾಧ್ಯಮ ಮತ್ತು ಆಡಳಿತ ಮಾಧ್ಯಮ ಕರ್ನಾಟಕದ ಮಟ್ಟಿಗೆ ಕನ್ನಡವೇ ಆಗಿರಬೇಕು. ಇಂಗ್ಲಿಷ್ ಭಾಷೆಯನ್ನು ಸಹ ಕನ್ನಡ ಶಿಕ್ಷಣ ಮಾಧ್ಯಮದ ಮೂಲಕ ಕಲಿಸುವುದು ಅತ್ಯಂತ ಸೂಕ್ತವಾದುದು.

ನಮ್ಮ ಸಮಾಜದಲ್ಲಿ ಈಗ ಎಲ್ಲ ಮಕ್ಕಳಿಗೂ ಸಮಾನ ಶಿಕ್ಷಣದ ವ್ಯವಸ್ಥೆ ಇಲ್ಲ. ಉಳ್ಳವರ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ಸಿಗುತ್ತಿದೆ ; ಹಾಗೆಯೇ ಅದರ ಎಲ್ಲ ಲಾಭಗಳು ಸಹ ದೊರೆಯುತ್ತಿವೆ. ಹಳ್ಳಿಗಾಡಿನ ಮಕ್ಕಳಿಗೆ, ಎಲ್ಲ ಜಾತಿಗಳ ಕಡುಬಡವರ ಕಂದಮ್ಮಗಳಿಗೆ ಇಂಗ್ಲಿಷ್ ಶಿಕ್ಷಣದ ಅವಕಾಶ, ಅನುಕೂಲಗಳು ಸಿಗುತ್ತಿಲ್ಲ. ಈ ತಾರತಮ್ಯ ಸಲ್ಲದು. ಎಲ್ಲ ಮಕ್ಕಳಿಗೂ ಇಂಗ್ಲಿಷ್ ಶಿಕ್ಷಣ ದೊರೆಯುವುದು ಈ ಜಾಗತೀಕರಣದ ಹಿನ್ನೆಲೆಯಲ್ಲಿ ತೀರಾ ಅವಶ್ಯವಾಗುತ್ತಿದೆ.

ಆದುದರಿಂದ ಒಂದನೇ ತರಗತಿಯಿಂದಲೇ ಎಲ್ಲ ಮಕ್ಕಳಿಗೂ ಇಂಗ್ಲಿಷ್ ಭಾಷೆಯ ಕಲಿಕೆ ಆಗುವುದು ಒಳ್ಳೆಯದು. ಆದರೆ, ಏಳನೆಯ ತರಗತಿಯ ತನಕ ಯಾವುದೇ ವಿದ್ಯಾರ್ಥಿಯನ್ನು ಒಂದು ವೇಳೆ ಎಷ್ಟೇ ಕಡಿಮೆ ಅಂಕಗಳನ್ನು ಇಂಗ್ಲಿಷ್‌ನಲ್ಲಿ ಪಡೆದರೂ ಸಹ, ಆ ಮಗುವನ್ನು ಈ ಕಾರಣಕ್ಕಾಗಿ ಖಂಡಿತಾ ಅನುತ್ತೀರ್ಣಗೊಳಿಸಕೂಡದು. ಇಷ್ಟಲ್ಲದೆ, ಇಡೀ ಶಿಕ್ಷಣವು ಎಲ್ಲರಿಗೂ ಕಡ್ಡಾಯವಾಗಿ ಕರ್ನಾಟಕದಲ್ಲಿ ಕನ್ನಡದ ಮೂಲಕ ಇರಬೇಕು. ಈ ಪದ್ಧತಿಯು ಬಂದಾಗ ಮಾತ್ರ ನಮ್ಮ ಮಕ್ಕಳು ಸುಲಲಿತವಾಗಿ ಕನ್ನಡ ಭಾಷೆಯ ಮೂಲಕ ಜ್ಞಾನವನ್ನು ಗಳಿಸಲು ಸಾಧ್ಯವಾಗುತ್ತದೆ ; ಹಾಗೆಯೇ ಇಂಗ್ಲಿಷ್ ಭಾಷೆಯು ಕಬ್ಬಿಣದ ಕಡಲೆಯ ರೀತಿಯಲ್ಲಿ ಆಗದೆ, ಕ್ರಮೇಣ ಪರಿಚಯವಾಗುತ್ತಾ ಮುಂದುವರಿದಂತೆ ಅದರಲ್ಲಿ ಸಹ ಪರಿಣತಿ ಪಡೆಯಲು ಹೆಚ್ಚಿನ ಮಕ್ಕಳಿಗೂ ಸಾಧ್ಯವಾಗುತ್ತದೆ.

ಇದೆಲ್ಲಕ್ಕಿಂತ ಮುಖ್ಯವಾಗಿ, ಪ್ರಜಾಪ್ರಭುತ್ವದ ತತ್ವಗಳಿಗೆ ಅನುಗುಣವಾಗಿ ಕನ್ನಡನಾಡಿನ ಆಡಳಿತದ ಸರ್ವಸ್ವವೂ ಕನ್ನಡ ಮಾಧ್ಯಮದ ಮೂಲಕವೇ ಕಡ್ಡಾಯವಾಗಿ ಆಗಬೇಕು; ಇದಕ್ಕೆ ಸಹಕರಿಸದಿರುವ ಯಾವುದೇ ಅಧಿಕಾರಿ, ಜನಪ್ರತಿನಿಧಿ, ಮಂತ್ರಿ, ಶಾಸಕ, ಪ್ರಾಧ್ಯಾಪಕ – ಮುಂತಾದವರಿಗೆಲ್ಲ ಸರ್ಕಾರವು ಕಠಿಣತಮ ಶಿಕ್ಷೆಯನ್ನು ನೀಡಬೇಕು; ಇಂತಹ ಅಪಾತ್ರರನ್ನು ಅವರವರ ಹುದ್ದೆಗಳಿಂದ ನಿರ್ದಾಕ್ಷಿಣ್ಯವಾಗಿ ಕೂಡಲೇ ಕಿತ್ತೊಗೆಯಬೇಕು. ಈ ಕಾರ್ಯಗಳನ್ನು ನಿರ್ವಹಿಸಲು ಶಕ್ತರಾದವರು ಆಯಾಯ




ಹುದ್ದೆಗಳಿಗೆ ಬಂದೇ ಬರುತ್ತಾರೆ. ಇಂತಹ ದೃಢನಿರ್ಧಾರದ ಮೂಲಕ ಮಾತ್ರ ಜನತೆಗೆ, ಜನಭಾಷೆಗಳಿಗೆ, ಪ್ರಜಾಸತ್ತೆಗೆ ಯಶಸ್ಸು ದೊರೆಯುತ್ತದೆ.

ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗಿದ ಮೇಲೆ ಸಹ ಅವರ ಭಾಷೆಯಾದ ಇಂಗ್ಲಿಷ್ ಇಲ್ಲಿ ವಿಚಿತ್ರವಾದ ರೀತಿಯಲ್ಲಿ ಆಳ್ವಿಕೆ ನಡೆಸುತ್ತಿದೆ : ಈ ಆಳ್ವಿಕೆಯು ಭಾರತದ ಸಂದರ್ಭದಲ್ಲಿನ ಮೇಲುಜಾತಿಯ ಮತ್ತು ಹಣಕಾಸಿನ ದೊಡ್ಡಸ್ತಿಕೆಯ ದಬ್ಬಾಳಿಕೆಗಳಿಗೆ ಸಮಾನವಾದುದೆಂಬ ಅರ್ಥದಲ್ಲಿ ರಾಮಮನೋಹರ ಲೋಹಿಯಾ ಅವರು ವ್ಯಾಖ್ಯಾನಿಸುತ್ತಿದ್ದರು. ಈ ಹೊಸಕಾಲದಲ್ಲಿ ಇಂಗ್ಲಿಷ್ ಕಲಿತವನಿಗೆ ಕೀಳರಿಮೆ ಇರುವುದಿಲ್ಲ; ಆಕರ್ಷಕ ಸವಲತ್ತುಗಳ ವಿವಿಧ ಸಾಧ್ಯತೆಗಳು ಕೂಡ ಚೆನ್ನಾಗಿ ಗೋಚರಿಸಬಹುದು. ಹಾಗೆಯೇ ಅಲ್ಪಸ್ವಲ್ಪ ಜಾತಿಯ ಕಟ್ಟಳೆಗಳನ್ನು ನೂಕಬಲ್ಲ ಮತ್ತು ಬಡತನವನ್ನು ಕಿಂಚಿತ್ತಾದರೂ ತೊಡೆಯಬಲ್ಲ ಸಾಧನವಾಗಿ, ಆಶಾಕಿರಣವಾಗಿ ನಮ್ಮಲ್ಲಿನ ಅನೇಕ ಅವಕಾಶವಿಹೀನರಿಗೆ ಈ ಇಂಗ್ಲಿಷ್ ಶಿಕ್ಷಣ ಕಾಣುತ್ತಿದ್ದಲ್ಲಿ, ಆ ಸಂಬಂಧದಲ್ಲಿನ ಸತ್ಯಕ್ಕೆ ನಾವು ಕುರುಡಾಗುವುದು ಬೇಡ.

*ಪ್ರೊ॥ ಕಾಳೇಗೌಡ ನಾಗವಾರ*

(ಸಂದರ್ಶನವೊಂದರಿಂದ ಆಯ್ದ ಭಾಗ)

### 'ಬುಶ್' ಎಂಬ ಕೊಬ್ಬಿದ ಗೂಳಿ

ಲಕ್ಷ ಲಕ್ಷ ಸೈನಿಕರನ್ನು ಕಳುಹಿಸಿ, ಇರಾಕನ್ನು ಪುಡಿಗುಟ್ಟಿ, ಬದುಕಿ ಉಳಿದ ಇರಾಕಿಗಳ ಜೀವನವನ್ನು ನರಕಕ್ಕೆ ತಳ್ಳಿದ ಕೊಲೆಪಾತಕಿ ಬುಶ್ ಮಹಾಶಯನ ಹದ್ದಿನ ಕಣ್ಣು ಈಗ ಇರಾನಿನ ಮೇಲೆ. ಅಣ್ವಸ್ತ್ರ ನೆಪದಲ್ಲಿ ಅದನ್ನು ಬಗ್ಗುಬಡಿಯುವುದು ಅವನ ಮುಂದಿನ ಗುರಿ. ಅಲ್ಲಿಯ ತೈಲಕೂಪಗಳು ಅವನ ಕಣ್ಣನ್ನು ಕುಕ್ಕುತ್ತವೆ.

ಸದ್ಯಕ್ಕೆ ಇರಾನ್ ತಲೆ ತಗ್ಗಿಸದಿದ್ದರೂ ತಗ್ಗುವಂತೆ ಮಾಡಲು ಬೇಕಾದ ಪೂರ್ವತಯಾರಿ ತಡೆಯಿಲ್ಲದೆ ನಡೆಯುತ್ತಲೇ ಇದೆ. ಮೊತ್ತಮೊದಲು ಪ್ರಬಲ ರಾಷ್ಟ್ರವಾಗಿ ಮೂಡಿಬರುತ್ತಿರುವ ಭಾರತವನ್ನು ಹದ್ದುಬಸ್ತಿನಲ್ಲಿಡುವ ಸಲುವಾಗಿ ನಮ್ಮ ಪ್ರಧಾನಿಯ ಮೇಲೆ ಅವನು ಮಾಡುತ್ತಿರುವ ಮೋಡಿ ಸಾಮಾನ್ಯ ವ್ಯಕ್ತಿಗೂ ಅರ್ಥವಾಗದೆ ಇರದು. ಆದರೂ ರಾಜನೀತಿಯಲ್ಲಿ ಪಳಗದ ನಮ್ಮ ಪ್ರಧಾನಿ ಎಚ್ಚರಗೊಳ್ಳಲಿಲ್ಲ. ಅವನ ಅತಿಥಿಸತ್ಕಾರಕ್ಕೆ ಮರುಳಾಗಿ, ಕುಟಿಲನೀತಿಗೆ ಬಲಿಯಾಗಿ ಇರಾನಿನ ಪರಮಾಣು ಕಾರ್ಯಕ್ರಮದ ವಿರುದ್ಧ ಅಂತಾರಾಷ್ಟ್ರೀಯ-ಅಣುಶಕ್ತಿ ಆಯೋಗದ ಮುಂದೆ, ಸರ್ವ ಸದಸ್ಯರ ಸಭೆಯಲ್ಲಿ ಭಾರತ ಮತ ಚಲಾಯಿಸಿ ಇರಾನಿನ ಬೆನ್ನನ್ನು ಚೂರಿಯಿಂದ ಇರಿಯಿತು. ವಿಶ್ವಾಸಕ್ಕೆ ದ್ರೋಹ ಬಗೆಯಿತು. ಇದರಿಂದ ಇರಾನ್-ಪಾಕ್-ಭಾರತದ ನಡುವಿನ ಅನಿಲ ಪೈಪ್ ಲೈನ್ ಯೋಜನೆಗೆ ಪೆಟ್ಟುಬಿದ್ದರೆ ಬುಶ್‌ಗೆ ಎಲ್ಲಿಲ್ಲದ ಸಂತೋಷವಾದೀತು. ಹಾಗೆ ಆಗಬೇಕೆಂಬುದೇ ಅವನ ಇಂಗಿತ ಕೂಡ. ಭಾರತ ಮತ್ತು ಅಮೆರಿಕದ ಮಧ್ಯೆ ಸಂಬಂಧ ವೃದ್ಧಿಸುತ್ತಿರುವುದನ್ನು ಗಮನಿಸುತ್ತಿರುವ ಪಾಕಿಸ್ತಾನದ ಅಧ್ಯಕ್ಷರಿಗೆ ತುಸು ಅಸಮಾಧಾನವಾದರೂ ಬುಶ್ ಆ ಬಗ್ಗೆ ತಲೆ ಕೆಡಿಸಿಕೊಳ್ಳುವವನಲ್ಲ. ಏಕೆಂದರೆ ಎರಡು ಯುದ್ಧ ವಿಮಾನಗಳನ್ನು ಅಥವಾ ಕೋಟಿ ಡಾಲರುಗಳ ಆರ್ಥಿಕ ನೆರವನ್ನು ನೀಡಿದರೆ ಪಾಕಿಸ್ತಾನ ಮತ್ತೆ ಬಾಲ ಮಡಚಿ ಕುಳಿತುಕೊಳ್ಳುತ್ತದೆ ಎಂಬುದು ಅವನಿಗೆ ಗೊತ್ತು. ಒಂದೇ ಮಾತಿನಲ್ಲಿ ಹೇಳುವುದಾದರೆ ಅಮೆರಿಕದ ಈ ಬುಶ್ ಎಂಬ ಗೂಳಿ ಪ್ರಪಂಚದಲ್ಲಿ ಅಮೆರಿಕಾ ಬಿಟ್ಟರೆ ಬೇರೆ ಯಾವ ದೇಶವೂ ಅಣ್ವಸ್ತ್ರ ಹೊಂದಿ ಬಲಿಷ್ಠವಾಗುತ್ತಿರುವುದನ್ನು ಸಹಿಸದು. ಭಾರತವನ್ನು ತನ್ನ ಕಪಿಮುಷ್ಟಿಯಲ್ಲಿ ಇಟ್ಟುಕೊಂಡರೆ ಏಷ್ಯದಲ್ಲಿ ಮತ್ತೆ ತನ್ನನ್ನು ಕೆಣಕಬಲ್ಲವರು ಬೇರೆ ಯಾರೂ ಇರಲಾರರು ಎಂಬ ನಂಬುಗೆ ಆತನಿಗೆ. ಭಾರತ ತನ್ನ ಮಾನ ಮರ್ಯಾದೆಯನ್ನು, ಸ್ವಾಭಿಮಾನವನ್ನು ಮತ್ತು ಸಾಮರ್ಥ್ಯವನ್ನು ಮರೆತು ಆತನ ತಾಳಕ್ಕೆ ತಕ್ಕಂತೆ ಕುಣಿಯುತ್ತಿರುವುದು ತೀರಾ ನಾಚಿಕೆಯ ಸಂಗತಿ. ಬುಶ್ ಎಂತಹ ಕ್ರೂರಿ ಎಂಬುದು 'ಕತ್ರೀನಾ' ಅನಾಹುತದ ಸಂದರ್ಭದಲ್ಲಿ ತಿಳಿದುಬಂತು. ಆತನಿಗೆ ಧಿಕ್ಕಾರ ಇರಲಿ !

ಬೆಂಗಳೂರು

ಎಂ. ವಿ. ಭಟ್

## ಅಕ್ಟೋಬರ್ ಸಂಚಿಕೆ

ವಿದ್ಯಾರ್ಥಿ ಪ್ರತಿಭಟನೆಯ ಮುಖಪುಟ ಇರುವಂತಹ ಅಕ್ಟೋಬರ್ ತಿಂಗಳ ಸಂಚಿಕೆ ಬಹಳ ಚೆನ್ನಾಗಿದೆ. ಸಂಪಾದಕೀಯಕ್ಕೂ, ವೃತ್ತಿಪರ ಶಿಕ್ಷಣ ತೀರ್ಪು ತಂದಂತಹ ಬಿಕ್ಕಟ್ಟಿಗೆ ಸಂಬಂಧಿಸಿದ ಲೇಖನಗಳಿಗೂ ಮತ್ತು ಅಖಿಲ ಭಾರತ ವಿದ್ಯಾರ್ಥಿ ಒಕ್ಕೂಟ ನಡೆಸಿದ ವಿದ್ಯಾರ್ಥಿ ಪ್ರತಿಭಟನೆಗೂ (೨೩೫೫ ವಿದ್ಯಾರ್ಥಿಗಳಿಗೆ ಕರ್ನಾಟಕದಾದ್ಯಂತ ಉದ್ಯೋಗ ದೊರಕಿಸಿದ ಪ್ರತಿಭಟನಾ ಮೆರವಣಿಗೆ) ಹೋಲುವಂತಹ ಮುಖಪುಟವು ಒಂದು ರೀತಿ ವಿಶೇಷವಾದುದಾಗಿದೆ. ''ಮನುಷ್ಯನೊಳಗಿರಬೇಕಾದ ಮನುಷ್ಯ ಸಂವಾದ'' ಲೇಖನವು ಇಂದಿನ ಕಾಲದಲ್ಲಿ ಎಲ್ಲೆಲ್ಲೂ ತುಂಬಿರುವ ಜಾತಿ, ವರ್ಣ, ವರ್ಗಭೇದಗಳಿಂದ ಕೂಡಿದ ಜನರಿಗೆ ''ಮಾನವೀಯತೆಯ ಬದುಕಿಗೆ ಎದುರಾಗುವುದೆಲ್ಲವನ್ನೂ ದೂರ ಸರಿಸುವುದು ಇಂದಿನ ಮನುಷ್ಯನ ಆದರ್ಶವಾಗಬೇಕಿದೆ'' ಎಂಬ ವಿಚಾರವನ್ನು ಶ್ರೀ ಸ. ರಾ. ಸುಳಕೂಡೆಯವರು ತುಂಬ ಸ್ವಾರಸ್ಯಕರವಾಗಿ ಬರೆದಿದ್ದಾರೆ. 'ಹಸೀನಾ' ಬಗೆಗಿನ ಶ್ರೀ ಎನ್. ವಿದ್ಯಾಶಂಕರ್ ಅವರ ವಿಮರ್ಶೆ ಚೆನ್ನಾಗಿತ್ತು.

*ಬೆಂಗಳೂರು* — **ಕೆ. ಎಸ್. ಜ್ಯೋತಿ**

ಸಂಕುಲಜೀವ ಬರೆದ ಅಲ್ಲಮನ ಕುರಿತ ಲೇಖನ ಮನನೀಯವಾಗಿತ್ತು. ಒಗಟಿನಂತಹ ಅಲ್ಲಮನ ವಚನಗಳು ಅರ್ಥವಾದಂತೆ ತುಂಬಾ ಚೇತೋಹಾರಿಯಾಗುತ್ತವೆ. ಅಲ್ಲಮನ ಜೀವನ ನಮ್ಮ ಕೈಗೆ ಸಿಗದೆ ಅವನ ಜೀವನ ತತ್ವ ಸಿಕ್ಕಿರುವುದು ಉಭಯ ಪಕ್ಷಗಳ ಮಹಾಭಾಗ್ಯವಾಗಿದೆ. ಉತ್ತಮ ಲೇಖನ.

*ಗಳತಗಾ* — **ಬಾಳಾಸಾಹೇಬ ಔರನಾಳೆ**

ಸಂಪಾದಕೀಯ ಸಮಯೋಚಿತವಾಗಿತ್ತು. ಜಾತಿ ಎಂಬುದು ಕೇವಲ ರಾಜಕೀಯದಿಂದ ಹುಟ್ಟಿಕೊಂಡಿರುವುದು. ಯಾರೂ ಮೇಲಲ್ಲ ಯಾರೂ ಕೀಳಲ್ಲ. 'ನವಿಲುಗಳು' ಕವನ ಬಹಳ ಅರ್ಥಗರ್ಭಿತವಾಗಿತ್ತು. 'ಅವಳ ಕೈ ಅಡುಗೆ' ನಗುವಿನ ಜೊತೆಗೆ ಯೋಚಿಸುವಂತೆ ಮಾಡಿತು. ದುಶ್ಯಾಸನ 'ಕೃಷ್ಣ ಕೃಷ್ಣಾ' ಎಂದು ಕೂಗಿಕೊಳ್ಳುತ್ತ ಓಡಿದ ಕತೆ ಹೊಟ್ಟೆಹುಣ್ಣು ಬರಿಸುವಂತೆ ನಗು ಬರಿಸಿತು. ಲೇಖನಗಳು ಒಂದಕ್ಕಿಂತ ಒಂದು ಉತ್ತಮವಾಗಿ ವಿಭಿನ್ನರೀತಿಯಲ್ಲಿ ಮೂಡಿಬರುತ್ತಿವೆ. 'ಹೊಸತು'ಗೆ ಧನ್ಯವಾದಗಳು.

*ಪಾಂಡವಪುರ* — **ಮಹಾಬಲ ಮೃತ್ಯುಂಜಯ**

ವೃತ್ತಿಪರ ಕಾಲೇಜುಗಳಲ್ಲಿ ಮೀಸಲಾತಿ, ವೃತ್ತಿಪರ ಶಿಕ್ಷಣ ಸಂಸ್ಥೆಗಳ ಪರವಾದ ತೀರ್ಪು, ವೃತ್ತಿ ಶಿಕ್ಷಣ, ಇದರ ವ್ಯಾಪಾರೀಕರಣ ಮುಂತಾದವುಗಳನ್ನು ಕುರಿತ ಒಂದೊಂದು ಲೇಖನವೂ ವಾಸ್ತವ ಬಿಂಬಿಸುವುದರಲ್ಲಿ ಯಶಸ್ವಿ.

ಮುಖಪುಟದಲ್ಲಿ ಕನ್ನಡಿಗರ ಕೂಗನ್ನು ಸರ್ವೋಚ್ಚ ನ್ಯಾಯಾಲಯ ಪರಿಷ್ಕರಿಸಿರುವ, ಪರಿಗಣಿಸಿರುವ, ಶೈಲಿ ಧೋರಣೆ ಸಂಪಾದಕೀಯದಲ್ಲೂ ಹರಿತವಾಗಿ ಮೂಡಿದೆ. ಒಟ್ಟಿನಲ್ಲಿ ಬಿಕ್ಕಟ್ಟು ಕಗ್ಗಂಟಾಗಿ ಪೂರ್ಣ ಗೊಂದಲಮಯ.

*ಬೆಂಗಳೂರು* — **ಸೆ. ಲ. ರಾಮಮೂರ್ತಿ**

## ಡಾ|| ನಾ. ಸೋಮೇಶ್ವರ ಅವರಿಂದ ವಿಮರ್ಶೆ

ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರೊ|| ಬಿ. ವಿ. ವೀರಭದ್ರಪ್ಪನವರ ಒಂದು ಪುಸ್ತಕದ ವಿಮರ್ಶೆಯ ಬಗ್ಗೆ :

ವೇದವನ್ನು ಹಾಗೂ ಇತರ ಪ್ರಾಚೀನ ಸಾಹಿತ್ಯರಾಶಿಯನ್ನು ಅನುವಾದಿಸಿದ ಐರೋಪ್ಯ ಭಾಷಾ ಶಾಸ್ತ್ರಜ್ಞರು ಅವುಗಳ ಬಗ್ಗೆ ದೇಶೀಯ ವಿದ್ಯಾವಂತರ ಕಣ್ತೆರೆಸಿದರು; ಕುತೂಹಲ ಕೆರಳಿಸಿದರು. ತಿಲಕರು ಮುಂತಾದವರಿಗೆ ಆ ಅನುವಾದಗಳೇ ಆಧಾರವಾದವು. ಸಂಸ್ಕೃತದ ಅಚ್ಚು ಮೊಳೆಗಳನ್ನು ತಯಾರಿಸಿ, ವೇದವನ್ನು ಲಿಪಿಬದ್ಧಗೊಳಿಸಿದ ಸಾಹಸ ಮೆಚ್ಚಲೇಬೇಕು. ಆದರೆ ವಿವೇಕಾನಂದರು ಹೇಳಿದಂತೆ ''ವೇದಸೂಕ್ತಗಳನ್ನು ಅನುವಾದಮಾಡುವಾಗ ನಮ್ಮ ಭಾಷ್ಯಕಾರರ ಅಭಿಪ್ರಾಯಗಳ ಕಡೆಗೆ ವಿಶೇಷ ಗಮನ ಬಹುಮುಖ್ಯ.'' ಹಾಗೆ ಮಾಡದಿದ್ದರೆ ನ್ಯೂನತೆಗಳು ಅನಿವಾರ್ಯ. ಆದ್ದರಿಂದ, 'ಬಲ್ಲವರಿಂದ ಕಲ್ತು, ಬಲ್ಲವರ ಶಾಸ್ತ್ರಗ್ರಂಥಗಳಂ ನೋಡುತಂ' ನೈಜಾರ್ಥ ಅರಿಯಲು ಪ್ರಾಮಾಣಿಕ ಪ್ರಯತ್ನಿಸಬೇಕು. ಕೇವಲ ಲೌಕಿಕ ಸಂಸ್ಕೃತ ಭಾಷಾಬಲದಿಂದ ಹೊರಡಿಸುವ ಅರ್ಥ ವೇದಾರ್ಥವಾಗದು ; ಜಿಜ್ಞಾಸೆಯ ಮೂಲಕ ಹೊಮ್ಮುವ, ಹೊಳೆಯುವ ಅರ್ಥವಾಗಬೇಕು. ವೇದವಾಕ್ಯದ ಜಿಜ್ಞಾಸೆಯ ಮೂಲಕ ಹೊರಡುವ ಅರ್ಥ ಮಾತ್ರ ನೈಜ ವೇದಾರ್ಥವಾಗಬಲ್ಲುದು. ನಿರುಕ್ತದ ನೆರವೂ ಅಗತ್ಯ.

*ಸಾಗರ* — **ಬ. ನಾ. ರಘುರಾಮ**

### ಎಲ್ಲಿ ಹೋದರು ?

ನಮ್ಮೋರು
ದಲಿತರು
ಇಂಗ್ಲೀಸು ಕಲಿತು
ವಿಧಾನಸೌಧಕೂ
ಹೋದವರು.

ಅಪ್ಪನ ಹರಿದ ಪಂಚೆ,
ಅವ್ವನ ಹರಿದ ಸೀರೆಗೆ
ತೇಪೆ ಹಚ್ಚೇವಂತ
ಹೇಳಿ
ಗೂಟದ ಕಾರಲ್ಲಿ
ಮರೆಯಾದವರು

ಕೇರಿಗೇ
ಬೆಳ್ದಿಂಗಳು
ತರ್ತೀವಂತ
ಹೋದವರು

ಎಲ್ಲಿ ಹೋದರು ?
ನಮ್ಮೋರು
ಅಪ್ಪನ ಬೀಡಿ ಹೊಗೆ
ತುಂಬಾ
ಕನಸುಗಳನ್ನು ತುಂಬಿ...?

— ಬಿ. ಶ್ರೀನಿವಾಸ ಹಾನಗಲ್ಲ

* * *

### ಯಾರು ನೀನು ?

ಕಡಲು ಭೋರ್ಗರೆದು ಉಕ್ಕಿ
ಜನರು ಬಿಕ್ಕಿ ಬಿಕ್ಕಿ ಸತ್ತರೂ
ಕರುಣೆ ಇಲ್ಲವೇ ನಿನಗೆ
ಸುನಾಮಿ, ಕತ್ರೀನಾ, ರೀಟಾ
ನಾನಾ ನಾಮ ಧರಿಸಿ
ಧರೆ ತಲ್ಲಣಿಸಿ
ಜೀವರಾಶಿ ಕಬಳಿಸಿ
ಬರುವ ನೀನು
ನಿಜ ಹೇಳು ಯಾರು ನೀನು ?
ಯಾಕೆ ಹೀಗೆ ನೀನು ?

— ಡಿ. ಎಚ್. ಮಲ್ಲೇಶ, ಗದಗ

ಸಂಚಿಕೆಯಲ್ಲಿನ ಡಾ|| ಸುಧಾ ಸೀತಾರಾಮನ್ ಅವರ ಲೇಖನ ಜಾತಿ ಕುರಿತು ವಿಶದವಾಗಿ ಚರ್ಚಿಸಿದೆ. ಆದರೆ ಜಾತಿ ವ್ಯವಸ್ಥೆ ನಮ್ಮ ಸಮಾಜದ ಧೀಶಕ್ತಿಯನ್ನು ಕುಂದಿಸಿದ್ದು – ಛಿದ್ರೀಕರಣಗೊಳಿಸಿದ್ದು ಕಟುಸತ್ಯ. ಹೊಸ ಜಾತಿಗಳು ಎಷ್ಟೋ ಹುಟ್ಟಿವೆ. ಅದನ್ನು ನಿರ್ಮೂಲನೆ ಮಾಡಲು ಲೇಖಕರು ಹೇಳಿದಂತೆ ಅದರ ಕುರಿತು ಸಮಗ್ರ ಮಾಹಿತಿ ಅವಶ್ಯಕ. ಅದಕ್ಕಾಗಿ ಜಾತಿ-ಜನಗಣತಿ ಅನಿವಾರ್ಯ. ಜಾತಿ ಎಂಬ ವಾಸ್ತವಿಕ ಸ್ಥಿತಿಯನ್ನು ಬಚ್ಚಿಟ್ಟು ಜೀವಿಸುವುದು, ಮತ್ತು ಅದರಿಂದ ಹೊರಬರಬೇಕೆನ್ನುವುದು ಕಷ್ಟಸಾಧ್ಯ. ಇದಕ್ಕಾಗಿ ಸಾರ್ವತ್ರಿಕ ಕಡ್ಡಾಯ ಶ್ರದ್ಧಾಪೂರ್ವಕ ಶಿಕ್ಷಣ ಅತೀ ಅವಶ್ಯಕ. ಇದು ಮಾಡದಿದ್ದರೆ ಇನ್ನೆಂದೂ, ಇದನ್ನು ನಿರ್ಮೂಲನೆ ಮಾಡಲಾಗುವುದೇ ಇಲ್ಲ.

*ಸೇಡಂ* — **ಬಿ. ಆರ್. ಅಣ್ಣಾಸಾಗರ್**

ಖಗೋಳ ವಿಜ್ಞಾನದ ಬಗ್ಗೆ ಪ್ರತಿ ತಿಂಗಳೂ ಪ್ರಕಟವಾಗುವ ಲೇಖನದಲ್ಲಿ (ಡಾ|| ಬಿ. ಎಸ್. ಶೈಲಜಾ) ಜೊತೆಗಿರುವ ರೇಖಾಚಿತ್ರದಲ್ಲಿ ಪೂರ್ವ ದಿಕ್ಕಿನ ಬಲ ಭಾಗದಲ್ಲಿ ಉತ್ತರ ದಿಕ್ಕು ಕಂಡುಬರುತ್ತಿದೆ. ಇದು ಹೇಗೆ ? ಪೂರ್ವದ ಎಡಭಾಗಕ್ಕಲ್ಲವೇ ಉತ್ತರ ದಿಕ್ಕು ಇರುವುದು ? ಸಂಶಯ ಪರಿಹರಿಸುವಿರಾ ?

*ಕಳಸಾಡು* — **ಮಾಲತಿ ಕಮಲಾಕ್ಷ**

### ಮಾಲತಿ ಕಮಲಾಕ್ಷ ಅವರ ಸಂದೇಹಕ್ಕೆ ಪರಿಹಾರ

ಖಗೋಳದ ನಕ್ಷೆಗಳು ಭೂನಕ್ಷೆಗಳಂತಲ್ಲ. ಭೂಮಿಯನ್ನು ಮೇಲಿನಿಂದ ಕೆಳಗೆ ನೋಡುತ್ತಿರುವಂತೆ ಚಿತ್ರಿಸಲಾಗುತ್ತದೆ. ಆದರೆ ಆಕಾಶವನ್ನು ಕೆಳಗಿನಿಂದ ಮೇಲೆ ನೋಡುವಂತೆ ಚಿತ್ರಿಸಲಾಗುವುದು. ಆದ್ದರಿಂದ ಈ ನಕ್ಷೆಯನ್ನು ಮೇಲೆತ್ತಿ ಹಿಡಿದು ಕೆಳಗಿನಿಂದ ಮೇಲೆ ನೋಡಬೇಕು. ಉತ್ತರ (ಅಥವಾ ಇನ್ಯಾವುದೇ ದಿಕ್ಕು) ಹೊಂದಿಸಿದ ಕೂಡಲೇ ಉಳಿದ ದಿಕ್ಕುಗಳು ತಾವಾಗಿ ಹೊಂದಿಕೊಳ್ಳುವುವು. ಪ್ರಯತ್ನಿಸಿ ನೋಡಿ.

— ಬಿ. ಎಸ್. ಶೈಲಜಾ

ಕಾರ್ಯಾಚರಣೆ, ಅಲಿಪ್ತ ವಿದೇಶಾಂಗ ನೀತಿ, ಅಮೇರಿಕಾದ ಹಂಗಿನಲ್ಲುಳಿಯದಿರುವ ಸ್ಥೈರ್ಯ, ಇತ್ಯಾದಿಗಳನ್ನೆಲ್ಲಾ ಮನಮೋಹನ ಸಿಂಗ್ ಮತ್ತವರ ಖದೀಮ ಸಚಿವರು ಹಾಗೂ ಸರ್ಕಾರಿ ಅಧಿಕಾರಿಗಳು ಬುಡಮೇಲು ಮಾಡುತ್ತಿರುವಾಗ ಕಾಂಗ್ರೆಸ್ ಪಕ್ಷದಲ್ಲೇನಾದರೂ ಸಾಸಿವೆ ಕಾಳಿನಷ್ಟು ಚರ್ಚೆ ನಡೆದಿದೆಯೆ, ಪ್ರತಿರೋಧ ವ್ಯಕ್ತವಾಗಿದೆಯೆ? ಕಾಂಗ್ರೆಸ್ 'ಬುದ್ಧಿಜೀವಿಗಳು' ಈ ಕ್ಷಣದಲ್ಲಿ ಎಲ್ಲಿ ಮಾಯವಾಗಿಹೋದರು? ನೆಹರು-ಇಂದಿರಾಗಾಂಧಿ ಎಂದರೆ ಕಣ್ಣುಮುಚ್ಚಿ ಜಯಕಾರ ಹೇಳುವ ಈ ಜನರ ಮಿದುಳಿಗೆ ಕ್ಯಾನ್ಸರ್ ತಗುಲಿದೆಯೆಂದು ಅವರೇಕೆ ತಿಳಿದುಕೊಳುವುದಿಲ್ಲ? ಇರಾನಿನಲ್ಲಿ ನಾಳೆ ಅಮೇರಿಕಾ ನಡೆಸುವ ರಕ್ತಪಾತಕ್ಕೆ ಮತ್ತು ತೈಲದ ಲೂಟಿಗೆ ಜಾರ್ಜ್ ಬುಷ್ ಹೇಳುವಂತೆ ಇವರೂ ''ಪ್ರಜಾಪ್ರಭುತ್ವದ ಸ್ಥಾಪನೆ'' ಎಂಬ ನಾಮಧೇಯ ಕೊಡುತ್ತಾರೇನು? ದಸರಾ ಸಂಪ್ರದಾಯದ ಬಗ್ಗೆ ಬೆಚ್ಚಿ ಬೀಳುವ ಸುಸಂಸ್ಕೃತರಿಗೆ ನಮ್ಮ ದೇಶದ ಸ್ವತಂತ್ರ ಅಂತರರಾಷ್ಟ್ರೀಯ ರಾಜಕೀಯದ ಸಂಪ್ರದಾಯದ ಬಗ್ಗೆ ಗೌರವವೇಕೆ ಮೂಡುತ್ತಿಲ್ಲ? ಅಲನ್ ಪ್ಯಾಟನ್ ಹಿಂದೆ ದಕ್ಷಿಣ ಆಫ್ರಿಕದ ಆಂತರಿಕ ಅನಾಗರಿಕತೆಗೆ ಮರುಗುತ್ತಾ ತನ್ನೊಂದು ಪುಸ್ತಕಕ್ಕೆ ಕೊಟ್ಟ ಶೀರ್ಷಿಕೆ, ''ನನ್ನ ಪ್ರೀತಿಯ ದೇಶವೆ, ರೋದಿಸು'' ಎಂದು. ಸಮ್ಮಿಶ್ರ ಸರ್ಕಾರವೊಂದು ಕೇಂದ್ರದಲ್ಲಿದ್ದು ಕೊಂಡು ನಡೆಸುತ್ತಿರುವ ಪಾತಕಗಳನ್ನು ಕಂಡರೆ ನಾವೂ ನಮ್ಮ ದೇಶಕ್ಕೆ 'ರೋದಿಸು' ಎಂದು ಹೇಳಬೇಕಾಗಿದೆ. ಎಡಪಕ್ಷಗಳ ಕಾಳಜಿಗಳೆಲ್ಲಾ ಅರಣ್ಯರೋದನವಾಗದಿರಬೇಕಾದರೆ ದೇಶದ ಜನ ಎಚ್ಚೆತ್ತುಕೊಳ್ಳಬೇಕು, ನಿಷ್ಕ್ರಿಯತೆಯನ್ನು ಒದ್ದು ಎದ್ದುಬರಬೇಕು. ಸೆಪ್ಟೆಂಬರ್ ೨೯ ರಂದು ಒಂದು ರೀತಿಯಲ್ಲಿ ಅದನ್ನು ಪ್ರಾಯೋಗಿಕವಾಗಿ ಕಾರ್ಯರೂಪಕ್ಕೆ ತರಲಾಯಿತು. ಇನ್ನೂ ರಭಸದಿಂದ ಅದನ್ನು ಮುಂದುವರಿಸಬೇಕು. ಅದೂ ಕೇವಲ ಬುದ್ಧಿವಂತಿಕೆಯ ಒಣ ಪ್ರದರ್ಶನವಾಗಬಾರದು. ''ಇಂದು ಮುಷ್ಕರ ಮಾಡು, ನಾಳೆ ಅದನ್ನು ರಜಾದಿನವೆಂದು ಪರಿಗಣಿಸಿ ಮತ್ತೊಂದು ದಿನ ಅದರ ಬದಲಾಗಿ ಕೆಲಸ ಮಾಡಿಬಿಡು'', ಎನ್ನುವುದು ಹೋರಾಟದ ವಾಕ್ಯವಲ್ಲವೆಂಬುದನ್ನು ಹೋರಾಟಗಾರರು ಅರ್ಥಮಾಡಿಕೊಳ್ಳದಿದ್ದರೆ ಚಿದಂಬರಂ – ಮನ ಮೋಹನ ಸಿಂಗ್ – ಅಹ್ಲುವಾಲಿಯಾಗಳಿಗೆ ಒಂದರೆಕ್ಷಣದ ಬಾಧೆಯೂ ಉಂಟಾಗುವುದಿಲ್ಲ.

ನಮ್ಮ ರಾಜ್ಯದಲ್ಲಿ ಭ್ರಷ್ಟಾಚಾರದ ಆಳ ಮತ್ತು ವ್ಯಾಪ್ತಿಯನ್ನು ತಿಳಿಯಲು ವಿಶ್ವಬ್ಯಾಂಕಿನ ವರದಿಯ ಬೇಕಿಲ್ಲ, ಅದು ದಿನನಿತ್ಯದ ಅನುಭವ. ದೇಶಪಾಂಡೆ ಎಂಬ ಸಚಿವರು ಆ ವರದಿಯು ಸರಿಯಲ್ಲವೆಂದವರಲ್ಲಿ ಒಬ್ಬರು. ಯಾವ ಪಕ್ಷ ಆಳಿದರೂ ಅವರು ಮಾತ್ರ ಖಾಯಂ ಸಚಿವರೆಂದಾಗ ಅವರಿಗಲ್ಲದೆ ಭ್ರಷ್ಟಾಚಾರದ ಸೊಂಪು ಬೇರಾರಿಗೆ ತಿಳಿದೀತು! ರಸ್ತೆಗಳಿಗೆ ಟಾರಿನ ಬಣ್ಣ ಬಳಿದು ಸಾರ್ವಜನಿಕರ ಹಣ ದೋಚುವುದರಿಂದ ಹಿಡಿದು ಇನ್‌ಫೋಸಿಸ್‌ನ ನಾರಾಯಣಮೂರ್ತಿಗಳು ನೂರಾರು ಎಕರೆ ಜಮೀನನ್ನು ಸರ್ಕಾರದ ಕೃಪೆಯಿಂದ ಸ್ವಾಧೀನಪಡಿಸಿಕೊಳ್ಳುವವರೆಗೆ ಭ್ರಷ್ಟಾಚಾರ ''ಸರ್ವಂ ಖಲ್ವಿದಂ'' ಎನಿಸಿಕೊಂಡಿದೆ. ವಿಶ್ವಬ್ಯಾಂಕು ಸ್ವತಃ ಭ್ರಷ್ಟಾಚಾರವನ್ನು ಪೋಷಿಸುತ್ತದೆ, ಆದರೆ ಲೂಟಿಗೆ ಇನ್ನೂ ತೆರೆದ ಅವಕಾಶ ಬೇಕೆಂದು ಅದರ ಗೊಣಗಾಟ, ಅಷ್ಟೆ. ಸ್ವಾರಸ್ಯವೆಂದರೆ, ಭೂಕಬಳಿಕೆಗೆ ಹೆಸರಾದ ಮುತ್ಸದ್ದಿಗಳು ಇತರರನ್ನು ಭೂಗಳ್ಳರೆಂದು ಕೃತಕ ರೋಷ ವ್ಯಕ್ತಪಡಿಸುವ ಬಿನ್ನಾಣ!

* * *

ಬಿಹಾರದಲ್ಲಿ ಚುನಾವಣೆ ನಡೆಯಲಿರುವ ಹಿನ್ನೆಲೆಯಲ್ಲಿ ನ್ಯಾಯಾಲಯವು ಒಂದು ತರಹೆಯ ಅರ್ಧತೀರ್ಪು ನೀಡಿ ಚುನಾವಣೆಯ ಪ್ರಕ್ರಿಯೆಯಲ್ಲಿ ತನ್ನ ಕೊಡುಗೆ ನೀಡಿದೆ. ಬೂತಾ ಸಿಂಗ್ ಮತ್ತಿತರ ನಾಯಕರ ಸಾಹಸವನ್ನು ಯಾರೂ ಮೆಚ್ಚಿಕೊಂಡಿದ್ದಿಲ್ಲ; ಆದರೆ ರಾಷ್ಟ್ರಪತಿ ಆಳ್ವಿಕೆಗೆ ಆಗ್ಗೆ ಪರ್ಯಾಯ ಇದ್ದದ್ದು ಒಂದೇ: ಕಮಂಗಿಗಳು ಒಂದಷ್ಟು ಜನ, ಇಂತಿಷ್ಟು ಕ್ರಯಕ್ಕೆ ಎಂಬ ನಿಯಮದಡಿ, ಒಂದು ಪಕ್ಷದಿಂದ ಜಿಗಿದು ಇನ್ನೊಂದರ ನೆರಳಲ್ಲಿ ಮಂತ್ರಿಗಳಾಗುವುದು. ಅದಲ್ಲದೆ ಇನ್ನಾವ ವಿಧದಿಂದಲೂ ಸರ್ಕಾರ ರಚನೆ ಸಾಧ್ಯವಿರಲಿಲ್ಲ ವೆಂದು ನ್ಯಾಯಾಲಯದ ಧೀಮಂತರಿಗೆ ತಿಳಿಯುವುದಿಲ್ಲವೆಂದು ನಂಬುವುದು ಸಾಧ್ಯವಿಲ್ಲ. ಆದರೆ ರಾಜಕೀಯ ನೈತಿಕತೆಯ ಹೊಣೆಯನ್ನು ನಿಭಾಯಿಸಲು ಮಧ್ಯಪ್ರವೇಶ ಮಾಡುವ ನ್ಯಾಯಾಲಯವು ಬೇರಿನ್ನೇನೋ ಸಂವಿಧಾನಾತ್ಮಕ ಕ್ರಮವಿದ್ದಿತೆಂದು ಭಾವಿಸಿರುವಂತೆ ತೋರುತ್ತದೆ. ನಿಜಕ್ಕೂ ಸಂವಿಧಾನದಲ್ಲಿ ಸೇರ್ಪಡೆಯಾಗಬೇಕಾದ ಒಂದಂಶವೆಂದರೆ ಒಂದು ಪಕ್ಷದ ವತಿಯಿಂದ ಚುನಾಯಿತರಾದವರಾರೂ ಶಾಸನಸಭೆಯ ಆಯಾ ಅವಧಿಯಲ್ಲಿ ಬೇರೆ ಪಕ್ಷಕ್ಕೆ ಜಿಗಿಯುವಂತಿಲ್ಲ, ಎಂದು. ಜಾಗ ಖಾಲಿ ಮಾಡಿ ಮರುಚುನಾವಣೆಗೆ ಅವಕಾಶ ಮಾಡಿಕೊಡಬಹುದು, ಆದರೆ ಕೋತಿಯ ಹಾರಾಟಕ್ಕೆ ಆಸ್ಪದವಿರಕೂಡದು. ಇದರ ಜೊತೆಯಲ್ಲೇ ಇನ್ನೊಂದು ನಿಬಂಧನೆ ಬೇಕು: ಚುನಾವಣೆಗಳಲ್ಲಿ ಒಂದು ಕ್ಷೇತ್ರಕ್ಕೆ ಸೀಮಿತಗೊಳಿಸದಂತೆ ಎಲ್ಲ ಕ್ಷೇತ್ರಗಳಲ್ಲಿ ಪಕ್ಷಗಳಿಗೆ ದೊರಕುವ ಬೆಂಬಲದ ಪ್ರಮಾಣಕ್ಕೆ ಅನುಗುಣವಾಗಿ ಶಾಸನಸಭೆ-ಲೋಕಸಭೆಗಳಲ್ಲಿ ಸ್ಥಾನಗಳನ್ನು ತುಂಬುವುದು. ಇದನ್ನು ಮಾಡದೆ ಬೇರೇನೋ ತೇಪೇದಾರಿ ಕೆಲಸ ಮಾಡಿದರೆ ಅದು ಪ್ರಜಾಪ್ರಭುತ್ವದ ಆಶಯವನ್ನು ಪೂರೈಸುವುದಿಲ್ಲ.

ನ್ಯಾಯಾಲಯವೊಂದರ ಇನ್ನೊಂದು ತೀರ್ಪು ಮತ್ತೂ ಅಪಾಯಕಾರಿ ಆಘಾತಗಳನ್ನುಂಟು ಮಾಡಿ ಸಂವಿಧಾನವನ್ನು ಅನರ್ಥವೆಂದು ಸಾರುವ ಹಾದಿ ಹಿಡಿದಿದೆ. ಒಬ್ಬ ೧೫ ವರ್ಷದ ಬಾಲಕಿಯ ವಿವಾಹವನ್ನು ಎತ್ತಿಹಿಡಿಯುತ್ತಾ ಘನತೆವೆತ್ತ ನ್ಯಾಯಾಲಯವು ಆಕೆಗೆ ತಿಳುವಳಿಕೆ ಇರುವುದರಿಂದ ವಯಸ್ಸು ಗೌಣವೆಂದು ಘೋಷಿಸಿದೆ. ತೀರ್ಪಿಗೆ ಪೂರಕವಾಗಿ ''ಪ್ರೇಮವು ಕುರುಡು'' ಮುಂತಾದ ಹಳಸಿದ ವಾಕ್ಯಗಳನ್ನು ಉದ್ಧರಿಸಿರುವುದು ಧೀಮಂತಿಕೆಯ ಪರಮಾವಧಿಯಾಗಿದೆ. ಸಂವಿಧಾನದ ಸೂಚನೆಗಿಂತಲೂ ಯಾವನೋ ಕವಿಯ ನಿಟ್ಟುಸಿರು ಹೆಚ್ಚು ಪ್ರೇರಣೆ ನೀಡಿದರೆ ಯಾವುದನ್ನು ಬೇಕಾದರೂ ನ್ಯಾಯವೆಂದು ತೀರ್ಮಾನಿಸ ಬೇಕಾದೀತು. ''ಜೀವನ ನಶ್ವರ'' ಎಂಬ ತತ್ತ್ವಶಾಸ್ತ್ರದ ಮಾತನ್ನು ಉದ್ಧರಿಸಿ ಕೊಲೆಯನ್ನು ಸಹ ಸಮರ್ಥಿಸಬಹುದೇನೋ! ಯಾವುದೇ ಕಾರಣಕ್ಕೂ ಬಾಲ್ಯವಿವಾಹವನ್ನು ಮಾನ್ಯ ಮಾಡುವುದು ಮತ್ತೆ ನಮ್ಮ ನಾಗರಿಕತೆಯನ್ನು ಹಲವು ಶತಮಾನಗಳ ಹಿಂದಕ್ಕೆ ಕೊಂಡೊಯ್ಯುವ ಮಾರಕ ಪರಿಣಾಮವನ್ನು ಹೊಂದಿರುತ್ತದೆ. ಇದು ಮಕ್ಕಳ ವಧೆಗೆ ಸಮಾನವಾದದ್ದು. ಕಾರ್ಯಾಂಗ ಅಥವಾ ಶಾಸಕಾಂಗವು ತಪ್ಪೆಸಗಿದಾಗ ನ್ಯಾಯಾಂಗ ಮಧ್ಯಪ್ರವೇಶ ಮಾಡಬೇಕಾಗುತ್ತದೆಂದು ನ್ಯಾಯಾಲಯಗಳ ಸೀಮಾರಹಿತ ಪಾದಾರ್ಪಣ ವನ್ನು ಸಮರ್ಥಿಸುವವರಿದ್ದಾರೆ. ನ್ಯಾಯಾಲಯವು ತನ್ನ ಮಿತಿಯನ್ನು ಮೀರಿ ನಡೆದಾಗ ಯಾರು ಮಧ್ಯಪ್ರವೇಶ ಮಾಡಬೇಕೆಂಬುದನ್ನು ಪರಿಹರಿಸಿಕೊಳ್ಳಬೇಕಾದ ಅಗತ್ಯವಿದೆ.

* * *

ದೇವರಿದ್ದಾನೋ ಇಲ್ಲವೋ ಎಂಬುದಕ್ಕೆ ಜಾರ್ಜ್ ಬುಷ್ ಒಂದು ಉತ್ತರ ನೀಡಿದ್ದಾನೆ. ದೇವರು ಬುಷ್‌ಗೆ ಎರಡು ಆಣತಿಗಳನ್ನು ನೀಡಿದನಂತೆ: ಇರಾಕ್‌ನಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸು ಮತ್ತು ಪ್ಯಾಲಿಸ್ಟೈನ್ ಅಸ್ತಿತ್ವಕ್ಕೆ ಬರುವಂತೆ ಮಾಡು, ಎಂದು. ಬುಷ್ ಜೊತೆ ಗಾಢ ಸಂಪರ್ಕ ಇರಿಸಿಕೊಂಡವನು ದೇವರಾಗಲಾರ, ಅವನು ಸೈತಾನನೇ ಇರಬೇಕು; ಇಲ್ಲವೆಂದರೆ ದೇವರ ಅಧಃಪತನ ಸಂಪೂರ್ಣವಾಗಿದೆಯೆಂದರ್ಥ. ಮನಮೋಹನ ಸಿಂಗರಂತೆ ದೇವರು ಸಹ ಬುಷ್‌ನಂತಹ ಅಧಮ ಕೇಡುಕನ ಜೊತೆ ನಿಕಟ ಬಾಂಧವ್ಯ ಬೆಳೆಸಿಕೊಳ್ಳುವುದುಂಟೆ! ಅಂತೂ 'ದೇವರ' ಇಚ್ಛೆಯಂತೆ ಇರಾಕನ್ನು ನಾಶಮಾಡಿ ಅಲ್ಲಿ ''ಪ್ರಜಾಪ್ರಭುತ್ವ'' (ಲೊಳಲೊಟ್ಟೆ!!) ಸ್ಥಾಪಿಸಿ, ಒಂದು ಸಂವಿಧಾನ (ಸ್ಲಂ-ವಿಧಾನ) ನೀಡಿ, ಅದಕ್ಕೆ ಜನರ (!) ಮನ್ನಣೆ ಗಳಿಸಿಕೊಟ್ಟು, ಬುಷ್ ತಾನೇ ದೇವರ ಕಿರೀಟ ಧರಿಸಿಬಿಟ್ಟಿದ್ದಾನೆ. ಬ್ರಿಟಿಷ್ ಬೊಗಳೆ ಕಾರ್ಪೊರೇಶನ್ ಮುಂತಾದ ಮಾಧ್ಯಮಗಳು ಇದೊಂದು ಅದ್ಭುತ ಕೊಡುಗೆಯೆಂದು ಶ್ಲಾಘಿಸುತ್ತಲೇ ಇವೆ. ಕೀಲುಗೊಂಬೆಗಳಿಗಿಂತಲೂ ಕನಿಷ್ಠವಾದ ಕೆಲವು 'ನಾಯಕ'ಮಣಿಗಳು ಇರಾಕಿನ ಜನತೆಯ ಪ್ರತಿನಿಧಿಗಳೆಂಬ ತಿಳಿಗೇಡಿತನವನ್ನು ಪ್ರಪಂಚವು ನಂಬಬೇಕೆಂದು ಬುಷ್ ನಿರೀಕ್ಷಿಸಿದ್ದರೆ ಆತನ ದುರಹಂಕಾರ ಮತ್ತು ಮೂರ್ಖತನಗಳಿಗೆ ಪಾರವಿಲ್ಲ. ಅಮೇರಿಕಾ ಮತ್ತು ಬ್ರಿಟನ್ನಿನ ಸೈನ್ಯಗಳು ಇಂದಿಗೂ ನೂರಾರು ಇರಾಕಿ ನಾಗರಿಕರನ್ನು ಪ್ರತಿನಿತ್ಯ ಕೊಲ್ಲುತ್ತಿವೆ; ಆದರೆ ಅದರ ವರದಿಗಳು ಪ್ರಕಟವಾಗುವುದಿಲ್ಲ. ಆಕಸ್ಮಾತ್ ವರದಿಯಾದರೆ, ಕೊಲ್ಲಲ್ಪಟ್ಟವರು 'ಉಗ್ರಗಾಮಿಗಳು' ಎಂಬ ತಲೆಬರಹವಿರುತ್ತದೆ. ಉಗ್ರಗಾಮಿಗಳೆನ್ನಲಾದವರು ಕೊಲ್ಲುತ್ತಿರುವ ಸಂಖ್ಯೆಗೆ ಮೂರುಪಟ್ಟು ಜನರನ್ನು ಅಮೇರಿಕಾ ಕೊಲ್ಲುತ್ತಿದೆ, ಸಹಸ್ರಾರು ಬ್ಯಾರೆಲ್ ತೈಲವನ್ನು ದಿನಂಪ್ರತಿ ಲೂಟಿ ಮಾಡಲಾಗುತ್ತಿದೆ. ಇರಾಕನ್ನು ಛಿದ್ರಗೊಳಿಸಿ ತನ್ನ ಲೂಟಿ ಮುಂದುವರಿಸುವುದು ಅಮೇರಿಕಾದ ಉದ್ದೇಶ. ಈ ಮಧ್ಯೆ ಇರಾಕಿನ ಪ್ರತಿಭಟನಕಾರರಿಗೆ ಇರಾನ್ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುತ್ತಿದೆಯೆಂಬ ಆಪಾದನೆ ಕೇಳಿಬಂದಿದೆ. ಯಾರೇ ಆಗಲಿ ಇರಾಕಿನ ವಿಮೋಚನೆಗೆ ಸಹಾಯ ನೀಡಬಾರದೇಕೆ ಎಂಬುದು ಮೂಲಭೂತವಾದ ಪ್ರಶ್ನೆ. ಭಾರತವು ಬಂಗ್ಲಾ ದೇಶದ ನೆರವಿಗೆ ನಿಂತಿದ್ದಿತು. ಇರಾನ್ ಹಾಗೆ ಮಾಡುತ್ತಿದೆಯೆನ್ನುವುದು ಬಹುಶಃ ಶುಷ್ಕ ಆಪಾದನೆ, ಆ ದೇಶದ ಆಕ್ರಮಣಕ್ಕೊಂದು ನೆಪ. ಪರಮಾಣು ಶಕ್ತಿಯ ಅಂತರರಾಷ್ಟ್ರೀಯ ಆಯೋಗದ ಅಧ್ಯಕ್ಷ ಎಲ್ ಬರಾದೈ ತನ್ನ ಅಧ್ಯಕ್ಷತೆ ಉಳಿಸಿಕೊಳ್ಳಲು ವಿಶ್ವಸಂಸ್ಥೆಯ ಕಾರ್ಯದರ್ಶಿ ಕೋಫಿ ಅನ್ನಾನ್‌ನಂತೆ ಅಮೇರಿಕಾದ ಹಂಗಿನಲ್ಲಿ ಉಳಿಯಲು ಹೇಸಲಿಲ್ಲ. ಈಗ ಅಮೇರಿಕಾ ಆತನಿಗೆ ನೊಬೆಲ್ ಶಾಂತಿ ಪ್ರಶಸ್ತಿಯನ್ನು ಸಹ ಕೊಡಿಸಿ ಆತನ ''ಸೇವೆಯ ಮಹತ್ವ''ವನ್ನು ಜಗಕ್ಕೆ ಸಾರಿ ಹೇಳಿದೆ. ಇದೇ ಬರಾದೈ ಒಂದು ವರ್ಷದ ಹಿಂದೆ ಇರಾನ್ ಬಗ್ಗೆ ಹೇಳಿದ್ದುದರ ವಿರುದ್ಧವಾಗಿ ಈಗ ಹೇಳಿಕೆಗಳನ್ನು ನೀಡುತ್ತಿರುವುದು ಮಾರ್ಮಿಕವೇನಲ್ಲ.

ಬಂಗ್ಲಾದೇಶದ ವಿಮೋಚನೆಯ ಸಂದರ್ಭದಲ್ಲಿ ಅಮೇರಿಕಾದ ನೌಕಾಪಡೆ ಬಂಗಾಳಕೊಲ್ಲಿಗೆ ಬಂತು. ೧೯೭೦ರ ಡಿಸೆಂಬರ್ ೩ರಂದು ಇಂದಿರಾಗಾಂಧಿ ಅದನ್ನು ಪ್ರತಿಭಟಿಸಲು ದೆಹಲಿಯಲ್ಲಿ ಐದು ಲಕ್ಷ ಜನರ ಸಭೆಯನ್ನು ಆಯೋಜಿಸಿದ್ದರು. ಮೊನ್ನೆ ಮೊನ್ನೆ ಆ ನೌಕಾಪಡೆಯ ಒಂದು ಯುದ್ಧ ಹಡಗು ಕೊಚ್ಚಿಯ ಬಂದರಿಗೆ ಬಂದಿತು. ಅದು ಪರಮಾಣು ಶಸ್ತ್ರಸಜ್ಜಿತವಾದ್ದು. ಇದೊಂದು ಕರಾಳ ಅಧ್ಯಾಯ – ಮನಮೋಹನ ಸಿಂಗ್ ಮತ್ತು ಕಾಂಗ್ರೆಸ್ ಪಕ್ಷ ನಾಚಿಕೆಯಿಂದ ತಲೆತಗ್ಗಿಸಿಯಾರೆ?

ಬಹಿರಂಗವಾಗಿ ಚರ್ಚಿತವಾದ ವಿಷಯ. ಸರಿಯಾದ ಅರ್ಥನೀತಿಯೆಂದರೆ ಸರ್ಕಾರ ಐಟಿ-ಬಿಟಿಯಿಂದ ಹೆಚ್ಚು ಆದಾಯ ಸಂಪಾದಿಸಿ, ಹಳ್ಳಿಗಾಡಿನ ಅಭಿವೃದ್ಧಿಗೆ ಅದನ್ನು ಬಳಸಬೇಕಾಗಿತ್ತು. ಆದರೆ ಇಂದು ಇಡೀ ಕಾವೇರಿ ನದಿಯ ನೀರನ್ನು, ಅದರ ಹರಿವಿನ ಪ್ರದೇಶದ ಜನರಿಗೆ ಕುಡಿಯಲೂ ನೀರಿಲ್ಲದಿದ್ದರೂ, ಬೆಂಗಳೂರಿಗೆ ಹರಿಸಲಾಗುತ್ತಿದೆ. ಇದಕ್ಕೆ ತಕ್ಕ ಬೆಲೆಯನ್ನು ಐಟಿ-ಬಿಟಿಯವರು ಏಕೆ ನೀಡುತ್ತಿಲ್ಲ? ಇಂಜಿನಿಯರಿಂಗ್ ಕಾಲೇಜಿನ ಪದವೀಧರರನ್ನು ನೇರವಾಗಿ ಆಪೋಶನವಾಗಿ ತೆಗೆದುಕೊಳ್ಳುವ ಐಟಿ-ಬಿಟಿಗಳು, ಅವರನ್ನು ತಯಾರು ಮಾಡಲು ಒದಗುವ ಖರ್ಚನ್ನು ಏಕೆ ಒಂದು ಸಾರ್ವಜನಿಕ ಶಿಕ್ಷಣ ನಿಧಿಗೆ ನೀಡುವುದಿಲ್ಲ? ಅಂಥ ನಿಧಿ ಇದ್ದಿದ್ದರೆ ಕರ್ನಾಟಕದ ವಿದ್ಯಾರ್ಥಿಗಳಿಗೆ ಹೆಚ್ಚು ಪ್ರೋತ್ಸಾಹ ನೀಡಬಹುದಿತ್ತಲ್ಲವೇ? ಖಾಸಗೀ ಉದ್ದಿಮೆಗಳಲ್ಲಿ ದಲಿತರಿಗೆ ಉದ್ಯೋಗ ಆರಕ್ಷಣೆ ನೀಡುವುದನ್ನು ವಿರೋಧಿಸುತ್ತಲೇ, ಕನ್ನಡಿಗರಿಗೆ ಆರಕ್ಷಣೆ ನೀಡಬೇಕು ಎಂದು ಹೇಗೆ ವಾದಿಸುವುದು? ಓಮನ್ ರಾಜ್ಯದ ಮಸ್ಕಟ್ ನಗರದಲ್ಲಿ ಉದ್ಯಮಿಗಳೆಲ್ಲಾ ಪರಕೀಯರೇ. ಆದರೆ ಅವರು ಶೇಕಡ ಇಂತಿಷ್ಟು ಸ್ಥಳೀಯ ಶ್ರೀಮಂತರಿಗೆ ಪಾಲುಗಾರಿಕೆ ನೀಡಲೇಬೇಕು ಹಾಗೂ ಶೇಕಡ ಇಂತಿಷ್ಟು ಸ್ಥಳೀಕರಿಗೆ ಉದ್ಯೋಗ ನೀಡಲೇಬೇಕು. ಸ್ಥಳೀಕರಿಗೆ ಶಿಕ್ಷಣ ಅರ್ಹತೆ ಇಲ್ಲವಲ್ಲ ಅಂದರೆ, ಅವರನ್ನು ಅರ್ಹರನ್ನಾಗಿ ಮಾಡುವುದು ಕೈಗಾರಿಕೆಯ ಜವಾಬ್ದಾರಿ ಎನ್ನುತ್ತದೆ ಅಲ್ಲಿಯ ನಿಯಮ! ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ವಿದೇಶೀಯರಿಗೆ ಕೆಲಸ ಕೊಡುವ ಮುನ್ನಾ ಅರ್ಹರಾದ ಸ್ಥಳೀಕರು (ಅಂದರೆ ಆ ರಾಜ್ಯದವರು) ಇಲ್ಲವೆಂದು ವರದಿ ಒಪ್ಪಿಸಬೇಕು. ಸ್ಥಳೀಕರು ಎಂದರೆ ಭಾರತೀಯ ಎಂದು ವಿಶಾಲವಾಗಿ ಅರ್ಥೈಸುತ್ತಿರುವುದು ನಮ್ಮ ಸಮಸ್ಯೆ. ಅವನನ್ನು ಕರ್ನಾಟಕದವ ಎಂದು ಅರ್ಥೈಸುವುದು ನಮ್ಮ ಸರ್ಕಾರದ ಕೈಯಲ್ಲಿದೆ. ಇದಕ್ಕೆ ಕಾನೂನು ಬಾಧೆಯಾಗುವುದಿಲ್ಲವೆಂದು ನಮ್ಮ ತಿಳಿವಳಿಕೆ. ಸರೋಜಿನೀ ಮಹಿಷಿ ವರದಿಯನ್ನು ಜಾರಿಗೆ ತರುವುದು ಸಾಧ್ಯ. ಬೆಂಗಳೂರಿಗೆ ಉದ್ಯಮಿಗಳನ್ನು ಬನ್ನಿ ಎಂದು ನಾವು ಗೋಗರೆಯಬೇಕಾಗಿಲ್ಲ. ಇದು ಪ್ರಶಸ್ತವಾದ ಸ್ಥಳ. ಬೇಕಾದವರು ಬಂದೇ ಬರುತ್ತಾರೆ.

ಬೆಂಗಳೂರು ನಗರವನ್ನು ಕೇಂದ್ರಾಡಳಿತಕ್ಕೆ ಒಪ್ಪಿಸಿಬಿಡಿ ಎನ್ನುವ ವಾದ ಇದೆ. ದೇಶದ ಎಲ್ಲ ಮಹಾನಗರಗಳ ಅಭಿವೃದ್ಧಿಯೂ ಕೇಂದ್ರದ ಜವಾಬ್ದಾರಿ ಎಂದು ಈಗ ಒಪ್ಪಿಕೊಳ್ಳಲಾಗಿದೆ. ಈ ವರ್ಷದ ಕೇಂದ್ರದ ಬಜೆಟ್ ಇದನ್ನು ಗಮನಿಸಿದೆ. ಬೆಂಗಳೂರಿನ ಐಟಿ-ಬಿಟಿಯಿಂದ ರಾಜ್ಯಕ್ಕಿಂತ ಕೇಂದ್ರಕ್ಕೇ ಹೆಚ್ಚು ವರಮಾನ ಬರುತ್ತದೆ ಮತ್ತು ಅದು ಸಂಪಾದಿಸುವ ಅಪಾರ ವಿದೇಶೀ ವಿನಿಮಯವು ರಾಷ್ಟ್ರಕ್ಕೆ ಬೆಂಗಳೂರಿನ ಕೊಡುಗೆ. ಆದ್ದರಿಂದ ಕೇಂದ್ರದ ಆಡಳಿತ ಬರಲಿ ಬರದಿರಲಿ ಈ ನಗರದ ಮೂಲಭೂತ ಸೌಕರ್ಯದ ವೆಚ್ಚವನ್ನು ಕೇಂದ್ರವೇ ಭರಿಸಬೇಕು. ಈ ರೀತಿಯ ಚಿಂತನೆಯಲ್ಲಿ ಬೆಂಗಳೂರನ್ನು ಕುರಿತ ವಿವಾದಗಳಿಗೆ ಪರಿಹಾರವಿದೆ. ಬೆಂಗಳೂರಿನ ವಿವಾದ ಕನ್ನಡ ನಾಡಿನ ಸಮಸ್ಯೆಯ ಪರಿಹಾರದ ದಾರಿತಪ್ಪಿಸುವುದು ಬೇಡ.

ಕರ್ನಾಟಕದಲ್ಲಿ ಕನ್ನಡ-ತಮಿಳು, ಕನ್ನಡ-ತೆಲುಗು, ಕನ್ನಡ-ಮಲಯಾಳಿ ಹಾಗೂ ಕನ್ನಡ-ಮರಾಠಿ ಭಾಷಾ-ಸಾಂಸ್ಕೃತಿಕ ಸಂಘಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಾರಂಭವಾಗಬೇಕು. ಇದನ್ನು ಇಲ್ಲಿರುವ ಅಲ್ಪಸಂಖ್ಯಾತ ಭಾಷೆಯವರು ತಾವೇ ಮುಂದಾಗಿ ಸ್ಥಾಪಿಸಬೇಕು. ಈ ಹಿಂದೆ ಬೇಂದ್ರೆಯಂಥವರು, ಎಲ್. ಗುಂಡಪ್ಪನವರು ಇನ್ನೂ ಅನೇಕರು ಉಭಯ ಭಾಷೆಗಳ ಸಾಹಿತ್ಯಸೇವೆ ನಡೆಸಿ, ಸಾಂಸ್ಕೃತಿಕ ಸೇತುವೆಯನ್ನು ನಿರ್ಮಿಸಿದ್ದಾರೆ. ವಿವಿಧ ಭಾಷೆಗಳ ನಡುವೆ ಸಾಂಸ್ಕೃತಿಕ-ಸಾಹಿತ್ಯಕ ಆದಾನ- ಪ್ರದಾನವಾದರೆ ಅದು ಎಲ್ಲಾ ಭಾಷೆಗಳಿಗೂ ಪ್ರಯೋಜನವೇ ವಿನಾ ಅದರಿಂದ ಕನ್ನಡದ ಬೆಳವಣಿಗೆಗೆ ಯಾವ ಬಾಧಕವೂ ಬರುವುದಿಲ್ಲ. ಹೀಗೆಂದು ನಿರ್ಧರಿಸುವಾಗ ತಮಿಳುನಾಡು ಅವರೊಳಗೆ ಕನ್ನಡವನ್ನೂ ಪ್ರೋತ್ಸಾಹಿಸುವರೋ ಇಲ್ಲವೋ ಎಂಬ ಚಿಂತೆ ನಮ್ಮನ್ನು ಕಾಡಬೇಕಿಲ್ಲ. ಅವರು ಹಾಗೆ ಮಾಡದಿದ್ದರೆ ಅವರ ಸಾಹಿತ್ಯ-ಸಂಸ್ಕೃತಿಗಳಿಗೆ ನಷ್ಟವಾಗುತ್ತದೆ. ಅವರು ಸಂಕುಚಿತ ನೆಲೆಯವರಾಗುತ್ತಾರೆ. ಸಾಂಸ್ಕೃತಿಕ ಬಡತನ ಅವರನ್ನು ಕಾಡುತ್ತದೆ ಅಷ್ಟೆ.

ಕರ್ನಾಟಕ ಸರ್ಕಾರ, ಕೇಂದ್ರವನ್ನೂ ಸೇರಿದಂತೆ ತನ್ನೊಡನೆ ವ್ಯವಹರಿಸುವವರೊಡನೆ ಕನ್ನಡದಲ್ಲೇ ವ್ಯವಹರಿಸಿದರೆ ಅದು ಕಾನೂನು ವಿರೋಧವೇನೂ ಆಗುವುದಿಲ್ಲ. ಇನ್ಫೋಸಿಸ್ ಕಂಪನಿ ಚೀನೀಯರೊಡನೆ ಚೀನಿ ಭಾಷೆಯಲ್ಲಿ ವ್ಯವಹರಿಸಲು ಮುಂದಾಗುವಾಗ, ನಮ್ಮ ಸರ್ಕಾರದೊಡನೆ ಕನ್ನಡದಲ್ಲಿ ವ್ಯವಹರಿಸುವುದಿಲ್ಲವೆಂದರೆ ಹೇಗೆ? ಕರ್ನಾಟಕದಲ್ಲಿ ಸ್ಥಾಪಿತವಾಗುವ ಕೈಗಾರಿಕೆಗಳು, ಉದ್ಯಮಗಳು ಕನ್ನಡಿಗರಿಗೆ ಉದ್ಯೋಗದಲ್ಲಿ ಆದ್ಯತೆ ನೀಡಬೇಕು. ಅರ್ಹ ಕನ್ನಡಿಗ ಇಲ್ಲದಿದ್ದರೆ ಬೇರೆಯವರನ್ನು ತೆಗೆದುಕೊಳ್ಳಬಹುದು. ಕನ್ನಡಿಗರಿಗೆ ಅವಕಾಶ ಕಲ್ಪಿಸುವ ಕಂಪನಿಗಳಿಗೆ ಸರ್ಕಾರ ಕೆಲವು ವಿಶೇಷ ಸವಲತ್ತುಗಳನ್ನೂ ನೀಡಬಹುದು. ಸ್ಥಳೀಕರಿಗೆ ಎನ್ನುವ ತತ್ವವನ್ನು ಸ್ವೀಕರಿಸಿದರೂ, ಕರ್ನಾಟಕದಲ್ಲೇ ಹಲವಾರು ತಲೆಮಾರುಗಳಿಂದ ನೆಲೆಸಿರುವ ಇತರ ಭಾಷೆಯವರೂ ಅದಕ್ಕೆ ಅರ್ಹರಾಗುತ್ತಾರೆ. ವಾಸ್ತವವೆಂದರೆ, ಯಾರು ಸ್ಥಳೀಕರೆಂಬ ನಿಯಮವನ್ನು ಸರ್ಕಾರ ಸರಿಯಾಗಿ ವಿವರಿಸಿಲ್ಲ, ಪಾಲಿಸಿಲ್ಲ. ವಿದ್ಯಾಸಂಸ್ಥೆಗಳ ಪ್ರವೇಶ, ಬಿಡಿಎ, ಮೂಡಾ ನಿವೇಶನಗಳಿಗೆ ಅರ್ಹತೆ ಮುಂತಾದುವುಗಳ ಬಗ್ಗೆ ನಾವು ಬೇಜವಾಬ್ದಾರಿಯಿಂದ ವರ್ತಿಸಿ, ಹೊರಗಿನವರು ಈ ಅವಕಾಶವನ್ನು ಕಬಳಿಸಲು ಸಾಧ್ಯವಾಗಿದೆ. ಸಿಇಟಿ ಪರೀಕ್ಷೆಗಳಲ್ಲಿ ಇತ್ತೀಚೆಗಷ್ಟೆ ಇಲ್ಲಿಗೆ ಬಂದವರೆಲ್ಲಾ ಸ್ಥಳೀಕರೆಂದು ಸೀಟು ಗಿಟ್ಟಿಸಲು ಸಾಧ್ಯವಾಗುತ್ತಿದೆ. ಹಲವು ತಲೆಮಾರುಗಳ ನೆಲಸುವಿಕೆಯನ್ನು ಆಧಾರ ಮಾಡಿ ಸ್ಥಳೀಕರೆಂದು ನಿರ್ಧರಿಸುವ ವ್ಯವಸ್ಥೆಯಾಗಬೇಕು.

ಕನ್ನಡ ಸಾಹಿತ್ಯದ ನೆಲೆ ಅಖಿಲ ಭಾರತೀಯ ನೆಲೆಯಲ್ಲಿ ಪ್ರತಿಷ್ಠಿತವಾಗಿ ಬೆಳೆದಿರುವುದಕ್ಕೆ ಒಂದು ಮುಖ್ಯ ಕಾರಣ, ಇಲ್ಲಿ ಇರುವ ಬಹು ಭಾಷೀಯ, ಸಾಂಸ್ಕೃತಿಕ ಪರಿಸರ ಎಂದು ಹೇಳಬೇಕಾಗುತ್ತದೆ. ನಮ್ಮಲ್ಲಿ ಸಂಕುಚಿತತೆ ತಮಿಳು ಸಾಹಿತ್ಯದಲ್ಲಿ ಪ್ರವೇಶಿಸಿದಂತೆ ಆಗದಿರುವುದು ಇದೇ ಕಾರಣದಿಂದ. ಇದು ಹೆಮ್ಮೆಪಡುವ ವಿಷಯ. ಆದರೆ ನಮ್ಮ ಪ್ರಜೆಗಳ ಮಟ್ಟದಲ್ಲಿ ಚಾರಿತ್ರಿಕ ಅನುಭವಗಳ ವೈಪರೀತ್ಯದಿಂದಾಗಿ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯ ಬೆಳವಣಿಗೆಯಲ್ಲಿ ಪ್ರಾದೇಶಿಕ ಅಸಮತೋಲನವಿದೆ ಎಂದೆನಿಸುತ್ತದೆ. ಕೆಲವು ಭಾಗಗಳು ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಹೋರಾಟ ಮಾಡಿದ ಅನುಭವ ಪಡೆದಿವೆ. ಮತ್ತೆ ಕೆಲವು ಇನ್ನೂ ಪಾಳೆಗಾರಿಕೆಯ ಹಿನ್ನೆಲೆಯಲ್ಲೇ ಹುದುಗಿವೆ. ಮತ್ತೊಂದು ವಿಭಾಗ ವಾಣಿಜ್ಯೋದ್ಯಮದಲ್ಲಿ ಮುನ್ನುಗ್ಗುವ ಪರಿಶ್ರಮ ಪಡೆದಿದೆ. ಈ ಅಸಮತೋಲನ ನಿರ್ಮಿಸುವ ಪ್ರಾದೇಶಿಕ ಸಂಘರ್ಷಗಳ ರಾಜಕೀಯ ಸಂದರ್ಭ ನೆರೆರಾಜ್ಯಗಳಲ್ಲಿ ಆಗುತ್ತಿರುವಂತೆ ಆರ್ಥಿಕ ಪ್ರಗತಿಪಥದಲ್ಲಿ ವೇಗವಾಗಿ ಒಟ್ಟಿಗೆ ಸಾಗಲು ಅಡಚಣೆಯಾಗಿದೆ. ಇದರಿಂದ ಉದ್ಭವಿಸುವ ಅತೃಪ್ತಿಗಳು, ರಾಜ್ಯಕ್ಕೇ, ಕನ್ನಡಕ್ಕೇ ವಿಪತ್ತೋ ಎಂಬಂತೆ ಭಾಸವಾಗಿ, ಮುಖ್ಯ ವಿಷಯ ಹಳಿತಪ್ಪುತ್ತದೆ. ಕರ್ನಾಟಕದಲ್ಲಿ ಮತಧರ್ಮದ ಪ್ರಭಾವ ರಾಜಕೀಯದ ಮೇಲೆ ಬೀರಿರುವಂತೆ ಬೇರೆಲ್ಲೂ ಆಗಿಲ್ಲ. ಒಂದು ಸಣ್ಣ ಊರಿನಲ್ಲೂ ವೇದಿಕೆಯ ಮೇಲೆ ಹತ್ತು ಜಾತಿಯ ಹತ್ತು ಜಗದ್ಗುರುಗಳಿಗೆ ಸ್ಥಾನ ಕಾದಿರಿಸಿ, ಅಲ್ಲಿ ಸಾಹಿತಿಗಳಿಗೆ, ಪ್ರಜ್ಞಾವಂತರಿಗೆ ಅವಕಾಶವೇ ಇಲ್ಲದಂತಾಗಿದೆ! ನಮ್ಮ ಸಾಹಿತಿಗಳು ಇದರ ಬಗ್ಗೆ ತೀವ್ರವಾಗಿ ಚರ್ಚಿಸುವ, ದಾರಿತೋರುವ, ಕೆಲಸ ನಿರ್ವಹಿಸಬೇಕು. ನಮ್ಮ ಸರ್ಕಾರಗಳು ಬೆಂಗಳೂರಿನ ಬೆಳವಣಿಗೆಯ ಸಮಸ್ಯೆಯನ್ನು ಆದಷ್ಟು ಕೇಂದ್ರಕ್ಕೆ ವಹಿಸಿ, ಕರ್ನಾಟಕದ ಅಭಿವೃದ್ಧಿಗೆ ಗಮನ ನೀಡಬೇಕು. ಕರ್ನಾಟಕದೊಳಗಿನ ಕನ್ನಡನಾಡನ್ನು ಉಳಿಸಿ ಬೆಳೆಸುವ ಕೆಲಸವನ್ನು ಎಂದಿನಂತೆಯೇ ಸಾಹಿತ್ಯ ಪರಿಷತ್ತಿನಂಥ ಸಾರ್ವಜನಿಕ ಸಂಸ್ಥೆಗಳು ಇನ್ನೂ ಪರಿಣಾಮಕಾರಿಯಾಗಿ ನಿರ್ವಹಿಸಬೇಕು. ಗುಲ್ಬರ್ಗದಿಂದ ಆರಿಸಿಬಂದ ಪ್ರಜಾಪ್ರತಿನಿಧಿಯೂ ಬೆಂಗಳೂರಿನ ಬೆಳವಣಿಗೆಗೇ ಕೆಲಸ ಮಾಡುವ ವಿಡಂಬನೆಯನ್ನು ಕೊನೆಗಾಣಿಸಬೇಕು. ಕರ್ನಾಟಕ ಸರ್ಕಾರದ ಆಡಳಿತ ಎಲ್ಲಾ ಹಂತದಲ್ಲೂ, ಕೇಂದ್ರ ಸರ್ಕಾರದೊಂದಿಗೂ, ಉದ್ಯಮಿಗಳೊಂದಿಗೂ ಕನ್ನಡದಲ್ಲೇ ಆಗಬೇಕಾದದ್ದೂ ಅತ್ಯಗತ್ಯ. ಇತರ ಭಾಷಾ ಬಾಂಧವರಿಗೆ ಅವರ ಭಾಷೆಯನ್ನು ಕಲಿಯಲು ಎಲ್ಲ ಸೌಕರ್ಯಗಳನ್ನೂ ಕಲ್ಪಿಸುತ್ತಲೇ ಅವರು ಕನ್ನಡ ಕಲಿಯುವುದು ಅನಿವಾರ್ಯವಾಗುವಂತೆ, ಅದಕ್ಕೆ ಅವರಿಗೆ ಎಲ್ಲ ಅನುಕೂಲಗಳನ್ನೂ ಕಲ್ಪಿಸುವಂತಹ ನೀತಿಯನ್ನೂ ನಿರೂಪಿಸಬೇಕು. ಬೆಂಗಳೂರಿನ ಔದ್ಯಮಿಕ ವಿಕೇಂದ್ರೀಕರಣವಾಗದೆ ಅಲ್ಲಿಯ ಸಮಸ್ಯೆ ಯಾರಿಂದಲೂ ಪರಿಹರಿಸಲು ಸಾಧ್ಯವಿಲ್ಲ. ಅಜ಼ೀಂ ಪ್ರೇಂಜಿಗೆ ಬೆಂಗಳೂರಿನ ಮುನಿಸಿಪಾಲಿಟಿಯನ್ನು ಖಾಸಗೀಕರಣಮಾಡಿ ಗುತ್ತಿಗೆಗೆ ಕೊಟ್ಟರೂ ಸಾಧ್ಯವಿಲ್ಲ. ಅದರ ನಿರ್ವಹಣೆ ಐಟಿಯಷ್ಟು ಸುಲಭವಲ್ಲ. ಅದೇ ಸಮಯದಲ್ಲಿ ಹಲವಾರು ಉದ್ಯಮಿಗಳ ಹೆಂಡತಿಯರು ಶಾಲೆಗಳನ್ನು ದತ್ತು ತೆಗೆದುಕೊಂಡು ಅಲ್ಲಿ ಇಂಗ್ಲಿಷ್ ಕಲಿಕೆಯನ್ನು ಉತ್ತಮಪಡಿಸಲು, ರಾಮಭಜನೆಯನ್ನು ಬೆಳೆಸಲು, ಪರಿಶ್ರಮಿಸುತ್ತಿದ್ದಾರಂತೆ! ಅದೇಕೆ ಅವರಿಗೆ ಕನ್ನಡ ಕಲಿಸುವ ಬಗ್ಗೆ ಅಷ್ಟೇ ಪ್ರೇರಣೆ ಇಲ್ಲ? ಸುವರ್ಣ ಕರ್ನಾಟಕದ ಈ ವರ್ಷ ಕರ್ನಾಟಕದೊಳಗಿನ ಕನ್ನಡನಾಡನ್ನು ಉಳಿಸಿ ಬೆಳೆಸಲು ಬೇಕಾದ ಹಲವು ರೀತಿಯ, ಸರ್ಕಾರವನ್ನು ಕಾಯದ, ಆದರೆ ಅದನ್ನು ಬಗ್ಗಿಸುವ ಜನಾಂದೋಲನಗಳನ್ನು ರೂಪಿಸುವುದು ಅಗತ್ಯ, ಅವು ಸಾಧ್ಯ.

ಭಾರತದ ರಾಷ್ಟ್ರೀಯತೆ ಒಂದು ಒಕ್ಕೂಟದ ಮಾದರಿ ಎಂದ ಮೇಲೆ ರಾಜ್ಯಗಳಿಗೆ ಬರುವ ಗವರ್ನರುಗಳು, ಐಎಎಸ್, ಐಪಿಎಸ್ ಇತರ ಅಧಿಕಾರಿಗಳು ಕೇಂದ್ರದ ಮಾಂಡಲೀಕರಂತೆ ಬ್ರಿಟಿಷರು ನಿಯಮಿಸುತ್ತಿದ್ದ ರೆಸಿಡೆಂಟರಂತೆ ವರ್ತಿಸುವುದನ್ನು ಸಹಿಸಲಾಗದು. ಅವರ ಆ ಮನೋಭಾವನೆಯಿಂದಾಗಿಯೇ ಕರ್ನಾಟಕದ ಸರ್ಕಾರದ ಆಡಳಿತವನ್ನು ಕನ್ನಡದಲ್ಲಿ ನಡೆಸಲಾಗುತ್ತಿಲ್ಲ. ಕನ್ನಡ ಬರದವರನ್ನು ಮೊದಲಿಗೇ ಇಲ್ಲಿಗೆ ಕಳುಹಿಸುವುದೇ ಬೇಡ. ಕೇಂದ್ರದ ಪರೀಕ್ಷೆಯ ಹಂತದಲ್ಲೇ ಕನ್ನಡ ಭಾಷೆಯ ಪ್ರಶ್ನಪತ್ರಿಕೆಯನ್ನು ಯಾರು ಉತ್ತರಿಸಿ ಪ್ರಾವೀಣ್ಯತೆಯನ್ನು ಪ್ರದರ್ಶಿಸುತ್ತಾರೋ ಅಂಥವರನ್ನೇ ಇಲ್ಲಿಗೆ ಕಳುಹಿಸಬೇಕು. ಹೀಗೆ ಮಾಡುವುದರಿಂದ ಭಾರತದ ಐಕ್ಯತೆಗೂ ಕುಂದು ಬರುವುದಿಲ್ಲ. ಕರ್ನಾಟಕದಿಂದ ಹೆಚ್ಚು ವಿದ್ಯಾರ್ಥಿಗಳು ಇಂಥ ಪರೀಕ್ಷೆಗಳಿಗೆ ಹೋಗುವಂತೆ, ಸೈನ್ಯಕ್ಕೆ ಸೇರುವಂತೆ ಸರ್ಕಾರ ಹೆಚ್ಚಿನ ಪ್ರೋತ್ಸಾಹ ನೀಡುವುದು ಅತ್ಯಗತ್ಯ. ಕರ್ನಾಟಕದೊಳಗಿನ ಕನ್ನಡನಾಡನ್ನು ರಕ್ಷಿಸಲು ಈ ಎಲ್ಲಾ ಕ್ರಮಗಳೂ ಅಗತ್ಯ. ಆ ಯಾವ ಕ್ರಮದಿಂದಲೂ ಭಾರತದ ಐಕ್ಯತೆಗಾಗಲೀ, ಕರ್ನಾಟಕದೊಳಗಿನ ಕನ್ನಡೇತರ ಅಲ್ಪಸಂಖ್ಯಾತರಿಗಾಗಲೀ ಧಕ್ಕೆಯಾಗುವುದಿಲ್ಲ. ಯಾವುದೇ ಅಲ್ಪಸಂಖ್ಯಾತರೂ ತಾವು ನೆಲೆಸುವ ಪ್ರದೇಶದ ಭಾಷೆ ಸಂಸ್ಕೃತಿಯ ಬಗ್ಗೆ ತಿಳಿವಳಿಕೆ ಪಡೆದು ಅವರೊಡನೆ ಸಹಯೋಗದಿಂದ ಬದುಕುವುದು ವಿಶ್ವಸಂಸ್ಥೆಯ ವಲಸೆ ಹೋಗುವ ಜನರನ್ನು ಕುರಿತ ನೀತಿಗನುಗುಣವಾದುದು.

ಪ್ರಿಯ ಬಂಧುಗಳೇ,

ನಮ್ಮ ನಡುವಿನ ವಿಶಿಷ್ಟ ನಾಡಹಬ್ಬವಾದ ವಿಶ್ವವಿಖ್ಯಾತ 'ದಸರಾ ಉತ್ಸವ'ದ ಉದ್ಘಾಟನೆಯ ಅವಕಾಶವನ್ನು ನಾನು ನಿರೀಕ್ಷಿಸಿರಲಿಲ್ಲ. ನನಗಿದು ಅನಿರೀಕ್ಷಿತ ಆಹ್ವಾನ. ದಸರಾ ಉತ್ಸವವು ವಿವಿಧ ವಿನ್ಯಾಸಗಳನ್ನು ಒಳಗೊಳ್ಳುತ್ತ, ವಿವಿಧ ಹಂತಗಳನ್ನು ದಾಟುತ್ತ ಇಂದು ಸಾಂಸ್ಕೃತಿಕ ಜನೋತ್ಸವದ ಸ್ವರೂಪಕ್ಕೆ ಸಮೀಪವಾಗಿರುವುದರಿಂದ ನಾನು ಉದ್ಘಾಟಕನಾಗಿ ಭಾಗವಹಿಸುತ್ತಿದ್ದೇನೆ. ಈ ಸಂದರ್ಭದಲ್ಲಿ ದಸರಾ ಉತ್ಸವದ ಉದ್ಘಾಟನೆ ಮಾಡುವುದಕ್ಕೆ ನನ್ನನ್ನು ಆಯ್ಕೆ ಮಾಡಿ ಆಹ್ವಾನಿಸಿದ ಉತ್ಸವ ಸಮಿತಿಯ ಸಮಸ್ತರಿಗೂ, ಕರ್ನಾಟಕ ಸರ್ಕಾರಕ್ಕೂ, ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಧರಂಸಿಂಗ್ ಅವರಿಗೂ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ನಾನು ಮೊದಲೇ ಹೇಳಿದಂತೆ ದಸರಾ ಉತ್ಸವವು ಸಾಂಸ್ಕೃತಿಕ ಜನೋತ್ಸವ ಸ್ವರೂಪದ ಸಮೀಪಕ್ಕೆ ಬರುತ್ತಿದೆ. ರಾಜಪ್ರಭುತ್ವದ ಸಂದರ್ಭದಲ್ಲಿದ್ದ ಆಚರಣೆಗಳ ಜೊತೆಗೆ ಪ್ರಜಾಪ್ರಭುತ್ವದ ಸಂಕೇತಗಳನ್ನೂ ಒಳಗೊಳ್ಳುತ್ತಿದೆ. ರಾಜರ ಕಾಲದ ಕ್ರಿಯಾತ್ಮಕ ಆಚರಣೆಗಳು ಈಗ ಸಾಂಕೇತಿಕವಾಗಿ, ಪರಂಪರೆಯ ನೆನಪಾಗಿ ಕಾಣಿಸಿಕೊಳ್ಳುತ್ತಿವೆ. ನಾಟಕ, ಚಲನಚಿತ್ರ, ಕವಿಗೋಷ್ಠಿ, ಜನಪದ ಕಲೆಗಳ ಪ್ರದರ್ಶನ, ವಸ್ತುಪ್ರದರ್ಶನ – ಮುಂತಾದ ಅಂಶಗಳು ಪ್ರಜಾಪ್ರಭುತ್ವದ ಸಂದರ್ಭದಿಂದಲೇ ಸೇರ್ಪಡೆಯಾದ ಸಾಂಸ್ಕೃತಿಕ ಕಾರ್ಯಕ್ರಮಗಳಾಗಿವೆ. ಹಾಗೆ ನೋಡಿದರೆ ಉದ್ಘಾಟನಾ ಸಮಾರಂಭವೂ ಪ್ರಜಾಪ್ರಭುತ್ವದ ಪರಿಭಾಷೆಯಲ್ಲಿ ರೂಪುಗೊಂಡ ಕಾರ್ಯಕ್ರಮವಾಗಿದ್ದು, ಇದು ಮತ್ತಷ್ಟು ಸಾಂಸ್ಕೃತಿಕ ಖಚಿತತೆಯನ್ನೂ ಧರ್ಮನಿರಪೇಕ್ಷ ನೆಲೆಯನ್ನೂ ಪಡೆಯಬೇಕಾಗಿದೆ. ನಮ್ಮದು ಬಹುಸಂಸ್ಕೃತಿ - ಬಹುಧರ್ಮಗಳ ದೇಶವಾಗಿದ್ದು ದಸರಾ ಉದ್ಘಾಟನೆಯನ್ನು ಪ್ರತ್ಯೇಕ ಅಸ್ತಿತ್ವದ ಸಮಾರಂಭವನ್ನಾಗಿಸಬೇಕು. ಇದನ್ನು ಸಾಂಕೇತಿಕವಾಗಿ ಸೂಚಿಸಿ ನಮ್ಮ ಸಂವಿಧಾನದ ಜಾತ್ಯತೀತ ಆಶಯಗಳನ್ನು ಎತ್ತಿಹಿಡಿಯಬೇಕೆಂಬ ವಿನಮ್ರ ಬದ್ಧತೆಯಿಂದ ನಾನು ಪೂಜೆ ಮತ್ತು ಸಮಾರಂಭವನ್ನು ಪ್ರತ್ಯೇಕವಾಗಿ ಕಂಡಿದ್ದೇನೆ. ಸಮಾರಂಭಕ್ಕಷ್ಟೆ ಬಂದಿದ್ದೇನೆ. ಪೂಜೆಯ ಪಾಡಿಗೆ ಪೂಜೆ. ಸಮಾರಂಭದ ಪಾಡಿಗೆ ಸಮಾರಂಭ. ಹೀಗಾದಾಗ ನಮ್ಮ ನಾಡಿನ ವಿಭಿನ್ನ ಭಾವನೆ-ಚಿಂತನೆಗಳನ್ನು ಗೌರವಿಸಿದಂತಾಗುತ್ತದೆ. ಇದು ನಾನು ಕೈಗೊಂಡ ನಿರ್ಧಾರದ ಆಶಯವಾಗಿದೆ.

ದಸರಾ ನಾಡಹಬ್ಬದ ಸ್ವರೂಪವೇ ವಿಶಿಷ್ಟವಾದದ್ದು. ಭೂತ ಮತ್ತು ವರ್ತಮಾನಗಳು ಪರಸ್ಪರ ಸಂವಾದಿಸುತ್ತ ಒಂದರೊಳಗೊಂದು ಸೇರುತ್ತ ಸಮಕಾಲೀನತೆಯಲ್ಲಿ ಪ್ರತಿಫಲಿಸುವ ವಿಶಿಷ್ಟ ಪ್ರಕ್ರಿಯೆಯನ್ನು ದಸರಾ ಉತ್ಸವದಲ್ಲಿ ಕಾಣಬಹುದಾಗಿದೆ. ಹಿಂದಿನ ರಾಜಪ್ರಭುತ್ವ ಮತ್ತು ಇಂದಿನ ಪ್ರಜಾಪ್ರಭುತ್ವಗಳನ್ನು ಒಟ್ಟಾಗಿಸಿ ಗೌರವಿಸುವ ಮನೋಧರ್ಮ ಈ ಉತ್ಸವದ ಹಿನ್ನೆಲೆಗಿದೆ. ನಮ್ಮ ಜನಸಾಮಾನ್ಯರ ಒಟ್ಟಾರೆ ಮನೋಧರ್ಮವೂ ಇದೇ ಆಗಿದೆ. ಊಳಿಗಮಾನ್ಯ ಪದ್ಧತಿಯ ಮೂರ್ತರೂಪವಾದ ರಾಜಪ್ರಭುತ್ವದ ಬಗ್ಗೆ ನಮಗೆಷ್ಟೇ ಸೈದ್ಧಾಂತಿಕ ಪ್ರತಿರೋಧವಿದ್ದರೂ ಜನಸಾಮಾನ್ಯರ ಮನಸ್ಸಿನಲ್ಲಿ ಬೇರೂರಿರುವ ರಾಜಪರ ಗೌರವವನ್ನು ಗಮನಿಸಬೇಕಾಗುತ್ತದೆ. ಇಂಥ ಗೌರವಕ್ಕೆ ಊಳಿಗಮಾನ್ಯ ಪ್ರಭುತ್ವ ಮತ್ತು ಈ ಪ್ರಭುತ್ವದ ಪರವಾದ ವರ್ಗಗಳು ನಿರಂತರವಾಗಿ ರೂಪಿಸುತ್ತ ಬಂದ 'ರಾಜಸೇವಾಸಕ್ತ' ಮನೋಧರ್ಮವು ಒಂದು ಕಾರಣವಾದರೆ, ಜನಹಿತಕ್ಕೆ ಬದ್ಧರಾಗಿ ಆಡಳಿತ ನಡೆಸುತ್ತ, ಚಲನಶೀಲ ಪರಂಪರೆಗೆ ಕಾರಣರಾದ ಕೆಲವು ರಾಜರ



ಸಮಾಜಮುಖಿ ವ್ಯಕ್ತಿತ್ವವು ಇನ್ನೊಂದು ಕಾರಣ; ಇಂದಿನ 'ಪ್ರಜಾಸತ್ತಾತ್ಮಕ ರಾಜಕಾರಣ'ದಲ್ಲಿ ಫ್ಯೂಡಲ್ ಪ್ರವೃತ್ತಿ ಇನ್ನೂ ನಾಶವಾಗದೆ, ಅದಕ್ಕೆ ಪೂರಕವಾದ ಸಾಮಾಜಿಕ-ಆರ್ಥಿಕ ಪಳೆಯುಳಿಕೆಗಳು ಜೀವಂತವಾಗಿರುವುದು ಮತ್ತೊಂದು ಕಾರಣ. ಅಲ್ಲದೆ ಬಹುಸಂಸ್ಕೃತಿಗಳ ಅಸ್ತಿತ್ವ ಮತ್ತು ಅನುಸಂಧಾನಗಳ ಇಂದಿನ ಸಂದರ್ಭವು ಏಕಮುಖೀ ತೀರ್ಪುಗಳ ತಂಗುದಾಣವಾಗುವುದು ಅಸಾಧ್ಯ. ವೈರುಧ್ಯಗಳ ಒಡಲಲ್ಲೇ ವಿಕಾಸವನ್ನು ಕಾಣುತ್ತಿರುವ ಸಂದರ್ಭದಲ್ಲಿ ಅದಕ್ಕನುಗುಣವಾದ ಮನೋಧರ್ಮ ರೂಪುಗೊಳ್ಳುವುದು ಸ್ವಾಭಾವಿಕ. ಇಂತಹ ಸ್ವಾಭಾವಿಕ ಬೆಳವಣಿಗೆಯನ್ನು ದಸರಾ ಉತ್ಸವದ ಇತಿಹಾಸದಲ್ಲೂ ಕಾಣಬಹುದು.

ಸಕಾಲಕ್ಕೆ ಮಳೆ ಬಂದದ್ದಕ್ಕೆ ಇಂದ್ರನಿಗೆ ಗೌರವಪೂರ್ವಕ ಕೃತಜ್ಞತೆಯನ್ನು ಅರ್ಪಿಸುವ ಸಲುವಾಗಿ ದಸರಾ ಉತ್ಸವ ಆರಂಭವಾಯಿತೆಂಬ ಒಂದು ಐತಿಹ್ಯವಿದೆ. ಅನಂತರ ಇದೊಂದು 'ವಿಜಯೋತ್ಸವ'ದ ರೂಪಾಂತರವನ್ನು ಪಡೆದಿದೆ. ರಾಮಾಯಣದ ಶ್ರೀರಾಮ ಮತ್ತು ಮಹಾಭಾರತದ ಪಾಂಡವರು ಪಡೆದ ವಿಜಯದ ಪ್ರತೀಕವಾಗಿಯೂ ಈ ಉತ್ಸವವನ್ನು ಕಾಣಲಾಗುತ್ತಿದೆ. ಇದಕ್ಕೂ ಮುಖ್ಯವಾಗಿ, ಚಾಮುಂಡೇಶ್ವರಿ ಮತ್ತು ಮಹಿಷಾಸುರನ ಸ್ಥಳೀಯ ಪುರಾಣವನ್ನು ದಸರಾ ಉತ್ಸವಕ್ಕೆ ಕಾರಣವಾಗಿ ಗ್ರಹಿಸುವುದುಂಟು. ಚಂಡ ಮತ್ತು ಮುಂಡ ಎಂಬ 'ರಾಕ್ಷಸರ' ವಿರುದ್ಧ ಆದಿಶಕ್ತಿಯು



# ದಸರಾ ನಾಡಹಬ್ಬ

■ (೪ನೇ ಅಕ್ಟೋಬರ್ ೨೦೦೫ರಂದು ಮೈಸೂರು ದಸರಾ ಉತ್ಸವವನ್ನು ಉದ್ಘಾಟಿಸಿ ಪ್ರೊ॥ ಬರಗೂರು ರಾಮಚಂದ್ರಪ್ಪನವರು ಮಾಡಿದ ಭಾಷಣ)

ಶಸ್ತ್ರಾಸ್ತ್ರ ಪೈಪೋಟಿಯ ಫಲವಾಗಿ 'ಯುದ್ಧ'ವೆನ್ನುವುದು ಉದ್ಯಮವಾಗುತ್ತಿದೆ. ಸಾಮ್ರಾಜ್ಯಶಾಹಿಯ ಸಾಧನವಾದ 'ಸಂಹಾರ ಸಂಸ್ಕೃತಿ'ಯು ಕಾನೂನು ಸುವ್ಯವಸ್ಥೆ-ರಕ್ಷಣೆಗಳ ಕಾರಣದಲ್ಲಿ ರಾಷ್ಟ್ರಪ್ರೇಮದ ರೂಪ ತಾಳುತ್ತಿದೆ ; ಅಮೇರಿಕದಂಥ ದೇಶಗಳಿಗೆ ನೈತಿಕಶಕ್ತಿಯಾಗುತ್ತಿದೆ.

(ಚಾಮುಂಡೇಶ್ವರಿ) ಒಂಬತ್ತು ದಿನಗಳ ಕಾಲ ಹೋರಾಡುತ್ತಾಳೆ. ಹತ್ತನೇ ದಿನ ಮಹಿಷರೂಪದಲ್ಲಿ ಬಂದ ರಾಕ್ಷಸನನ್ನು ಸಂಹಾರ ಮಾಡುತ್ತಾಳೆ. ಇದು ದಸರಾ ಹಬ್ಬದ ಆಚರಣೆಗೆ ಪ್ರೇರಕವೆಂದು ಭಾವಿಸಲಾದ ಸ್ಥಳೀಯ ಪುರಾಣದ ಮುಖ್ಯಾಂಶ. ವಿಜಯನಗರ ಸಾಮ್ರಾಜ್ಯದ ಪತನವಾದ ನಂತರ ಅಲ್ಲಿ ನಡೆಸುತ್ತಿದ್ದ 'ಉತ್ಸವ'ದ ಮಾದರಿಯನ್ನು ಮೈಸೂರು ಒಡೆಯರು ಅಳವಡಿಸಿಕೊಂಡು ಬೃಹತ್ ಪ್ರಮಾಣದ ಉತ್ಸವಾಚರಣೆ ಮಾಡತೊಡಗಿದರೆಂದು ಚರಿತ್ರೆಯ ಅಂಶಗಳು ಹೇಳುತ್ತವೆ. ರಾಜ ಒಡೆಯರು ೧೬೧೦ರಲ್ಲಿ ದಸರಾ ಉತ್ಸವಕ್ಕೆ ಕ್ರಮಬದ್ಧತೆ ತಂದು ವೈಭವದಿಂದ ಆಚರಿಸುವುದಕ್ಕೆ ನಾಂದಿಯಾದರೆಂದು ಹೇಳಲಾಗಿದೆ. ಅನಂತರ ಅನೇಕ ಬದಲಾವಣೆಗಳಾಗಿವೆ. ಹಾಗೆ ನೋಡಿದರೆ ಚಾಮುಂಡೇಶ್ವರಿಯ ಪೂಜೆಯನ್ನು ಮೊದಲು ಶಿವಾರ್ಚಕರು ಮಾಡುತ್ತಿದ್ದು, ೧೮೮೯ರ ಸುಮಾರಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಆದೇಶದ ಮೇರೆಗೆ ವೈದಿಕ ವಿಧಿಗಳ ಮೂಲಕ ಪೂಜೆ ಮಾಡಲು ವೈದಿಕ ಪುರೋಹಿತರನ್ನು ನೇಮಿಸಲಾಯಿತೆಂದು ಕೆಲವು ದಾಖಲೆಗಳು ತಿಳಿಸುತ್ತವೆ. ದಸರಾ ಉತ್ಸವಕ್ಕೆ ಸೇರಿಕೊಂಡ ವಿಭಿನ್ನ ಅಂಶಗಳಿಗೆ ಈ ವಿವರಗಳು ಆಧಾರವಾಗಿವೆ.

ದಸರಾ ಆಚರಣೆಯಲ್ಲಿ ಪುರಾಣ, ಚರಿತ್ರೆ, ಜಾನಪದಗಳೆಲ್ಲ ಒಗ್ಗೂಡಿವೆ. ವಸಾಹತುಪೂರ್ವ ಮತ್ತು ವಸಾಹತೋತ್ತರ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಇತಿಹಾಸದ ಅಂಶಗಳು ಅನುಸಂಧಾನಗೊಳ್ಳುತ್ತ ರೂಪುಗೊಂಡ ಆಕೃತಿ – ಈ ದಸರಾ ಉತ್ಸವ. ಆದ್ದರಿಂದ ಯಾವುದೋ ಒಂದು ಅಂಶವನ್ನು ಅನುಲಕ್ಷಿಸಿ ದಸರಾವನ್ನು ಏಕಪಕ್ಷೀಯವಾಗಿ ನಿರಾಕರಿಸುವುದು ಅಥವಾ ವಿಕಾರವಾಗಿ ವಿಜೃಂಭಿಸುವುದು ಸರಿಯಾದ ನಿಲುವಾಗುವುದಿಲ್ಲ. ಇದಕ್ಕೆ ಬದಲಾಗಿ, ವೈರುಧ್ಯಗಳನ್ನು ಒಳಗೊಳ್ಳುತ್ತಲೇ ವಿಕಾಸಗೊಳ್ಳುತ್ತಿರುವ ನಮ್ಮ ಸಮಾಜ, ಸಂಸ್ಕೃತಿ ಮತ್ತು ರಾಜಕೀಯ ಪ್ರಕ್ರಿಯೆಗಳ ಒಂದು ಪ್ರಾತಿನಿಧಿಕ ಆಕೃತಿಯಾಗಿ ದಸರಾ ಉತ್ಸವವನ್ನು ಪರಿಭಾವಿಸಬೇಕು. ಯಾಕೆಂದರೆ ಇದು ಸಂಕೀರ್ಣ ಮನೋಧರ್ಮದ ಪ್ರತಿಫಲನ. ಒಟ್ಟಿನಲ್ಲಿ ಹೇಳುವುದಾದರೆ, ದಸರಾ ಉತ್ಸವವು ನಮ್ಮ ಸಂದರ್ಭದ ಒಂದು ಪ್ರಾತಿನಿಧಿಕ ಪ್ರತಿಮಾರೂಪ. ಇದು ಮತ್ತಷ್ಟು ಸಮಕಾಲೀನವಾಗುತ್ತ, ಅರ್ಥಪೂರ್ಣ ಸ್ವರೂಪವನ್ನು ಪಡೆಯುತ್ತ ಬೆಳೆಯಬಹುದಾಗಿದೆ.

ಆದರೆ, ನಮ್ಮನ್ನು ಕಾಡಿಸಬೇಕಾದ ಮುಖ್ಯ ಪ್ರಶ್ನೆಯೆಂದರೆ – ದಸರಾಚರಣೆಯ ಹುಟ್ಟಿಗೆ ಕಾರಣವೆಂದು ಹೇಳಲಾದ ಆರಂಭದ ಆಶಯಗಳು ಇಂದಿಗೂ ಆದರ್ಶವಾಗಬೇಕೇ ? – ಎಂಬುದು. ತುಂಬಾ ಸರಳವಾಗಿ ಹೇಳುವುದಾದರೆ, ದೈವೀಶಕ್ತಿ ಮತ್ತು ದಾನವಶಕ್ತಿಗಳ ನಡುವಿನ ಹೋರಾಟದಲ್ಲಿ ದಾನವಶಕ್ತಿಯ ಸಂಹಾರ ಮತ್ತು ದೈವೀಶಕ್ತಿಯ ವಿಜಯ – ದಸರಾಚರಣೆಯ ನಂಬಿಕೆಯ ಒಂದು ಮುಖ್ಯಾಂಶವಾಗಿದೆ. ಈ ನಂಬಿಕೆ ಇಂದಿಗೂ ಮುಂದುವರೆಯುತ್ತಿದೆ. ಆದರೆ ಐತಿಹ್ಯ ಮತ್ತು ಪುರಾಣಗಳ ಸಮಕಾಲೀನ ಸಾಂಸ್ಕೃತಿಕ ಅಧ್ಯಯನಗಳು ಹೊಸ ಹೊಸ ಸತ್ಯಗಳನ್ನು ಅನಾವರಣಗೊಳಿಸುತ್ತಿವೆ. ಐತಿಹ್ಯ ಮತ್ತು ಪುರಾಣಗಳನ್ನು ಮಾನವ ವಿಜ್ಞಾನಗಳ ಮೂಸೆಯಲ್ಲಿ ಪರಿಶೀಲಿಸುವ ಅಧ್ಯಯನಗಳ ಜೊತೆಗೆ ವಾಚ್ಯವನ್ನು ಮೀರಿದ ಧ್ವನಿಗಾಗಿ ನಮ್ಮ ಸಂಸ್ಕೃತಿ ನೋಟಗಳು ಒತ್ತಾಯಿಸುತ್ತವೆ. ದಾನವರೆಂದು ಕರೆಸಿಕೊಂಡವರೆಲ್ಲ ದೈವವಿರೋಧಿಗಳಾಗಿದ್ದರೆ? ಪುರಾಣ ಕಾವ್ಯಗಳ ಪಾತ್ರಗಳನ್ನು ಕೇವಲ ಒಳ್ಳೆಯವರು ಮತ್ತು ಕೆಟ್ಟವರು ಎಂದು ಚಿತ್ರಿಸಲಾಗಿದೆಯೆ? ಪಾಪ-ಪುಣ್ಯಗಳನ್ನು ಆಧರಿಸಿದ ಪುರಾಣ ಪೂಜೆಯೇ ಅಂತಿಮ ಸತ್ಯವೇ ? – ಇಂಥ ಪ್ರಶ್ನೆಗಳಿಗೆ 'ಅಲ್ಲ' ಎನ್ನುವುದೇ ಉತ್ತರವಾಗಿದೆ. ದಾನವರೂ ದೈವಭಕ್ತರಾಗಿದ್ದರು. ಅವರು ನಂಬಿದ ದೈವವು ಆಯಾ ಪುರಾಣದ ನಾಯಕನ ದೈವ ಅಲ್ಲದಿರಬಹುದು. ಉದಾಹರಣೆಗೆ ರಾವಣನೂ ದೈವಭಕ್ತ; ಶಿವಭಕ್ತ. ಅಂತೆಯೇ ಆಸ್ತಿ, ಅಧಿಕಾರಕ್ಕೆ ಸಂಬಂಧಿಸಿದಂತೆ ದುರ್ಯೋಧನನ ದುರಾಸೆ ಪ್ರಶ್ನಾರ್ಹವಾದರೂ ಆತ ಸ್ನೇಹ ನಿಷ್ಠ; ಛಲಗಾರ. ಹಾಗೆ ನೋಡಿದರೆ ಧರ್ಮರಾಯನ ಹಲವು ನಡವಳಿಕೆಗಳೂ ಪ್ರಶ್ನಾರ್ಹವಾಗಿವೆ. ಪಾತ್ರಗಳ ಮೂಲಕ ಮಾತ್ರವೇ ಪುರಾಣಗಳನ್ನಾಗಲಿ, ಕಾವ್ಯಾದಿ ಕೃತಿಗಳನ್ನಾಗಲಿ ಅಂತಿಮ ಅರ್ಥಕ್ಕೆ ಒಗ್ಗಿಸುವುದು ತಪ್ಪಾಗುತ್ತದೆ. ಎಲ್ಲ ಪಾತ್ರಗಳೂ ಘಟನೆಗಳೂ ಒಗ್ಗೂಡಿ ಹೊರಡಿಸುವ ಧ್ವನಿಯೇ ಮುಖ್ಯವಾಗಬೇಕಾಗುತ್ತದೆ. ಆದ್ದರಿಂದ ದೈವೀಶಕ್ತಿ ಮತ್ತು ದಾನವಶಕ್ತಿಗಳ ನಿರ್ವಚನವನ್ನು ಮತ್ತು ವಾಚ್ಯಗೊಳಿಸಲಾಗದು ; ಏಕಪಕ್ಷೀಯವಾಗಿಸಲಾಗದು.

ಜೊತೆಗೆ 'ಸಂಹಾರ'ವು ಇವತ್ತಿನ ಆದರ್ಶವೆ ಎಂಬ ಪ್ರಶ್ನೆಯೂ ಮುಖ್ಯ. ಐತಿಹ್ಯ ಪುರಾಣಗಳ ದೈವೀಶಕ್ತಿ ಮತ್ತು ದಾನವಶಕ್ತಿಗಳಾಗಲಿ, ಚರಿತ್ರೆಯ ರಾಜ ಮತ್ತು ಪ್ರತಿರಾಜರಾಗಲಿ ಮನುಷ್ಯರೂಪದಲ್ಲೇ ಕಾಣಿಸಿಕೊಂಡಿದ್ದರು. ಒಂದು ಮನುಷ್ಯರೂಪ ಇನ್ನೊಂದು ಮನುಷ್ಯರೂಪವನ್ನು ಸಂಹಾರ ಮಾಡುವ ಮೂಲಕ ತನಗೆ ಆಗದ ಹಾಗೂ ತನಗೆ ಸಲ್ಲದ ಗುಣ-ದುರ್ಗುಣಗಳ ವ್ಯಕ್ತಿತ್ವವನ್ನು ಸಂಹಾರ ಮಾಡಿದ್ದಾಗಿ ಅರ್ಥೈಸಬಹುದು. ಆದರೆ ಕಡೆಗೆ ಯುದ್ಧ ನಡೆದದ್ದು ಮನುಷ್ಯರೂಪಗಳ ನಡುವೆಯೇ ಆಗಿತ್ತು. ಸತ್ತವರು ಗೆದ್ದವರು ಮನುಷ್ಯರೂಪಗಳೇ ಆಗಿದ್ದವು. ಆದ್ದರಿಂದ ಯುದ್ಧ ಮತ್ತು ಸಂಹಾರಗಳು ಇಂದು ಬೇಕೆ? ಇವು ಜನರ ನಂಬಿಕೆಯಲ್ಲಿರುವ ದೈವೀಶಕ್ತಿಗೆ ಪೂರಕವಾಗಿವೆಯೆ ? ಆಯುಧಗಳು ನಮ್ಮ ಆದರ್ಶವೆ ? – ದಸರಾ ಉತ್ಸವದ ಸಂದರ್ಭವು ಇಂತಹ ಪ್ರಶ್ನೆಗಳನ್ನು ಮತ್ತೆ ನನ್ನೆದುರು ನಿಲ್ಲಿಸಿದೆ.

ಇಂದು ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರಗಳನ್ನೂ ಒಳಗೊಂಡಂತೆ ಬ್ರಿಟನ್, ಅಮೆರಿಕಾದಂಥ ಬೃಹತ್ ರಾಷ್ಟ್ರಗಳು ಭಯೋತ್ಪಾದನೆಯ ವಿರುದ್ಧ ಹೋರಾಟದ ದನಿಯೆತ್ತಿವೆ. ಆದರೆ ಇದೇ ಪ್ರಮಾಣದಲ್ಲಿ ಯುದ್ಧೋತ್ಪಾದನೆಯ ವಿರುದ್ಧ ಮಾತನಾಡುತ್ತಿಲ್ಲ. ಯುದ್ಧೋತ್ಪಾದಕರು ಮತ್ತು ಭಯೋತ್ಪಾದಕರು ತಂತಮ್ಮ ಕಾರಣಗಳಿಗಾಗಿ 'ಸಂಹಾರ ಸಂಸ್ಕೃತಿ'ಯ ಸಮರ್ಥನೆಯಲ್ಲಿ ತೊಡಗಿರುವುದರಿಂದ ಒಬ್ಬರನ್ನು ವಿರೋಧಿಸಿ ಇನ್ನೊಬ್ಬರನ್ನು ವಿರೋಧಿಸದೆ ಇರುವುದು ಸರಿಯಲ್ಲ. ಇಬ್ಬರೂ ವಿರೋಧಕ್ಕೆ ಅರ್ಹರು.

'ಸಂಹಾರ ಸಂಸ್ಕೃತಿ'ಯ ಸಾಧನ – ಆಯುಧ ; ಈ ಆಯುಧ ಬಳಕೆಯ ಪರಿಣಾಮಕ್ಕೆ ಕೊಟ್ಟ ಹೆಸರು – ಹಿಂಸೆ. ಆಯುಧಗಳೂ ಬಹುರೂಪಿ, ಹಿಂಸೆಯೂ ಬಹುರೂಪಿ. ಜೊತೆಗೆ ಆಯುಧಗಳಿಲ್ಲದ ಅಮೂರ್ತ ಹಿಂಸೆಯೂ ಅಗಾಧವಾಗಿದೆ. ಇದು ಮಾನಸಿಕ ಹಿಂಸೆ. ಮಾನಸಿಕ ಹಿಂಸೆಯನ್ನೂ ಕೊಡಬಲ್ಲ ಭಯೋತ್ಪಾದಕರು ಮತ್ತು ಯುದ್ಧೋತ್ಪಾದಕರು ಮುಖ್ಯವಾಗಿ ದೈಹಿಕ ಹಾಗೂ ಮೂರ್ತ ಹಿಂಸೆಯ ವಕ್ತಾರರು. ಭಯೋತ್ಪಾದಕರಲ್ಲಿ ಧಾರ್ಮಿಕ ಮೂಲಭೂತವಾದಿಗಳದೇ ದರಬಾರು. ಕೆಲವರು ಬಂದೂಕ, ಪಿಸ್ತೂಲು ಮುಂತಾದವನ್ನು ಬಳಸಿದರೆ, ಇನ್ನು ಕೆಲವರು ತ್ರಿಶೂಲಾದಿ ಸಂಕೇತ ಶಸ್ತ್ರಗಳನ್ನು ಬಳಸುತ್ತಾರೆ. ರಾಜಕೀಯ 'ಉಗ್ರಗಾಮಿಗಳು' ಈ ಭಯೋತ್ಪಾದಕರಿಗಿಂತ ಭಿನ್ನವಾದವರು. ನಾವು ಒಪ್ಪಲಿ, ಒಪ್ಪದಿರಲಿ ರಾಜಕೀಯ ಉಗ್ರಗಾಮಿಗಳಿಗೆ ಇಡೀ ವ್ಯವಸ್ಥೆಯನ್ನು ಸಶಸ್ತ್ರ ಹೋರಾಟದ ಮೂಲಕ ಬದಲಾಯಿಸಬೇಕೆಂಬ ಉಗ್ರ ಬದ್ಧತೆ ; ಇವರ ದೃಷ್ಟಿಯಲ್ಲಿ ಇಡೀ ವ್ಯವಸ್ಥೆಯೇ ದುಷ್ಟಶಕ್ತಿ; ತಾನು ದುಷ್ಟಶಕ್ತಿಯ ದಮನಕ್ಕಾಗಿ ನಿಂತಿರುವ 'ಶಿಷ್ಟಶಕ್ತಿ'. ಆದರೆ ರಾಜ್ಯಾಧಿಕಾರದ ದೃಷ್ಟಿಯಲ್ಲಿ ಇವರು ದುಷ್ಟಶಕ್ತಿ, ರಾಜ್ಯಾಡಳಿತವು ಕಾನೂನು ಸುವ್ಯವಸ್ಥೆಯನ್ನು ಸಂರಕ್ಷಿಸುವ ಶಿಷ್ಟಶಕ್ತಿ.

ರಾಜ್ಯಾಧಿಕಾರದಲ್ಲಿ ಸಂಹಾರ ಸಂಸ್ಕೃತಿಯ ಶಕ್ತಿ ಅದೆಷ್ಟು ಹೆಚ್ಚಿದೆಯೆಂದರೆ – ಶಸ್ತ್ರಾಸ್ತ್ರಗಳಿಗಾಗಿ ವಿವಿಧ ರಾಷ್ಟ್ರಗಳು ಮಾಡುವ ವೆಚ್ಚದಲ್ಲಿ ಸ್ಪರ್ಧೆಯೇರ್ಪಟ್ಟಿದೆ. ಶಸ್ತ್ರಾಸ್ತ್ರ ಪೈಪೋಟಿಯ ಫಲವಾಗಿ 'ಯುದ್ಧ'ವೆನ್ನುವುದು ಉದ್ಯಮವಾಗುತ್ತಿದೆ. ಸಾಮ್ರಾಜ್ಯಶಾಹಿಯ ಸಾಧನವಾದ 'ಸಂಹಾರ ಸಂಸ್ಕೃತಿ'ಯು ಕಾನೂನು-ಸುವ್ಯವಸ್ಥೆ-ರಕ್ಷಣೆಗಳ ಕಾರಣದಲ್ಲಿ ರಾಷ್ಟ್ರಪ್ರೇಮದ ರೂಪ ತಾಳುತ್ತಿದೆ ; ಅಮೆರಿಕಾದಂಥ ದೇಶಗಳಿಗೆ ನೈತಿಕಶಕ್ತಿಯಾಗುತ್ತಿದೆ ; ದುರ್ಬಲ ದೇಶಗಳಲ್ಲಿ ಆತಂಕ ಹುಟ್ಟಿಸಿ ಅಧೀನವಾಗಿಸಿಕೊಳ್ಳುವ 'ಭಯೋತ್ಪಾದನೆ'ಗೆ ಕುಮ್ಮಕ್ಕು ಕೊಡುತ್ತದೆ. ಯುದ್ಧವನ್ನು ಹೊರತುಪಡಿಸಿದರೂ ಯಾವುದೇ ದೇಶದ ರಾಜ್ಯಾಧಿಕಾರವು ತನ್ನ ಒಳಾಡಳಿತಕ್ಕಾಗಿ ಆಯುಧವನ್ನು ಆದರ್ಶವೆಂದು ಭಾವಿಸಲು, ಬಳಸಲು ಹಿಂಜರಿಯುವುದಿಲ್ಲವೆಂಬುದು ನಮ್ಮ ಕಾಲದ ವಾಸ್ತವವಾಗಿದೆ. ಸರಿಯಾಗಿಯೋ ತಪ್ಪಾಗಿಯೋ ರಾಜ್ಯಾಧಿಕಾರದ ವಿರುದ್ಧ ಶಸ್ತ್ರಾಸ್ತ್ರ ಬಳಸುವವರು ಸದರಿ ಅಧಿಕಾರಶಾಹಿಯ ಆಯುಧಶಕ್ತಿಯನ್ನೇ ಬೊಟ್ಟುಮಾಡಿ ತೋರಿಸುತ್ತಾರೆ. ಆಡಳಿತಗಾರರಲ್ಲಿ ಆಯುಧಗಳಿವೆ. ಆದ್ದರಿಂದ ನಾವೂ ಆಯುಧ ಬಳಸುತ್ತೇವೆಂಬ ತರ್ಕ ಮತ್ತು ತತ್ವದಲ್ಲಿ ಅರಾಜಕತೆ ಸೃಷ್ಟಿಯಾಗುತ್ತದೆ. ಹೀಗಾಗಿ ಆಯುಧ ಮತ್ತು ಅರಾಜಕತೆಗಳು ಎರಡೂ ಕಡೆಯ ಆದರ್ಶವಾಗಿಬಿಡುತ್ತವೆ. ಎಂಥ ವಿಪರ್ಯಾಸ !

ರಾಜಪ್ರಭುತ್ವದಿಂದ ಪ್ರಜಾಪ್ರಭುತ್ವದವರೆಗೆ ಬೆಳೆದುಬಂದ ಆಯುಧಗಳ ಆದರ್ಶೀಕರಣವನ್ನು ಪ್ರಶ್ನೆಗಳ ಮೂಲಕ ಪರಿಶೀಲನೆಗೊಡ್ಡಬೇಕಾಗಿದೆ. ಆಯುಧಗಳೇ ಇಲ್ಲದ ಸಮಾಜವೊಂದು ಇರಲು ಅಸಾಧ್ಯ. ಆದರೆ ಆಯುಧ ಬಳಕೆಯಲ್ಲಿ ಯಾರು ದುಷ್ಟರು, ಯಾರು ಶಿಷ್ಟರು ಎಂಬ ಪ್ರಶ್ನೆಯೇಳುತ್ತದೆ. ಎಲ್ಲರೂ ತಮ್ಮನ್ನು ಶಿಷ್ಟಶಕ್ತಿಗಳೆಂದೇ ಕರೆದುಕೊಳ್ಳುತ್ತಾರೆ. ಎದುರಾಳಿಗಳನ್ನು ದುಷ್ಟಶಕ್ತಿಗಳೆನ್ನುತ್ತಾರೆ ; ಪರಸ್ಪರ ಹಿಂಸೆಯ ಆರೋಪ ಮಾಡುತ್ತಾರೆ. ಯುದ್ಧದಲ್ಲಿ ಹಿಂಸೆಯಿದೆ. ಭಯೋತ್ಪಾದನೆಯಲ್ಲಿ ಹಿಂಸೆಯಿದೆ ; ರಾಜಕೀಯ ಉಗ್ರಗಾಮಿ ಕ್ರಿಯೆಯಲ್ಲೂ ಹಿಂಸೆಯಿದೆ. ಆದರೆ ಈ 'ಹಿಂಸೆ'ಗಳೆಲ್ಲ ಒಂದೇ ರೀತಿಯ ಉದ್ದೇಶವನ್ನೂ ಸ್ವರೂಪವನ್ನೂ ಹೊಂದಿಲ್ಲವೆಂದು ಈಗಾಗಲೇ ಸ್ಪಷ್ಟಪಡಿಸಲಾಗಿದೆ. ಈ 'ಹಿಂಸೆ'ಗಳನ್ನು ತಡೆಗಟ್ಟುವುದು ಹೇಗೆ? ಯುದ್ಧದ ಹಿಂಸೆಯನ್ನು ತಡೆಯಲು ರಾಜ್ಯಾಧಿಕಾರಗಳು ಯುದ್ಧ ವಿರೋಧಿ ನೀತಿಯನ್ನು ನಿಷ್ಠೆಯಿಂದ ಪಾಲಿಸಬೇಕಾಗುತ್ತದೆ. ಇದಕ್ಕೆ ಅಮೆರಿಕಾದಂಥ ರಾಷ್ಟ್ರಗಳು ಮೊದಲು ಮೇಲ್ಪಂಕ್ತಿ ಹಾಕಬೇಕು. ಆದರೆ

ಅಮೆರಿಕವು ಯುದ್ಧಕ್ಕೆ ಮೇಲ್ಪಂಕ್ತಿ ಹಾಕುತ್ತಿದೆ. ಇಷ್ಟಾದರೂ ಎಲ್ಲ ರಾಷ್ಟ್ರಗಳೂ ಒತ್ತಾಯ ಹೇರಬೇಕು. ಯುದ್ಧ ವಿರೋಧಿ ನೀತಿಯನ್ನು ಪಾಲಿಸುತ್ತ ಮಿಲಿಟರಿ ವೆಚ್ಚಗಳನ್ನು ಕಡಿಮೆ ಮಾಡಿಕೊಳ್ಳಬೇಕು. ವಿಶ್ವದಲ್ಲಿ ಒಂದು ನಿಮಿಷಕ್ಕೆ ಸರಾಸರಿ ಸುಮಾರು ಏಳು ಕೋಟಿ ರೂಪಾಯಿಗಳಿಗಿಂತ ಹೆಚ್ಚು ಹಣವನ್ನು ಸೈನಿಕ ವ್ಯವಸ್ಥೆಗಾಗಿ ಖರ್ಚು ಮಾಡಲಾಗುತ್ತದೆ ಎಂಬ ಅಂದಾಜು ಇದೆ. ನಮ್ಮ ದೇಶದ ಉದಾಹರಣೆ ಯನ್ನು ಕೊಡುವುದಾದರೆ, ಈ ವರ್ಷದ ಬಜೆಟ್‌ನಲ್ಲಿ ೬೬,೦೦೦ ಕೋಟಿ ರೂಪಾಯಿಗಳನ್ನು ಮಿಲಿಟರಿ ವೆಚ್ಚಕ್ಕೆ ಮೀಸಲಿಡಲಾಗಿದೆ. ಉದ್ಯೋಗಾವಕಾಶಕ್ಕೆ ೬,೧೦೦ ಕೋಟಿ ರೂ.ಗಳನ್ನು ತೆಗೆದಿಡಲಾಗಿದೆ. ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳಿಗೂ ಕಡಿಮೆ ಹಣ. ಇದು ಯುದ್ಧೋದ್ಯಮದ ಒಂದು ಪರಿಣಾಮ.

ಧಾರ್ಮಿಕ ಭಯೋತ್ಪಾದನೆ ಮತ್ತು ಮೂಲಭೂತ ವಾದವನ್ನು ಮೂಲೋತ್ಪಾಟನೆಮಾಡಲು ಕೋಮು ಸಾಮರಸ್ಯವನ್ನು ದೊಡ್ಡ ಶಕ್ತಿಯಾಗಿ ಬೆಳೆಸಬೇಕು. ಇನ್ನು ರಾಜಕೀಯ ಉಗ್ರಗಾಮಿತನದ ಪ್ರಶ್ನೆ. ಇಂತಹ ಉಗ್ರಗಾಮೀ ಕಾರ್ಯಾಚರಣೆಗೆ ಮೂಲಕಾರಣವಾದ ಸಾಮಾಜಿಕ-ಆರ್ಥಿಕ ಸಮಸ್ಯೆಗಳ ಪರಿಹಾರ ಮುಖ್ಯವಾಗಬೇಕು. ಯಾಕೆಂದರೆ ನಮ್ಮ ಸಾಮಾಜಿಕ-ಆರ್ಥಿಕ ಅಸಮಾನತೆಯೇ ಬಹುದೊಡ್ಡ ಹಿಂಸೆಯಾಗಿದೆ. ಈ ಅಸಮಾನತೆಯ ಹಿಂಸೆಯನ್ನು ಹೋಗಲಾಡಿಸುವ ಮೂಲಕ ಎಲ್ಲ ರೀತಿಯ ಉಗ್ರಗಾಮಿತನಕ್ಕೆ ಉತ್ತರ ಹುಡುಕಬೇಕು. ಆಗ ಜನ ಸಮುದಾಯವು ಎಲ್ಲ ರೀತಿಯ ಹಿಂಸೆಗೆ ವಿರುದ್ಧವಾಗಿ ನಿಲ್ಲುತ್ತದೆ ; ನಿಲ್ಲಬೇಕಾಗುತ್ತದೆ.

ರಾಜ್ಯಾಧಿಕಾರವನ್ನೂ ಒಳಗೊಂಡಂತೆ ಯಾರಿಗೂ ಆಯುಧ – ಆದ್ಯತೆಯಾಗಬಾರದು; ಆದರ್ಶವಾಗ ಬಾರದು. ಆಯುಧಗಳು ಆದರ್ಶವಾಗದ, ಆದ್ಯತೆ ಪಡೆಯದ, ಸಮಾನತೆಯ ಸಮಾಜ ನಿರ್ಮಾಣವೇ ನಮ್ಮ ಆದ್ಯತೆ ಮತ್ತು ಆದರ್ಶವಾಗಬೇಕು. ಆದ್ದರಿಂದ ನಾವೀಗ ಮಹಿಷಾಸುರ, ರಾವಣ, ದುರ್ಯೋಧನರ ಸಂಹಾರದ ನೆನಪುಗಳಲ್ಲಿ ಸಂಭ್ರಮಿಸುವುದು ಅರ್ಥಪೂರ್ಣವಲ್ಲ. ಬಡವ - ಬಲ್ಲಿದ, ಸ್ತ್ರೀ-ಪುರುಷ, ಮೇಲುಜಾತಿ-ಕೀಳು ಜಾತಿ – ಇವೇ ಮುಂತಾದ ಅಂತರಗಳನ್ನು ಅಳಿಸಿ ಸಮಾನತೆಯ ಸ್ವಾಭಿಮಾನದ ಸಮಾಜ ನಿರ್ಮಾಣದ ಕ್ರಿಯೆಯಲ್ಲಿ ಸಂಭ್ರಮಿಸಬೇಕು. ದಸರಾ ಹಬ್ಬದೊಳಗಿನ ವಿಜಯೋತ್ಸವದ ನೆನಪುಗಳು ಸಮಕಾಲೀನ ಸಂದರ್ಭ ದಲ್ಲಿ ರೂಪಾಂತರ ಹೊಂದಿ ಹೊಸ ವಾಸ್ತವಗಳನ್ನು ಕಂಡುಕೊಳ್ಳಬೇಕು. ಇಂದಿನ ದುಷ್ಟಶಕ್ತಿಗಳಾದ ಜಾತಿ ಭೇದ, ವರ್ಗಭೇದ, ಲಿಂಗಭೇದವೇ ಮುಂತಾದ (ಅ)ನೀತಿ ಗಳನ್ನು ಅಳಿಸಿಹಾಕಲು ಸಂಕಲ್ಪಿಸಿ ಸಮಾನತೆಯಲ್ಲಿ ಶಾಂತಿ ಸಮಾಜವನ್ನು ಕಾಣಬೇಕು.

ಕಡೆಯದಾಗಿ, ಒಂದು ಸಲಹೆಯೊಂದಿಗೆ ನನ್ನ ಭಾಷಣ ವನ್ನು ಮುಗಿಸಬಯಸುತ್ತೇನೆ :

ಮೈಸೂರು ಸಂಸ್ಥಾನವನ್ನು 'ಮಾದರಿ ಮೈಸೂರು' ಎಂಬ ಖ್ಯಾತಿಗೆ ಕೊಂಡೊಯ್ದ ಕೀರ್ತಿ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲಬೇಕು. ದಾರ್ಶನಿಕ ವ್ಯಕ್ತಿತ್ವದ, ಸಾಮಾಜಿಕ ಮುನ್ನೋಟದ ನಾಲ್ವಡಿ ಕೃಷ್ಣರಾಜ ಒಡೆಯರು ಶಿಕ್ಷಣ, ಸಂಸ್ಕೃತಿ, ಆಡಳಿತ, ಅಭಿವೃದ್ಧಿ – ಇವೇ ಮುಂತಾದ ಕ್ಷೇತ್ರಗಳಲ್ಲಿ ಅಸಾಧಾರಣ ಪ್ರಗತಿಗೆ ಕಾರಣರಾದರು.

೧೯೧೨ರಲ್ಲಿ ವಯಸ್ಕರಿಗಾಗಿ ೭೦೦೦ ರಾತ್ರಿ ಶಾಲೆಗಳ ಆರಂಭಕ್ಕೆ ಒತ್ತಾಸೆಯಾದರು. ರಾಜ್ಯದ ಎಲ್ಲ ಜನಾಂಗ ಗಳಿಗೂ ಶಿಕ್ಷಣ ಲಭ್ಯವಾಗಬೇಕೆಂದು ಬಯಸಿದರು. ೧೯೧೩ರ ಏಪ್ರಿಲ್ ೧೧ರಂದು ಉರ್ದು ಶಾಲೆಯೊಂದರ ಆರಂಭೋತ್ಸವದಲ್ಲಿ ಎಲ್ಲ ಜನಾಂಗದವರೂ ಧರ್ಮೀಯರೂ ಶಿಕ್ಷಣ ಪಡೆಯುವಂತಾಗಬೇಕೆಂದು ಹೇಳಿದ್ದಲ್ಲದೆ 'ವಿದ್ಯೆಯು ಯಾರ ಗುತ್ತಿಗೆಯೂ ಅಲ್ಲ' ಎಂದು ಘೋಷಿಸಿದರು. ಹಿಂದುಳಿದ ವರ್ಗಗಳ ಮೀಸಲಾತಿಗೆ ನಾಂದಿ ಹಾಡಿದರು. ೧೯೨೨ರ ಏಪ್ರಿಲ್ ೧೪ರಂದು 'ಈ ರಾಜ್ಯ ಯಾವುದೇ ಕೋಮಿಗೆ ಸೇರಿದ್ದಲ್ಲ. ಹಿಂದೂ, ಕ್ರೈಸ್ತ, ಮುಸಲ್ಮಾನರು ಪರಸ್ಪರ ಸೌಹಾರ್ದತೆ ಕಾಯ್ದುಕೊಂಡು ಬದುಕಬೇಕು' ಎಂದು ಕೋಮು ಸಾಮರಸ್ಯದ ಪ್ರತಿಪಾದನೆ ಮಾಡಿದರು. ೧೯೩೧ರಲ್ಲಿ ಮಹಿಳೆಯರ ಬಗೆಗಿನ ತಾರತಮ್ಯ ನಿವಾರಣೆಗಾಗಿ ಕಾಯಿದೆಗೆ ತಿದ್ದುಪಡಿ ತರಲು ಸಮಿತಿಯೊಂದನ್ನು ನೇಮಿಸಿದರು. ಕೃಷ್ಣರಾಜಸಾಗರ ನಿರ್ಮಾಣ, ಮೈಸೂರು ವಿಶ್ವವಿದ್ಯಾಲಯ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಂಥ ಅನೇಕ ಕೆಲಸಗಳ ಹಿಂದಿನ ಪ್ರೇರಕ ಶಕ್ತಿಯಾಗಿದ್ದರು. ಆದ್ದರಿಂದ ಸಾಮಾಜಿಕ ಪರಿವರ್ತನೆಯ ಕ್ರಿಯಾಶಕ್ತಿಯಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ ಹೆಸರಿನಲ್ಲಿ ಒಂದು ರಾಷ್ಟ್ರೀಯ ಪ್ರಶಸ್ತಿಯನ್ನು ಸ್ಥಾಪಿಸಿ, ಅದನ್ನು ಆಯ್ಕೆ ಮಾಡಲ್ಪಟ್ಟ ಒಬ್ಬರಿಗೆ ದಸರಾ ಉತ್ಸವದ ಸಂದರ್ಭದಲ್ಲಿ ನೀಡುವಂತಾಗಬೇಕು. ಶಿಕ್ಷಣ, ಸಂಸ್ಕೃತಿ, ಆಡಳಿತ, ಅಭಿವೃದ್ಧಿ – ಈ ಕ್ಷೇತ್ರಗಳಲ್ಲಿ ಸಾಮಾಜಿಕ ಕಾಳಜಿ ಯನ್ನು ಕೇಂದ್ರ ಪ್ರಜ್ಞೆಯಾಗಿಟ್ಟುಕೊಂಡು ದುಡಿಯುತ್ತಿರುವ ಒಬ್ಬರನ್ನು ಈ ರಾಷ್ಟ್ರೀಯ ಪ್ರಶಸ್ತಿಗೆ ಆಯ್ಕೆ ಮಾಡಬೇಕು. 'ನಾಲ್ವಡಿ ಕೃಷ್ಣರಾಜ ಪ್ರಶಸ್ತಿ' ಎಂದು ಕರೆಯಬಹುದಾದ ಈ ಮನ್ನಣೆಯ ಮೂಲಕ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಹೆಸರು ರಾಷ್ಟ್ರವ್ಯಾಪಿ ನೆನಪಿಗೆ ಕಾರಣ ವಾಗುವುದಲ್ಲದೆ ಸಾಮಾಜಿಕ ಪರಿವರ್ತನೆಯ ಆಶಯ ಗಳಿಗೆ ಚಾಲನೆ ಒದಗಿಸುವ ಸಂಕೇತವಾಗುತ್ತದೆ ; ದಸರಾ ಉತ್ಸವಕ್ಕೆ ಅರ್ಥಪೂರ್ಣ ಹಾಗೂ ಸಾರ್ಥಕ ಸೇರ್ಪಡೆಯಾಗುತ್ತದೆ.

ದಸರಾ ನಾಡಹಬ್ಬ ಯಶಸ್ವಿಯಾಗಲಿ; ಅರ್ಥಪೂರ್ಣವಾಗಿ ಬೆಳೆಯುತ್ತ ಹೋಗಲಿ.

ಎಲ್ಲರಿಗೂ ನಮಸ್ಕಾರ.




ಪ್ರೊ॥ ಬರಗೂರು ರಾಮಚಂದ್ರಪ್ಪ
''ಸಂವೇದನೆ'', ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮುಖ್ಯರಸ್ತೆ
ಜೆ. ಪಿ. ನಗರ ೨ನೇ ಹಂತ, ಬೆಂಗಳೂರು-೫೬೦ ೦೭೮

# ಕನ್ನಡದೊಡನೆ ಇಂಗ್ಲಿಷೂ ಇರಲಿ

ಮೂರ್ನಾಡು ರಾಮಸ್ವಾಮಿ

'ಕನ್ನಡ ಮಾಧ್ಯಮದಲ್ಲಿ ಇಂಗ್ಲಿಷ್ ಕಲಿಕೆ ಬೇಡ' ಎಂಬ ಧ್ವನಿ ಇದ್ದಿದ್ದರೆ ಅದಕ್ಕೊಂದು ಅರ್ಥವಿರುತ್ತಿತ್ತು. ಆದರೆ ಒಂದನೇ ತರಗತಿಯಿಂದ ಇಂಗ್ಲಿಷ್ ಬೇಡ, ಮೂರನೇ ತರಗತಿಯಿಂದ ಇರಲಿ ಎಂಬ ಈ ಮಧ್ಯೆಯ ಎರಡು ತರಗತಿಯ ಕೂದಲೆಳೆಯ ವ್ಯತ್ಯಾಸದಿಂದ ಆಗುವ 'ಕನ್ನಡದ್ರೋಹ' ಯಾವ ಸ್ವರೂಪದ್ದು ಎಂಬುದು ಅರ್ಥವಾಗದ ವಿಷಯ!

ಇಂಡಿಯಾದ ನೆಲದ ಮೇಲೆ ಸಮಾನತೆಯ ಚೆಲುವು ಕ್ರಿಯಾರೂಪದಲ್ಲಿ ಅರಳೇ ಇಲ್ಲವೇನೊ. ಅರಳಿಸುವ ದಾರಿ ತೋರಿಸಿಕೊಟ್ಟ ಬುದ್ಧನ ಮಾನವೀಯ ಚಿಂತನೆಗಳನ್ನು ಇಲ್ಲಿಂದ ಓಡಿಸಿದ ಹೆಗ್ಗಳಿಕೆ ಹಿಂದೂ ಧರ್ಮದ್ದು. ಅಸ್ಪೃಶ್ಯತೆ, ಅಸಮಾನತೆ, ಜಾತಿಪದ್ಧತಿ, ಶೋಷಣೆ ಈ ನೆಲದ ಮನಸ್ಸುಗಳ ಮೂಲಸಾರವೆಂಬಂತೆ ಬಿಂಬಿತವಾಗಿವೆ. ಈ ಬಿಂಬದ ಕ್ರೂರತೆ, ಶಿಕ್ಷಣಕ್ಷೇತ್ರದಲ್ಲೂ ಇಣುಕಿ, ವಿದ್ಯೆ ಎಂಬ ಶಿಕ್ಷಣವನ್ನು ಜಾತಿಯನ್ನು ಆಧರಿಸಿ ನೀಡುವ ಹಾಗೂ ನಿರಾಕರಿಸುವ 'ಧಾರ್ಮಿಕ ಅಧಿಕಾರ'ವನ್ನು ವ್ಯವಸ್ಥೆ ತನ್ನಲ್ಲಿ ಒಟ್ಟುಗೂಡಿಸಿಕೊಂಡಿದೆ.

ಆ ಸುಳಿಯಲ್ಲಿ ಅಂದಿನ ಏಕಲವ್ಯ, ಶಂಬೂಕ, ಚಾರ್ವಾಕ, ಕರ್ಣರಂಥವರನ್ನೂ, ಹಾಗೂ ಇಂದಿನ ಬಿ. ಆರ್. ಅಂಬೇಡ್ಕರ್‌ರಂಥ ಪ್ರತಿಭಾನ್ವಿತ ಚೇತನವನ್ನು ಹಾಗೂ ಅವರ ಜಾತಿಗೆ ಸೇರಿದ ಹಲವಾರು ಕೋಟಿ ಅಸ್ಪೃಶ್ಯರನ್ನು ಕೀಳಾಗಿ ಕಂಡು, ಅಂದಿನ ಸಂಸ್ಕೃತ ಭಾಷೆಯಿಂದ ಹಿಡಿದು ಇಂದಿನ ಇಂಗ್ಲಿಷ್‌ತನಕ ಶಿಕ್ಷಣಕ್ಷೇತ್ರವನ್ನು ನೋಡಲು, ಮೂಸಲು, ಕೇಳಲು, ಮುಟ್ಟಲು ಬಿಡದಂತೆ ತುಳಿಯುವಂತಹ ಕ್ರೂರತ್ವವನ್ನು ನಮ್ಮ ಶೈಕ್ಷಣಿಕ ವ್ಯವಸ್ಥೆಯ ಹಲವು ರೂಪಾಂತರಗಳೊಂದಿಗೆ ತನ್ನ 'ಅಲಿಖಿತ ಮಾಧ್ಯಮ'ವನ್ನಾಗಿ ಉಳಿಸಿಕೊಂಡಿದ್ದೇವೆ.

ಇಂದು ಆಗಾಗ್ಗೆ ಇಂಗ್ಲಿಷ್ ಕಲಿಕೆ ಕನ್ನಡ ವಿರೋಧಿತನ ಎಂಬ ಅಸಂಬದ್ಧವಾದ ಎದುರಾಗುತ್ತಲೇ ಇದೆ. ಪರ ವಿರೋಧ ಚರ್ಚೆ ಜರುಗುತ್ತಲೇ ಇದೆ.

ಕನ್ನಡ ಮಾಧ್ಯಮ ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯ ಕಲಿಕೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳ ತಾಯಿ-ತಂದೆಯರ, ಪೋಷಕರ ಧ್ವನಿಗೆ ಸ್ಪಂದಿಸಬೇಕಾಗಿದೆ. ಒಂದನೇ ತರಗತಿಯಿಂದ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಅಕ್ಷರಗಳ, ಪದಗಳ, ಕಾಗುಣಿತಗಳ ಪರಿಚಯ ಮಾಡಿಸುವುದರಿಂದ ಒಮ್ಮೆಗೆ ಮೂರನೇ ಅಥವಾ ಐದನೇ ತರಗತಿಯಿಂದ ೫ ಕೆ.ಜಿ. ಭಾರ ಬೀಳುವ (ಇಂಗ್ಲಿಷ್) ತೂಕದಿಂದ ಹೆದರಿ ದಿಗ್ಭ್ರಾಂತಗೊಳ್ಳುವುದು ತಪ್ಪಿ, ಇಂಗ್ಲಿಷ್ ಕಲಿಕೆ ಸರಾಗವಾಗುವ ಸಾಧ್ಯತೆ ಇದೆ. 'ಕನ್ನಡ ಮಾಧ್ಯಮದಲ್ಲಿ ಇಂಗ್ಲಿಷ್ ಕಲಿಕೆ ಬೇಡ' ಎಂಬ ಧ್ವನಿ ಇದ್ದಿದ್ದರೆ ಅದಕ್ಕೊಂದು ಅರ್ಥವಿರುತ್ತಿತ್ತು. ಆದರೆ ಒಂದನೇ ತರಗತಿಯಿಂದ ಇಂಗ್ಲಿಷ್ ಬೇಡ, ಮೂರನೇ ತರಗತಿಯಿಂದ ಇರಲಿ ಎಂಬ ಈ ಮಧ್ಯೆಯ ಎರಡು ತರಗತಿಯ ಕೂದಲೆಳೆಯ ವ್ಯತ್ಯಾಸದಿಂದ ಆಗುವ 'ಕನ್ನಡದ್ರೋಹ' ಯಾವ ಸ್ವರೂಪದ್ದು ಎಂಬುದು ಅರ್ಥವಾಗದ ವಿಷಯ!

ಶತಶತಮಾನಗಳಿಂದ ಶೂದ್ರರಿಗೆ- ಅಸ್ಪೃಶ್ಯರಿಗೆ ವಿದ್ಯೆ ನೀಡದೆ ಶಾಲೆಯ ಅಂಗಳ ತುಳಿಯದಂತೆ ಶೋಷಿಸುತ್ತಿದ್ದ ಪುರೋಹಿತಶಾಹಿ ವರ್ಗದ ಕೈಯಲ್ಲಿ ಇಂದು ಇಂಗ್ಲಿಷ್ ಇದೆ. ಆ ವರ್ಗವು ಅಂದು ಸಂಸ್ಕೃತ ಭಾಷೆಯನ್ನು ಉಳಿಸಿಕೊಂಡಂತೆ ಇಂದು ಇಂಗ್ಲಿಷ್ ಭಾಷೆಯನ್ನು ಪಳಗಿಸಿಕೊಂಡು, ತಮ್ಮ ಹಿತಾಸಕ್ತಿಗೆ ಅಡ್ಡಬಾರದಂತೆ ಸರ್ಕಾರವನ್ನು ನಿಯಂತ್ರಿಸುವಂಥ ಐ.ಎ.ಎಸ್., ಕೆ.ಎ.ಎಸ್., ಐ.ಪಿ.ಎಸ್. ವರ್ಗವಾಗಿ ರೂಪಾಂತರಗೊಂಡಿದೆ. ಇಂಗ್ಲಿಷರೇ ನಾಚುವಂತೆ ಸರ್ಕಾರ ಮತ್ತು ಅಧಿಕಾರಶಾಹಿ ವರ್ಗ ಇಂದಿಗೂ ಗ್ರಾಮೀಣ ಪ್ರದೇಶದ ದಲಿತರನ್ನು ಶೂದ್ರರನ್ನು ರೈತರನ್ನು ನಗರ ವಲಯದ ಬಡ ಮಧ್ಯಮ ವರ್ಗದವರನ್ನು ಇಂಗ್ಲಿಷಿನಿಂದ ತುಳಿಯುತ್ತಿದೆ. ಈ ತುಳಿತದಿಂದ ತಪ್ಪಿಸಿಕೊಳ್ಳುವ ಉಪಾಯವಾಗಿ ಶೋಷಣೆಯ ವಿರುದ್ಧ ಧ್ವನಿಯೆತ್ತದಂತಿದ್ದ ಜನಸಮೂಹ ಇಂಗ್ಲಿಷ್ ವರ್ಗದೆದುರು ಕೀಳರಿಮೆಯಿಂದ ಕುಗ್ಗಿ ನರಳುತ್ತಿದ್ದರೂ, ಅವರ ಒಡಲಾಳದ ಜ್ಞಾನಕ್ಕೆ ಸ್ಫುರಿಸಿದ್ದು ಆ ಭಾಷೆಯನ್ನು ನಾವೂ ಒಲಿಸಿಕೊಳ್ಳಬೇಕು ಎಂಬುದು. ಶೋಷಣೆಯಿಂದ ಬಿಡುಗಡೆ ಹೊಂದಲು ಇಂಗ್ಲಿಷ್ ಭಾಷೆಯೂ ನಮಗೆ ಹೊಸದಾರಿ ತೋರಬಲ್ಲುದು ಎಂದು ಸ್ವಾತಂತ್ರ್ಯ ಪೂರ್ವದಲ್ಲೇ ಬಿ.ಆರ್. ಅಂಬೇಡ್ಕರ್ ನುಡಿದಿದ್ದರು.

ಈ ಅನಿಸಿಕೆಯ ಫಲವಾಗಿ ಸಾಲ ಮಾಡಿಯಾದರೂ ಕೆಳವರ್ಗದವರು ಇಂಗ್ಲಿಷ್ ಮಾಧ್ಯಮದ ಶಾಲೆಗೆ ತಮ್ಮ ಮಕ್ಕಳನ್ನು ಸೇರಿಸತೊಡಗಿದರು. ಇದರ ಪರಿಣಾಮ ಕಳೆದ ೨೦-೩೦ ವರ್ಷಗಳಲ್ಲಿ ಅದೆಷ್ಟು ತೀವ್ರವಾಗಿದೆ ಎಂದರೆ ಪ್ರತಿ ಹಳ್ಳಿ ಹಳ್ಳಿಗಳಲ್ಲೂ ನಗರ ವಲಯದ ಸ್ಲಂ ಪ್ರದೇಶಗಳಲ್ಲೂ ಕೆಳಜಾತಿಯ ಹಿಂದುಳಿದ, ಅಲ್ಪಸಂಖ್ಯಾತ, ಕೆಳಮಧ್ಯಮ ವರ್ಗದ ಕೇರಿಗಳಲ್ಲಿ ಬಡಾವಣೆಗಳಲ್ಲಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ಹುಟ್ಟಿಕೊಂಡವು.

ನಗರವಲಯದ ಪ್ರತಿಷ್ಠಿತ ಜಾತಿ, ವರ್ಗಕ್ಕೆ ಮಧ್ಯಮ ವರ್ಗಕ್ಕೆ ಮೀಸಲಾಗಿದ್ದ ಖಾಸಗಿ ಕಾನ್ವೆಂಟ್ ಸ್ಕೂಲ್‌ಗಳು ಇವುಗಳ ಪುಟ್ಟ ಮಾಡೆಲ್ ಎಂಬಂತೆ ಹಳ್ಳಿಗಳಲ್ಲೂ ಕಾಣಿಸಿಕೊಂಡವು. ಇದರಿಂದಾಗಿ ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸಿತು. ಹಲವೆಡೆ ವಿದ್ಯಾರ್ಥಿಗಳಿಲ್ಲದೆ ಶಾಲೆಗಳನ್ನು ಮುಚ್ಚಬೇಕಾದ ಸ್ಥಿತಿ ಬಂದೊದಗಿದೆ. ಇದರಿಂದ ಪಾರಾಗುವುದು ಹೇಗೆ ?

ಕರ್ನಾಟಕದಲ್ಲಿಂದು ಒಟ್ಟು ೨೩,೨೪೦ರಷ್ಟು ಕನ್ನಡ ಕಿರಿಯ ಪ್ರಾಥಮಿಕ ಶಾಲೆಗಳಿವೆ. ಇವುಗಳಲ್ಲಿ ೨೮೬ ಸರ್ಕಾರಿ ಅನುದಾನ ಪಡೆದ ಶಾಲೆಗಳು ೧೫೦೦ ಅನುದಾನ ಪಡೆಯದ ಖಾಸಗಿ ಶಾಲೆಗಳಿವೆ. ಈ ಮಧ್ಯೆ ಕನ್ನಡ ಮಾಧ್ಯಮ ಶಾಲೆಗಳನ್ನು ನಡೆಸಲು ಅನುಮತಿ ಪಡೆದವರು ಒಳಗೊಳಗೆ ಇಂಗ್ಲಿಷ್ ಮಾಧ್ಯಮ ಶಾಲೆ ಹಾಗೂ ಕೇಂದ್ರೀಯ ಪಠ್ಯಕ್ರಮದ ಶಾಲೆ ನಡೆಸುತ್ತಾರೆ. ಇದು ಸರ್ಕಾರಕ್ಕೂ ಗೊತ್ತಿರುವ ಬಹಿರಂಗ ಗುಟ್ಟು.

ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, ವಿದ್ಯಾರ್ಥಿಗಳ ತಂದೆ - ತಾಯಂದಿರ ಬೇಡಿಕೆಯೂ ಇಂಗ್ಲಿಷ್ ಮಾಧ್ಯಮವಾಗಿರುವಾಗ ಕನ್ನಡ ಮಾಧ್ಯಮ ಶಾಲೆಗಳಿಗೆ ವಿದ್ಯಾರ್ಥಿಗಳ ಕೊರತೆಯಿಂದಾಗಿ ಖಾಸಗಿಯವರು ತೆರೆದ ಶಿಕ್ಷಣದಂಗಡಿಗಳನ್ನು ಲಾಭ ತರುವ ಇಂಗ್ಲಿಷ್ ವಿದ್ಯಾಲಕ್ಷ್ಮೀ ಅಂಗಡಿಗಳನ್ನಾಗಿ ಪರಿವರ್ತಿಸಿಕೊಂಡುಬಿಡುತ್ತಾರೆ. ಇಂತಹ ಪರಿವರ್ತನೆಗೆ ಯಾರ ಯಾರ ತಪ್ಪು ಎಷ್ಟೆಷ್ಟು ಎಂದು ಹೇಗೆ ನಿರ್ಧರಿಸುವುದು ? ಇಂಗ್ಲಿಷರು ಭಾರತಕ್ಕೆ ಬಂದದ್ದೇ ತಪ್ಪು ಎನ್ನುವುದಾ ?

ಕಾನ್ವೆಂಟ್ ಮತ್ತು ಇಂಗ್ಲಿಷ್ ಶಾಲೆಗಳಂತೂ ಸರ್ಕಾರಿ ಕನ್ನಡ ಶಾಲೆಗಳಿಗಿಂತ ವಿಭಿನ್ನರೀತಿಯಲ್ಲಿ ವಿದ್ಯಾರ್ಥಿಗಳನ್ನು ತನ್ನತ್ತ ಮಾಯಾವಿಯಂತೆ ಸೆಳೆಯುತ್ತಿವೆ. ಅಲ್ಲಿಯ ಟೈ- ಬೂಟ್, ಸಮವಸ್ತ್ರ ಹಾಚುಪಾಚು ಇಂಗ್ಲಿಷ್ ಇತ್ಯಾದಿಗಳಿಗೆ ಮಾರುಹೋದವರು ಜಾತಿಭೇದ, ವರ್ಗಭೇದವಿಲ್ಲದೆ ತಮ್ಮ ತಮ್ಮ ಜೋಬಿನ ತೂಕಕ್ಕೆ ಒಗ್ಗುವ ಇಂಗ್ಲಿಷ್ ಮೀಡಿಯಂ ಶಾಲೆಗಳತ್ತ ಚಲಿಸುತ್ತಿದ್ದಾರೆ. ಈ ಚಲನೆಯಲ್ಲಿ ಎದ್ದು ಕಾಣುವ ಅಂಶವೆಂದರೆ, ಇಂಗ್ಲಿಷ್ ಕಲಿತರೆ ಉದ್ಯೋಗ ಗ್ಯಾರಂಟಿ ಎಂಬ ವಿಶ್ವಾಸ!

ಸ್ವಾತಂತ್ರ್ಯಪೂರ್ವದ ಮತ್ತು ಆ ನಂತರದ ೫೭ ವರ್ಷಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಕನ್ನಡ ಭಾಷೆಯನ್ನು ಮೀರಿ, ಇಂಗ್ಲಿಷ್‌ನ ಪ್ರಭಾವ ಅದೆಷ್ಟು ದಟ್ಟವಾಗಿದೆಯೆಂದರೆ, ರಾಜಕಾರಣ, ಅಧಿಕಾರ, ಉದ್ಯೋಗ, ಅಮೆರಿಕಾ, ಇಂಗ್ಲೆಂಡ್, ಪ್ರತಿಷ್ಠೆ, ಪ್ರಭಾವ, ಟೈ ಬೂಟಿನ ಕಂಟೋನ್ಮೆಂಟ್ ಸಂಸ್ಕೃತಿ ಹತ್ತಾರು ಸ್ವರೂಪಗಳಲ್ಲಿ ಬಿಚ್ಚಿಕೊಂಡಿದೆ. ಅದರ ಅಂತರಂಗದ ಸತ್ಯ ಶ್ರೇಣೀಕೃತ ಕಿಂಡಿಗಳಿಂದ ಹೊರಗೆ ಕಾಣಿಸಿಕೊಂಡಿದೆ.

ಆಂಗ್ಲ ಮಾಧ್ಯಮದ ಮಕ್ಕಳು ಮೇಲರಿಮೆಯ ಮೇಲ್ಜಾತಿಯವರಾಗಿ, ಕನ್ನಡ ಮಾಧ್ಯಮದ ಕಂದಮ್ಮಂದಿರು ಕೀಳರಿಮೆಯ ಕೆಳಜಾತಿಯವರಂತೆ ಸೀಳಿಹೋಗಿದ್ದಾರೆ. ಈ ವ್ಯತ್ಯಾಸವನ್ನು ಗ್ರಹಿಸಲು ಕನ್ನಡ ಮತ್ತು ಇಂಗ್ಲಿಷ್ ಮಾಧ್ಯಮ ಎರಡೂ ಇರುವ ಖಾಸಗಿ ಶಾಲೆಯೊಂದಕ್ಕೆ ಭೇಟಿ ನೀಡಿ, ಅಥವಾ ಅಲ್ಲಿನ ಕನ್ನಡ ವಿದ್ಯಾರ್ಥಿಗಳನ್ನು ಭೇಟಿ ಮಾಡಿ. ಕನ್ನಡ ಭಾಷಿಕ ಶಿಕ್ಷಕ ವೃಂದದವರೇ ಕನ್ನಡ ಮಾಧ್ಯಮದ ಮಕ್ಕಳನ್ನು ನಿಕೃಷ್ಟವಾಗಿ ಕಾಣುತ್ತಾರೆ. ಕನ್ನಡ ಮಾಧ್ಯಮದ ಶಿಕ್ಷಕ(ಕಿ)ರ ಮಕ್ಕಳು ಸಾಮಾನ್ಯವಾಗಿ ಓದುವುದು ಇಂಗ್ಲಿಷ್ ಮೀಡಿಯಂನಲ್ಲಿ! ಇದು ವಿಷಾದನೀಯ ಸಂಗತಿ.

ಕ್ರೈಸ್ತರ ಕನ್ನಡ ಶಾಲೆಗಳನ್ನು ಬಿಟ್ಟರೆ ಕನ್ನಡತ್ವದ ಪರ ಕಳಕಳಿ ವ್ಯಕ್ತಪಡಿಸುವ ಅದೆಷ್ಟು ಮಂದಿ ಅದೆಷ್ಟು ಸಂಸ್ಥೆಗಳು ಕನ್ನಡ ಮಾಧ್ಯಮ ಶಾಲೆಗಳನ್ನು ಸ್ಥಾಪಿಸಲು ಮುಂದೆ ಬಂದಿದ್ದಾರೆಂಬುದನ್ನು ಗಮನಿಸಿದಾಗ ಅವರ/ಅವುಗಳ ಸಂಖ್ಯೆ ನಿರಾಶಾದಾಯಕವಾಗಿದೆ. ಕಡೆಪಕ್ಷ ಸರ್ಕಾರಿ ಶಾಲೆಗಳಲ್ಲಿನ ಕನ್ನಡ ಮಾಧ್ಯಮದ ದುಃಸ್ಥಿತಿಯತ್ತ, ಅಲ್ಲಿನ ಕೆಳಮಟ್ಟದ ಶಿಸ್ತು, ಸ್ವಚ್ಛತೆ, ಪಠ್ಯಕ್ರಮದ ಗುಣಮಟ್ಟಗಳತ್ತ ಎಲ್ಲರೂ ಕ್ರಿಯಾಶೀಲತೆಯಿಂದ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದ್ದಲ್ಲಿ ಸ್ವಲ್ಪಮಟ್ಟದ ಪ್ರಗತಿ ಕಾಣಿಸುತ್ತಿತ್ತೇನೋ.

ಬಹಳಷ್ಟು ವರ್ಷಗಳ ಹಿಂದೆ ಸಾಹಿತಿ ಪೂರ್ಣಚಂದ್ರ ತೇಜಸ್ವಿಯವರು ಪತ್ರಿಕೆಯಲ್ಲಿ ಬರೆದಿದ್ದರು, ''ಮೈಸೂರು ಮಾನಸ ಗಂಗೋತ್ರಿ ಶಾಲೆ ಇಲ್ಲದಿದ್ದರೆ ನನ್ನ ಮಕ್ಕಳನ್ನು ಕನ್ನಡ ಮಾಧ್ಯಮದಲ್ಲಿ ಓದಿಸಲು ಖಂಡಿತ ಸಾಧ್ಯವಾಗುತ್ತಿರಲಿಲ್ಲ'' ಎಂದು. ಹಾಗೆಯೇ ಹಾ.ಮಾ. ನಾಯಕರವರು ''ಸರ್ಕಾರದ ಶಾಲೆಗಳ ಸ್ಥಿತಿಗಳಂತೂ ಭಯಂಕರವಾಗಿದೆ; ತಮ್ಮ ಮಕ್ಕಳನ್ನು ಪ್ರೀತಿಸುವ ಯಾರೇ ಆದರೂ ಅವರನ್ನು ಈ ಶಾಲೆಗಳಿಗೆ ಕಳಿಸಲಾಗದಷ್ಟು ಕೆಟ್ಟುಹೋಗಿವೆ. ಖಾಸಗಿಯವರಿಗೆ ಕನ್ನಡ ಬೇಡ; ಸರ್ಕಾರಕ್ಕೆ ಒಳ್ಳೆಯ ಶಾಲೆಗಳನ್ನು ನಡೆಸುವ ಶಕ್ತಿಯಿಲ್ಲ. ಕನ್ನಡ ಉಳಿಯಬೇಕು ಹೇಗೆ ?'' ಎಂದು ನೋವಿನಿಂದ ಪ್ರಶ್ನಿಸಿದ್ದರು.

ಜನತಾ ಪಕ್ಷ ಅಧಿಕಾರದಲ್ಲಿದ್ದಾಗ ೭೨ ಮಂದಿ ಶಾಸಕರು ನಮ್ಮ ಹಳ್ಳಿಗಳಲ್ಲೂ ಇಂಗ್ಲಿಷ್ ಮಾಧ್ಯಮ ಶಾಲೆಯನ್ನು ತೆರೆಯಲು ಅವಕಾಶ ಕೊಡಿ ಎಂದು ಸರ್ಕಾರವನ್ನು ಕೇಳಿಕೊಂಡಿದ್ದರು. ಹಾಗೆ ೨೦೦೨ರಲ್ಲಿ ಕಾಂಗ್ರೆ ಅಧಿಕಾರದಲ್ಲಿದ್ದಾಗ ಸರ್ಕಾರ ರಾಜ್ಯದಲ್ಲಿ ೩೦೦ ಆಂಗ್ಲ ಮಾಧ್ಯಮ ಶಾಲೆ ತೆರೆಯಲು ಅನುಮತಿ ನೀಡಿತ್ತು. ಈ ಎರಡೂ ಸಂದರ್ಭಗಳಲ್ಲಿ ಸಾಹಿತಿಗಳು ಕನ್ನಡ ಪರ ಸಂಘಟನೆಗಳು ಸರ್ಕಾರದ ನಿರ್ಣಯವನ್ನು ಶಾಸಕರ ಬೇಡಿಕೆಯನ್ನು ಖಂಡಿಸಿದ್ದವು.

ಆಡಳಿತದಲ್ಲಿ, ಶಿಕ್ಷಣದಲ್ಲಿ, ಕಛೇರಿಗಳಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ, ಕೇಂದ್ರೀಯ ಸರ್ಕಾರಿ ಕಛೇರಿಗಳಲ್ಲಿ ಸಂವಹನದಲ್ಲಿ, ವಿಧಾನಸೌಧದಿಂದ ಹೊರಡುವ ಸರ್ಕಾರಿ ಸುತ್ತೋಲೆಗಳಲ್ಲಿ... ಹೀಗೆ ಕನ್ನಡದ ಸ್ಥಾನ ದಿನದಿಂದ ದಿನಕ್ಕೆ ಕುಸಿಯತೊಡಗಿರುವುದು ವಾಸ್ತವ. ಆದ್ದರಿಂದ ಇಂಗ್ಲಿಷ್ ಮಾಧ್ಯಮ ಬೇಕೆನ್ನುವ ಪೋಷಕರ ಹಾಗೂ ಆ ೭೨ ಶಾಸಕರ ತುಡಿತದ ಹಿಂದಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಮನೋಧರ್ಮವನ್ನು ಮಾನ್ಯಮಾಡಬೇಕು.

ಇಂಗ್ಲಿಷ್ ಮಾಧ್ಯಮದ ಮುಖೇನ ಇವರು ಕೇಳುತ್ತಿರುವುದು ಶೇಕ್ಸ್‌ಪಿಯರ್, ಷೆಲ್ಲಿ, ಬರ್ನಾರ್ಡ್ ಷಾ ಮುಂತಾದವರ ಕೃತಿಗಳ ಬಗೆಗಿನ ತಿಳಿವಲ್ಲ, ಅಥವಾ ಆ ಭಾಷೆಯ ಮುಖೇನ ಹರಿದುಬರುವ ಕಾಫ್ಕ, ಕಾಮು, ಬ್ರೆಕ್ಟ್, ಅಚಿಬೆ, ವೊಲೆ ಸೊಯಿಂಕಾ ಮುಂತಾದ ಶ್ರೇಷ್ಠರ ವಿಚಾರ ಪ್ರೌಢಿಮೆಗಳನ್ನಲ್ಲ; ಅವರ ಚಿಂತನೆಗಳನ್ನಲ್ಲ. ಹಾಗೆ ನೋಡಿದರೆ ಕನ್ನಡ/ಆಂಗ್ಲ ಮಾಧ್ಯಮದಲ್ಲಿ ಓದಿ ಪದವಿ ಗಳಿಸಿದವರಿಗೆ ಆಯಾ ಭಾಷೆಯ ಚಿಂತಕರ, ಸಾಹಿತಿಗಳ ಕೊನೆ ಪಕ್ಷ ರಾಜಕಾರಣಿಗಳ ಹೆಸರುಗಳು ಕೂಡ ಗೊತ್ತಿರದಷ್ಟು ಮರೆತುಹೋಗಿರುತ್ತದೆ! ಮತ್ತೆ ಜ್ಞಾನವೆಲ್ಲಿಂದ ಬರಬೇಕು!! ಈ ಥರದ ಜನಾಸಕ್ತಿ ಅವರವರ ವೈಯಕ್ತಿಕ ಅಭಿರುಚಿಗೆ ಆಸಕ್ತಿಗೆ ಸಂಬಂಧಿಸಿದ್ದೆಂದು ಭಾವಿಸಿಕೊಳ್ಳುವ.

ಇವರ ಬೇಡಿಕೆ ಕೇವಲ ಇಂಗ್ಲಿಷ್ ಮಾಧ್ಯಮದ ಕಾನ್ವೆಂಟ್ ಮಾದರಿಯ ಶಾಲೆಗಳಷ್ಟೆ. ಕಂಟೋನ್ಮೆಂಟ್ ಹಾಗೂ ಕಾಸ್ಮೋಪಾಲಿಟನ್ ಮಾದರಿಯ ರೀತಿ-ರಿವಾಜಿನ ಸಂಸ್ಕೃತಿಯನ್ನು ಟೈ-ಷೂ-ಸಾಕ್ಸ್, ಯೂನಿಫಾರಂ ಧರಿಸಿ ನಮ್ಮ ಮಕ್ಕಳು ನಗರ ಪ್ರದೇಶದ 'ದೊಡ್ಡವರ' ಮಕ್ಕಳಂತೆ ಇಂಗ್ಲಿಷ್ ಮಾತಾಡಬೇಕೆಂಬ ಮನಃಸ್ಥಿತಿ ಇಂಗ್ಲಿಷ್ ಮಾಧ್ಯಮ ಬಯಸುವವರ ಸಹಜ ಮನೋಧರ್ಮವಾಗಿದೆ.




ಅಂಥವರಿಗೆ ಅವರ ಮಕ್ಕಳು ಓದಿ ಮೇಧಾವಿಗಳೂ ಪ್ರಜ್ಞಾವಂತರೂ ಜ್ಞಾನವಂತರೂ ಆಗುವುದು ಮುಖ್ಯ ಉದ್ದೇಶವಲ್ಲ. ಏಕೆಂದರೆ, ಇಂದು ದೊಡ್ಡ ದೊಡ್ಡ ಸ್ಥಾನಗಳಲ್ಲಿ ಕುಳಿತವರು, ಅದಕ್ಕಿಂತ ಕೆಳಗಿನ ಸ್ಥಾನದಲ್ಲಿರುವವರು, ಗುಮಾಸ್ತರು ತಮ್ಮ ಪ್ರತಿಭೆ ಪಾಂಡಿತ್ಯಕ್ಕಿಂತ ಮಿಗಿಲಾಗಿ ಹೊಂದಿರುವುದು ಇಂಗ್ಲಿಷ್ ವೇಷ ಹಾಗೂ ನಿರರ್ಗಳವಾಗಿ ಇಂಗ್ಲಿಷ್ ಮಾತಾಡುವ ಕಲೆ ಎಂಬುದು ಜನರಿಗೆ ಗೊತ್ತಾಗಿದೆ. ಇಂಗ್ಲಿಷ್ ಒಂದಿದ್ದರೆ ಸಾಕು; ಹಣ-ಅಧಿಕಾರ-ಉದ್ಯೋಗ ಕಟ್ಟಿಟ್ಟ ಬುತ್ತಿ ಎಂಬ ಮೆಸೇಜ್ ಗ್ರಾಮೀಣ ಪ್ರದೇಶವನ್ನೂ ತಲುಪಿ, ಪ್ರತಿಕ್ರಿಯಿಸುತ್ತಿದೆ.

ತಾಯಿನುಡಿ ಮುಖಾಂತರ ವಿದ್ಯೆಯನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬಹುದೆನ್ನುವ, ಹಾಗೆಂದು ಬರೆಯುವ ಮಾತಾಡುವ ಇಂಗ್ಲಿಷ್ ಬಲ್ಲ ಸಾಹಿತಿಗಳ, ವಿಜ್ಞಾನಿಗಳ, ರಾಜಕಾರಣಿಗಳ, ಭಾಷಾತಜ್ಞರ, ಶಿಕ್ಷಣತಜ್ಞರ, ಖ್ಯಾತ ಚಲನಚಿತ್ರ ನಟ-ನಟಿಯರ, ಕನ್ನಡ ಸಂಘಟನೆಗಳ, ವಿಮರ್ಶಕರ, ಬುದ್ಧಿಜೀವಿಗಳ, ವಿದ್ವಾಂಸರ ಕಳಕಳಿಯನ್ನು ಜನಸಾಮಾನ್ಯರು ನಂಬುತ್ತಿಲ್ಲ. ಕಾರಣ, ಇಂಥವರ ಮಕ್ಕಳು, ಮರಿಮಕ್ಕಳು, ಓದುತ್ತಿರುವುದು ಉಸಿರಾಡುತ್ತಿರುವುದು ಇಂಗ್ಲಿಷ್ ಮಾಧ್ಯಮದಲ್ಲಿ ಎಂಬುದು ಬಹಿರಂಗ ಸತ್ಯ.

ಒಂದು ವೇಳೆ, ಮೇಲೆ ಹೆಸರಿಸಿದ ಗಣ್ಯರು ಅಧಿಕ ಸಂಖ್ಯೆಯಲ್ಲಿ ತಮ್ಮ ಮಕ್ಕಳನ್ನು ಸರ್ಕಾರಿ ಅಥವಾ ತಮಗೊಪ್ಪುವ ಖಾಸಗಿ ಕನ್ನಡ ಮಾಧ್ಯಮ ಶಾಲೆಗಳಿಗೆ ಸೇರಿಸಿದ್ದಲ್ಲಿ ಇದು ಇತರರ ಮೇಲೂ ಪರಿಣಾಮ ಬೀರುತ್ತಿತ್ತು. ಕನ್ನಡ ಮಾಧ್ಯಮ ಶಾಲೆಗಳಿಗೆ ಈಗಿರುವಂತಹ ದೈನ್ಯ-ದುಃಸ್ಥಿತಿ ಖಂಡಿತ ಬರುತ್ತಿರಲಿಲ್ಲ. ಬದಲು ಅಲ್ಲೊಂದು ಆಶ್ಚರ್ಯಕರ ಬೆಳವಣಿಗೆ ಕಾಣಿಸಿಬಿಡುತ್ತಿತ್ತು. ಅದೇನೆಂದರೆ, ಒಂದನೇ ತರಗತಿಯಿಂದಲೇ ಇಂಗ್ಲಿಷ್ ಭಾಷೆಯ ಕಲಿಕೆ ಆರಂಭಗೊಂಡು ಇಂದಿಗೆ ದಶಕಗಳೇ ಕಳೆದಿರುತ್ತಿದ್ದವು. ಇದು ಊಹೆಯಲ್ಲ; ವಾಸ್ತವದ ಮಾತು.

* * *

ಭಾರತವೂ ಸೇರಿದಂತೆ ಬಹುತೇಕ ಬಡರಾಷ್ಟ್ರಗಳ ರೀತಿ-ನೀತಿ-ಬದುಕಿನ ದಿಕ್ಕನ್ನು ನಿರ್ಧರಿಸುವವರು ನಿರ್ದೇಶಿಸುವಂಥವರು ವಿದೇಶೀ ಸಾಮ್ರಾಜ್ಯಶಾಹಿ ವಸಾಹತುಶಾಹಿ ಶಕ್ತಿಗಳು. ಉಚಿತವಾಗಿ ಯಾವುದೇ ನಾಗರಿಕ ಸೌಲಭ್ಯಗಳನ್ನು ನೀಡದಿರುವ ಕಾನೂನನ್ನು ಡಬ್ಲ್ಯುಟಿಓ, ವಿಶ್ವಬ್ಯಾಂಕ್ ನಿರ್ಧರಿಸಿದ್ದರಿಂದ ಇಂದು ಭಾರತದ ಸರ್ಕಾರಿ ಆಸ್ಪತ್ರೆಗಳಲ್ಲಿ ಬಡಬಲ್ಲಿದರೆನ್ನದೆ ಅಧಿಕೃತವಾಗಿಯೂ ಹಣ ವಸೂಲಿ ಆಗುತ್ತಿದೆ. ಹಸಿರು ಕಾರ್ಡಿನ ನಾಟಕವೂ ನಡೆಯುತ್ತಿದೆ.

ಪ್ರಾಥಮಿಕ ಆರೋಗ್ಯ ಕೇಂದ್ರ, ಜೀವವಿಮಾ ನಿಗಮ, ನೀರು ಸರಬರಾಜು, ಕಸ ವಿಲೇವಾರಿ, ವಿದ್ಯುತ್‌ನಿಗಮ, ಕಾರ್ಮಿಕರ ಭವಿಷ್ಯ, ರಕ್ಷಣೆ, ಬಾಹ್ಯಾಕಾಶ ತಂತ್ರಜ್ಞಾನ, ಶಿಕ್ಷಣ ಮುಂತಾದ ಸರ್ಕಾರಿ ಒಡೆತನದ ಕ್ಷೇತ್ರಗಳು ಖಾಸಗೀಕರಣಗೊಂಡು ಇನ್ನಷ್ಟು ಖಾಸಗಿ ಉದ್ಯಮಿಗಳ ಕೈವಶವಾಗಲಿವೆ. ಮೈಸೂರು ವೈದ್ಯಕೀಯ ಕಾಲೇಜು, ಜಾನಪದ ಲೋಕ, ಕೊಡಗಿನ ನಿಸರ್ಗಧಾಮ ಹಾಗೂ ಪ್ರವಾಸೋದ್ಯಮ ಸ್ಥಳಗಳನ್ನು 'ಖಾಸಗಿ ಕುಳಗಳ' ಹಿಡಿತಕ್ಕೆ ಒಪ್ಪಿಸಿ ನಿರಾಳವಾಗುವ ದಿಕ್ಕಿನಲ್ಲಿದೆ ನಮ್ಮ ಹಾಗೂ ಕೇಂದ್ರ ಸರ್ಕಾರಗಳು.

ಸರ್ಕಾರವೂ ಕೂಡ ಸರ್ಕಾರಿ ಶಾಲೆ-ಕಾಲೇಜುಗಳ ಅಭಿವೃದ್ಧಿಯತ್ತ ಮತ್ತು ನೂತನ ಸರ್ಕಾರಿ ಶಾಲಾ-ಕಾಲೇಜುಗಳನ್ನು ತೆರೆಯಲು ಆಸಕ್ತಿ ತೋರಿಸದಿರುವುದು ಖಾಸಗಿ ಶಿಕ್ಷಣ ವ್ಯಾಪಾರಿಗಳ ಪಾಲಿಗೆ ಅದೊಂದು ಹಬ್ಬವಾಗಿದೆ. ಮುಂದಿನ ಶೈಕ್ಷಣಿಕ ವರ್ಷದಿಂದ (ಸರ್ಕಾರ) ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಕೆಯನ್ನು ಆರಂಭಿಸಿ ಅಲ್ಲಿಯೂ ಸರ್ಕಾರಿ ಆಸ್ಪತ್ರೆಯಲ್ಲಿ ನಿಗದಿಪಡಿಸಿರುವಂತೆ ಶುಲ್ಕ ವಸೂಲಿ ಮಾಡುವ ಸಾಧ್ಯತೆಯನ್ನು ಅಲ್ಲಗಳೆಯಲಾದೀತೆ?

ಎನ್.ಡಿ.ಎ. ಸರ್ಕಾರವಿದ್ದ ಸಂದರ್ಭದಲ್ಲಿ ವಾಜಪೇಯಿ ಅವರು ದೊಡ್ಡ ಬಂಡವಾಳಶಾಹಿ ಕುಳಗಳಾದ ಮುಖೇಶ್ ಅಂಬಾನಿ ಹಾಗೂ ಕುಮಾರಮಂಗಲಂ ಬಿರ್ಲಾರನ್ನು ಶಿಕ್ಷಣ ಸಲಹಾ ಸಮಿತಿಯ ಸದಸ್ಯರನ್ನಾಗಿ ನೇಮಿಸಿದ್ದರು. ಬಹುಶಃ ದೇಶದಲ್ಲಿ ಅತಿ ಹೆಚ್ಚು ತೆರಿಗೆ ಹಾಗೂ ಬ್ಯಾಂಕ್ ಸಾಲವನ್ನು ಉಳಿಸಿಕೊಂಡಿರುವ ಈ ಮಹನೀಯರು ಶಿಕ್ಷಣಕ್ಷೇತ್ರವನ್ನು ಸುಧಾರಿಸಲು ನೀಡಿದ ಸಲಹೆ ಹೀಗಿದೆ – ''ಶಿಕ್ಷಣದ ಗುಣಮಟ್ಟವನ್ನು ಕಾಯ್ದುಕೊಳ್ಳಲು ಶಿಕ್ಷಣದ ಪೂರ್ಣ ಖಾಸಗೀಕರಣಗೊಳಿಸಬೇಕು ಮತ್ತು ಶಿಕ್ಷಣ ಸಂಸ್ಥೆಗಳನ್ನು ಸರ್ಕಾರವು ಯಾವುದೇ ರೀತಿಯ ನಿಯಂತ್ರಣದಿಂದ ಮುಕ್ತಗೊಳಿಸಬೇಕು. ಕೈಗಾರಿಕೋದ್ಯಮ ವರ್ಗದವರೇ ಇಲ್ಲಿನ ಶಿಕ್ಷಣ, ಪಠ್ಯಕ್ರಮ ರೂಪಿಸುವುದು. ಇತ್ಯಾದಿ...'' ಇಂತಹ ಸಮಿತಿಗಳಲ್ಲಿ ಮಾನವೀಯತೆಗೆ, ಸಮಾನತೆಗೆ, ಅಂತಹ ಮನೋಧರ್ಮವುಳ್ಳ ಶಿಕ್ಷಣ ತಜ್ಞರಿಗೆ, ಸಮಾಜ ಚಿಂತಕರಿಗೆ ಸ್ಥಳವಿಲ್ಲ. ೧೯೪೨ರಲ್ಲಿ ದೇಶಪ್ರೇಮಿಗಳಿಬ್ಬರನ್ನು ಬ್ರಿಟಿಷರಿಗೆ ಹಿಡಿದುಕೊಟ್ಟ ಯುವಕ ಎ.ಬಿ. ವಾಜಪೇಯಿ ಇಂದು ವಯಸ್ಸಿನಲ್ಲಿ ಮಾಗಿದ ಅಟಲ ಬಿಹಾರಿ ವಾಜಪೇಯಿ ಜನ ಸಾಮಾನ್ಯರಿಗೆ ಉದಾರವಾಗಿ ತಲುಪಬೇಕಾಗಿದ್ದ ಶಿಕ್ಷಣವನ್ನು ಕೈಗಾರಿಕೋದ್ಯಮಿಗಳ ಕೈಗಳಿಗೆ ಒಪ್ಪಿಸಿಬಿಟ್ಟದ್ದು ಪ್ರಜಾಪ್ರಭುತ್ವ ದುರಂತ ಎನ್ನಬಹುದು.

ಈಗಾಗಲೇ ಬೆಂಗಳೂರಿನ ಹೊರವಲಯದಲ್ಲಿ ಕುಮಾರಮಂಗಲಂ ಬಿರ್ಲಾ ಆರಂಭಿಸಿದ ನೂತನ ಇಂಗ್ಲಿಷ್ ಮೀಡಿಯಂ ಸ್ಕೂಲಿನ ಪ್ರಾಥಮಿಕ ತರಗತಿಯ ಪ್ರವೇಶ ಶುಲ್ಕ ಕೇವಲ ೧.೨೫ ಲಕ್ಷ ಮಾತ್ರ !

ಶಿಕ್ಷಣದ ಮೂಲ ಉದ್ದೇಶವಾದ ಕ್ರಿಯಾಶೀಲತೆ, ವ್ಯಕ್ತಿತ್ವ ವಿಕಾಸ, ವೈಚಾರಿಕ ಹಾಗೂ ವೈಜ್ಞಾನಿಕ ಚಿಂತನೆಗಳ ಮೂಲೋದ್ದೇಶ ಹಿಂದೆ ಸರಿದಿದೆ. ಶಿಕ್ಷಣ ಕೇಸರೀಕರಣ ಗೊಳ್ಳುತ್ತಿದೆ. ಶಿಕ್ಷಣ ನೀತಿಯನ್ನು ತನ್ನ ಐದುವರ್ಷಗಳ ಅಧಿಕಾರಾವಧಿಯಲ್ಲಿ ಸಂಪೂರ್ಣ ಖಾಸಗೀಕರಣಗೊಳಿಸಿ ಬಂಡವಾಳಶಾಹಿಗಳ ಕೈಗೆ ಒಪ್ಪಿಸಿದಂಥ ಹೆಗ್ಗಳಿಕೆ ವಾಜಪೇಯಿ ಸರ್ಕಾರಕ್ಕೆ ಸಲ್ಲಬೇಕು.

ಖಾಸಗೀಕರಣದ ಚಂಡಮಾರುತಕ್ಕೆ ಸಿಲುಕಿ ಸರ್ಕಾರಿ ಕ್ಷೇತ್ರಗಳಲ್ಲಿ ವರ್ಷಕ್ಕೆ ಶೇ. ೨ರಷ್ಟೂ ಉದ್ಯೋಗಾವಕಾಶ ಸೃಷ್ಟಿಯಾಗುತ್ತಿಲ್ಲ. ಖಾಸಗಿ ಕ್ಷೇತ್ರಗಳಲ್ಲಿ ಸೃಷ್ಟಿಯಾಗುವ ೭೫ ಸಾವಿರದಷ್ಟು ಉದ್ಯೋಗಗಳಲ್ಲಿ ಶೇ. ೯೫ರಷ್ಟು ಉದ್ಯೋಗ ಇಂಗ್ಲಿಷ್ ಜ್ಞಾನ ಇರುವವರ ಪಾಲಾಗುತ್ತಿದೆ. ಕನ್ನಡ ಮಾಧ್ಯಮದಲ್ಲಿ ಓದಿದವರ ಪಾಡೇನು? ಅತ್ತ ಸರ್ಕಾರಿ ರಂಗದಲ್ಲಿ ಉದ್ಯೋಗವಿಲ್ಲದೆ ಖಾಸಗಿ ಕ್ಷೇತ್ರಗಳಲ್ಲಿ ಉದ್ಯೋಗ ಮೀಸಲಾತಿ ಇಲ್ಲದಿರುವುದರಿಂದ, ಇಂಗ್ಲಿಷ್ ಬಾರದ ದಲಿತವರ್ಗದ ಲಕ್ಷಾಂತರ ಪ್ರತಿಭೆಗಳ ದಿಕ್ಕೇನು?

ಖಾಸಗೀಕರಣವನ್ನು 'ಒಳಆಸೆ'ಯನ್ನಾಗಿ ಇಟ್ಟುಕೊಂಡು ಮೌನವಾಗಿ ಸ್ವಾಗತಿಸಿಬಿಡುವ ಮನಸ್ಸುಗಳು ಹೊರಧ್ವನಿಯಾಗಿ "ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಷ್ ಭಾಷೆ ಕಲಿಸುವುದರಿಂದ ಕನ್ನಡವನ್ನು ಬಹು ಬೇಗ ಬಹು ಸುಲಭವಾಗಿ ಕೊಂದು ಹಾಕುವುದಾಗಿದೆ" ಎನ್ನುತ್ತಿದ್ದಾರೆಯೇ?

ಇಂಥ ಸುಸಂಸ್ಕೃತರ ಧ್ವನಿಗಳು ದೇವಸ್ಥಾನಗಳಲ್ಲಿ ಆರಾಧನೆಯ ಭಾಷೆ ಕನ್ನಡದಲ್ಲಿರಲೀ ಎನ್ನಲಾರವು. ತಮ್ಮ ತಮ್ಮ ಜಾತಿಯ ಮಕ್ಕಳು ೮ನೇ ತರಗತಿಯ ನಂತರ ಪ್ರಥಮ ಭಾಷೆಯಾಗಿ ಸಂಸ್ಕೃತವನ್ನು ತೆಗೆದುಕೊಳ್ಳಬೇಡಿರೆಂದು ಅಡ್ಡ ಬರಲಾರರು. ಕನ್ನಡದಲ್ಲಿ ೬೦-೭೦ ಅಂಕ ತೆಗೆದುಕೊಳ್ಳುತ್ತಿದ್ದ ಇಂಥವರ ಮಕ್ಕಳು ಏಕ್‌ದಂ ಸಂಸ್ಕೃತ ಭಾಷೆಯಲ್ಲಿ ೯೦-೯೫ ಅಂಕ ಗಳಿಸುವುದು ಹೇಗೆ ಎಂದು ಪ್ರಶ್ನಿಸಿಕೊಳ್ಳಲಾರರು.

ಇವರೇ ತರ್ಕಬದ್ಧವಾಗಿ ಅಂತೆಯೇ ಗ್ರಾಮೀಣ ಹಾಗೂ ನಗರ ಪ್ರದೇಶದ ದಲಿತ ಹಿಂದುಳಿದ ಜಾತಿ/ ವರ್ಗಗಳಿಗೆ ಇಂಗ್ಲಿಷ್‌ನಿಂದಾಗುವ ನೆರವನ್ನು ತಪ್ಪಿಸಿಬಿಡಬಲ್ಲರು.

ನಮ್ಮ ನಡುವೆ 'ಇರುವ' ಶ್ರೇಷ್ಠ ಚಿಂತಕ, ವಿಮರ್ಶಕರಾದ ಡಿ.ಆರ್. ನಾಗರಾಜ್ ಹೇಳುತ್ತಾರೆ, "ಕನ್ನಡ ಮಾಧ್ಯಮದಿಂದ ಬರುವ ಸಹಜ ಶೈಕ್ಷಣಿಕ ಲಾಭ ಮತ್ತು ಇಂಗ್ಲಿಷಿನಿಂದ ದತ್ತವಾಗುವ ಸಾಮಾಜಿಕ ಪ್ರಗತಿಯ ಅಧಿಕಾರ ಇವೆರಡನ್ನು ಒಟ್ಟಿಗೇ ಬೆರೆಸುವ ನೀತಿಯೊಂದನ್ನು ನಾವೀಗ ರೂಪಿಸಬೇಕಾಗಿದೆ. ಕನ್ನಡ ಮಾಧ್ಯಮದ ಜತೆಗೆ ಅತ್ಯುತ್ತಮ ಇಂಗ್ಲಿಷನ್ನು ಕಲಿಸುವ ವ್ಯವಸ್ಥೆಯೊಂದನ್ನು ನಾವೀಗ ತಕ್ಷಣ ರೂಪಿಸಬೇಕಾಗಿದೆ."

ಕನ್ನಡ ಮಾಧ್ಯಮದಲ್ಲಿ ಉತ್ತಮವಾಗಿ ಇಂಗ್ಲಿಷ್ ಹೇಳಿಕೊಡಬಲ್ಲ ತಾಯಿಹೃದಯದ ಶಿಕ್ಷಕರ ಅಗತ್ಯವಿದೆ. ಕನ್ನಡತ್ವವನ್ನು ಹೀಗೂ ಉಳಿಸಿಕೊಳ್ಳಬಹುದು. ಇಲ್ಲದಿದ್ದಲ್ಲಿ ಕಾನ್ವೆಂಟಿನಲ್ಲಿ ಓದಲಾಗದಂಥ ಗ್ರಾಮೀಣ/ನಗರ ಪ್ರದೇಶದ ವಿದ್ಯಾರ್ಥಿಗಳು ನಗರವಲಯದಲ್ಲಿರುವ ಪ್ರತಿಷ್ಠಿತ ಇಂಗ್ಲಿಷ್ ಶಾಲೆಯ 'ಶಕ್ತಿ'ಯ ಮುಂದೆ ಶಾಶ್ವತವಾಗಿ ಹಿಂಜರಿಯುವ ಕೀಳರಿಮೆಗೆ ಬಲಿಪಶುವಾಗುವ ಸಾಧ್ಯತೆಗಳೇ ಹೆಚ್ಚು.

ಮೂರ್ನಾಡು ರಾಮಸ್ವಾಮಿ
ಸೌಮ್ಯಶ್ರೀ ನಿಲಯ, ಆರ್. ಸಿ. ರಸ್ತೆ, ನ್ಯೂ ಎಕ್ಸ್‌ಟೆನ್ಷನ್
ಮಡಿಕೇರಿ - ೫೭೧ ೨೦೧

# ಡಾ|| ಡಿ. ಎಂ. ನಂಜುಂಡಪ್ಪ



*ಇದೇ ಸೆಪ್ಟೆಂಬರ್ ೨೬ ರಂದು ನಿಧನರಾದ ಡಾ|| ಡಿ. ಎಂ. ನಂಜುಂಡಪ್ಪ ಅವರಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.*

**ಡಾ||** ಡಿ. ಎಂ. ನಂಜುಂಡಪ್ಪ ಕನ್ನಡನಾಡು ಕಂಡ ಪ್ರತಿಭಾವಂತ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರು; ಉತ್ತಮ ಆಡಳಿತಗಾರ, ಯೋಜನಾ ತಜ್ಞ, ಶಿಕ್ಷಣ ತಜ್ಞ ಎಂದು ಗುರುತಿಸಲ್ಪಟ್ಟವರು. ಶಿಸ್ತು, ದಕ್ಷತೆ, ಪ್ರಾಮಾಣಿಕತೆಗಳಿಂದ ತಮಗೆ ದೊರೆತ ಪದವಿಗಳ ಘನತೆಯನ್ನು ಹೆಚ್ಚಿಸಿ ಮಾಸಲಾಗದ ಹೆಜ್ಜೆಗುರುತುಗಳನ್ನು ಮೂಡಿಸಿದ ದೊಗ್ಗನಾಳ ಮಹದೇವಪ್ಪ ನಂಜುಂಡಪ್ಪ ಅವರು ವಿದ್ಯಾರ್ಥಿದೆಸೆಯಿಂದಲೇ ಸ್ವಾವಲಂಬಿ-ಸ್ವಾಭಿಮಾನಿ ಸಮಾಜದ ಕನಸು ಕಂಡವರು. ಎಂ.ಎ. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ. ಪದವಿ ಗಳಿಸಿದ ಮೊದಲಿಗರು ಇವರು ಎಂಬುದು ದಾಖಲಾರ್ಹ.

ನಂಜುಂಡಪ್ಪನವರು ಹಲವು ಮಹತ್ವದ ಸಾಧನೆಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಉಲ್ಲೇಖನೀಯವಾದದ್ದು ಬೆಂಗಳೂರಿನ ಜೆ. ಎಸ್. ಎಸ್. ಸಂಸ್ಥೆಯಲ್ಲಿ ಭಾರತೀಯ ಆಡಳಿತ ಸೇವೆಗೆ (ಐಎಎಸ್) ಸೇರಬಯಸುವ ಅಭ್ಯರ್ಥಿಗಳಿಗೆ ತರಬೇತಿ ಕೇಂದ್ರವೊಂದು ಸ್ಥಾಪನೆಯಾಗುವಂತೆ ಮಾಡಿ ಅದರ ಮಾರ್ಗದರ್ಶಕರಾಗಿ ಈವರೆಗೆ ೨೨ ಜನ ಐಎಎಸ್ ಕ್ಯಾಡರ್‌ಗೆ ಆಯ್ಕೆಯಾಗುವಂತೆ ಮಾಡಿ ಭಾರತ ಸರ್ಕಾರದ ಸೇವೆಗೆ ಸೇರಲು ಕನ್ನಡಿಗರಿಗೆ ಸ್ಫೂರ್ತಿ ನೀಡಿದ್ದು.

ಗ್ರಾಮೀಣ ಜನರ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದ ಡಿ. ಎಂ. ಎನ್. 'ಮಾಹಿತಿ ತಂತ್ರಜ್ಞಾನ ಉದ್ಯಮಕ್ಕೆ ೧೫ ವರ್ಷ ತೆರಿಗೆ ವಿನಾಯಿತಿ ಎನ್ನುವುದು, ಅವರಿದ್ದಲ್ಲಿಗೇ ವಿಮಾನ ನಿಲ್ದಾಣ ಕಟ್ಟಿಸಿಕೊಡುತ್ತೇವೆ ಎನ್ನುವುದು ಮೂರ್ಖತನ', ಹಾಗೇ 'ಗ್ರಾಮೀಣ ಜನರ ಬದುಕನ್ನು ಸಹ್ಯವಾಗಿಸದೆ ನಗರದ ಮೂಲಭೂತ ಸೌಲಭ್ಯಗಳಿಗೆ ಮಾತ್ರವೇ ಹಣ ಸುರಿಯುವುದು ಮಹಾಪಾಪ' ಎಂದು ಭಾವಿಸಿದ್ದರು. ಎಲ್ಲ ಕಡೆ ಜಾಗತೀಕರಣದ ಮಾತುಗಳು ಕೇಳಿಬರುತ್ತಿರುವ ಈ ಹೊತ್ತು ನಂಜುಂಡಪ್ಪನವರು ಮುಕ್ತ ಮಾರುಕಟ್ಟೆಯ ಬಗ್ಗೆ ಹೇಳಿದ ಈ ಮಾತುಗಳು ಎಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವೆನಿಸುತ್ತದೆ: 'ನನ್ನ ಪ್ರಕಾರ ಮುಕ್ತ ಮಾರುಕಟ್ಟೆಯು ಮಾರಕ, ಇಂಡಿಯಾದ ಮಣ್ಣಲ್ಲಿ ಅದು ಬೆಳೆಯಲ್ಲ ಬಿಡಿ. ಬಂಡವಾಳಶಾಹಿಗಳು, ರಾಜಕಾರಣಿಗಳು ದೇಶವನ್ನು ಅಮೆರಿಕಾಕ್ಕೆ ಅಡವಿಡುತ್ತಿದ್ದಾರೆ', 'ಅಮೆರಿಕಾ ವಿಶ್ವದ ಎಲ್ಲ ರಾಷ್ಟ್ರಗಳ ಮೇಲೆ ನಿರ್ಬಂಧ ಹೇರುತ್ತಾ ಇದೆ. ಅದು ಬಡದೇಶಗಳಿಗೆ ವಿಶ್ವಬ್ಯಾಂಕ್ ಸಾಲದ ಚಪಲ ಹತ್ತಿಸಿದೆ. ಮುಕ್ತ ನೀತಿ ಸಂಪೂರ್ಣ ಬದಲಾಗಬೇಕು. ವಿಶ್ವಕ್ಕೆ ಮುಕ್ತತೆ ಬೋಧಿಸುವ ಅಮೆರಿಕಾದಲ್ಲಿಯೂ ಮಾರುಕಟ್ಟೆ ಮುಕ್ತವಾಗಿಲ್ಲ. ವಿಶ್ವವ್ಯಾಪಾರ ಸಂಸ್ಥೆ ಹಾಗೂ ವಿಶ್ವಸಂಸ್ಥೆಗಳನ್ನು ಪುನರ್ ರಚಿಸಿ ಎಲ್ಲ ದೇಶಗಳಿಗೂ ನಿರ್ಧಾರ ತೆಗೆದುಕೊಳ್ಳುವ ಶಕ್ತಿ ಒದಗಿಸಬೇಕು. ಯಾವತ್ತೂ ಜನರು ಯೋಜನೆಯ ಸುತ್ತ ಸುತ್ತುವಂತಾಗಬಾರದು, ಯೋಜನೆಗಳೇ ಜನರನ್ನು ಹುಡುಕಿಕೊಂಡು ಬರಬೇಕು.'

ಕರ್ನಾಟಕ-ಬೆಂಗಳೂರು ವಿಶ್ವವಿದ್ಯಾಲಯಗಳ ಕುಲಪತಿಗಳಾಗಿ, ರಾಜ್ಯ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ, ರೈಲ್ವೆದರ ನಿಗದಿ ಸಮಿತಿಯ ಅಧ್ಯಕ್ಷರಾಗಿ, ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ ರಚಿಸಿದ ಆಯೋಗದ ಅಧ್ಯಕ್ಷರಾಗಿ ಸಮರ್ಥವಾಗಿ ಕಾರ್ಯ ನಿರ್ವಹಿಸಿದ್ದಾರೆ. ಪ್ರಾದೇಶಿಕ ಅಸಮಾನತೆಯ ನಿವಾರಣೆಗೆ ಡಾ|| ಡಿ. ಎಂ. ನಂಜುಂಡಪ್ಪನವರ ನೇತೃತ್ವದಲ್ಲಿ ಹಲವು ತಜ್ಞರು ಸೇರಿ ನೀಡಿದ ೫ ಸಂಪುಟಗಳ (ಸುಮಾರು ೩೫೦೦ ಪುಟಗಳ) ವರದಿಯು ಇಡೀ ಗ್ರಾಮ ಭಾರತದ ಅಭಿವೃದ್ಧಿಗೆ ಮಾರ್ಗದರ್ಶಿಯಾಗಬಲ್ಲಂತಹ ದಾಖಲೆಯಾಗಿದೆ. ತಾಲ್ಲೂಕನ್ನು ಒಂದು ಘಟಕವನ್ನಾಗಿ ನೋಡಿ ನೀಡಿರುವ ಈ ವರದಿ ಕಾರ್ಯಸಾಧುವಾದ ವೈಜ್ಞಾನಿಕ ದೃಷ್ಟಿಕೋನ ಉಳ್ಳ ವರದಿಯಾಗಿದೆ; ಇಂದು 'ನಂಜುಂಡಪ್ಪ ವರದಿ' ಎಂದು ಪ್ರಸಿದ್ಧವಾಗಿ ಜನಸಾಮಾನ್ಯರ ಗಮನ ಸೆಳೆದಿದೆ ; ಎಲ್ಲರೂ ಕರ್ನಾಟಕದ ಸಮಗ್ರ ಅಭಿವೃದ್ಧಿಗೆ ನಂಜುಂಡಪ್ಪ ವರದಿ ಅನುಷ್ಠಾನವೊಂದೇ ಪರಿಹಾರ ಎನ್ನುವಂತಾಗಿದೆ. ಅದು ಸತ್ಯ ಕೂಡ.

ರಾ.ನಂ. ಚಂದ್ರಶೇಖರ
ಶ್ರೀಲಕ್ಷ್ಮಿ ಕೆಮಿಕಲ್ಸ್, ನಂ ೬, ರಾಘವೇಂದ್ರ ಕಾಂಪ್ಲೆಕ್ಸ್, ೨ನೇ ಅಡ್ಡರಸ್ತೆ, ಸಿಕೆಜಿ ಗಾರ್ಡನ್, ಬೆಂಗಳೂರು-೫೬೦ ೦೨೭

# ದಾನ: ಪ್ರಭುತ್ವದ ಸಂದರ್ಭದ ನಿಯಂತ್ರಣ ವ್ಯವಸ್ಥೆ

ಡಾ|| ಕೆ. ಮೋಹನ್‌ಕೃಷ್ಣ ರೈ

ಯಜಮಾನ್ಯ ವ್ಯವಸ್ಥೆಯು ಅಸ್ತಿತ್ವ ಮತ್ತು ಪ್ರಭಾವದ ಚರ್ಚೆಯಲ್ಲಿ ದಾನ ನೀಡುವ ಪದ್ಧತಿ ಪ್ರಮುಖ ಸ್ಥಾನ ಪಡೆದುಕೊಳ್ಳುತ್ತದೆ... ಅಧಿಕಾರಗಳನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಜನರು ದಾನ ನೀಡುವ ವ್ಯವಸ್ಥೆಯಿಂದಾಗಿ ಸಂಪತ್ತು ಮತ್ತು ಸವಲತ್ತುಗಳನ್ನು ಪಡೆದುಕೊಳ್ಳುವಂತಾಯಿತು.

ರಾಜಪ್ರಭುತ್ವದ ಸಂದರ್ಭದಲ್ಲಿನ ದಾನದ ಪರಿಕಲ್ಪನೆ ವ್ಯಾಪಕಾರ್ಥವನ್ನು ಉಳ್ಳದ್ದಾಗಿದೆ. ಅದು ಮೇಲ್ನೋಟಕ್ಕೆ ಸರಳವಾಗಿ ಕಂಡುಬಂದರೂ, ಅತ್ಯಂತ ಸಂಕೀರ್ಣವಾದ ಹಾಗೂ ಸಮಾಜದಲ್ಲಿ ಯಜಮಾನಿಕೆ ವಹಿಸುವ ಶಕ್ತಿಗಳ ಅಸ್ತ್ರವಾಗಿ ಬಳಕೆಯಾದಂಥದ್ದು. ಈ ಕಾರಣದಿಂದಾಗಿ ಮಧ್ಯಕಾಲೀನ ಕರ್ನಾಟಕದ ಚರಿತ್ರೆಯ ಅಧ್ಯಯನ ನಡೆಸುವಾಗ ದಾನದ ಪರಿಕಲ್ಪನೆಯನ್ನು ವಿಮರ್ಶಾತ್ಮಕವಾಗಿ ನೋಡುವುದು ಅನಿವಾರ್ಯವೆನಿಸುತ್ತದೆ. ದಾನ ನೀಡುವ ಪ್ರಕ್ರಿಯೆ ಕೇವಲ ಆರ್ಥಿಕ ಚಟುವಟಿಕೆಗಳಿಗಷ್ಟೇ ಸೀಮಿತವಾಗಿರದೆ ಸಾಮಾಜಿಕ ಸ್ಥಿತ್ಯಂತರಗಳ ಸ್ವರೂಪವನ್ನು ಪರಿಚಯಿಸುವ ಅಂಶವೂ ಆಗಿದೆ. ದಾನ ಕೊಡುವ ಪದ್ಧತಿ ಯಾವ ಉದ್ದೇಶದಿಂದ ಆರಂಭಗೊಂಡಿತು, ದಾನವನ್ನು ಯಾರು ಯಾರಿಗೆ ಕೊಡುತ್ತಿದ್ದರು, ದಾನ ಕೊಡುವುದರ ಹಿಂದಿರುವ ತಾತ್ವಿಕ ಭಾವನೆಗಳು ಯಾವುವು ಮುಂತಾದ ಪ್ರಶ್ನೆಗಳು ಅಧ್ಯಯನದ ಸಂದರ್ಭದಲ್ಲಿ ಸಹಜವಾಗಿಯೇ ಹುಟ್ಟಿಕೊಳ್ಳುತ್ತವೆ. ಈ ಪ್ರಶ್ನೆಗಳಿಗೆ ಸುಲಭವಾಗಿ ಉತ್ತರಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ದಾನ ನೀಡುವವರ ಮನಸ್ಸುಗಳು ಪ್ರತಿಯಾಗಿ ಬೇರೇನನ್ನೋ ನಿರೀಕ್ಷಿಸುತ್ತಿರುತ್ತವೆ.

ಪ್ರಸ್ತುತ ಲೇಖನವು ಮಧ್ಯಕಾಲೀನ ಕರ್ನಾಟಕದ, ಅದರಲ್ಲೂ ಕ್ರಿ. ಶ. ೮ರಿಂದ ೧೪ನೆಯ ಶತಮಾನದವರೆಗಿನ ಅವಧಿಗೆ ಸೀಮಿತಗೊಂಡಿದೆ. ಈ ಅವಧಿಯಲ್ಲಿ ದಾನ ನೀಡುವ ಪದ್ಧತಿ ಯಾವ ರೀತಿ ಇತ್ತು ಎನ್ನುವುದನ್ನು ಸೂಚಿಸುವ ಉಲ್ಲೇಖಗಳು ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಸಿಗುತ್ತವೆ. ದಾನವನ್ನು ಜಾತಿ/ವರ್ಗದ ಹಿನ್ನೆಲೆಯಲ್ಲಿ ನಿರ್ಧರಿಸುತ್ತಿದ್ದುದು ಅವುಗಳಲ್ಲಿ ಕಂಡುಬರುವ ಒಂದು ವಿಶೇಷತೆ. ಕ್ರೋಡೀಕರಿಸಲ್ಪಟ್ಟ ಸಂಪತ್ತು ಸಮಾನವಾಗಿ ಹಂಚಿಕೆಯಾಗುತ್ತಿತ್ತು ಎನ್ನುವುದು ವೈಭವೀಕೃತ ಚರಿತ್ರೆಯ ವಿವರಣೆಯಷ್ಟೇ ಆಗಿದೆ. ವಾಸ್ತವ ಸ್ಥಿತಿ ಬೇರೆಯೇ ಆಗಿತ್ತು. ಸಮಾಜದಲ್ಲಿ ಅಧಿಕಾರ, ಗೌರವ, ಸವಲತ್ತುಗಳನ್ನು ಹೊಂದಿದ್ದ ಜನವರ್ಗಕ್ಕೇ ದಾನದ ರೂಪದಲ್ಲಿ ಇನ್ನಷ್ಟು ಸಂಪತ್ತು ದೊರಕುತ್ತಿತ್ತು. ರಾಜಪ್ರಭುತ್ವವು ಸಮಾಜವನ್ನು ತನಗೆ ಬೇಕಾದ ರೀತಿಯಲ್ಲಿ ರಚಿಸುವ ಚಾಕಚಕ್ಯತೆಯನ್ನು ಹೊಂದಿತ್ತು. ಸಮಾಜದ ಅಲಕ್ಷಿತ ವರ್ಗದ ಜನರಿಗೆ ಇದರಿಂದ ಯಾವ ಪ್ರಯೋಜನವೂ ಆಗುತ್ತಿರಲಿಲ್ಲ. ಆ ಸಂದರ್ಭದ ಲಿಖಿತ ಮತ್ತು ಮೌಖಿಕ ಆಕರಗಳು ಈ ಕುರಿತು ಮೌನ ವಹಿಸುತ್ತವೆ. ಇದರಿಂದಾಗಿ ದಾನ ನೀಡುವುದು ಪ್ರಭುತ್ವದ ವಿಸ್ತರಣೆಯ ಮಾರ್ಗೋಪಾಯಗಳಲ್ಲಿ ಒಂದು ಎನ್ನುವುದು ಸ್ಪಷ್ಟವಾಗುತ್ತದೆ.

ದಾನ ನೀಡುವುದರ ಹಿಂದಿದ್ದಿರಬಹುದಾದ ಭಾವನೆಗಳು, ಉದ್ದೇಶಗಳು ಯಾವತ್ತೂ ಮೇಲ್ನೋಟಕ್ಕೆ ಕಂಡುಬರುವಂತಿರಲಿಲ್ಲ. ಈ ಕಾರಣದಿಂದಾಗಿಯೇ ಅನೇಕ ಚರಿತ್ರಕಾರರು ದಾನ ನೀಡುವ ವ್ಯವಸ್ಥೆಯನ್ನು ತಪ್ಪಾಗಿ ಅರ್ಥೈಸಿಕೊಂಡು ಚರಿತ್ರೆಯನ್ನು ತಪ್ಪಾಗಿ ದಾಖಲಿಸಿದರು. ಅರಸರು ದಾನಗಳನ್ನು ಉದಾರವಾಗಿ ಯಾಕೆ ನೀಡುತ್ತಿದ್ದರು ಎನ್ನುವ ಪ್ರಶ್ನೆಯಲ್ಲೇ ಉತ್ತರವೂ ಅಡಕವಾಗಿದೆ. ದಾನದ ಕಲ್ಪನೆ ಅಂದಿನ ಸಂದರ್ಭದಲ್ಲಿ ಮಹತ್ವಪೂರ್ಣವೂ, ಸಾಮಾಜಿಕ ಮತ್ತು ಧಾರ್ಮಿಕ ಶಕ್ತಿಯೂ ಆಗಿತ್ತು. ಧರ್ಮದ ಭದ್ರ ತಳಹದಿಗೆ ದಾನ ಸಹಾಯಕವಾಗಿರುತ್ತಿತ್ತು. ಆಯಾ ಸಂದರ್ಭಗಳಲ್ಲಿ ಪ್ರಚಾರದಲ್ಲಿದ್ದ ಧರ್ಮಗಳಿಗೆ ಸಂಬಂಧಿಸಿದ ದೇವಾಲಯ, ಬಸದಿಗಳನ್ನು ನಿರ್ಮಿಸಿ, ಅವುಗಳಿಗೆ ದಾನ ದತ್ತಿಗಳನ್ನು ನೀಡಿ, ರಾಜಾಶ್ರಯ ನೀಡಿ ಅವು ಪ್ರಚಾರದಲ್ಲಿರುವಂತೆ ನೋಡಿಕೊಳ್ಳುವ ಕೆಲಸವನ್ನು ದಾನ ವ್ಯವಸ್ಥೆ ಮಾಡುತ್ತಿತ್ತು. ದಾನದ ರೂಪದಲ್ಲಿ ಯಾವುದನ್ನು ನೀಡಲಾಗುತ್ತಿತ್ತು ಎನ್ನುವುದನ್ನು ತಿಳಿಯುವುದು ಕಷ್ಟದ ಕೆಲಸವೇನಲ್ಲ. ಭೂಮಿ, ಹಣ, ಚಿನ್ನ, ಬೆಳ್ಳಿ ಹಾಗೂ ದೈನಂದಿನ ಉಪಯೋಗದ ವಸ್ತುಗಳನ್ನು ದಾನದ ರೂಪದಲ್ಲಿ ನೀಡಲಾಗುತ್ತಿತ್ತು ಎನ್ನುವ ವಿವರಗಳು ಶಾಸನಗಳಿಂದ ಹಾಗೂ ಸಾಹಿತ್ಯ ಕೃತಿಗಳಿಂದ ತಿಳಿದುಬರುತ್ತದೆ. ದಾನ ಶಾಸನಗಳು ಅಪಾರ ಸಂಖ್ಯೆಯಲ್ಲಿ ಸಿಕ್ಕಿರುವುದು ಈ ನಿಟ್ಟಿನಲ್ಲಿ ಗಮನಿಸಬೇಕಾದ ಅಂಶ. ಹೆಚ್ಚುವರಿ ಉತ್ಪಾದನೆ ಅಥವಾ ಸಂಪತ್ತನ್ನೇ ದಾನದ ಇಲ್ಲವೇ ಕಾಣಿಕೆಯ ರೂಪದಲ್ಲಿ ನೀಡಲಾಗುತ್ತಿತ್ತು. ಹೆಚ್ಚುವರಿ ಉತ್ಪಾದನೆಯು ಅರಸ ಹಾಗೂ ಸಮಾಜದ ಪ್ರತಿಷ್ಠಿತ ವರ್ಗಗಳಲ್ಲಿ ಮಾತ್ರ ಕ್ರೋಡೀಕೃತವಾಗಿರುತ್ತಿತ್ತು. ಯಾರೂ ತಮ್ಮ ಸ್ವಂತ ಭೂಮಿ ಇಲ್ಲವೇ ವಸ್ತುಗಳನ್ನು ದಾನದ ರೂಪದಲ್ಲಿ ಕೊಡಲು ಮುಂದೆ ಬರುತ್ತಿರಲಿಲ್ಲ. ಆದರೂ ಮೇಲ್ನೋಟಕ್ಕೆ ಆ ರೀತಿಯ ಭಾವನೆ ಮೂಡುವುದು ಸಹಜ.

ದಾನಗಳ ಸಂಖ್ಯೆಯಲ್ಲಿ ಆಗುತ್ತಿದ್ದ ಏರಿಳಿತಕ್ಕೂ, ಅರಸು ಮನೆತನಗಳ ಏಳಿಗೆ ಮತ್ತು ಅವನತಿಗೂ ನೇರ ಸಂಬಂಧವಿದೆ. ಅರಸು ಮನೆತನಗಳು ಉಚ್ಛ್ರಾಯ ಸ್ಥಿತಿಯಲ್ಲಿರುವ ಸಂದರ್ಭಗಳಲ್ಲಿ ದಾನಗಳ ಸಂಖ್ಯೆ ಏರುಮುಖವಾಗಿದ್ದರೆ, ಅವನತಿಯತ್ತ ಸಾಗುತ್ತಿರುವ ಸಂದರ್ಭದಲ್ಲಿ ದಾನದ ಸಂಖ್ಯೆಯೂ ಇಳಿಮುಖವಾಗಿರುತ್ತಿತ್ತು. ಧಾರ್ಮಿಕ ಕ್ಷೇತ್ರದಲ್ಲಿ ದಾನದ ಮಹತ್ವವನ್ನು ಅರಿತುಕೊಂಡ ಅರಸರು ಮತ್ತು ಅಧಿಕಾರಿ ವರ್ಗದವರು ಹೆಚ್ಚು ಹೆಚ್ಚು ದಾನವನ್ನು ದೇವಾಲಯ ಮತ್ತು ಬ್ರಾಹ್ಮಣರಿಗೆ ನೀಡಲು ಮುಂದಾದರು. ಧಾರ್ಮಿಕ ಪ್ರಭುತ್ವವನ್ನು ರಾಜಪ್ರಭುತ್ವದ ಅಸ್ತಿತ್ವಕ್ಕೋಸ್ಕರ ಬಳಸಿಕೊಳ್ಳುವುದು ಅಂದು ಅನಿವಾರ್ಯವಾಗಿತ್ತು. ಪರೋಕ್ಷವಾಗಿ ಈ ವ್ಯವಸ್ಥೆ ಧಾರ್ಮಿಕ ಪ್ರಭುತ್ವವನ್ನು ಇನ್ನಷ್ಟು ಗಟ್ಟಿಗೊಳಿಸುವ ಅಪಾಯವಿದ್ದರೂ ರಾಜಪ್ರಭುತ್ವಕ್ಕೆ ತಾತ್ಕಾಲಿಕ ಭದ್ರತೆಯೇ ಪ್ರಮುಖವಾಗಿರುತ್ತಿತ್ತು. ವಿವಿಧ ಅಧಿಕಾರದಲ್ಲಿರುವವರನ್ನು ವಿವಿಧ ಧಾರ್ಮಿಕ ಪಂಗಡದವರನ್ನು ಅಧೀನದಲ್ಲಿಟ್ಟುಕೊಳ್ಳಲು ದಾನ ನೀಡುವುದು ಅನಿವಾರ್ಯವೂ ಆಗಿತ್ತು. ಸಮಾಜದ ಕೆಳವರ್ಗದ ಜನರಿಗೆ ದಾನ ನೀಡಿರುವ ಉಲ್ಲೇಖಗಳು ಹೆಚ್ಚಾಗಿ ಸಿಗುವುದಿಲ್ಲ. ದಾನ ನೀಡುವುದರಲ್ಲಿಯೂ ವೈದಿಕ ಹಿನ್ನೆಲೆಯಿಂದ ಬಂದ ವರ್ಣಾಶ್ರಮ ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಇದರಿಂದಾಗಿ ದಾನ ನೀಡುವುದು ಇದ್ದ ವ್ಯವಸ್ಥೆಯನ್ನು ಯಥಾಪ್ರಕಾರ ಕಾಯ್ದುಕೊಂಡು ಹೋಗಲು ನೀಡಿದ ಲಂಚದ ರೀತಿಯಲ್ಲಿ ಕಂಡುಬರುತ್ತದೆ.

ಸಮಾಜದ ಕೆಳಸ್ತರದ ಜನರು ತಾವು ಉತ್ಪಾದಿಸಿದ ಸಂಪತ್ತಿನ ಒಂದು ಭಾಗವನ್ನು ಮಾತ್ರ ತೆಗೆದುಕೊಳ್ಳಬೇಕೆಂಬ ನಿಯಮವನ್ನು ರೂಪಿಸಲಾಗಿತ್ತು. ಪ್ರಭುತ್ವದ ದೃಷ್ಟಿಯಿಂದ ಅದು ಹೆಚ್ಚುವರಿ ಉತ್ಪಾದನೆಯಾಗಿದ್ದು ಉತ್ಪಾದಿಸಿದವನೇ ಅದನ್ನು ಮರು ಪಡೆಯುತ್ತಾನೆಂಬುದು ಸ್ಪಷ್ಟ. ಈ ವ್ಯವಸ್ಥೆಯಲ್ಲಿ ದುಡಿಯುವ ವರ್ಗದ ಶ್ರಮಕ್ಕೆ ಬೆಲೆಯಿರುತ್ತಿರಲಿಲ್ಲ. ವಿವಿಧ ಉತ್ಪಾದಕ ವರ್ಗಗಳು ತಾವು ದುಡಿದ ಸಂಪತ್ತನ್ನು ಮಧ್ಯವರ್ತಿಗಳ ಮೂಲಕ ಅರಸನಿಗೆ ನೀಡಬೇಕಾಗಿತ್ತು. ಈ ರೀತಿ ಕ್ರೋಡೀಕರಿಸಲ್ಪಟ್ಟ ಸಂಪತ್ತನ್ನು ದೇವಾಲಯಗಳಿಗೆ, ಬ್ರಾಹ್ಮಣರಿಗೆ ಹಾಗೂ ಇನ್ನಿತರ ಅಧಿಕಾರಿ ವರ್ಗದವರಿಗೆ ನೀಡಲಾಗುತ್ತಿತ್ತು. ಈ ವ್ಯವಸ್ಥೆಯಿಂದಾಗಿ ಅನುತ್ಪಾದಕ ವರ್ಗಗಳು ಉತ್ಪಾದಕ ವರ್ಗಗಳ ಉತ್ಪಾದನೆಯ ಲಾಭವನ್ನು ಪಡೆದುಕೊಳ್ಳುವಂತಾಯಿತು. ದೇವಾಲಯಗಳು ಮತ್ತು ಬ್ರಾಹ್ಮಣರಿಗೆ ದಾನವನ್ನು ನೀಡುವ ಸಂದರ್ಭದಲ್ಲಿ ದಾನಕ್ಕೆ ಧಾರ್ಮಿಕ ಮಹತ್ವವನ್ನು ನೀಡಲಾಯಿತು. ಅದೊಂದು ಆರ್ಥಿಕ ಚಟುವಟಿಕೆಯಾಗಿದ್ದರೂ ಧಾರ್ಮಿಕ ಆಚರಣೆಯಾಗಿ ಪರಿವರ್ತನೆಗೊಂಡಿತು. ಬ್ರಾಹ್ಮಣರಿಗೆ ದಾನವಾಗಿ ನೀಡುವ ಭೂಮಿಯನ್ನು ಬ್ರಹ್ಮದೇಯ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಧಾರ್ಮಿಕ ಚಟುವಟಿಕೆಗಳ ಮೂಲಕ ಬ್ರಾಹ್ಮಣ ವರ್ಗ ಅತ್ಯಂತ ಪ್ರಭಾವಿ ವರ್ಗವಾಗಿ ರೂಪುಗೊಂಡಿತು.

ದೇವಾಲಯ ಮತ್ತು ಮಠಗಳ ನಿರ್ಮಾಣ ಕಾರ್ಯ ಬಿರುಸಿನಿಂದ ನಡೆದವು. ದಾನವಾಗಿ ಸಿಕ್ಕಿದ ಭೂಮಿಯ ಆಡಳಿತವೂ ಬ್ರಾಹ್ಮಣರಿಗೇ ಸೇರಿತ್ತು. ದೇವಾಲಯಗಳು ಆಡಳಿತ ಕೇಂದ್ರಗಳಂತೆ ಕಾರ್ಯ ನಿರ್ವಹಿಸುತ್ತಿದ್ದವು.

ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗಿ ನೀಡಿರುವುದು ಹೊಸ ಭೂಮಾಲೀಕ ಮಧ್ಯವರ್ತಿಗಳ ಹುಟ್ಟಿಗೂ ಕಾರಣವಾಯಿತು. ದಾನದ ರೂಪದಲ್ಲಿ ಭೂಮಿಯನ್ನು ಪಡೆದು ಭೂಮಾಲೀಕ ಮಧ್ಯವರ್ತಿಗಳಾಗಿ ಪರಿವರ್ತನೆಗೊಂಡವರನ್ನು ಮಹಾಜನರೆಂದು ಕರೆಯಲಾಗಿದೆ. ಬ್ರಾಹ್ಮಣ ಭೂಮಾಲೀಕರು ಮಹಾಜನರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ದಾನವಾಗಿ ಸಿಕ್ಕಿದ ಭೂಮಿಯ ವ್ಯವಹಾರಗಳನ್ನು ಮಹಾಜನರು ನೋಡಿಕೊಳ್ಳುತ್ತಿದ್ದರು. ತೆರಿಗೆಗಳನ್ನು ಸಂಗ್ರಹಿಸುವುದು, ಭೂಮಿಯನ್ನು ದತ್ತಿ ನೀಡುವುದು, ಕೆರೆಗಳನ್ನು ನಿರ್ಮಿಸುವುದು, ಧಾರ್ಮಿಕ ಮತ್ತು ಶೈಕ್ಷಣಿಕ ಕೆಲಸ ಕಾರ್ಯಗಳನ್ನು ಮಾಡುವುದು ಮುಂತಾದ ಕೆಲಸಗಳನ್ನು ಮಹಾಜನರು ಮಾಡುತ್ತಿದ್ದರು. ಇದರಿಂದಾಗಿ ಬ್ರಹ್ಮದೇಯ ಹಳ್ಳಿಗಳ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಜೀವನ ಬ್ರಾಹ್ಮಣ ಭೂಮಾಲೀಕರ ಅಧೀನಕ್ಕೆ ಬರುವಂತಾಯಿತು. ಮಹಾಜನರು ಹಳ್ಳಿಗಳ ಪ್ರತಿನಿಧಿಗಳಾಗಿ ಆಯ್ಕೆಗೊಂಡು ಕೇಂದ್ರಪ್ರಭುತ್ವ ಮತ್ತು ರೈತರ ನಡುವಿನ ಮಧ್ಯವರ್ತಿಗಳಾಗಿ ಅಧಿಕಾರ ಚಲಾಯಿಸುತ್ತಿದ್ದರು. ಇದರಿಂದಾಗಿ ಕೃಷಿಕರು ತಮ್ಮ ಪ್ರಾತಿನಿಧ್ಯವನ್ನು ಕಳೆದುಕೊಳ್ಳಬೇಕಾಯಿತು. ಭೂಮಾಲೀಕ ಮಧ್ಯವರ್ತಿಗಳು ಒಂದು ಸಂಕೀರ್ಣ ಸಮಾಜ ಮತ್ತು ರಾಜಕಾರಣವನ್ನು ಹುಟ್ಟುಹಾಕಿದರು.

ಮಧ್ಯಕಾಲೀನ ಕರ್ನಾಟಕದಲ್ಲಿ, ಅದರಲ್ಲೂ ರಾಷ್ಟ್ರಕೂಟರಿಂದ ಹೊಯ್ಸಳರವರೆಗಿನ ಅವಧಿಯಲ್ಲಿ, ನೀಡಲಾದ ದಾನದತ್ತಿಗಳ ಕೆಲವು ವಿವರಗಳು ಇಲ್ಲಿವೆ :

ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಮತ್ತು ಆ ಅವಧಿಯಲ್ಲಿಯ ಅನೇಕ ಸಣ್ಣಪುಟ್ಟ ಅರಸುಮನೆತನಗಳು ವಿವಿಧ ಉದ್ದೇಶಗಳಿಗಾಗಿ ದಾನ ನೀಡುತ್ತಿದ್ದ ಉಲ್ಲೇಖಗಳು ಸಾಕಷ್ಟಿವೆ. ಅವುಗಳಲ್ಲಿ ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಿದ ದಾನಗಳ ಸಂಖ್ಯೆಯೇ ಹೆಚ್ಚಿನದು. ರಾಷ್ಟ್ರಕೂಟರು ನೀಡಿರುವ ದಾನಗಳಲ್ಲಿ ಧಾರ್ಮಿಕ ಸ್ವರೂಪದ ದಾನಗಳ ಸಂಖ್ಯೆಯೇ ಹೆಚ್ಚಿನವು. ಅವರ ಮೂವತ್ತು ಭೂದಾನಗಳಲ್ಲಿ ಇಪ್ಪತ್ತ ನಾಲ್ಕು ದಾನಗಳನ್ನು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಲಾಯಿತು. ಕ್ರಿ. ಶ. ೮ನೆಯ ಶತಮಾನದ ಶ್ರವಣಬೆಳಗೊಳದ ಶಾಸನವೊಂದರಲ್ಲಿ ಒಬ್ಬ ಜೈನ ಯತಿಗೆ ದಾನವನ್ನು ನೀಡಿದ ಉಲ್ಲೇಖವಿದೆ. ಕ್ರಿ. ಶ. ೮೦೦ಕ್ಕೆ ಸೇರಿದ ಮಹಾಶಿವಗುಪ್ತ ಎನ್ನುವವನ ಶಿವಪುರ ಶಾಸನವು ಬಡಗಿ, ಕಮ್ಮಾರ, ಕುಂಬಾರ ಮೊದಲಾದ ಗ್ರಾಮ ಪಾಂಚಾಳರಿಗೆ ಅವರ ವೃತ್ತಿ ಸೇವೆಗಾಗಿ ನಿರ್ದಿಷ್ಟ ಧಾನ್ಯ ಭಾಗವನ್ನು ಹಂಚಿಕೊಡಲಾಗುತ್ತಿತ್ತೆಂದು ಹೇಳುತ್ತದೆ. ಈ ಕುಶಲಕರ್ಮಿಗಳ ಸೇವೆ ಪ್ರಭುತ್ವಕ್ಕೆ ಅನಿವಾರ್ಯವಾಗಿತ್ತು. ಕುಶಲಕರ್ಮಿಗಳ ಪರಿಣತಿಯನ್ನು ಬಳಸಿಕೊಂಡು ಪ್ರಭುತ್ವ ತನ್ನ ಬುಡವನ್ನು ಭದ್ರವಾಗಿಸಿಕೊಂಡಿತು.

ಕಲ್ಯಾಣದ ಚಾಲುಕ್ಯರ ದಾನ ಶಾಸನಗಳಲ್ಲಿ ಮೂರು ತಲೆಮಾರುಗಳು ಅನುಭವಿಸುವ ದಾನ, ಅಧಿಕಾರ ಪಡೆದ ವ್ಯಕ್ತಿಯು ಜೀವಂತವಾಗಿರುವವರೆಗೆ ಅನುಭವಿಸುವ ದಾನ ಮುಂತಾದ ಉಲ್ಲೇಖಗಳು ಸಿಗುತ್ತವೆ. ಆರನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದ ಮೊದಲ ವರ್ಷದಲ್ಲಿಯೇ ಮಹಾದಾನಗಳನ್ನು ನೀಡಿದ ಉಲ್ಲೇಖಗಳು ಸಿಗುತ್ತವೆ. ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರನಾದ ಚಿದ್ದಣ ಚೋಳ ಎನ್ನುವವನು ಅಗ್ರಹಾರವೊಂದರ ಮಹಾಜನರಿಗೆ ದಾನವನ್ನು ನೀಡುತ್ತಾನೆ, ಈ ದಾನವನ್ನು ಪುನರ್‌ದತ್ತಿ ಎಂಬುದಾಗಿ ಹೆಸರಿಸಲಾಗಿದೆ. ಹೊಯ್ಸಳರ ಶಾಸನಗಳ ಬಹುಭಾಗವು ದಾನಶಾಸನಗಳಾಗಿವೆ. ಅವು ಹೊಯ್ಸಳ ಅರಸರನ್ನು ದಾನಶೂರರೆಂದು ವರ್ಣಿಸಿವೆ. ಶಾಸನಗಳು ಪ್ರಭುತ್ವದ ಮುಖವಾಣಿಗಳಾಗಿದ್ದರಿಂದ ಹಾಗೂ ಅವು ರಾಜಾಜ್ಞೆಗಳೇ ಆಗಿದ್ದರಿಂದ ಆ ರೀತಿ ವರ್ಣಿಸಿದ್ದರಲ್ಲಿ ವಿಶೇಷತೆಯೇನೂ ಇಲ್ಲ. ಹೊಯ್ಸಳರ ಆಳ್ವಿಕೆಯಲ್ಲೂ ಬ್ರಾಹ್ಮಣರಿಗೆ ಜೀವನೋಪಾಯಕ್ಕಾಗಿ ಬ್ರಹ್ಮದೇಯ ಭೂಮಿಯನ್ನು ನೀಡಲಾಯಿತು. ಹೊಯ್ಸಳ ದೊರೆ ನರಸಿಂಹನ ಅನುಮತಿ ಪಡೆದು ನಕ ಎನ್ನುವ ಹೆಸರಿನ ಮಂತ್ರಿಯು ಬ್ರಹ್ಮಸಮುದ್ರ ಎನ್ನುವ ಅಗ್ರಹಾರವನ್ನು ನಿರ್ಮಿಸಿ, ಅದನ್ನು ಹನ್ನೆರಡು ಮಂದಿ ಬ್ರಾಹ್ಮಣರಿಗೆ ನೀಡಿದನು. ಹೊಯ್ಸಳ ವಿಷ್ಣುವರ್ಧನನು ದೇವಲಿಗೆ ನಾಡು ಎನ್ನುವಲ್ಲಿ ಅಗ್ರಹಾರವೊಂದನ್ನು ನಿರ್ಮಿಸಿ ಬ್ರಾಹ್ಮಣರಿಗೆ ನೀಡಿದನು. ಬಲ್ಲಾಳದೇವನು ಬಾಣಾವರವನ್ನು ಅಗ್ರಹಾರವನ್ನಾಗಿ ಪರಿವರ್ತಿಸಿ ೭೪ ಬ್ರಾಹ್ಮಣರಿಗೆ ನೀಡಿದನು. ಇಂಥ ಅನೇಕ ದಾನ ಶಾಸನಗಳ ಕುರಿತು ಮಾಹಿತಿಗಳು ಸಿಗುತ್ತವೆ.

ದಾನವನ್ನು ಅರಸರಷ್ಟೇ ನೀಡುತ್ತಿರಲಿಲ್ಲ, ಅವರ ರಾಣಿಯರು, ಮಹಾಮಂಡಳೇಶ್ವರರು, ಸಾಮಂತರು, ಅಧಿಕಾರಿ ವರ್ಗದವರು ಮುಂತಾದವರು ವಿವಿಧ ಕೆಲಸ ಕಾರ್ಯಗಳಿಗೆ ದಾನ ನೀಡುತ್ತಿದ್ದರು. ಅಧಿಕಾರವನ್ನು ಮುಂದುವರಿಸಿಕೊಂಡು ಹೋಗಲು, ಸಂಬಂಧಗಳನ್ನು ಬೆಸೆಯಲು ಹಾಗೂ ಸಮಾಜದಲ್ಲಿ ಶ್ರೇಣೀಕೃತ ವ್ಯವಸ್ಥೆಯನ್ನು ಕಾಯ್ದುಕೊಂಡುಬರಲು ದಾನ ನೀಡುವ ಪದ್ಧತಿ ಒಂದು ಸಾಧನವಾಗಿತ್ತು. ಅದೇ ರೀತಿ ಭೂಮಿಯನ್ನು ದಾನ ನೀಡುವ ಪದ್ಧತಿ ಅರಸರಿಗೆ ಹಲವಾರು ಸಂದರ್ಭಗಳಲ್ಲಿ ಮಾರಕವಾಗಿಯೂ ಪರಿಣಮಿಸಿದ್ದುಂಟು. ಹಳ್ಳಿಗಳನ್ನು ಬ್ರಾಹ್ಮಣರಿಗೆ ಹಾಗೂ ಇನ್ನಿತರ ವರ್ಗದವರಿಗೆ ದಾನ ನೀಡುವಾಗ ತೆರಿಗೆಯಿಂದ ವಿನಾಯಿತಗೊಳಿಸಲಾಗುತ್ತಿತ್ತು. ಇದರಿಂದಾಗಿ ಹಳ್ಳಿಗಳಿಂದ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿದ್ದ ಕಂದಾಯ ಹಳ್ಳಿಗರಲ್ಲಿಯೇ ಉಳಿಯುವಂತಾಯಿತು. ಇಲ್ಲಿ ಹಳ್ಳಿಗರೆಂದರೆ ಭೂಮಿಯನ್ನು ದಾನವಾಗಿ ಪಡೆದವರು ಎಂದರ್ಥ. ಹಳ್ಳಿಗಳಿಂದ ಬರುವ ಕಂದಾಯ ಮಾತ್ರವಲ್ಲದೆ ಅಲ್ಲಿನ ಆಡಳಿತವೂ ಕೇಂದ್ರಪ್ರಭುತ್ವದ ಕೈಗಳಿಂದ ನಿಧಾನವಾಗಿ ತಪ್ಪಿಹೋಗುವಂತಾಯಿತು. ಈ ಬದಲಾವಣೆಗಳಿಂದಾಗಿ ಅನೇಕ ಪ್ರದೇಶಗಳು ರಾಜನ ಹತೋಟಿಗೆ ಒಳಪಡದೆ ಇರುವಂತಾಯಿತು.




ಭೂಮಿಯನ್ನು ದಾನ ನೀಡುವ ಪದ್ಧತಿ ರಾಜ್ಯದ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಮಹತ್ತರ ಬದಲಾವಣೆಗಳನ್ನು ತಂದಿತು. ದಾನವನ್ನು ಪಡೆದ ಜನರು ಮತ್ತು ಧಾರ್ಮಿಕ ಕೇಂದ್ರಗಳು ಭೂಮಾಲೀಕರಾಗಿ ಕಾಣಿಸಿಕೊಂಡು ದಾಸ್ಯರೂಪಿ ಸಂಬಂಧಗಳನ್ನು ಹುಟ್ಟು ಹಾಕಿದರು. ಭೂಮಾಲೀಕ ವರ್ಗವು ಜೀತ ಪದ್ಧತಿಯನ್ನು ಹುಟ್ಟುಹಾಕಿತು. ಜೀತದಾಳುಗಳು ತಮ್ಮ ಬದುಕಿನುದ್ದಕ್ಕೂ ಭೂಮಾಲೀಕರಾದ ತಮ್ಮ ಒಡೆಯರ ಜಮೀನಿನಲ್ಲಿ ದುಡಿಯಬೇಕಾಗಿತ್ತು. ಹೊಸ ಭೂಮಾಲೀಕ ಮಧ್ಯವರ್ತಿಗಳ ಹುಟ್ಟು ಆಡಳಿತದ ಅನೇಕ ಸ್ವತಂತ್ರ ಘಟಕಗಳ ಹುಟ್ಟಿಗೂ ಕಾರಣವಾಯಿತು. ಕೇಂದ್ರ ಪ್ರಭುತ್ವಕ್ಕೂ ಏಕೀಕೃತ ನಿಯಂತ್ರಣ ಸಾಧ್ಯವಿರಲಿಲ್ಲ. ಇದರಿಂದಾಗಿ ಭೂಮಾಲೀಕರು ಇನ್ನಷ್ಟು ಗಟ್ಟಿಗೊಳ್ಳುವಂತಾಯಿತು. ಇದು ಊಳಿಗಮಾನ್ಯ ಹಂತಕ್ಕೆ ಚಲಿಸುತ್ತಿರುವ ಸಾಮಾಜಿಕ ರಚನೆಯ ಲಕ್ಷಣವೂ ಹೌದು.

ಊಳಿಗಮಾನ್ಯ ವ್ಯವಸ್ಥೆಯ ಅಸ್ತಿತ್ವ ಮತ್ತು ಸ್ವರೂಪದ ಚರ್ಚೆಯಲ್ಲಿ ದಾನ ನೀಡುವ ಪದ್ಧತಿ ಪ್ರಮುಖ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಪ್ರಸಿದ್ಧ ಚರಿತ್ರಕಾರ ಆರ್.ಎಸ್. ಶರ್ಮಾ ಅವರ ಪ್ರಕಾರ ಊಳಿಗಮಾನ್ಯತೆಯ ಹುಟ್ಟಿಗೆ ಪ್ರಮುಖ ಕಾರಣವೆಂದರೆ, ಬ್ರಾಹ್ಮಣರು, ಧಾರ್ಮಿಕ ಸಂಘ ಸಂಸ್ಥೆಗಳು ಹಾಗೂ ಸರಕಾರಿ ಅಧಿಕಾರಿಗಳಿಗೆ ನೀಡುತ್ತಿದ್ದ ಮಿತಿಮೀರಿದ ಭೂದಾನಗಳು. ಈ ವ್ಯಾಖ್ಯಾನವು ಸಾಮಾಜಿಕ ಬಿಕ್ಕಟ್ಟು, ನಗರಗಳ ಅವನತಿ, ನಾಣ್ಯಗಳ ಚಲಾವಣೆಯಲ್ಲಿನ ಇಳಿಮುಖ ಮುಂತಾದ ವಿಚಾರಗಳ ಕುರಿತ ಚರ್ಚೆಗೆ ಅವಕಾಶ ಕಲ್ಪಿಸಿಕೊಟ್ಟಿತು. ಅದೇ ರೀತಿ ಭೂಮಿಗೆ ಸಂಬಂಧಿಸಿದ ವಿಚಾರಗಳು, ಕೃಷಿ ಆರ್ಥಿಕತೆ, ಭೂಮಾಲೀಕರು, ಹೆಚ್ಚುವರಿ ಉತ್ಪಾದನೆ ಮುಂತಾದವು ಚರ್ಚೆಯನ್ನು ಇನ್ನಷ್ಟು ವಿಸ್ತರಿಸಿ ಅದಕ್ಕೊಂದು ತಾತ್ವಿಕ ಚೌಕಟ್ಟನ್ನು ನಿರ್ಮಿಸಿಕೊಟ್ಟವು. ಹೀಗೆ ರಾಜಪ್ರಭುತ್ವವು ತನ್ನ ಅಸ್ತಿತ್ವ ಮತ್ತು ವಿಸ್ತರಣೆಯ ದೃಷ್ಟಿಯಿಂದ ನೀಡಿದ ಮಿತಿಮೀರಿದ ದಾನಗಳು ಹೊಸ ಅರ್ಥವ್ಯವಸ್ಥೆಯೊಂದರ ಹುಟ್ಟಿಗೆ ಕಾರಣವಾಯಿತು. ಅದು ಶ್ರೇಣೀಕೃತ ಸಮಾಜ ವ್ಯವಸ್ಥೆಗೆ ಪೂರಕವಾಗಿಯೇ ಇತ್ತು. ರಾಜಕೀಯ ಮತ್ತು ಧಾರ್ಮಿಕ ಅಧಿಕಾರಗಳನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಜನರು ದಾನ ನೀಡುವ ವ್ಯವಸ್ಥೆಯಿಂದಾಗಿ ಸಂಪತ್ತು ಮತ್ತು ಸವಲತ್ತುಗಳನ್ನೂ ಪಡೆದುಕೊಳ್ಳುವಂತಾಯಿತು. ಇದರಿಂದಾಗಿ ಇವರು ಸ್ಥಳೀಯ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳ ಮೇಲೆ ನೇರ ನಿಯಂತ್ರಣ ಸಾಧಿಸಿ, ಸ್ಥಳೀಯ ಯಜಮಾನರಾಗಿ ಕಾಣಿಸಿಕೊಂಡರು.

ಡಾ|| ಕೆ. ಮೋಹನ್‌ಕೃಷ್ಣ ರೈ
ಹಿರಿಯ ಶ್ರೇಣಿ ಅಧ್ಯಾಪಕರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಆರೋಗ್ಯ ಮಾನವನ ಅನರ್ಘ್ಯ ಐಶ್ವರ್ಯ. ಆರೋಗ್ಯ ಇಲ್ಲದಿದ್ದರೆ, ನಮಗಿರುವ ಸಂಪತ್ತು , ಜ್ಞಾನ, ಗೌರವ, ಅಧಿಕಾರ, ಸುರಕ್ಷತೆ ಎಲ್ಲವೂ ವ್ಯರ್ಥ. ಹೀಗಾಗಿ ಮಾನವನು ಅನಾದಿಕಾಲದಿಂದಲೂ ಆರೋಗ್ಯಕ್ಕೆ ಪ್ರಪ್ರಥಮ ಪ್ರಾಶಸ್ತ್ಯ ನೀಡುತ್ತಾ ಬಂದಿದ್ದಾನೆ. ಈಗಲೂ ನಾವು ಸ್ನೇಹಿತರನ್ನೋ ಬಂಧುಗಳನ್ನೋ ಭೇಟಿಯಾದಾಗ "ನೀವು ಹೇಗಿದ್ದೀರಿ, ನಿಮ್ಮ ಆರೋಗ್ಯ ಹೇಗಿದೆ ?" ಎಂಬ ಪೀಠಿಕೆಯೊಂದಿಗೆ ಮಾತುಕತೆ ಆರಂಭಿಸುತ್ತೇವೆ.

**ಡಾ|| ಡಿ. ಕೆ. ಮಹಾಬಲರಾಜು**

# ಆರೋಗ್ಯ ಅಂದರೆ ಏನು ?

**ನಾ**ನು ಆರೋಗ್ಯ ಅಂದರೆ ಏನು ಎಂಬ ಪ್ರಶ್ನೆಯನ್ನು ಕೇಳಿದರೆ, ರೋಗಗಳು ಇಲ್ಲದೆ ಇರುವುದೇ ಆರೋಗ್ಯ ಎಂದು ನೀವು ಪಟಕ್ಕನೆ ಉತ್ತರಿಸಿಬಿಡುವಿರಿ. ವಾಸ್ತವವಾಗಿ ಆರೋಗ್ಯ ಎಂಬ ತೀರಾ ಪರಿಚಿತ ಪದದ ಅರಿವಿನ ಬಗ್ಗೆ ನಮಗೆಷ್ಟು ಸಂದೇಹರಹಿತ ದೃಢ ವಿಶ್ವಾಸ ವಿದ್ದರೂ, 'ಆರೋಗ್ಯ'ದ ಶಬ್ದಾರ್ಥವನ್ನು ಸೂಕ್ತವಾಗಿ ವ್ಯಾಖ್ಯಾನಿಸುವುದು ಅಷ್ಟು ಸುಲಭವಲ್ಲ.

ವಿಶ್ವ ಆರೋಗ್ಯ ಸಂಸ್ಥೆ (ಡಬ್ಲ್ಯುಎಚ್‌ಓ) ೧೯೪೮ರಲ್ಲಿ, ತನ್ನ ಶಾಸನ ಪೀಠಿಕೆಯಲ್ಲಿ ಆರೋಗ್ಯ ಎಂಬ ಪದಕ್ಕೆ ಇಡೀ ವಿಶ್ವವೇ ಒಪ್ಪಿಕೊಳ್ಳುವಂತಹ ವ್ಯಾಖ್ಯಾನವನ್ನು ಪ್ರಸ್ತುತ ಪಡಿಸಿದೆ. ಅದೇನೆಂದರೆ – "ಆರೋಗ್ಯ ಕೇವಲ ರೋಗರಹಿತ ಸ್ಥಿತಿಯಾಗಲೀ, ದೇಹದಾರ್ಢ್ಯತೆ ಇರುವುದಾಗಲೀ ಅಲ್ಲ; ಪರಿಪೂರ್ಣ ಭೌತಿಕ, ಮಾನಸಿಕ ಹಾಗೂ ಸಾಮಾಜಿಕ ಸುಸ್ಥಿತಿಯೇ ಆರೋಗ್ಯ."

ಆಧುನಿಕ ವೈದ್ಯವಿಜ್ಞಾನವು ಪೂರ್ವಗ್ರಹಪೀಡಿತವಾಗಿ ಸದಾ ಕಾಯಿಲೆ (ಅನಾರೋಗ್ಯ)ಗಳ ಬಗ್ಗೆಯೇ ಹೆಚ್ಚಿನ ಆಸಕ್ತಿ ವಹಿಸಿ, ಆರೋಗ್ಯವನ್ನು ಅಲಕ್ಷಿಸಿದೆ ಎಂಬ ಮಾತಿದೆ. ಪರಿಣಾಮವಾಗಿ, ಇಂದಿಗೂ ನಮ್ಮಲ್ಲಿ ಆರೋಗ್ಯದ ಒಳಗುಟ್ಟಿನ ಆಳ-ಹರವಿನ ಬಗ್ಗೆ ತಲಸ್ಪರ್ಶಿ ಜ್ಞಾನದ ಕೊರತೆ ಇದೆ. ಮಾನವನನ್ನು ಯಂತ್ರದಂತೆ, ಕಾಯಿಲೆಯನ್ನು ಯಂತ್ರದೋಷದಂತೆ ಪರಿಗಣಿಸಿ, ಆರೋಗ್ಯಕ್ಕೂ, ದೇಹಕ್ಕೂ, ಮನಸ್ಸಿಗೂ, ಪರಿಸರಕ್ಕೂ, ಸಮಾಜಕ್ಕೂ, ರಾಜಕೀಯಕ್ಕೂ ಇರುವ ಸಂಬಂಧ ಸಾಮರಸ್ಯಗಳನ್ನು ಕಡೆಗಣಿಸಿದ ಪರಿಣಾಮವಾಗಿ ಇಂದಿಗೂ ನಮ್ಮಲ್ಲಿ ಅನಾರೋಗ್ಯ, ಅಪೌಷ್ಟಿಕತೆ, ಮಾನಸಿಕ ಕಾಯಿಲೆ, ಮದ್ಯವ್ಯಸನ, ಅಪಘಾತ, ಕ್ಯಾನ್ಸರ್, ಜನಸಂಖ್ಯಾಸ್ಫೋಟ, ಪರಿಸರಮಾಲಿನ್ಯ ಮತ್ತಿತರ ಸಮಸ್ಯೆಗಳು ಹೆಡೆಯೆತ್ತಿ ನಿಂತಿವೆ.

ಇತ್ತೀಚೆಗೆ ಇಡೀ ವಿಶ್ವವೇ ಆರೋಗ್ಯದ ಬಗ್ಗೆ ಎಚ್ಚೆತ್ತುಕೊಳ್ಳುತ್ತಿದೆ. ಮನುಷ್ಯನ ಚಿಂತನ ಸ್ತರಗಳು ಉತ್ತಮಗೊಳ್ಳುತ್ತಿದ್ದಂತೆಯೇ ಆರೋಗ್ಯ ಪ್ರಜ್ಞೆಯೂ ಏರುಗತಿಯಲ್ಲಿ ಸಾಗುತ್ತಿದೆ. ಆರೋಗ್ಯದ ಹೊಸ ಹೊಸ ತತ್ವಗಳು ಉಗಮಗೊಳ್ಳುತ್ತಿವೆ. ಆರೋಗ್ಯವು ದೇಶದ ಪ್ರಗತಿಯ ಅವಿಭಾಜ್ಯ (ಪೂರಕ) ಅಂಶ ಎಂಬ ಅರಿವು ಮೂಡುತ್ತಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಜೆಗಳಿಗೆ ಸುಭಿಕ್ಷೆಯನ್ನುಂಟುಮಾಡುವಂತಹ ಆರೋಗ್ಯವನ್ನು ದೊರಕಿಸಿಕೊಡುವುದೇ ಎಲ್ಲ ದೇಶಗಳ ನಿತ್ಯಸ್ತೋತ್ರವಾಗಿದೆ. ಈ ಮಂತ್ರವೇ 'ಹೆಲ್ತ್ ಫಾರ್ ಆಲ್'.

ಆರೋಗ್ಯ ಎಂಬ ಪದಕ್ಕೆ ದೇಹಾರೋಗ್ಯ, ಸ್ವಸ್ಥತೆ, ಸೌಖ್ಯ, ದೇಹ ಸ್ಥಿತಿ ಎಂಬ ಅರ್ಥವಿದೆ. ವಿಶ್ವ ಆರೋಗ್ಯ ಸಂಸ್ಥೆ ಪ್ರಕಟಿಸಿರುವ ಆರೋಗ್ಯ ಪದದ ವಾಖ್ಯಾನ ಆರೋಗ್ಯಕ್ಕೆ ದೈಹಿಕ (ಭೌತಿಕ), ಮಾನಸಿಕ, ಸಾಮಾಜಿಕ ಆಯಾಮಗಳಿರುವುದನ್ನು ಸ್ಪಷ್ಟವಾಗಿ ತೋರಿಸುತ್ತದೆ. ಇತ್ತೀಚೆಗೆ ಆಧ್ಯಾತ್ಮಿಕ, ಭಾವನಾತ್ಮಕ, ಔದ್ಯೋಗಿಕ ಆಯಾಮಗಳೂ ಸೇರ್ಪಡೆಯಾಗಿವೆ. ಜೊತೆಗೆ ತಜ್ಞರು ತಾತ್ವಿಕ, ಸಾಂಸ್ಕೃತಿಕ, ಸಾಮಾಜಿಕ, ಪರಿಸರ, ವಿದ್ಯೆ, ಆಹಾರ ಮತ್ತಿತರ ಆರೋಗ್ಯದ ಆಯಾಮಗಳನ್ನು ಸೂಚಿಸಿದ್ದಾರೆ. ಆರೋಗ್ಯದ ಮುಖ್ಯ ಆಯಾಮಗಳನ್ನು ಸ್ವಲ್ಪ ವಿಸ್ತೃತವಾಗಿ ನೋಡೋಣ.



ಚಿತ್ರ ೧ : ಆರೋಗ್ಯದ ಆಯಾಮಗಳು

**ಭೌತಿಕ ಆಯಾಮ** : ಆರೋಗ್ಯದ ಈ ಆಯಾಮವು ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತಹದ್ದು. ಇದು ದೇಹದ ರಚನಾ-ಕ್ರಿಯಾ ಪರಿಪೂರ್ಣತೆಯನ್ನು ಬಿಂಬಿಸುತ್ತದೆ. ಭೌತಿಕ ಆರೋಗ್ಯದ ಲಕ್ಷಣಗಳೆಂದರೆ, ವ್ಯಕ್ತಿಯ ವಯಸ್ಸು ಹಾಗೂ ಲಿಂಗಕ್ಕೆ ಅನುಗುಣವಾಗಿ ಎತ್ತರ, ತೂಕ, ದೇಹದಾರ್ಢ್ಯ, ಗಟ್ಟಿ ಮಾಂಸಖಂಡ, ನಾಡಿಮಿಡಿತ, ಬಿ. ಪಿ. ರಕ್ತ ಪರಿಚಲನೆ, ಉಸಿರಾಟ, ದೇಹತೂಕ ಇವೆಲ್ಲವೂ ಸಹಜ ಮಟ್ಟದಲ್ಲಿರಬೇಕು. ದೇಹದ ಆಂತರಿಕ ಮತ್ತು ಬಾಹ್ಯ ಅಂಗಗಳ ಗಾತ್ರ, ಪ್ರಮಾಣ, ಆಕಾರ, ಕಾರ್ಯಭಾರ, ಹೊಂದಾಣಿಕೆ ಅತ್ಯುತ್ತಮವಾಗಿರಬೇಕು. ಪಂಚೇಂದ್ರಿಯಗಳು ಕ್ರಿಯಾಶೀಲವಾಗಿರಬೇಕು. ಚರ್ಮ, ಕಣ್ಣು, ಕೂದಲು ಕಾಂತಿಯುತವಾಗಿರಬೇಕು. ಉಡುಪು ಶುಭ್ರವಾಗಿರಬೇಕು. ವ್ಯಕ್ತಿಯ ಉಸಿರು, ಮಲಮೂತ್ರ ವಿಸರ್ಜನೆ ಸುಲಲಿತವಾಗಿರಬೇಕು. ಹಸಿವು, ನಿದ್ದೆ, ಬಾಯಾರಿಕೆ ಸಹಜವಾಗಿರಬೇಕು. ದೇಹದಲ್ಲಿ ಹೆಚ್ಚು ಕೊಬ್ಬು ಇರಬಾರದು. ಒಟ್ಟಾರೆ ಹೇಳುವುದಾದರೆ ದೇಹದ ಪ್ರತಿಯೊಂದು ಜೀವಕಣಗಳು ಅತ್ಯುತ್ತಮ ಕ್ರಿಯಾಸಾಮರ್ಥ್ಯವನ್ನು ಹೊಂದಿರಬೇಕು.

**ಮಾನಸಿಕ ಆರೋಗ್ಯ** : ವ್ಯಕ್ತಿ ಆಂತರಿಕ ಅಥವಾ ಬಾಹ್ಯ

ತೊಳಲಾಟದಿಂದ ಮುಕ್ತವಾಗಿದ್ದು ತನ್ನ ಹಾಗೂ ತನ್ನ ಸುತ್ತಲಿನ ಪ್ರಪಂಚದೊಂದಿಗೆ ಸಮನ್ವಯ ಸ್ಥಾಪಿಸುವ ಮನಸ್ಸು ಇರಬೇಕು. ತನ್ನ ಅಸ್ತಿತ್ವದ, ಗೌರವದ, ಬೇಕುಬೇಡಗಳ, ಸಮಸ್ಯೆಗಳ ಬಗ್ಗೆ ಅರಿವು ಇರಬೇಕಲ್ಲದೆ, ಭಾವನೆಗಳ, ಉದ್ವೇಗಗಳ ನಿಗ್ರಹ ಸಾಮರ್ಥ್ಯವು ಇರಬೇಕು. ಇತರರೊಂದಿಗೆ ಹೊಂದಿಬಾಳುವ ಗುಣ ಇರಬೇಕು.

**ಸಾಮಾಜಿಕ ಆರೋಗ್ಯ** : ಮನುಷ್ಯ ಎಂದಿಗೂ ಒಂಟಿ ಅಲ್ಲ, ಆತ ಸಮಾಜದ ಅವಿಭಾಜ್ಯ ಅಂಗ. ಹೀಗಾಗಿ ಆತ ಸಮಾಜದೊಂದಿಗೆ, ಕುಟುಂಬದೊಂದಿಗೆ ಸೌಹಾರ್ದ ಬಾಂಧವ್ಯ ಹೊಂದಿರಬೇಕು.

**ಆರೋಗ್ಯದ ಹಂತಗಳು** : ಆರೋಗ್ಯ ಎಂದಿಗೂ ಒಂದೇ ಸ್ಥಿತಿಯಲ್ಲಿ ಮಲೆತು ನಿಲ್ಲುವಂತಹುದಲ್ಲ. ಇದರಲ್ಲಿ ಅನೇಕ ಬದಲಾವಣೆಗಳು, ಏರುಪೇರುಗಳು ಕಾಣುತ್ತಿರುತ್ತವೆ. ಸಮಾಜವಿಜ್ಞಾನಿಗಳು ಆರೋಗ್ಯದ ಸ್ತರಗಳನ್ನು ಹೀಗೆ ಪ್ರಸ್ತುತ ಪಡಿಸಿದ್ದಾರೆ. (ಚಿತ್ರ ೨)




*ಚಿತ್ರ ೨ : ಆರೋಗ್ಯದ ಸ್ತರಗಳು*

**ಆರೋಗ್ಯ ನಿರ್ಧಾರಕ ಅಂಶಗಳು** : ನಮ್ಮ ಆರೋಗ್ಯ ನಿರ್ಣಯದಲ್ಲಿ ಹಲವಾರು ಅಂಶಗಳ ಪಾಲಿದೆ. ಇವು ಮುಖ್ಯವಾಗಿ ನಮ್ಮ ಆಂತರಿಕ ಹಾಗೂ ಬಾಹ್ಯ ಸಂಬಂಧಿ ಅಂಶಗಳೇ ಆಗಿರುತ್ತವೆ. ಉದಾಹರಣೆಗೆ, ನಮ್ಮ ಆನುವಂಶಿಕತೆ (ಜೀನ್), ಪರಿಸರ, ಜೀವನಕ್ರಮ, ಸಾಮಾಜಿಕ ಆರ್ಥಿಕ ಸ್ತರ, ಲಭ್ಯವಿರುವ ಆರೋಗ್ಯಸೇವೆ, ಆಹಾರ, ವಿದ್ಯಾಭ್ಯಾಸ, ಉದ್ಯೋಗ, ಸಂಸ್ಕೃತಿ, ಸಾಮಾಜಿಕ-ರಾಜಕೀಯ ವ್ಯವಸ್ಥೆ ಮತ್ತಿತರ ಹಲವಾರು ಅಂಶಗಳಿಂದ ನಮ್ಮ ಆರೋಗ್ಯ ರೂಪುತಳೆಯುತ್ತದೆ.

**ಆರೋಗ್ಯ ಸೂಚಕಗಳು** : ಒಂದು ಪ್ರದೇಶದ ಜನರ ಆರೋಗ್ಯವನ್ನು ತಿಳಿಯಲು ನಾವು ಕೆಲವು ಸೂಚಕಗಳನ್ನು ಬಳಸುತ್ತೇವೆ. ಇಂತಹ ಸೂಚಿಗಳ ಸಹಾಯದಿಂದ, ಒಂದು ದೇಶದ ಜನರ ಆರೋಗ್ಯಮಟ್ಟವನ್ನು ಮತ್ತೊಂದು ದೇಶದ ಜನರ ಆರೋಗ್ಯಮಟ್ಟದೊಂದಿಗೆ ತುಲನೆ ಮಾಡಲು ಬರುತ್ತದೆ. ವಾರ್ಷಿಕ ಸಾವಿನ ಪ್ರಮಾಣ, ಒಂದು ವರ್ಷದ ಒಳಗಿನ ಮಕ್ಕಳ ಸಾವಿನ ಪ್ರಮಾಣ, ಬಾಣಂತಿ-ಗರ್ಭಿಣಿಯರ ಸಾವಿನ ಪ್ರಮಾಣ, ವಿಶಿಷ್ಟ ಕಾಯಿಲೆಗಳಿಂದ ಉಂಟಾಗುವ ಸಾವುಗಳು, ಕಾಯಿಲೆಗಳ ಸಾಂದ್ರತೆ, ಅಂಗ ಊನತೆ ಪ್ರಮಾಣ, ಅಪೌಷ್ಟಿಕತೆ – ರಕ್ತಹೀನತೆ ಪ್ರಮಾಣ, ಜನರ ಸರಾಸರಿ ತೂಕ-ಎತ್ತರ, ಆರೋಗ್ಯ ಸೌಲಭ್ಯತೆಗಳ ಲಭ್ಯತೆ, ಆರೋಗ್ಯ ಸೇವೆಗಳಿಂದ ಉಪಕೃತಗೊಳ್ಳುವವರ ಸಂಖ್ಯೆ, ಮಾನಸಿಕ ಅನಾರೋಗ್ಯ, ಅಪಘಾತ, ಮದ್ಯವ್ಯಸನ ಪ್ರಮಾಣ, ಸಾಮಾಜಿಕ – ಆರ್ಥಿಕ ಪ್ರಗತಿ, ಜೀವನಮಟ್ಟ, ಕುಟುಂಬ ಸದಸ್ಯರ ಸಂಖ್ಯೆ, ಕುಡಿವ ನೀರು, ಆಹಾರ ಲಭ್ಯತೆ, ಪರಿಸರ ಮಾಲಿನ್ಯ, ಸರಾಸರಿ ಆಯುರ್ಮಾನ ಮುಂತಾದ ಅಂಶಗಳು ಅಲ್ಲಿನ ಜನಾಂಗದ ಆರೋಗ್ಯವನ್ನು ಪ್ರತಿಫಲಿಸುತ್ತವೆ.

**ನಮ್ಮ ಆರೋಗ್ಯ ಸಮಸ್ಯೆಗಳು** : ಒಂದೊಂದು ದೇಶದಲ್ಲಿಯೂ ವಿವಿಧ ರೀತಿಯ ಆರೋಗ್ಯ ಸಮಸ್ಯೆಗಳು ಇರುತ್ತವೆ. ಕಾಲ ಮತ್ತು ಆರೋಗ್ಯಪ್ರಜ್ಞೆಗೆ ತಕ್ಕಂತೆ ದೇಶದ ಆರೋಗ್ಯ ಸಮಸ್ಯೆಗಳಲ್ಲಿ ಬದಲಾವಣೆಗಳು ತೋರುತ್ತಿರುತ್ತವೆ. ಸದ್ಯಕ್ಕೆ ನಮ್ಮ ದೇಶದಲ್ಲಿ ತಲೆದೋರುತ್ತಿರುವ ಆರೋಗ್ಯ ಸಮಸ್ಯೆಗಳನ್ನು (೧) ಅಪೌಷ್ಟಿಕತೆ (೨) ಅಂಟುರೋಗ (೩) ಅತಿ ಸಂತಾನ ಎಂದು ವಿಂಗಡಿಸಿಕೊಳ್ಳಬಹುದಾಗಿದೆ.

ಇಲ್ಲಿ ಬಹುತೇಕ ಜನರು, ಅದರಲ್ಲೂ ಮುಖ್ಯವಾಗಿ ಮಕ್ಕಳು ಮತ್ತು ಮಹಿಳೆಯರು ರಕ್ತಹೀನತೆ ಹಾಗೂ ಪ್ರೋಟೀನ್ ಅಭಾವದಿಂದ ಬಳಲುತ್ತಿರುತ್ತಾರೆ. ಅಯೋಡಿನ್ ಸಮಸ್ಯೆ ಏರುಗತಿಯಲ್ಲಿಯೇ ಇದೆ. ಕೆಲವೆಡೆ ಫ್ಲೂರೋಸಿಸ್ ಸಮಸ್ಯೆ ಇದೆ.

ಕ್ಷಯ, ಭೇದಿ, ಮಲೇರಿಯಾ, ನ್ಯುಮೋನಿಯ, ಟೈಫಾಯಿಡ್, ಜಾಂಡೀಸ್ ಮುಂತಾದ ಕಾಯಿಲೆಗಳು ದೇಶದ ಪ್ರಜೆಗಳನ್ನು ವ್ಯಾಪಕವಾಗಿ ಕಾಡುತ್ತಿವೆ. ಇತ್ತೀಚೆಗೆ ಏಡ್ಸ್ ಹಾವಳಿಯೂ ಹೆಚ್ಚಿದೆ. ಡೆಂಗ್ಯೂ, ಮೆದುಳುಜ್ವರ ಕೂಡ ಅಲ್ಲಲ್ಲಿ ಕಾಣುತ್ತಿದೆ. ಇನ್ನೂ ಅನೇಕ ಹಳೆ-ಹೊಸ ಅಂಟುರೋಗಗಳು ದೇಶದಲ್ಲಿ ಬೇರುಬಿಟ್ಟಿವೆ.

ನಮ್ಮ ದೇಶದಲ್ಲಿ ಸರಾಸರಿ ಪ್ರತಿವರ್ಷ ಒಂದು ಸಾವಿರ ಜನರಲ್ಲಿ ೯ ಜನ ಸಾಯುತ್ತಿದ್ದಾರೆ; ೨೫ ಜನ ಹುಟ್ಟುತ್ತಿದ್ದಾರೆ. ಹೀಗಾಗಿ ವಾರ್ಷಿಕ ಪ್ರತಿ ೧೦೦೦ ಜನ ಸಂಖ್ಯೆಗೆ (೨೫ – ೯) ೧೬ ಜನರ ಸೇರ್ಪಡೆಯಾಗುತ್ತಿದೆ. ಶೇಕಡಾ ೧.೬ರ ಬೆಳವಣಿಗೆ ಹೀಗೆಯೇ ಮುಂದುವರಿದರೆ, ಇನ್ನು ೩೦-೪೦ವರ್ಷಗಳಲ್ಲಿ ದೇಶದ ಜನಸಂಖ್ಯೆ ಎರಡುಪಟ್ಟು ಹೆಚ್ಚಾಗುತ್ತದೆ. ಜನಸಂಖ್ಯೆ ಹೆಚ್ಚಳದಿಂದಾಗಿ ಸಂಪನ್ಮೂಲಗಳ ಲಭ್ಯತೆಯ ಕೊರತೆ ಉಂಟಾಗುತ್ತದೆ. ಜನರ ಜೀವನ ಮಟ್ಟ ಕುಸಿಯುತ್ತದೆ. ಪರಿಸರ ಮಾಲಿನ್ಯ ಹೆಚ್ಚಾಗುತ್ತದೆ. ರೋಗ ರುಜಿನಗಳು ಹೆಚ್ಚುತ್ತವೆ.

ಅಪೌಷ್ಟಿಕತೆ, ಅಂಟುರೋಗ, ಅತಿಸಂತಾನ ಸಮಸ್ಯೆಗಳಿಂದ ತತ್ತರಿಸುತ್ತಿರುವ ನಮ್ಮ ದೇಶದಲ್ಲಿ ಈಗ ಸಕ್ಕರೆ ಕಾಯಿಲೆ, ಬೊಜ್ಜು ಬಿ.ಪಿ., ಹೃದಯಾಘಾತ, ಕ್ಯಾನ್ಸರ್, ಅಪಘಾತ, ಮಾನಸಿಕ ಕಾಯಿಲೆಗಳು ಸಹ ಹೇರಳವಾಗಿ ಕಾಣುತ್ತಿವೆ.

**ನಮಗೇಕೆ ಕಾಯಿಲೆಗಳು ಬರುತ್ತವೆ ?** : ನಮಗೇಕೆ ಕಾಯಿಲೆಗಳು ಬರುತ್ತವೆ ಎಂಬ ಪ್ರಶ್ನೆಗೆ ಜನರು ''ಕಾಯಿಲೆಗಳು ಮಾನವನಿಗಲ್ಲದೇ ಮರಕ್ಕೆ ಬರುತ್ತವೆಯೇ'' ಎನ್ನುತ್ತಾರೆ. ನಾನೂ ಕೂಡ ಇಂತಹ ಉತ್ತರಗಳಿಂದ ಪೋಷಣೆಗೊಂಡು, ಎಂ. ಬಿ. ಬಿ. ಎಸ್. ಪಾಸಾಗುವವರೆಗೂ ಕಾಯಿಲೆಗಳು ಮಾನವನಿಗೆ ಅನಿವಾರ್ಯ ಎಂದುಕೊಂಡಿದ್ದೆ. ಆದರೆ ಮನುಷ್ಯನಿಗೆ ಕಾಯಿಲೆಗಳು ಬಂದೇ ತೀರಬೇಕೆಂಬ ನಿಯಮವೇನಿಲ್ಲ ಎಂಬುದು ನನ್ನ ಈಗಿನ ತರ್ಕವಾಗಿದೆ. ಮಾನವನಿಗೆ ಹೇಗೆ ಮತ್ತು ಏಕೆ ಕಾಯಿಲೆಗಳು ಬರುತ್ತವೆ ಎಂಬುದು ತಿಳಿದರೆ, ಕಾಯಿಲೆಗಳಿಂದ ಪಾರಾಗಿ ಆರೋಗ್ಯ ಉಳಿಸಿಕೊಳ್ಳುವ, ಗಳಿಸಿಕೊಳ್ಳುವ ಹಾದಿಗಳು ನಿಚ್ಚಳವಾಗುತ್ತವೆ.

ಆರೋಗ್ಯ ಅನಾರೋಗ್ಯಗಳ ಪ್ರಜ್ಞೆ, ಮನುಷ್ಯನ ಹುಟ್ಟಿನ ದಿನದಂದೇ ಹುಟ್ಟಿಕೊಂಡಿದೆ. ವಿಶ್ವದ ಮೊದಲನೇ ಮಾನವನೇ ಪ್ರಪ್ರಥಮ ವೈದ್ಯ ಎಂದುಕೊಳ್ಳಬಹುದು. ಮೂಢನಂಬಿಕೆಗಳ ಕಾರ್ಮೋಡವೇ ಕವಿದಿದ್ದ ಪುರಾತನಕಾಲದಲ್ಲಿ ಮಾನವನು ತನ್ನ ಆರೋಗ್ಯ ಅನಾರೋಗ್ಯಕ್ಕೆ ದೈವ, ದೆವ್ವ, ಪಾಪ, ಪ್ರೇತ, ಮಾಟ ಮುಂತಾದ ಕಾರಣಗಳನ್ನು ಊಹಿಸಿಕೊಂಡಿದ್ದನು. ಅನಂತರದ ದಿನಗಳಲ್ಲಿ ವಿಶ್ವದ ಬೇರೆ ಬೇರೆ ಭಾಗಗಳಲ್ಲಿ ಅಲ್ಲಿನ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡೇ ವೈದ್ಯವಿಜ್ಞಾನ ರೂಪುಗೊಂಡಿದೆ. ಆಧುನಿಕ ವೈದ್ಯ ಶಾಸ್ತ್ರದ ಪಿತಾಮಹನಾದ ಹಿಪೊಕ್ರೆಟಿಸ್ (ಕ್ರಿ. ಪೂ. ೪೬೦-೩೭೦) ಕಾಯಿಲೆಗಳಿಗೆ ಕಾರಣ ಮಲಿನ ನೀರು, ಗಾಳಿ, ಆಹಾರ ಎಂದು ಹೇಳಿದ್ದನು. ವಿಜ್ಞಾನಿ ಆಂಟೋನಿ ಲಿವಿನ್ ಹಾಕ್ ೧೬೮೩ರಲ್ಲಿ ಸೂಕ್ಷ್ಮದರ್ಶಕಯಂತ್ರ ಕಂಡುಹಿಡಿದ ಅನಂತರ ರೋಗಾಣುಗಳನ್ನು ಪತ್ತೆಹಚ್ಚಲು ಸಾಧ್ಯವಾಯಿತು. ಮಾನವನ ಕಾಯಿಲೆಗಳಿಗೆ ರೋಗಾಣುಗಳೇ ಪ್ರಮುಖ ಕಾರಣ ಎಂದು ನಿರ್ಣಯಿಸಲಾಯಿತು.

ವಾಯು, ನೀರು ಇವುಗಳಲ್ಲಿ ಹಲವಾರು ರೋಗಾಣುಗಳಿದ್ದರೂ ಎಲ್ಲರಿಗೂ ಕಾಯಿಲೆ ತಗಲುವುದಿಲ್ಲ. ಕೆಲವೊಮ್ಮೆ ಒಂದೇ ಜಾತಿಯ ರೋಗಾಣು ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆ ರೀತಿಯ ಕಾಯಿಲೆ ಉಂಟುಮಾಡುತ್ತಿರುವ ನಿದರ್ಶನಗಳಿವೆ. ಕ್ಯಾನ್ಸರ್, ಸಕ್ಕರೆ ಕಾಯಿಲೆ, ಮಾನಸಿಕ ಕಾಯಿಲೆಗಳಲ್ಲಿ ರೋಗಾಣುಗಳ ಪಾತ್ರವೇ ಇರುವುದಿಲ್ಲ. ಈ ರೀತಿ ಹಲವು ಅಂಶಗಳನ್ನು ತರ್ಕಿಸಿದಾಗ, ಕಾಯಿಲೆಗೆ ಒಂದೇ ಕಾರಣ ಅಸಾಧ್ಯ. ಹಲವಾರು ಕಾರಣಗಳಿಂದ ಕಾಯಿಲೆಗಳು ಹುಟ್ಟುತ್ತವೆ ಎಂದು ಸ್ಪಷ್ಟವಾಗಿದೆ. ಉದಾಹರಣೆಗೆ, ಏಡ್ಸ್ ರೋಗಕ್ಕೆ ವೈರಾಣು ಕಾರಣವಾದರೂ, ಇದು ತಲೆದೋರಲು ಜನರ ಅಜ್ಞಾನ, ಅನೈತಿಕ ನಡವಳಿಕೆ, ಸಮಾಜ ವ್ಯವಸ್ಥೆ, ವಯಸ್ಸು, ಲಿಂಗ ಮುಂತಾದ ಅಂಶಗಳು ಪೂರಕವಾಗಿರುತ್ತವೆ.

ರೋಗಕಾರಕ ವಸ್ತು, ಆತಿಥೇಯ (ಮಾನವ) ಹಾಗೂ ಪರಿಸರದ, ಪರಸ್ಪರ (ಘರ್ಷಣೆ) ನರ್ತನೆಯಿಂದ ಕಾಯಿಲೆ ಉಂಟಾಗುತ್ತದೆ ಎಂಬುದು ಆಧುನಿಕ ವೈದ್ಯ ವಿಜ್ಞಾನದ ಸ್ಪಷ್ಟ ತಿಳುವಳಿಕೆಯಾಗಿದೆ. ಮನುಷ್ಯನನ್ನು ಫಲವತ್ತಾದ ಭೂಮಿ ಎಂದು, ರೋಗಕಾರಕ ವಸ್ತುವನ್ನು ಬೀಜವೆಂದು, ಇತರೆ ಅಂಶಗಳನ್ನು (ಪರಿಸರ - ಸಾಮಾಜಿಕ) ನೀರು-ಗಾಳಿ, ಬೆಳಕು, ಗೊಬ್ಬರ ಎಂದು ನಾವು ಊಹಿಸಿಕೊಳ್ಳಬಹುದು. ಕಾಯಿಲೆಗಳಿಗೆ ಕಾರಣವಾದ ಈ ಮೂರು ಅಂಶಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸೋಣ.

**ರೋಗಕಾರಕ ವಸ್ತುಗಳು** : ಮಾನವನಿಗೆ, ತನ್ನನ್ನು ಒಳಗೊಂಡಂತೆ, ಜಗತ್ತಿನಲ್ಲಿನ ಯಾವುದೇ ಪದಾರ್ಥ (ಸತ್ವ) ಕಾಯಿಲೆಕಾರಕವಾಗುವುದಿದೆ. ಕಾಯಿಲೆಕಾರಕ ವಸ್ತುಗಳನ್ನು ಕೆಳಗಿನ ರೀತಿಯಲ್ಲಿ ವಿಂಗಡಿಸಿಕೊಳ್ಳಬಹುದು.

೧. ಜೈವಿಕಗಳು : ವೈರಸ್, ಬ್ಯಾಕ್ಟೀರಿಯಾ, ಬೂಷ್ಟು, ಏಕಾಣು ಜೀವಿ, ಪ್ರಾಣಿಗಳು, ಪಕ್ಷಿಗಳು ಮತ್ತಿತರ ಜೀವಿಗಳು.

೨. ಆಹಾರ : ಪ್ರೋಟೀನ್, ಕಾರ್ಬೋಹೈಡ್ರೇಟ್, ಕೊಬ್ಬು, ಜೀವಸತ್ವ, ಲವಣ ನೀರು ಇವುಗಳ ಹೆಚ್ಚಳ ಇಲ್ಲವೆ ಕೊರತೆ.

೩. ರಾಸಾಯನಿಕಗಳು : ದೇಹದೊಳಗಿನ ರಾಸಾಯನಿಕಗಳ ಏರು ಪೇರು, ಬಾಹ್ಯಜಗತ್ತಿನ ಧೂಳು, ಹೊಗೆ, ಅನಿಲ, ಪರಾಗ, ಕೀಟನಾಶಕ, ರಾಸಾಯನಿಕ ಗೊಬ್ಬರ, ವಾಯುಮಾಲಿನ್ಯ ಇತ್ಯಾದಿ.

೪. ಭೌತಿಕ ವಸ್ತುಗಳು : ಉಷ್ಣ, ತಂಪು, ಒತ್ತಡ, ವಿಕಿರಣ, ತೇವಾಂಶ.

೫. ಘರ್ಷಣೆ : ಬಹುಕಾಲದ ಘರ್ಷಣೆ (ತಿಕ್ಕಾಟ) ಒತ್ತಡ, ಭಾರ, ಪೆಟ್ಟು

೬. ದೈಹಿಕ : ಅಂಗಾಂಗಳ ವಿಕಲತೆ, ನ್ಯೂನತೆ, ಜೀನ್‌ಗಳ ವಿಕಾರ, ರೋಗನಿರೋಧಕ ಶಕ್ತಿ - ಹಾರ್ಮೋನ್‌ಗಳ ಏರಿಳಿವು.

೭. ಸಾಮಾಜಿಕ : ಬಡತನ, ಮದ್ಯವ್ಯಸನ, ಧೂಮಪಾನ, ಒಂಟಿತನ, ಅನಾರೋಗ್ಯಕರ ಜೀವನಶೈಲಿ.

**ಆತಿಥೇಯ (ಮಾನವ) ಅಂಶಗಳು** : ವಯಸ್ಸು, ಲಿಂಗ, ಜನಾಂಗ, ಜೀನ್‌ವ್ಯವಸ್ಥೆ, ವಿದ್ಯಾಭ್ಯಾಸ, ಉದ್ಯೋಗ, ಮಾನಸಿಕ ಒತ್ತಡ, ವೈವಾಹಿಕ ಸ್ಥಿತಿ, ಮನೆ - ಪರಿಸರ, ಜೀವನ ಕ್ರಮ, ಮದ್ಯಪಾನ - ಧೂಮಪಾನ ಚಟ, ನಡೆವಳಿಕೆ, ಆರ್ಥಿಕ ಸ್ಥಿತಿ, ಆರೋಗ್ಯ ಪ್ರಜ್ಞೆ, ಮುಂತಾದ ಅಂಶಗಳು ಆರೋಗ್ಯ - ಅನಾರೋಗ್ಯವನ್ನು ನಿರ್ಣಯಮಾಡುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

**ಪರಿಸರದ ಅಂಶಗಳು** : ಮನುಷ್ಯನ ಆರೋಗ್ಯವು ಹೆಚ್ಚಾಗಿ ಅವನು ವಾಸಿಸುವ ಪರಿಸರಕ್ಕೆ ಸಂಬಂಧಿಸಿದೆ. ಮಾನವನ ಸುತ್ತಲಿನ ಗಿಡ-ಮರ, ಪ್ರಾಣಿ, ಸಸ್ಯ, ಹವಾಗುಣ, ಪರಿಸರ ಮಾಲಿನ್ಯ, ಇತ್ಯಾದಿ ಇವು ಬಾಹ್ಯ ಪರಿಸರವಾದರೆ, ಮಾನವನ ಅಂತರಂಗದಲ್ಲೇ ಕಾಣುವ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಮಾನಸಿಕ ಪರಿಸರವೂ ಆರೋಗ್ಯದ ಕೀಲಿಕೈಯೇ ಆಗಿದೆ.

ನಮ್ಮ ದೇಶದಲ್ಲಿನ ಜನರನ್ನು ಅತಿ ಹೆಚ್ಚಾಗಿ ಕಾಡುವ ಅನಾರೋಗ್ಯವು ರೋಗಾಣುಗಳಿಂದ ಉಂಟಾಗುತ್ತದೆ. ರೋಗಾಣುಗಳು ಗಾಳಿಯ ಮೂಲಕ, ನೀರಿನ ಮೂಲಕ, ರೋಗಿಯ ಸಂಪರ್ಕದ ಮೂಲಕ, ಆಹಾರದ ಮೂಲಕ, ಕೊಳಕು ಕೈ ಹಾಗೂ ಕರವಸ್ತ್ರದ ಮೂಲಕ ಆರೋಗ್ಯವಂತರ ದೇಹ ಸೇರುತ್ತವೆ. ಕೀಟಗಳ ಕಡಿತ ಹಾಗೂ ಪ್ರಾಣಿಗಳ ಕಡಿತದಿಂದಲೂ ಕಾಯಿಲೆಗಳು ಉಂಟಾಗುತ್ತವೆ.

ರೋಗಿಯ ದೇಹದಲ್ಲಿ ಅಸಂಖ್ಯಾತ ರೋಗಾಣುಗಳು ಇರುತ್ತವೆ. ಇವು ಅವನ ಉಸಿರು, ಬೆವರು, ಸಿಂಬಳ, ಕಫ, ಮಲಮೂತ್ರದಲ್ಲಿ ಪುಂಖಾನುಪುಂಖ ಸಂಖ್ಯೆಯಲ್ಲಿ ವಿಸರ್ಜನೆಗೊಂಡು ಬಾಹ್ಯಪ್ರಪಂಚವನ್ನು ಸೇರುತ್ತವೆ. ಕ್ಷಯ ಇಲ್ಲವೆ ನ್ಯುಮೋನಿಯ, ಫ್ಲೂ ಮುಂತಾದ ಶ್ವಾಸಕೋಶದ ಬೇನೆಗಳಿಂದ ನರಳುತ್ತಿರುವ ವ್ಯಕ್ತಿ ಕೆಮ್ಮಿದನೆಂದರೆ, ಕೋಟ್ಯನುಕೋಟಿ ರೋಗಾಣುಗಳು ಅವನ ಉಸಿರಿನೊಂದಿಗೆ, ಕೆಮ್ಮು, ಸೀನಿನೊಂದಿಗೆ ಹೊರಬಂದು ಗಾಳಿಯಲ್ಲಿ ತೇಲಾಡಿಕೊಂಡಿರುತ್ತವೆ. ಇದೇ ಗಾಳಿಯನ್ನು ಉಸಿರಾಡುವ ಆರೋಗ್ಯವಂತನ ದೇಹ ಸೇರಿ ಅವನಲ್ಲಿ ಕಾಯಿಲೆಯನ್ನುಂಟುಮಾಡುತ್ತವೆ.

ಟೈಫಾಯಿಡ್, ಕಾಲರ, ಜಾಂಡೀಸ್, ಆಮಶಂಕೆ, ಭೇದಿ ಮುಂತಾದ ಕರುಳು ಸಂಬಂಧಿ ಬೇನೆ ಪೀಡಿತರ ಮಲದಲ್ಲಿ ಅಸಂಖ್ಯಾತ ಸಂಖ್ಯೆಯ ರೋಗಾಣುಗಳು ವಿಸರ್ಜನೆಗೊಳ್ಳುತ್ತವೆ. ನಮ್ಮಲ್ಲಿ ಬಹುತೇಕ ಜನರು ಬಯಲನ್ನು ಬಹಿರ್ದೆಶೆಗೆ ಬಳಸುವುದರಿಂದ, ಮಲದಲ್ಲಿನ ರೋಗಾಣುಗಳು ನಮ್ಮ ನೆಲ, ಜಲವನ್ನು ಕಲುಷಿತ ಗೊಳಿಸುತ್ತವೆ. ಹೊಲಸಿನಿಂದ ಆಹಾರಕ್ಕಾಗಿ ಹಾರಾಡುವ ನೊಣಗಳು, ಈ ರೋಗಾಣುಗಳನ್ನು ತಂದು ನಮ್ಮ ಆಹಾರಕ್ಕೆ ಬೆರೆಸುವುದುಂಟು. ಹೀಗಾಗಿ ನಮ್ಮಲ್ಲಿ ನೀರು ಮತ್ತು ಆಹಾರದಿಂದ ಅಂಟುವ ಅಂಟುರೋಗಗಳ ಪೀಡೆ ನಿತ್ಯದ ಗೋಳಾಗಿದೆ. ಎಲ್ಲರೂ ಶೌಚಾಲಯವನ್ನು ಬಳಸುವ ರೂಢಿ ಬೆಳೆಸಿಕೊಂಡರೆ, ಮಾನವ ಮಲ ಕುಡಿವ ನೀರಿಗೆ ಬೆರೆವುದು ತಪ್ಪುತ್ತದೆ, ಮಾನವನಿಗೆ ಬರುವ ಬಹುತೇಕ ಕಾಯಿಲೆಗಳು ನಾಮಾವಶೇಷ ವಾಗುತ್ತವೆ. ಮುಂದುವರೆದ ದೇಶಗಳು ಈಗಾಗಲೇ ಈ ಸಾಧನೆಯನ್ನು ಮಾಡಿವೆ. ದೇಹ, ಮನೆ, ಪರಿಸರ, ನೀರು ಆಹಾರ ಶುದ್ಧತೆಯ ಬಗ್ಗೆ ಆದ್ಯತೆ ನೀಡಿದಲ್ಲಿ ನಾವು ಅಂಟುರೋಗಗಳ ಉಪಟಳದಿಂದ ಸುಲಭವಾಗಿ ಪಾರಾಗಬಹುದು.

ಇತ್ತೀಚಿನ ದಿನಗಳಲ್ಲಿ ಕಾಣಿಸಿಕೊಳ್ಳುತ್ತಿರುವ ಹೃದಯಾಘಾತ, ರಕ್ತದೊತ್ತಡ, ಸಕ್ಕರೆ ಕಾಯಿಲೆ, ಕ್ಯಾನ್ಸರ್, ಲಕ್ವ ಮತ್ತಿತರ ಕಾಯಿಲೆಗಳಿಗೆ ಖಚಿತ ಕಾರಣ ಗೊತ್ತಾಗಿಲ್ಲ. ಆದಾಗ್ಯೂ ನಮ್ಮ ಜೀವನಶೈಲಿಯ ವ್ಯತಿರಿಕ್ತ ಬದಲಾವಣೆಗಳಿಂದ ಈ ಕಾಯಿಲೆಗಳು ಮೊಳಕೆಯೊಡೆಯುತ್ತಿವೆ ಎಂದು ಗೊತ್ತಾಗಿದೆ. ಸ್ಥೂಲದೇಹ, ಮಾನಸಿಕ ಒತ್ತಡ, ಮದ್ಯಪಾನ, ಧೂಮಪಾನ, ಅಲಸಿಜೀವನ, ಪರಿಸರ ಮಾಲಿನ್ಯ, ಹಾನಿಕಾರಕ ಆಹಾರ ಸೇವನೆ ಇವುಗಳ ಪ್ರಚೋದನೆಯಿಂದ ಆಧುನಿಕ ಕಾಯಿಲೆಗಳೂ ಈಗ ಹೆಚ್ಚುತ್ತಿವೆ. ಮಾನಸಿಕ ಕಾಯಿಲೆಗಳು, ಅಪಘಾತ ಇವಕ್ಕೆ ನಮ್ಮ ಸಾಮಾಜಿಕ ಅವ್ಯವಸ್ಥೆಯೂ ಪೂರಕವಾಗಿದೆ ಎನ್ನಲಾಗಿದೆ.

**ಆರೋಗ್ಯದ ಬಗ್ಗೆ ಜಾಗೃತಿ** : ಸಂವಿಧಾನ ಶಾಸನದ ಪ್ರಸ್ತಾವನೆಯಲ್ಲಿರುವಂತೆ ಆರೋಗ್ಯ ಪ್ರತಿಯೊಬ್ಬ ಪ್ರಜೆಯ ಮೂಲಭೂತ ಹಕ್ಕು. ಪ್ರತಿಯೊಬ್ಬ ಪ್ರಜೆಗೆ ಅತ್ಯುತ್ತಮ ಮಟ್ಟದ ಆರೋಗ್ಯ ಹೊಂದುವ, ವೈದ್ಯಕೀಯ ನೆರವು ಪಡೆಯುವ ಹಕ್ಕಿದೆ. ಜನರ ಆರೋಗ್ಯ ರಕ್ಷಿಸುವ, ವೃದ್ಧಿಸುವ ಮತ್ತು ಇದಕ್ಕೆ ಪೂರಕವಾದ ಉತ್ತಮ ಪರಿಸರ, ಆಹಾರ, ನೀರು, ವಾತಾವರಣ ದೊರಕಿಸಿಕೊಡುವ ಹೊಣೆಗಾರಿಕೆ ನಮ್ಮ ಸಮಾಜ, ರಾಜ್ಯ, ರಾಷ್ಟ್ರ ಹಾಗೂ ವಿಶ್ವದ್ದು. ಆರೋಗ್ಯ ರಕ್ಷಣೆ, ರೋಗ ನಿರ್ಮೂಲನೆ, ಆರೋಗ್ಯ ವಿಮೆ, ಆರೋಗ್ಯ ಶಿಕ್ಷಣ, ಅಗತ್ಯ ಔಷಧಿ ಪೂರೈಕೆ, ವೃದ್ಧಾಪ್ಯಕ್ಕೆ ಆಸರೆ, ಇವೆಲ್ಲಾ ಈ ನಿಟ್ಟಿನ ಉದಾಹರಣೆಗಳು.

ಆರೋಗ್ಯ ಮೂಲಭೂತ ಹಕ್ಕು, ಆದರೂ ಆರೋಗ್ಯವು ನಾವು ಇನ್ನೊಬ್ಬರಿಂದ ಪಡೆದುಕೊಳ್ಳುವಂತಹ, ಇಲ್ಲವೆ ಕೊಂಡುಕೊಳ್ಳುವಂತಹ ಸರಕು ಅಲ್ಲ. ಕೆಲವೊಮ್ಮೆ ಸಂಪನ್ಮೂಲಗಳ ಕೊರತೆಯಿಂದ ಎಲ್ಲರ ಆರೋಗ್ಯದ ಸಂಪೂರ್ಣ ಹೊಣೆ ನಿಭಾಯಿಸುವುದು ಸರಕಾರಕ್ಕೆ ಅಸಾಧ್ಯವಾಗುವುದೂ ಉಂಟು. ಹೀಗಾಗಿ ಆರೋಗ್ಯದ ಜವಾಬ್ದಾರಿ ಎಂದಿಗೂ ನಮ್ಮದೇ ಆಗಿರುತ್ತದೆ. ಪರಿಪೂರ್ಣ ಆರೋಗ್ಯವನ್ನು ಗಳಿಸುವ, ರಕ್ಷಿಸಿಕೊಳ್ಳುವ ಹಾಗೂ ವೃದ್ಧಿಸಿಕೊಳ್ಳುವ ಹೊಣೆಗಾರಿಕೆ ನಮ್ಮದೇ ಆಗಿದೆ. ನಮ್ಮ ಆರೋಗ್ಯ ನಮ್ಮ ಕೈಯಲ್ಲೇ ಇದೆ.

ಆರೋಗ್ಯ ರಕ್ಷಣೆ ಕೇವಲ ವೈದ್ಯರ ಮತ್ತು ಸರಕಾರದ ಕರ್ತವ್ಯವಲ್ಲ, ಇದು ಮುಖ್ಯವಾಗಿ ನಮ್ಮೆಲ್ಲರ ಕರ್ತವ್ಯ. ಹೀಗಾಗಿ ನಾವೆಲ್ಲಾ ಆರೋಗ್ಯ ಕಾರ್ಯಕ್ರಮಗಳ ಯೋಜನೆ, ನಿರ್ವಹಣೆಯಲ್ಲಿ ಸಕ್ರಿಯವಾಗಿ ಪಾಲುಗೊಳ್ಳಬೇಕಾಗುತ್ತದೆ. ಸಮಾಜದ ಆರೋಗ್ಯ ರಕ್ಷಣೆ ಸಮಾಜದ ಪ್ರತಿ ವ್ಯಕ್ತಿಯ ಜವಾಬ್ದಾರಿ.

ಆರೋಗ್ಯ ಮಾನವ ಸಮಾಜದ ಪ್ರಗತಿಯ ಬುನಾದಿ. ಕೇವಲ ಹಣದಿಂದಲೇ ರೋಗ - ರುಜಿನಗಳನ್ನು ಹೋಗಲಾಡಿಸಲು ಆಗುವುದಿಲ್ಲ, ಇದರೊಂದಿಗೆ ವಿದ್ಯೆ, ಉದ್ಯೋಗ, ಸ್ವಾತಂತ್ರ್ಯ, ಪರಿಸರ ನೈರ್ಮಲ್ಯ, ಮಾನವೀಯ ಮೌಲ್ಯಗಳಲ್ಲಿ ಪ್ರಗತಿ ಉಂಟಾಗಬೇಕು. ಅತಿ ಕಡಿಮೆ ವರಮಾನ ಹೊಂದಿರುವ ಕೇರಳ ರಾಜ್ಯವು ಸಾಮಾಜಿಕ ಪ್ರಜ್ಞೆ ಮತ್ತು ಅಭಿವೃದ್ಧಿಯಿಂದ ಅಸಾಧಾರಣ ಮಟ್ಟದ ಸ್ವಸ್ಥತೆಯನ್ನು ಸಾಧಿಸಿ ಇಡೀ ವಿಶ್ವಕ್ಕೆ ಮಾದರಿಯಾಗಿದೆ.

ಡಾ॥ ಡಿ. ಕೆ. ಮಹಾಬಲರಾಜು
ಪ್ರಾಧ್ಯಾಪಕ, ಸಮುದಾಯ ಆರೋಗ್ಯ ವಿಭಾಗ
ಜೆ. ಜೆ. ಎಂ. ಮೆಡಿಕಲ್ ಕಾಲೇಜು, ದಾವಣಗೆರೆ-೪



## ಕನಸು

ಕುತ್ತಿಗೆಯ
ಮೇಲೊಂದು
ಕೊರಡು.
ಕೊಸರಿ
ಕನವರಿಸಿದಾಗ
ನನ್ನಾಕೆ
ಕೇಳಿದಳು
ರೀ
ಏನಾಯ್ತು ?
ಕುತ್ತಿಗೆ ಮೇಲೊಂದು
ಕೊರಡು !
ರೀ
ಅದು ನನ್ನ
ಕೈ ಅಂದ
ನೆನಪು.

❑ ಎಸ್. ಬಿ. ಜೋಗುರ, ಹಿರೇಕೆರೂರ




ಇಂತಿಂಥವರು ಈ ಭಾಷೆ ಕಲಿಯುವಂತಿಲ್ಲ, ಇವರು ಈ ಭಾಷೆ ಮಾತನಾಡುವಂತಿಲ್ಲ. ಮಾತನಾಡುವುದನ್ನು ಒತ್ತಟ್ಟಿಗಿಡಿ, ಇವು ಈತನ ಕಿವಿಗೂ ಬೀಳಕೂಡದು ! ಅಪ್ಪಿತಪ್ಪಿ ಆಕಸ್ಮಿಕವಾಗಿ ಬಿದ್ದರೂ ಪ್ರಾಯಶ್ಚಿತ್ತಕ್ಕೆಂದು ಈತನ ಕಿವಿಗೆ ಕುದಿವ ಸೀಸ ಸುರಿಯಬೇಕು ಎಂಬಂಥ ಕಟ್ಟಪ್ಪಣೆ ಪುರೋಹಿತಶಾಹಿಯದು. ಶಾಸ್ತ್ರ ಮತ್ತು ಶಸ್ತ್ರವಿದ್ಯೆ ಒಂದೊಂದು ವರ್ಗದ ಸೊತ್ತು. ಇನ್ನುಳಿದವರೆಲ್ಲ ಅವರ ತೊತ್ತು. ಇದು ಧರ್ಮನೀತಿ.

**ಡಾ॥ ಅನಿಲ ಕಮತಿ**

ಕಾಲಾಂತರದಿಂದಲೂ ನಮ್ಮದು ಶ್ರೇಣೀಕೃತ ಸಮಾಜ. ಆಸ್ತಿ-ಅಂತಸ್ತು, ಗತ್ತು-ಗೈರತ್ತು, ಮಾನ-ಮರ್ಯಾದೆ, ವಿದ್ಯೆ-ವೃತ್ತಿ, ಸ್ವಾತಂತ್ರ್ಯ-ಸಮಾನತೆ ಹೀಗೆ ಬದುಕಿನ ಪ್ರತಿ ಅಂಗದಲ್ಲೂ, ಭಂಗಿಯಲ್ಲೂ ಶ್ರೇಣೀಕರಣವನ್ನು ಪರಂಪರಾಗತವಾಗಿ ಕಾಯ್ದುಕೊಂಡು ಬಂದ ಭಾರತೀಯ ಸಮುದಾಯ ಹುಟ್ಟಿನಿಂದ ಬಂದ ಜ್ಯೇಷ್ಠತೆಗೆ-ಶ್ರೇಷ್ಠತೆಗೆ ಮಾನ್ಯತೆ ನೀಡುತ್ತ ಬಂದಿತೇ ಹೊರತು, ಅದು ವ್ಯಕ್ತಿಯ ಶಕ್ತಿ-ಸಾಮರ್ಥ್ಯ, ನಡತೆ-ನಡವಳಿಕೆಗಳಿಗೆ ಚಿಕ್ಕಾಸಿನ ಕಿಮ್ಮತ್ತನ್ನೂ ನೀಡಲಿಲ್ಲ.

ವರ್ಣಾಶ್ರಮವೆಂದು ಕರೆಯಲ್ಪಡುವ ಈ ಶ್ರೇಣೀಕರಣ ಯಾವ ರಸಾತಳ ತಲುಪಿತ್ತು ಎಂದರೆ ಒಬ್ಬಾತ, ಒಂದು ಸಮುದಾಯ ಬದುಕಿನಲ್ಲಿ ಬಳಸುವ ಭಾಷೆಗೂ, ತನ್ನ ಭಾವನೆಗಳ ಸಂವಹನ ಮಾಧ್ಯಮ ಮಾತಿಗೂ ಇದನ್ನು ತಳಕುಹಾಕಿದ್ದನ್ನು ಸಹಸ್ರಮಾನದಿಂದ ಕಾಣುತ್ತ ಬಂದಿದ್ದೇವೆ.

ಇಂತಿಂಥವರು ಈ ಭಾಷೆ ಕಲಿಯುವಂತಿಲ್ಲ, ಇವರು ಈ ಭಾಷೆ ಮಾತನಾಡುವಂತಿಲ್ಲ. ಮಾತನಾಡುವುದನ್ನು ಒತ್ತಟ್ಟಿಗಿಡಿ, ಇವು ಈತನ ಕಿವಿಗೂ ಬೀಳಕೂಡದು! ಅಪ್ಪಿತಪ್ಪಿ ಆಕಸ್ಮಿಕವಾಗಿ ಬಿದ್ದರೂ ಪ್ರಾಯಶ್ಚಿತ್ತಕ್ಕೆಂದು ಈತನ ಕಿವಿಗೆ ಕುದಿವ ಸೀಸ ಸುರಿಯಬೇಕು ಎಂಬಂಥ ಕಟ್ಟಪ್ಪಣೆ ಪುರೋಹಿತಶಾಹಿಯದು. ಶಾಸ್ತ್ರ ಮತ್ತು ಶಸ್ತ್ರವಿದ್ಯೆ ಒಂದೊಂದು ವರ್ಗದ ಸೊತ್ತು. ಇನ್ನುಳಿದವರೆಲ್ಲ ಅವರ ತೊತ್ತು. ಇದು ಧರ್ಮನೀತಿ.

ಅಂದಿನ ಈ ಧರ್ಮನೀತಿಯೇ ಪುರೋಹಿತಶಾಹಿಯ ಕಪಿಮುಷ್ಟಿಯಲ್ಲಿದ್ದ ರಾಜ ಮಹಾರಾಜರುಗಳ ರಾಜಧರ್ಮವಾಗಿ ಮಾರ್ಪಟ್ಟಿತು.

ಆದರೆ ವಿಪರ್ಯಾಸದ ಸಂಗತಿ ಎಂದರೆ ಪ್ರಜೆಗಳೇ ಪ್ರಭುಗಳು ಎಂದು ಸಾರಿಹೇಳುವ ಇಂದಿನ ಪ್ರಜಾಪ್ರಭುತ್ವದಲ್ಲೂ, ಸಮಾನತೆಯ ತಳಹದಿಯಾದ ಸಮತಾವಾದ, ಸಮಾಜವಾದವನ್ನು ಅಪ್ಪಿಕೊಂಡಿರುವ ಇಂದಿನ ನಮ್ಮ ಸರ್ವತಂತ್ರ ಸ್ವತಂತ್ರ ಭಾರತದಲ್ಲೂ ಇಂದಿಗೂ ನಮ್ಮ ಮಕ್ಕಳಿಗೆ ಶ್ರೇಣೀಕೃತ ಶಿಕ್ಷಣ ದೊರಕುತ್ತಿರುವುದು ವಿಷಾದದ ಸಂಗತಿ.

ಇಂದು ಮಾರುಕಟ್ಟೆಯಲ್ಲಿ ದೊರೆಯುವ ದಿನಸಿ ವಸ್ತುಗಳ ಗುಣಮಟ್ಟ ಮತ್ತು ಬೆಲೆಯಲ್ಲಿರುವ ವ್ಯತ್ಯಾಸದ ಸಾವಿರ ಸಾವಿರ ಪಟ್ಟು ವ್ಯತ್ಯಾಸ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿದೆ. ಇದಕ್ಕೂ ವಿಪರ್ಯಾಸದ ಸಂಗತಿ ಎಂದರೆ ಈ ಶಿಕ್ಷಣ ವ್ಯವಸ್ಥೆ ಪ್ರಭುತ್ವದ ನೇರ ಅಧೀನದಲ್ಲೇ ಇರುವುದು.

ಇಂದು ನಮ್ಮಲ್ಲಿ ಉಚಿತ ಶಿಕ್ಷಣದೊಂದಿಗೆ ಉಚಿತ ಸಮವಸ್ತ್ರ, ಉಚಿತ ಪಠ್ಯಪುಸ್ತಕ, ಉಚಿತ ಊಟ ಮುಂತಾದ ಪ್ರಲೋಭನೆಗಳಿರುವ ಶಾಲೆಗಳಿರುವಂತೆಯೇ ವರುಷಕ್ಕೆ ಲಕ್ಷಾಂತರ ರೂಪಾಯಿ ಶುಲ್ಕ ಕಟ್ಟಬೇಕಾದ ಶಾಲೆಗಳೂ ಇವೆ. ಇವೆರಡರ ಶಿಕ್ಷಣದ ಗುಣಮಟ್ಟದಲ್ಲಿ ಅಜಗಜಾಂತರವಿರುವಂತೆಯೇ ಪಠ್ಯಕ್ರಮದ ಅಂತರಾಳದಲ್ಲೂ ಭೂಮ್ಯಾಕಾಶಗಳ ಅಂತರ.

ಈಚೆಗೆ ಇಂಗ್ಲಿಷೇತರ ಮಾಧ್ಯಮಗಳ ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯನ್ನು ಯಾವ ವರ್ಗದಿಂದ ಕಲಿಸಬೇಕು ಎಂಬ ಬಗ್ಗೆ ಸಾರ್ವಜನಿಕ ಚರ್ಚೆ ತುಂಬ ಬಿಸಿಯಾಗಿಯೇ ನಡೆಯಿತು. ಕನ್ನಡ ಸಾಹಿತಿಗಳ ಬಳಗದಲ್ಲಿಯೇ ಎರಡು ಬಣಗಳಾಗಿ ಇಂಗ್ಲಿಷನ್ನು ಒಂದನೇ ವರ್ಗದಿಂದಲೇ ಕಲಿಸಲು ಪ್ರಾರಂಭಿಸಬೇಕೆಂಬ ಧ್ವನಿ ಒಂದು ಬಣದಿಂದ ತುಂಬ ಪ್ರಬಲವಾಗಿಯೇ ಪ್ರತಿಪಾದಿತವಾದುದು ಒಂದು ವಿಶೇಷ. ಇಂಗ್ಲಿಷನ್ನು ಮೂರನೇ ವರ್ಗದಿಂದ ಕಲಿಸಲು ಪ್ರಾರಂಭ ಮಾಡಬೇಕು ಎಂಬುದು ಇನ್ನಿತರರ ಅಂಬೋಣ. ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಬಡ, ಗ್ರಾಮೀಣ, ಹಿಂದುಳಿದ ಜನತೆ ಸ್ಪರ್ಧಿಸಬೇಕಾದರೆ ಸರಕಾರಿ ಶಾಲೆಗಳಲ್ಲಿ ಮೊದಲವರ್ಗದಿಂದಲೇ ಇಂಗ್ಲಿಷ್ ಕಲಿಸಬೇಕೆಂದು ಮೊದಲ ಗುಂಪಿನವರ ಅಭಿಪ್ರಾಯ. ಆದರೆ ಈ ವಾದವಿವಾದದಲ್ಲಿ ಮಗುವಿನ ಮನೋಧರ್ಮ, ಪ್ರಥಮ ಹಂತದಲ್ಲಿಯೇ ಎರಡು ಭಾಷೆಗಳನ್ನು ಒಟ್ಟಾಗಿ ಕಲಿಸಿದರೆ ಆತನ ಕಲಿಕೆಯ ಮೇಲಾಗುವ ಪರಿಣಾಮ ಮುಂತಾದ ವೈಜ್ಞಾನಿಕ ವಿಷಯಗಳನ್ನು ವಿಶ್ಲೇಷಿಸುವುದಕ್ಕೆ ಬದಲು ಕನ್ನಡದ ಕಲ್ಯಾಣ, ಬಡ ಹಿಂದುಳಿದ ವರ್ಗದ ಉದ್ಧಾರದಂಥ ಭಾವನಾತ್ಮಕ ವಿಷಯಗಳೇ ಮನದ ಹಿಂಬದಿಯಲ್ಲಿ ಹೆಚ್ಚು ಸಕ್ರಿಯವಾಗಿರುವುದು ಗಮನಿಸಬೇಕಾದ ಸಂಗತಿ.

ಈ ಬಿಸಿ ಬಿಸಿ ಚರ್ಚೆ ಈಗಾಗಲೇ ಸಾಕಷ್ಟು ತಣ್ಣಗಾಗಿದೆ. ಈ ಚರ್ಚೆಯ ದೆಸೆಯಿಂದ ಮುಂಚೂಣಿಗೆ ಬಂದಿದ್ದ ಶಿಕ್ಷಣದಲ್ಲಿಯ ಕನ್ನಡದ ಸ್ಥಾನಮಾನಗಳ ಬಗೆಗಿನ ಅನೇಕ ಸಮಸ್ಯೆಗಳೂ ಮತ್ತೆ ತೆರೆಮರೆಗೆ ಸಂದಿವೆ.

ಇಂಗ್ಲಿಷ್ ಕಲಿಕೆಯ ಹಂತಕ್ಕಿಂತಲೂ ಪ್ರಮುಖವಾದ ಕನ್ನಡಕ್ಕೆ ಕಗ್ಗಂಟಾಗಿರುವ ಅನೇಕ ಸಮಸ್ಯೆಗಳು ಇಂದು ನಮ್ಮೆದುರಿಗಿವೆ.

ಇವುಗಳಲ್ಲಿ ಅತಿಮೂಲ್ಯವಾದುದು ಪ್ರಾಥಮಿಕ ಅಥವಾ ಇನ್ನೂ ನಿಖರವಾಗಿ ಹೇಳಬೇಕೆಂದರೆ ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳ ಕಲಿಕೆಯ ಶಿಕ್ಷಣ ಮಾಧ್ಯಮ. ಜಗತ್ತಿನ ಎಲ್ಲ ಶಿಕ್ಷಣ ತಜ್ಞರು – ಮಕ್ಕಳ ಮನೋವೈದ್ಯರು – ಮಾತೃಭಾಷೆಯೇ ಶಿಕ್ಷಣದ ಮಾಧ್ಯಮವಾಗಬೇಕು – ಎಂದು ಘಂಟಾಘೋಷವಾಗಿ ಕಾಲಾಂತರದಿಂದಲೂ ನಿಸ್ಸಂಕೋಚವಾಗಿ ಹೇಳುತ್ತಲೇ ಬಂದಿದ್ದಾರೆ. ಕರ್ನಾಟಕ ಸರಕಾರದ ಇಂಥ ಆದೇಶವೊಂದಕ್ಕೆ 'ಕನ್ನಡದ ಕೆಲಜನ' ಕ್ಯಾತೆ ತೆಗೆದು ನ್ಯಾಯಾಲಯದ ಕಟ್ಟೆ ಹತ್ತಿದಾಗ ದೇಶದ ಸರ್ವೋಚ್ಚ ನ್ಯಾಯಾಲಯವೂ "ಪ್ರಾಥಮಿಕ ಶಾಲೆಯ ಐದನೇ ವರ್ಗದವರೆಗೂ ಕಲಿಕೆಯ ಮಾಧ್ಯಮ ಮಾತೃಭಾಷೆಯೇ ಆಗಿರಲಿ" ಎಂದು ತೀರ್ಪಿತ್ತಿದೆ. ಈ ತೀರ್ಪಿಗೆ ಮತ್ತೆ ಕೆಲಜನ ಉಚ್ಚ ನ್ಯಾಯಾಲಯದಿಂದ ತಡೆಯಾಜ್ಞೆ ತಂದಿದ್ದಾರೆ. ನ್ಯಾಯಾಲಯ ಈ ತಡೆಯಾಜ್ಞೆ ನೀಡಿ ವರುಷಗಳೇ ಕಳೆದರೂ ಇದನ್ನು ತೆರವುಗೊಳಿಸಲು ಕರ್ನಾಟಕ ಸರಕಾರ ಮನಸ್ಸು ಮಾಡಿಲ್ಲ.

ಇದುವರೆಗೆ ಈ ವಿಷಯಕ್ಕೆ ಕಣ್ಣುಮುಚ್ಚಿಯೇ ಕುಳಿತಿದ್ದ ಕನ್ನಡಿಗರು, ಸಂಪೂರ್ಣ ನಿಷ್ಕ್ರಿಯವಾಗಿದ್ದ ಕನ್ನಡದ ಸಂಘ ಸಂಸ್ಥೆಗಳು ಒಂದನೇ ವರ್ಗದಿಂದ ಇಂಗ್ಲಿಷ್ ಕಲಿಸುವ "ಗುಮ್ಮ" ಎದುರಾದಾಗ ಅಷ್ಟಿಷ್ಟು ಮಿಸುಕಾಡಿದವು. ತಡೆಯಾಜ್ಞೆ ತೆರವುಗೊಳಿಸಲು ಸರಕಾರ ಕ್ರಮ ತೆಗೆದುಕೊಳ್ಳಬೇಕೆಂದು ಧ್ವನಿ ಎತ್ತಿದವು. ಈ ಇಂಗ್ಲಿಷ್ ಕಲಿಕೆಯ ಹಂತದ ಗುಮ್ಮ ನೇಪಥ್ಯಕ್ಕೆ ಸರಿದಂತೆ ಮತ್ತೆ ಎಲ್ಲ ಸ್ತಬ್ಧವಾಯಿತು.

ಇದುವರೆಗಿನ ಎಲ್ಲಾ ಕರ್ನಾಟಕ ಸರಕಾರಗಳಿಗೂ ಕನ್ನಡವೆಂದರೆ ಅಷ್ಟಕ್ಕಷ್ಟೇ. ತನ್ನ ಪ್ರಜೆಗಳಿಗೆ ಸಮಾನ ಶಿಕ್ಷಣ ಸೌಲಭ್ಯ ಒದಗಿಸುವುದೆಂದರೆ ಹಳ್ಳಿ-ಹಳ್ಳಿಗಳಿಗೂ ಇಂಗ್ಲಿಷ್ ಮಾಧ್ಯಮದ ಶಾಲೆಗಳನ್ನು ತೆರೆಯಲು ಅನುಮತಿ ನೀಡುವುದು ! ಹೈಕೋರ್ಟ್ ತಡೆಯಾಜ್ಞೆಯನ್ನು ತೆರವುಗೊಳಿಸುವಂತೆ ಕಳೆದ ನಾಲ್ಕಾರು ವರುಷಗಳಲ್ಲಿ ಒಮ್ಮೆಯೂ ಸರಕಾರವನ್ನು ತರಾಟೆಗೆ ತೆಗೆದುಕೊಳ್ಳದಿದ್ದ ನಮ್ಮ ಶಾಸಕರು ಮೊನ್ನೆ ಇಂಗ್ಲಿಷನ್ನು ಮೊದಲನೇ ತರಗತಿಯಿಂದಲೇ ಪ್ರಾರಂಭಿಸಬೇಕೆಂದು ಪಕ್ಷಭೇದ ಮರೆತು ಒತ್ತಾಯಿಸಿದರು. ಇವರ ದೃಷ್ಟಿಯಲ್ಲಿ ಇದು ಇವರು ಪ್ರತಿನಿಧಿಸುತ್ತಿರುವ ಬಡ, ಗ್ರಾಮೀಣ, ಹಿಂದುಳಿದ ವಿದ್ಯಾರ್ಥಿಗಳ ಭವಿಷ್ಯಕ್ಕೆ ಅತ್ಯವಶ್ಯ. ಒಂದರ್ಥದಲ್ಲಿ ಇದೂ ಸರಿಯೇ ! ತನ್ನ ಜನರ, ಸಮುದಾಯದ ಹಿತ ಕಾಪಾಡುವುದು ಪ್ರತಿ ಜನಪ್ರತಿನಿಧಿಯ ಕರ್ತವ್ಯವೇ !

ಆದರೆ ಇಂದು ನಮ್ಮ ನಾಡು ನುಡಿಗಳ ಮೇಲೆ, ನಾಡಿನ ಸಂಸ್ಕೃತಿಯ ಮೇಲೆ ಪರಭಾಷೆಯೊಂದು ಸವಾರಿ ಮಾಡುವಂತಾದುದು ದುರ್ದೈವದ ಆದರೆ ವಾಸ್ತವ ಸಂಗತಿ.

ಇದಕ್ಕೆ ವಿಶ್ವವೆಂಬ ಹಳ್ಳಿಯಲ್ಲಿ ಇಂಗ್ಲಿಷ್ ಜ್ಞಾನ ಅನಿವಾರ್ಯವಾಗುತ್ತ ಸಾಗಿರುವುದು, ಕಳೆದ ದಶಕದಲ್ಲಿ ಗಣಕಕ್ರಾಂತಿ ಇದಕ್ಕೆ ಪುಟಕೊಟ್ಟದ್ದು ಒಂದು ಕಾರಣ ವಾದರೆ, ಕರ್ನಾಟಕದಲ್ಲಿ ಬದುಕಲು ಕನ್ನಡ ಮಾತು, ಓದು-ಬರಹದ ತಿಳಿವಳಿಕೆ ಅನಿವಾರ್ಯ, ಇಲ್ಲಿ ಹೊಟ್ಟೆ ಹೊರೆಯಲು ಕನ್ನಡದ ಜ್ಞಾನ ಅತ್ಯಗತ್ಯ ಎಂಬಂಥ ಸ್ಥಿತಿ ಕರ್ನಾಟಕದ ಇತಿಹಾಸದುದ್ದಕ್ಕೂ ಒಮ್ಮೆಯೂ ನಿರ್ಮಾಣ ವಾಗಲಿಲ್ಲ. ಇಂಥ ವಾತಾವರಣವೊಂದನ್ನು ನಿರ್ಮಿಸಲು ನಮ್ಮ ಪ್ರಭುತ್ವ ಎಂದಿಗೂ ಪ್ರಯತ್ನಿಸಲೇ ಇಲ್ಲ. ಇಂಗ್ಲಿಷ್ ಭಾಷೆ ಕಲಿಕೆಯ ಬಗ್ಗೆ ಯಾವ ತಕರಾರೂ ಇಲ್ಲ. ಆದರೆ ಕನ್ನಡದ ಗೋರಿಯ ಮೇಲೆ ಇಂಗ್ಲಿಷಿನ ಗೋಪುರ ಕಟ್ಟುವಂತಾಗಬಾರದು.

ಒಂದನೇ ವರ್ಗದಿಂದ ಇಂಗ್ಲಿಷ್ ಕಲಿಸಿದರೂ ಮಕ್ಕಳ ಇಂಗ್ಲಿಷ್ ಜ್ಞಾನ ಓದುಮಟ್ಟಕ್ಕೆ ಬಾರದಿದ್ದರೆ, ಮತ್ತು ಇಂಗ್ಲಿಷಿನಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಫೇಲಾಗುವವರ ಸಂಖ್ಯೆ ಗಣನೀಯವಾಗಿ ಉಳಿದರೆ ಸರ್ವರಿಗೂ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ನೀಡಬೇಕೆಂಬುದೂ ಈಗಿರುವ ಶಾಲೆಗಳನ್ನು ಸರಕಾರಿ ಇಂಗ್ಲಿಷ್ ಮಾಧ್ಯಮದ ಶಾಲೆಗಳಾಗಿ ಪರಿವರ್ತಿಸಬೇಕೆಂಬ ಒತ್ತಾಯ ನಮ್ಮ ಶಾಸಕರಿಂದ, ಬುದ್ಧಿಜೀವಿಗಳಿಂದ ಬರಲಾರದೆಂಬುದಕ್ಕೆ ಏನು ಗ್ಯಾರಂಟಿ? ಇದೂ ಒಂದು ರೀತಿಯ ಸಮಾನ ಶಿಕ್ಷಣ ನೀತಿಯೇ ತಾನೇ? ಆಗ ಬೇಕಾದವರು ಕನ್ನಡವನ್ನು ಒಂದು ಭಾಷಾ ವಿಷಯವಾಗಿ ಕಲಿಯಬಹುದು ಎಂಬ ಕನ್ಸೆಶನ್ನೂ ಇವರು ನೀಡಬಹುದು.

ಒಂದೊಮ್ಮೆ ಪದವಿ, ಸ್ನಾತಕೋತ್ತರ ಪದವಿಗಳನ್ನು ಕನ್ನಡ ಮಾಧ್ಯಮದಲ್ಲಿ ನೀಡಬೇಕೆಂಬ ಕನಸು ಹೊತ್ತಿದ್ದ ನಾವು ಕನ್ನಡಿಗರು ಇಂದು ಪ್ರಾಥಮಿಕ ಶಿಕ್ಷಣವಾದರೂ ಕನ್ನಡದಲ್ಲಿರಲಿ ಎಂದು ಕನವರಿಸಿ, ಪ್ರಭುತ್ವದೆದುರು ಅಂಗಲಾಚಬೇಕಾಗಿರುವುದು ಕರ್ನಾಟಕ ರಾಜ್ಯ ರಚನಾ ನಂತರದ ಪ್ರಮುಖ ಬೆಳವಣಿಗೆ. ಕನ್ನಡವೇ ಸಾರ್ವಭೌಮ, ಕನ್ನಡಕ್ಕೇ ಪ್ರಥಮಪಟ್ಟ ಎಂದು ಕೂಗು ಮೊಳಗುವ ಈ ನಾಡಿನಲ್ಲಿ ಕನ್ನಡಕ್ಕೊಂದು ಅಧಿಕೃತ ನೆಲೆ-ನೆಲ ದೊರೆತನಂತರ, ಕನ್ನಡಿಗರ ಕೈಗೇ ಅಧಿಕಾರಸೂತ್ರ ದೊರೆತನಂತರ ಕನ್ನಡದ ಬಂಡಿ ಹಿಮ್ಮುಖವಾಗಿ ಸಾಗಿದೆಯೇ ಎಂಬ ಸಂಶಯ ಸುಳಿಯದಿರದು.

ಬಹುಜನರ ಅಭಿಪ್ರಾಯದಲ್ಲಿ ಇದು ಭಾಷೆಯೊಂದಕ್ಕೆ ಸಂಬಂಧಿಸಿದ ಭಾವನಾತ್ಮಕ ವಿಷಯ. ಆದರೆ ಒಂದು ಭಾಷೆಯ ಭವಿಷ್ಯದ ಜತೆಗೆ ಒಂದು ಜನಾಂಗದ ಬದುಕು, ಜೀವಚ್ಛವವಾಗಬಲ್ಲ ಒಂದು ಸಂಸ್ಕೃತಿಯ ಭವಿತವ್ಯ, ಒಂದು ನಾಡಿನ ಏಳ್ಗೆ, ಬಾಳ್ಗೆಗಳು ಬೆಸೆದುಕೊಂಡಿರುವುದು ಮೇಲ್ನೋಟಕ್ಕೆ ಸಾರ್ವಜನಿಕರ ಗಮನಕ್ಕೆ ಬರದೇ ಹೋಗಬಹುದು.

ಕನ್ನಡಕ್ಕೆ ಕಗ್ಗಂಟಾಗಬಲ್ಲ ಸಮಸ್ಯೆ ಎದುರಾದಾಗ ಮಾತ್ರ ನಾವು ಕನ್ನಡಿಗರಿಗೆ ಉಚ್ಚ ನ್ಯಾಯಾಲಯದ ಕಡತಗಳಲ್ಲಿ ವರುಷಗಳಿಂದ ಕೊಳೆಯುತ್ತ ಕುಳಿತಿರುವ ಕನ್ನಡ ಶಿಕ್ಷಣ ಮಾಧ್ಯಮದ ತಡೆಯಾಜ್ಞೆಯ ನೆನಪಾಗುತ್ತದೆ. ಕನ್ನಡ ಸಂಘ-ಸಂಸ್ಥೆಗಳೂ ಆಗ ಮಾತ್ರ ಧ್ವನಿ ಎತ್ತುತ್ತವೆ. ನಾಲ್ಕು ದಿನ ಕಳೆದನಂತರ ಮತ್ತೆ ಎಲ್ಲಾ ಯಥಾಸ್ಥಿತಿ. ಇದು ಹೀಗಾಗದೇ ಸರಕಾರದ ಮೇಲೆ ನಿರಂತರ ಒತ್ತಡ ಹೇರುವತ್ತ ಪರಿಷತ್ತು, ಇತರೆ ಸಂಘಟನೆಗಳು ಕಾರ್ಯತತ್ಪರವಾದರೆ ಮಾತ್ರ ಕರ್ನಾಟಕ ಸರಕಾರ ಮಿಸುಕಾಡಬಹುದು. ಅಗತ್ಯ ಬಿದ್ದರೆ ಗೋಕಾಕ ಚಳುವಳಿ ಮಾದರಿಯ ಆಂದೋಲನಕ್ಕೆ ಸನ್ನದ್ಧರಾಗಬೇಕು.

ಅಂದಹಾಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಎಂಬುದೊಂದು ಇಂದಿಗೂ ಅಸ್ತಿತ್ವದಲ್ಲಿದೆಯೇ?

ಕರ್ನಾಟಕ ಸರಕಾರದ ಕನ್ನಡದ ಕಾಳಜಿಗೆ ನಿದರ್ಶನವಾಗಲು ಇನ್ನೊಂದು ಸಂಗತಿಯತ್ತಲೂ ನಾವಿಂದು ಗಮನ ಹರಿಸಬೇಕು. ಈಚಿನ ವರುಷಗಳಲ್ಲಿ ನಗರ, ಪಟ್ಟಣ, ಹಳ್ಳಿಗಳೆಂಬ ಭೇದವೆಣಿಸದೇ ಅನೇಕ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಕರ್ನಾಟಕ ಸರಕಾರ ಅನುಮತಿ ನೀಡುತ್ತಲೇ ಬಂದಿದೆ. ಈ ಎಲ್ಲಾ ಶಾಲೆಗಳಲ್ಲಿ ಒಂದರಿಂದ ಐದನೆಯ ವರ್ಗದವರೆಗೆ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣ ದೊರೆಯಬೇಕು, ದೊರೆಯುತ್ತಿದೆ. ಆದರೆ ಇದು ಕಡತಗಳಲ್ಲಿ ಮಾತ್ರ. ವಾಸ್ತವವಾಗಿ ಇಲ್ಲಿ ಕಲಿಕೆ ನಡೆಯುತ್ತಿರುವುದೆಲ್ಲ ಇಂಗ್ಲಿಷ್ ಮಾಧ್ಯಮದಲ್ಲಿಯೇ ಎಂಬುದು ಎಲ್ಲರಿಗೂ ಗೊತ್ತಿರುವ ಗುಟ್ಟು. ಸರಕಾರಿ ಅಧಿಕಾರಿಗಳಿಗೆ ಇತ್ತ ಜಾಣ ಗುರುಡುತನ. ಕೆಲ ನಿಷ್ಠಾವಂತ ಅಧಿಕಾರಿಗಳೂ ಹಂಬಲ, ಅಧಿಕಾರ-ರಾಜಕೀಯ ಇವುಗಳೆದುರು ನಿಸ್ಸಹಾಯಕರು. ಕರ್ನಾಟಕ ಸರಕಾರದ ಕೃಪಾಶ್ರಯದಲ್ಲಿಯೇ ನಿರಾತಂಕವಾಗಿ ಸಾಗಿರುವ ಈ ಕಾನೂನುಬಾಹಿರ ಅಭಿಯಾನಕ್ಕೆ ಅಡ್ಡಿ ಆತಂಕವಾದರೂ ಎಲ್ಲಿಯದು ? ಕನ್ನಡಪರ ಸಂಘಟನೆಗಳು ಇಂಥ ಶಾಲೆಗಳಿಗೆ ಭೇಟಿ ನೀಡಿ ಇವುಗಳ ಬಂಡವಾಳವನ್ನು ಮಾಧ್ಯಮಗಳ ಮುಖಾಂತರ ಹೊರ ತಂದರೆ ಒಂದು ಸಾರ್ವಜನಿಕ ಅಭಿಪ್ರಾಯ ರೂಪುಗೊಂಡು ಸರಕಾರಕ್ಕೆ ಬಿಸಿತಟ್ಟಿಸಬಹುದು.

ಪ್ರಾದೇಶಿಕ ಭಾಷೆ ಮತ್ತು ಮಾತೃಭಾಷೆ ಇವೆರಡರ ನಡುವೆ ನಾವು ವೃಥಾ ಕಂದಕವೊಂದನ್ನು ತೋಡಿದ್ದೇವೆ. ಒಬ್ಬಾತನ ಮಾತೃಭಾಷೆಯನ್ನು ಆತನ ಮನೆಭಾಷೆ ಎಂದು ಪರಿಗಣಿಸಬಹುದು. ಒಂದೊಮ್ಮೆ ಭಾಷೆಗಳ ಆಧಾರದ ಮೇಲೆ ಭಾಷಾವಾರು ರಾಜ್ಯ ರಚಿಸಿದೆವೆಂದಮೇಲೆ ರಾಷ್ಟ್ರದಲ್ಲಿ ಭಾಷಾ ಸಾಮರಸ್ಯ ನೆಲೆಸಬೇಕೆಂದರೆ ಆಯಾ ಪ್ರಾಂತದಲ್ಲಿರುವವರೆಲ್ಲ ಆಯಾ ಪ್ರಾಂತಿಯರೇ. ಅವರ ಮನೆಭಾಷೆ ಮರಾಠಿಯಾಗಿರಬಹುದು ಅಥವಾ ಮಲೆಯಾಳಿಯಾಗಿರಬಹುದು ಅವರು ಕರ್ನಾಟಕದಲ್ಲಿ ನೆಲೆಸಿದರೆಂದ ಮೇಲೆ ಇಲ್ಲಿಯ ಬೀದಿ ಭಾಷೆ, ವ್ಯಾವಹಾರಿಕ ಭಾಷೆ ಕನ್ನಡವೇ. ಭಾರತ ಇನ್ನಿತರ ಪ್ರದೇಶಗಳಲ್ಲಿ ಅಲ್ಲಲ್ಲಿಯ ಪ್ರಾಂತೀಯ ಭಾಷೆ ವ್ಯಾವಹಾರಿಕ ಮಟ್ಟದ ವರೆಗಾದರೂ ಪ್ರತಿಯೊಬ್ಬರಿಗೂ ಗೊತ್ತು. ಆದರೆ ಕರ್ನಾಟಕದಲ್ಲಿ ಮಾತ್ರ ಕಿಂಚಿತ್ ಕನ್ನಡವರಿಯದ ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರು ಶತಶತಮಾನಗಳಿಂದಲೂ ಇಲ್ಲಿ ನಡುಗಡ್ಡೆಗಳಾಗಿ ಉಳಿದುಕೊಂಡಿದ್ದಾರೆ. ಇಲ್ಲಿ ಮಾತೃಭಾಷಾ ಮಾಧ್ಯಮವೆಂದರೆ ಕನ್ನಡ ಮಾಧ್ಯಮವೆಂದು ಅರ್ಥವಾಗಬೇಕು. ಆಯಾ ಭಾಷಿಕರು (ಉದಾ. : ಮರಾಠಿಗರು ಮರಾಠಿ; ತೆಲುಗರು ತೆಲುಗು) ತಮ್ಮ ಮನೆ ಭಾಷೆಯನ್ನು ಒಂದು ಭಾಷಾವಿಷಯವಾಗಿ ಕಲಿಯುವ ಸೌಲಭ್ಯವನ್ನು ಅವರಿಗೆ ಒದಗಿಸಿಕೊಡಬೇಕು. ಇದು ಕೇವಲ ಕನ್ನಡ ಬಲಗೊಳಿಸುವ ಕ್ರಮವಲ್ಲ, ಸರ್ವರನ್ನು ನಾಡಿನ ಮುಖ್ಯವಾಹಿನಿಯಲ್ಲಿ ಕೊಂಡೊಯ್ಯುವಲ್ಲಿ ಒಂದು ವಿಧಾನ.




ಈಗಿರುವ ಪದ್ಧತಿಯಲ್ಲಿ ಕನ್ನಡೇತರ ಶಾಲೆಗಳಲ್ಲಿ ಕನ್ನಡವನ್ನು ಒಂದು ಭಾಷಾವಿಷಯವಾಗಿ ಕಲಿಸಲಾಗುತ್ತಿದೆ. ಇದರಿಂದ ಒಬ್ಬ ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಯ ಕನ್ನಡದ ಮಟ್ಟ ನಿಕೃಷ್ಟಕ್ಕಿಂತ ಮೇಲ್ಮಟ್ಟದಲ್ಲಿಲ್ಲ. ಕರ್ನಾಟಕದಲ್ಲಿ ಕನ್ನಡ ಆಡಳಿತಭಾಷೆಯಾಗಿ ಬಳಕೆಯಲ್ಲಿರುವುದರಿಂದ ಈತನ ಕನ್ನಡದ ಗುಣಮಟ್ಟ ಒಂದು ಹಂತ ತಲುಪಬೇಕೆಂದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಹಂತದಲ್ಲಿ ಸಮಾಜ ಶಾಸ್ತ್ರದಂಥ ಒಂದು ಮಾನವಿಕ ವಿಜ್ಞಾನವನ್ನು ಕನ್ನಡೇತರ ಶಾಲೆಗಳಲ್ಲೂ ಕನ್ನಡದಲ್ಲಿಯೇ ಕಲಿಸುವಂತಾಗಬೇಕು. ಕೇಂದ್ರ ಸರಕಾರದ ಅಧೀನದಲ್ಲಿರುವ ನವೋದಯ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮ ಇಂಗ್ಲಿಷ್ ಆಗಿದ್ದರೂ ಸಮಾಜಶಾಸ್ತ್ರವನ್ನು ಹಿಂದಿ ಮಾಧ್ಯಮದಲ್ಲಿ ಕಲಿಸಲಾಗುತ್ತಿದೆ. ನಿಶ್ಚಿತಕ್ಕೂ ಇದು ಕನ್ನಡ ಹೇರಿಕೆಯ ಕ್ರಮವೆಂದೆನ್ನಿಸದು.

ಈ ವಿಷಯಗಳಿಗಾಗಿ ಸರಕಾರದ ಮೇಲೆ ಒತ್ತಡ ಹೇರಲು ಕನ್ನಡಕ್ಕೆ ಆತಂಕ ತರುವ ಮತ್ತೊಂದು ಸಂದರ್ಭಕ್ಕಾಗಿ ಕಾಯುವುದು ಬೇಡ. ಕನ್ನಡವನ್ನು ಬಲಗೊಳಿಸುವ ಕ್ರಮಗಳು ಇಂಗ್ಲಿಷನ್ನು ಮೂಲೆಗುಂಪು ಮಾಡುತ್ತವೆ ಎಂದು ಯಾರೂ ಭಾವಿಸಬೇಕಾಗಿಲ್ಲ. ನಮ್ಮ ಮಕ್ಕಳು ಇಂಗ್ಲಿಷ್ ಓದು-ಬರಹ, ವ್ಯಾವಹಾರಿಕ ಮಾತುಕತೆಗಳಲ್ಲಿ ಪಾರಂಗತರಾಗುವಂತೆ ನಮ್ಮ ಶಿಕ್ಷಣವ್ಯವಸ್ಥೆಯಲ್ಲಿ ಏನೆಲ್ಲ ಕ್ರಮ ತೆಗೆದುಕೊಳ್ಳಬೇಕೋ ಅವುಗಳನ್ನೆಲ್ಲ ತೆಗೆದುಕೊಳ್ಳೋಣ. ಮಗುವಿನ ಸೃಜನಶೀಲತೆಗೆ ಅಗತ್ಯವಿರುವ ಕನ್ನಡಕ್ಕೆ ಅವು ಪೂರಕವಾಗಿರಲೇ ಹೊರತು ಮಾರಕವಾಗುವುದು ಬೇಡ ಎಂಬ ಎಚ್ಚರಿಕೆ ಮಾತ್ರ ಸದಾ ಇರಲಿ.

ಭವಿಷ್ಯದ ದಿನಗಳಲ್ಲಿ ಹೊಸದೊಂದು ಬಗೆಯ ಶ್ರೇಣೀಕೃತ ಸಮಾಜ ರೂಪಗೊಳ್ಳದಿರಲಿ ಎಂಬ ಆಶಯ ನಮ್ಮ ಪ್ರಭುತ್ವಕ್ಕಿದ್ದರೆ ಪ್ರಾಥಮಿಕ ಶಿಕ್ಷಣವಾದರೂ ಸರ್ವರಿಗೂ ಕನ್ನಡ ಮಾಧ್ಯಮದಲ್ಲಿ ಏಕರೂಪ ಪಠ್ಯಕ್ರಮದೊಂದಿಗೆ ದೊರೆಯುವಂಥ ಸರ್ವಸಮಾನ ಶಿಕ್ಷಣ ನೀತಿಯನ್ನು ರೂಪಿಸಲಿ. ಇಂಥ ಹಕ್ಕೊತ್ತಾಯವನ್ನು ತರುವ ಕರ್ತವ್ಯ ಪ್ರತಿಯೋರ್ವ ಕನ್ನಡಿಗನದಾಗಲಿ.

**ಡಾ|| ಅನಿಲ ಕಮತಿ**
ಕಮತಿ ಕ್ಲಿನಿಕ್, ಡಾ|| ಶಿವರಾಮ ಕಾರಂತ ನಗರ, ಯಕ್ಸಾಂಬಿ
ಬೆಳಗಾವಿ – ೫೯೧ ೨೪೪

# ಕುದುರೆಮುಖ ಅದಿರು ಕಂಪನಿಯ ಕಾರ್ಮಿಕರ ಮೂಗಿಗೆ ತುಪ್ಪ?

ಕುದುರೆಮುಖ ಅದಿರು ಸಂಸ್ಥೆಯ ನಡಾವಳಿಗಳು ದಿನೇ ದಿನೇ ಹೊಸ ಬಣ್ಣಗಳನ್ನು ಪಡೆದುಕೊಳ್ಳುತ್ತಲಿದ್ದು, ತನ್ನನ್ನು ತಾನು ಸಮರ್ಥಿಸಿಕೊಳ್ಳಲು ಹೆಣಗುತ್ತಿದೆ. ಅದರ ಾರ್ಮಿಕ ಸಂಘಗಳು ದಿನಕ್ಕೊಂದು ಪತ್ರಿಕೆಯಲ್ಲಿ ಜಾಹೀರಾತು ನೀಡಿ ''ತನಗಿಂತ ಂರಿಯರಿಲ್ಲ; ಪರಿಸರವಾದಿಗಳಿಗಿಂತ ಅಭಿವೃದ್ಧಿ ದ್ರೋಹಿಗಳಿಲ್ಲ'' ಎಂದು ಿಂಬಿಸಹೊರಟಿದೆ. ಇದನ್ನು ಕಾರ್ಮಿಕ ಸಂಘಗಳೇ ಮಾಡುತ್ತಿವೆಯೋ ಅಥವಾ ಅಧಿ ಾರಿಗಳಿಂದ ಮಾಡಿಸಲ್ಪಡುತ್ತಿದೆಯೋ ಹೇಳಲಾಗುವುದಿಲ್ಲ.

ಇದು ಕೇವಲ ಯಾವುದೋ ಒಂದು ಕಂಪನಿ ಪರಿಸರ ವಿರೋಧಿ ಚಟುವಟಿಕೆ ನಡೆಸು ್ತಿರುವಷ್ಟು ಸರಳವಲ್ಲ. ಕರ್ನಾಟಕ ಹಾಗೂ ಆಂಧ್ರಪ್ರದೇಶದ ಲಕ್ಷಾಂತರ ಅನಕ್ಷರಸ್ಥ, ಅಸಂಘಟಿತ ರೈತರ ಹಾಗೂ ಭೂ ರಹಿತ ಕೃಷಿ ಕಾರ್ಮಿಕರ ಜೀವನದ ಪ್ರಶ್ನೆ. ಅಷ್ಟೇ ಅಥವಾ ಅದಕ್ಕಿಂತಲೂ ಮುಖ್ಯವಾಗಿ ಪ್ರಪಂಚದ ೨೫ ಪ್ರಮುಖ ಜೀವಿವೈವಿಧ್ಯದ ತಾಣಗಳಲ್ಲಿ ಂದಾಗಿ ನಾಶ ಭೀತಿ ಎದುರಿಸುತ್ತಿರುವ ಕುದುರೆಮುಖ ಅರಣ್ಯ ಪ್ರದೇಶ ಯಾವುದೋ ೇಶಕ್ಕೆ ಅದಿರು ಸಾಗಿಸುವ ಮೂರ್ಖ ಯೋಜನೆಯಿಂದ ಬರಿದಾಗುತ್ತಿರುವುದು.

ಕಂಪನಿ ಈಗಲೂ ಜಾಹೀರಾತುಗಳ ಮೂಲಕ ಜನಗಳಿಗೆ ಹೇಳಿ ನಂಬಿಸಲು ುತ್ನಿಸುತ್ತಿರುವ ಎಲ್ಲ ಅಂಶಗಳೂ ಬಹು ಜನವಿರೋಧಿ ಎಂದು ಸರ್ವೋಚ್ಚ ್ಯಾಯಾಲಯ ತೀರ್ಮಾನಿಸಿ ತೀರ್ಪು ನೀಡಿದೆ (ಸುಪ್ರೀಂ ಕೋರ್ಟ್ ತೀರ್ಪನ್ನು ww.sanctuaryasia.com/resources/environlaw/kudremukh ct302002.doc ಇಲ್ಲಿಂದ ಇಳಿಸಿಕೊಳ್ಳಬಹುದು). ಕಂಪನಿಯ ಕಾರ್ಯ ಚಟುವಟಿಕೆಗಳ ಗ್ಗೆ ಅಧ್ಯಯನ ನಡೆಸಿದ ವಿಶ್ವದ ಪ್ರತಿಷ್ಠಿತ ಸಂಸ್ಥೆಯಾದ ಭಾರತೀಯ ವಿಜ್ಞಾನ ಸಂಸ್ಥೆ, ಣಿಗಾರಿಕೆ ನಿಲ್ಲಬೇಕೆಂದು ವರದಿ ಸಲ್ಲಿಸಿದೆ. ಅದೇ ವರದಿಯಲ್ಲಿ, ಈ ಹಿಂದೆ ತ್ಯಾಜ್ಯವನ್ನು ಂಬಲು ಬಳಸಲಾಗುತ್ತಿರುವ ಲಕ್ಯಾ ಅಣೆಕಟ್ಟು ಒಮ್ಮೆ ಒಡೆದಿದ್ದನ್ನೂ ಪ್ರಸ್ತಾಪಿಸಿ, ಲಕ್ಯಾ ಣೆಯ ಭದ್ರತೆ ಬಗ್ಗೆ ಕೂಲಂಕಷ ಅಧ್ಯಯನ ನಡೆಸಬೇಕೆಂದು ವರದಿ ನೀಡಿತ್ತು. ಇದನ್ನು ಾಡಿಸದ ಕಂಪನಿ ಕ್ರಮ ಅನೇಕ ಸಂಶಯಗಳನ್ನು ಹುಟ್ಟುಹಾಕುತ್ತದೆ. ಮಂಗಳೂರಿಗೆ ದಿರು ಸಾಗಿಸುವ ಕೊಳವೆ ಒಡೆದು ಸಾವಿರಾರು ಟನ್ ಸ್ಲರಿ ಹೊರಚೆಲ್ಲಿ ೊಲಗದ್ದೆಗಳನ್ನು ನಾಶಪಡಿಸಿತು. ಇಷ್ಟಾದರೂ ಕಂಪನಿ ಎಚ್ಚೆತ್ತುಕೊಂಡಿಲ್ಲ ಎಂಬುದನ್ನು ೨೦೦೫ರಲ್ಲೂ 'ಸಣ್ಣ ಪ್ರಮಾಣ'ದ ಸೋರಿಕೆ ಉಂಟಾಗಿತ್ತು'' ಎಂಬ ಕಂಪನಿಯ ಲಿಖಿತ ೇಳಿಕೆ ಬಯಲು ಮಾಡಿದೆ.

ಮಾರುಕಟ್ಟೆಯಲ್ಲಿ ಕಬ್ಬಿಣಕ್ಕೆ ಬೆಲೆ ಇರುವುದರಿಂದ ಆರ್ಥಿಕವಾಗಿ ಸಾಕಷ್ಟು ಲಿಷ್ಠವಾಗಿರುವ ಕಂಪನಿ ಸರ್ವೋಚ್ಚ ನ್ಯಾಯಾಲಯದ ಆದೇಶ ಪಾಲಿಸಿ ಕಂಪನಿ ುಚ್ಚಿದರೆ, ಕಾರ್ಮಿಕರಿಗೆ ಸಿಗಬೇಕಾದ ಕಾನೂನುಬದ್ಧ ಪರಿಹಾರವಾದರೂ ೂರೆತೀತು. ಮುಂದೆ ಮಾರುಕಟ್ಟೆ ಕುಸಿದರೆ ಅಥವಾ ಕೋಲಾರದಲ್ಲಿ ಆದಂತೆ ಆದರೆ, ರ್ಮಿಕರು ಬೀದಿಗೆ ಬೀಳಲಿದ್ದಾರೆ. ಇದನ್ನು ಅರಿಯದ ನಮ್ಮ ಕಾರ್ಮಿಕ ಬಂಧುಗಳು ಕಂಪನಿಯ ಪರವಾಗಿ ನಿಂತಿರುವುದು ದುರಂತ. ಅಲ್ಲದೆ, ಕಂಪನಿ ಸಾಕಷ್ಟು ಅವ್ಯವಹಾರಗಳನ್ನು ನಡೆಸಿರುವುದು ಕಂಪ್ಟ್ರೋಲರ್ ಮತ್ತು ಆಡಿಟರ್ ಜನರಲ್ ವರದಿ ಬಹಿರಂಗಪಡಿಸಿದೆ. ಇದರ ಕೆಲವು ಪ್ರಮುಖ ಅಂಶಗಳನ್ನು ಮುಂದೆ ನೋಡೋಣ. ಇಂತಹ ಒಂದು ಅವ್ಯವಹಾರಿ ಸಂಸ್ಥೆ ನಾಳೆಯ ದಿನ ಕಂಪನಿ ಮುಚ್ಚಬೇಕಾದರೆ, ಕಾರ್ಮಿಕರ ಹಿತ ಕಾಪಾಡುತ್ತದೆ ಎಂದು ನಂಬುವುದು ಮುಗ್ಧತೆಯಾಗುತ್ತದೆ !!

ಕಂಪನಿಯ ವಿರುದ್ಧ ಮಾತಾಡುತ್ತಿರುವವರೆಲ್ಲ ಕಪಟ ಪರಿಸರವಾದಿಗಳು ಎಂದು ಬೊಬ್ಬೆ ಹೊಡೆಯುತ್ತಿರುವ ಕಂಪನಿ, ಮಾರ್ಚ್ ೨೦೦೨ರವರೆಗೂ ರಕ್ಷಿತಾರಣ್ಯವನ್ನು ೫೬.೨೮ ಹೆಕ್ಟೇರ್‌ಗಳಷ್ಟು ಒತ್ತುವರಿಮಾಡಿ ಗಣಿಗಾರಿಕೆ ನಡೆಸಿದ್ದು, ಕಂಪನಿಯ ವಿರುದ್ಧ ಅರಣ್ಯ ಇಲಾಖೆ ಮೊಕದ್ದಮೆ ದಾಖಲಿಸಿ ೧೯.೩೩೦ ಕೋಟಿ ರೂಪಾಯಿಗಳ ದಂಡ ವಿಧಿಸಿದೆ. ಇದು ೨೦೦೩ರವರೆಗೂ ವಸೂಲಿಯಾಗಿಲ್ಲ.

ಇದು ಕಂಪನಿಯ ಮೊದಲ ಕಾನೂನುಬಾಹಿರ ಚಟುವಟಿಕೆಯೇನೂ ಅಲ್ಲ! ಹಿಂದೆ ೧೯೮೪ರಲ್ಲಿ ಲಕ್ಯ ಅಣೆಕಟ್ಟೆಯನ್ನು ಅನಧಿಕೃತವಾಗಿ ಏರಿಸಿ ಉತ್ಕೃಷ್ಟ ೩೪೦ ಹೆಕ್ಟೇರ್ ಕಾಡನ್ನ ಮುಳುಗಿಸಿತು ! ಇದಕ್ಕೆ ಅರಣ್ಯ ಇಲಾಖೆ ಕಂಪನಿಗೆ ವಿಧಿಸಿರುವ ದಂಡ ೧೧೫.೮೬ ಕೋಟಿ. ಇದೂ ಸಹ ೨೦೦೩ ಆರ್ಥಿಕ ವರ್ಷದಲ್ಲಿ ವಸೂಲಾಗಿರಲಿಲ್ಲ. ಕಂಪನಿ ಮುಂದೆ ದಂಡ ಕಟ್ಟಬಹುದು. ಆದರೆ ಅದು ಮುಳುಗಿಸಿದ ಕಾಡು ? ಇದರಿಂದ ಜೀವಿವೈವಿಧ್ಯಕ್ಕೆ, ರೈತರಿಗಾಗುವ ನಷ್ಟವನ್ನು ಸರಿಪಡಿಸಲು ಸಾಧ್ಯವೇ ಇಲ್ಲ. ಇದನ್ನು ರಾಜ್ಯ ಸರ್ಕಾರದ ಜೀವಿ ಪರಿಸ್ಥಿತಿ ಇಲಾಖೆ ಸಹ ಒಪ್ಪಿಕೊಂಡಿದೆ (ಪರಿಸರ ಸ್ಥಿತಿ ವರದಿ ಮತ್ತು ಕಾರ್ಯಯೋಜನೆ, ಜೀವಿಪರಿಸ್ಥಿತಿ ವಿಭಾಗ, ಕರ್ನಾಟಕ ಸರ್ಕಾರ). ಮಾತು ಮಾತಿಗೆ ಪರಿಸರ ಸಂರಕ್ಷಣೆಯ ಸೋಗು ಹಾಕುವ ಕಂಪನಿ, ಸರ್ಕಾರ ನೀಡಿದ್ದ ಹಣವನ್ನೂ ಸಹ ಪರಿಸರ ರಕ್ಷಣೆಗಾಗಿ ಬಳಸಿಲ್ಲ! ಇದಕ್ಕೆ ಪ್ರಶಸ್ತಿ ನೀಡಿರುವ ಸಂಸ್ಥೆಗಳ ವಿರುದ್ಧ ತನಿಖೆ ನಡೆಯಬೇಕಿದೆ. ಇಂತಹ ಅವ್ಯವಹಾರಿ ಕಂಪನಿ ನಾಳೆ ಕಾರ್ಮಿಕರ ಪರವಾಗಿ ನಿಲ್ಲುತ್ತದೆ ಎಂಬುದು ಹಾಸ್ಯಾಸ್ಪದವಾದದ್ದು.

ರಾಷ್ಟ್ರದ ಜೀವಿವೈವಿಧ್ಯ ಹಾಗೂ ಆರ್ಥಿಕ ಸುಭದ್ರತೆ, ನಮ್ಮ ರೈತ ಹಾಗೂ ಕಾರ್ಮಿಕರ ಹಿತದೃಷ್ಟಿಯಿಂದ ಕುದುರೆಮುಖ ಕಬ್ಬಿಣ ಅದಿರು ಕಂಪನಿ ಮುಚ್ಚಲೇ ಬೇಕಿದೆ. ಈ ಹೋರಾಟದಲ್ಲಿ ಕೇವಲ ಪರಿಸರವಾದಿಗಳು ಮಾತ್ರವಲ್ಲದೆ, ಸಾಹಿತಿಗಳು, ಚಿಂತಕರು, ಕಾರ್ಮಿಕ ಸಂಘಗಳು, ರೈತ ಚಳುವಳಿಕಾರರು ನಾಡು ಉಳಿಸುವ ಈ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಬೇಕಿದೆ.

ಕೆ. ಎಸ್. ನವೀನ್
ಈ-೩೩/೧೩, ಓಬಳಪ್ಪ ರಸ್ತೆ, ಚಿಕ್ಕಮಾವಳ್ಳಿ . ಬೆಂಗಳೂರು – ೫೬೦ ೦೦೪

ಗೆಳತಿ,

ಮೊಗ್ಗಿನಿಂದ ಹೂವಾಗಿ ಅರಳಲೆಂದು ಪಯಣ ಹೊರಟ ಮಲ್ಲಿಗೆಗೆ ಇರುವ ಖುಷಿ ಧಾವಂತ ಎಂತಹದೋ ನಾನರಿಯೆ. ಆದರೆ ಪ್ರತಿ ಪ್ರಯಾಣದ ತರುವಾಯವೂ ಎದೆಯ ಗೂಡೊಳಗೆ ಒತ್ತೊತ್ತಿ ಶೇಖರಿಸಿಕೊಂಡ ಎಲ್ಲ ಎಲ್ಲ ಮಾಹಿತಿ ಅನಿಸಿಕೆಗಳನ್ನ ನಿನಗ ಬರೆವ ಉತ್ಸಾಹ, ಧಾವಂತ ಮಾತ್ರ ಅನಿರ್ವಚನೀಯವಾದದ್ದು. ಅದು ಎಲ್ಲ ಒತ್ತಡಗಳ ಬಿಡುಗಡೆಯ ಬುಗ್ಗೆ. ತಾಯಿ ಹಕ್ಕಿಯ ಕೊಕ್ಕಿನಿಂದ ಕಾಳು ತಿಂದ ಮರಿ ಹಕ್ಕಿ ಮೊಟ್ಟಮೊದಲಿಗೆ ರೆಕ್ಕೆ ಬಿಚ್ಚಿದಂತೆ. ಗೂಡೊಳಗಿನ ಅವ್ವ ಹಾಸಿದ ಹುಲ್ಲ ಹಾಸಿಗೆಯೇ ಅಂತಿಮ ಶ್ರೀರಕ್ಷೆ ಎಂಬ ನಂಬಿಕೆ ಒಡೆದು ತಾನು ಬೆಳೆದು ಜಗದಗಲ ಹರವಿಕೊಂಡ ಗಾಳಿಯ ಒಳಗೂ, ಹೊರಗೂ, ಮೇಲೂ, ಕೆಳಗೂ ಕಾಲೂರಿ ರೆಕ್ಕೆ ತೂರಾಡುತ ಪ್ರಥಮ ನೋಟದಲ್ಲಿಯೇ ಅನಂತ ಆಕಾಶವನ್ನು ಮುತ್ತಿಕ್ಕಿದಂತೆ. ಪುಟ್ಟ ರೆಕ್ಕೆಯನ್ನು ಬಳಸಿ ಒಟ್ಟು ಭೂಮಂಡಲವನ್ನು ಬಿಗಿದಪ್ಪುವ ಬಯಕೆಯಂತೆ. ಹಾರ ಹೋಗಿ ಆಯ ತಪ್ಪಿ ಧೊಪ್ಪೆಂದು ನೆಲ ಸೋಕಿದರೂ ಮತ್ತೆ ಮತ್ತೆ ಪವನ ಸ್ನೇಹದ ಹುಚ್ಚಿನಂತೆ, ಮುಗಿಲ ಮುತ್ತಿನ ಆಸೆಯಂತೆ.

ಈ ಹೊತ್ತಿನಲ್ಲಿ ನಿನಗೆ ಟ್ರೇನಿನೊಳಗಿನ ಒಂದು ಘಟನೆ ಹೇಳಲೇಬೇಕು. ನಾನೊಮ್ಮೆ ಪ್ರಯಾಣ ಹೊರಟಿದ್ದೆ. ಗಾಳಿ ತೂರಿ ಬರುವ ಕಿಟಕಿಗೆ ಮುಖ ಮಾಡಿದ್ದೆ. ಕಿಟಕಿಯಿಂದ ಹೊರಗಿಣುಕಿದರೆ ನಿಶ್ಶಬ್ದವೇ ಮೈವೆತ್ತಂತಿರುವ ಕತ್ತಲು ತನ್ನ ಪಾಡಿಗೆ ತಾನು ಬಯಲಿಗೊಂದು ಭಾಷೆ ಬರೆಯುತ್ತಿತ್ತು. ಮುಗಿಲ ಮುಖದ ಮೇಲೆ ಬ್ಯಾಟರಿ ಹಾಕಿ ಹುಡುಕಿದರೂ ಒಂದೇ ಒಂದು ನಗುವ ಚುಕ್ಕೆಯಿರಲಿಲ್ಲ. ನನ್ನ ಸೀಟು ಖಾಯಮ್ಮಾಗಿರಲಿಲ್ಲ. ರಾತ್ರಿ ಪೂರ್ತಿ ಸೀಟಿಲ್ಲದೆ ಕಳೆವ ಆತಂಕ ಹೆಗಲೇರಿ ಕಾಡುತ್ತಿತ್ತು. ಇಡೀ ಕಂಪಾರ್ಟ್‌ಮೆಂಟಿನಲ್ಲಿ ಹೆಂಗಸು ಅಂತ ನಾನೊಬ್ಬಳೇ. 'ಹಜ್' ಯಾತ್ರೆಗೆ ಹೊರಟ ಮುಸ್ಲಿಂ ಗಂಡಸರ ದಂಡೇ ಇತ್ತು ಬೋಗಿ ತುಂಬ. ಯಾತ್ರೆಗೆ ಶುಭ ಹಾರೈಸಿ ಅವರ ಕೊರಳಿಗೆ ಹಾಕಿದ ಹೂವಿನ ಹಾರಗಳು ಕಿಟಕಿಯ ಸಲಾಕೆಗಳ ಮೈತುಂಬ ಆವರಿಸಿಕೊಂಡು ತೀಡಿ ಬರುವ ಗಾಳಿಯ ಮೂಲಕ ಪರಿಮಳ ಹರಡುತ್ತಿದ್ದವು. ಕ್ರಮೇಣ ಕತ್ತಲೆಯು ನಿದ್ದೆಯ ಕೈಹಿಡಿದು ಠಳಾಯಿಸ ತೊಡಗಿತು. ಇನ್ನೇನು ನನಗೆ ಕೂಡಲಿಕ್ಕೂ ಜಾಗ ಇರಲಿಲ್ಲ. ಆಜಾನುಬಾಹು ಗಂಡಸರು, ತಂದ ರೊಟ್ಟಿಯ ಗಂಟನ್ನು ಬಿಚ್ಚಿದರು. ಪಂಜರದಿಂದ ಬಿಡುಗಡೆಯಾದ ಹಕ್ಕಿಯಂತೆ ಖೀಮಾ ಮತ್ತು ಚಿಕನ್ ವಾಸನೆಯೂ ಘಮ್ಮಂತ ಹಾರಾಡತೊಡಗಿತು. ಅವರು ಪರಸ್ಪರ ಹರಟುತ, ನಗುತ ಜಗತ್ತಿನ ಖುಷಿಯೆಲ್ಲವ ಸೂರೆಹೊಡೆಯುತ ಮಜವಾಗಿ ಕಾಲ ಕಳೆಯತೊಡಗಿದರು. ಏನೇ ಕಾರಣ ಮುಂದೆ ಮಾಡಿ ಮಾತಾಡಿಸಬೇಕೆನಿಸಿದರೂ, ಮನಸ್ಸು ಹಿಂದೇಟು ಹಾಕಿತು. ''ತಪ್ಪು ತಿಳಿದರೇ...?'' ಇನ್ನೇನು ಎಲ್ಲರೂ ತಮ್ಮ ಬರ್ತ್ ಮೇಲೆ ಹಾಸಿಗೆ ಹಾಸಿ ಒಬ್ಬೊಬ್ಬರೇ ನಿಡಿದಾಗಿ ಕಾಲು ಚಾಚತೊಡಗಿದರು. ನಾನು ಅನಿವಾರ್ಯವಾಗಿ ಎದ್ದು ಟ್ರೇನಿನ ಬಾಗಿಲ ಹತ್ತಿರ ನಿಂತುಕೊಂಡೆ. ಹೆಂಗಸರ್‍ಯಾರಾದರೂ ಇರುವ ಪಕ್ಕದ ಕೋಚ್‌ಗೆ ಹೋಗುವ ಆಲೋಚನೆಗೆ ಇಳಿದೆ. ಆ ಗಂಡಸರಲ್ಲಿ ೬೦ ವರ್ಷದ ಹತ್ತಿರವಿರುವ ಯಜಮಾನನೊಬ್ಬ ನಾನು ನಿಂತ ಕಡೆ ಬಂದ.

ನನ್ನಲ್ಲಿ ಪ್ರಶ್ನೆ ಇಣುಕಬೇಕು. ಅಷ್ಟರಲ್ಲಿ ಅವನೇ ''ಬೆಹೆನ್‌ಜೀ ಆಪ್ ಇಧರ್ ಲೇಟೋ...'' ಅಂದ. ನನ್ನ ಮನಸ್ಸಿಗೆ ತಕ್ಷಣ ಏನೂ ತೋಚದೆ ಗಲಿಬಿಲಿಯ ಬೂದಿಯಲ್ಲಿ ರೆಕ್ಕ ಫಡಫಡಿಸಿತು. ''ಹಾಗಾದರೆ ಈ ಯಜಮಾನ ಮಲಗುವುದೆಲ್ಲಿ..?'' ಗೌರವ ಮತ್ತು ಒಂದು ಪುಟ್ಟ ಥ್ಯಾಂಕ್ಸ್ ನಗೆ ಚೆಲ್ಲಿ ಸಂಕೋಚದಿಂದಲೇ, ''ನಹೀ. ಆಪ್ ಸೋಜಾಯಿಯೆ ಮೈ ಇಧರ್ ಬೈಠೂಂಗಿ...'' ಅಂದೆ. ನನ್ನ ಮನವು ಆ ಹೊತ್ತಿನವರೆಗೂ ಧರಿಸಿದ ಅನುಮಾನದ ದಿರಿಸು ಮೆಲ್ಲಗೆ ಕಳಚತೊಡಗಿತು. ಎರಡು ಹೆಜ್ಜೆ ಮುಂದಿಟ್ಟು ನೋಡಿದರೆ ಕಂಡದ್ದೇನು? ಆ ಯಜಮಾನ ತನ್ನ ಸೈಡ್ ಬರ್ತ್ ಅನ್ನು ನನಗೆ ಬಿಟ್ಟುಕೊಟ್ಟು, ತಾನು ಎರಡು ಆಸನಗಳ ನಡುವೆ ಖಾಲಿ ಇರುವ ಕೆಳಗಿನ ನೆಲದ ಮೇಲೆ ಹಾಸಿಕೊಂಡಿದ್ದ. ನನಗೆ ಮತ್ತೂ ಕುಗ್ಗುವಂತಾಗಿ, 'ಛೇ ವಯಸ್ಸಾದ ಹಿರಿಯನನ್ನು ಕೆಳಗೆ ಮಲಗಿಸುವುದೆಂದರೇನು...?' ಅನ್ನಿಸಿ, ''ಭಾಯಿಸಾಬ್...'' ನಾನಿನ್ನು ಮುಂದಿನ ಶಬ್ದ ನುಡಿವ ಮೊದಲೇ ಆ ಯಜಮಾನ, ''ದೇಖೋ ಆಪ್ ಮೇರೆ ಬೇಟಿ ಜೈಸೆ ಹೈ. ಆಪ್ ರಾತ್‌ಭರ್ ಐಸೆ ಬೈಠೇ ತೋ ಹಮೆ ಅಚ್ಛಾ ನಹೀ ಲಗತಾ... ಆವೋ. ಆರಾಂಸೇ ನೀಂದ್ ಕರೋ ಬೇಟಿ...' ಅಂದು ನನ್ನ ಏರ್ ಬ್ಯಾಗನ್ನು ಬರ್ತ್ ಮೇಲಿಟ್ಟನು. ಮತ್ತು ತಾನು ಕೆಳಗೆ ಹಾಸಿದ ಹಾಸಿಗೆಯ ಮೇಲೆ ಮಲಗಿದನು. ನಾನು ಬೇರೆ ದಾರಿಯಿಲ್ಲದೆ ಬರ್ತ್ ಮೇಲೆ ಬೆಡ್‌ಶೀಟ್ ಹಾಸಿದೆ. ಆ ಯಜಮಾನ ಮಲಗುವ ಮೊದಲು ಗೋಣೆತ್ತಿ, ''ಬೇಟಿ ಸೋಯೀ...?'' ಎಂದು ವಿಚಾರಿಸಿದನು. ನನಗೆ ಆ ಯಜಮಾನನ ಇಡೀ ಶರೀರ ಮಾಯವಾಗಿ ಕರುಣಾಪೂರಿತ ಮಮತಾಮಯಿ ಎರಡು ಕಣ್ಣುಗಳು ಮಾತ್ರ ಹೊಳೆವ ಜ್ಯೋತಿಯಂತೆ ಕಂಡವು.

''ಬೇಟಿ ಕುಚ್ ಖಾಯೇ ಕ್ಯಾ ನಹೀ? ತುಮ್ ಲೋಗ್ ಮಟನ್ ನಹಿ ಖಾತೆ ಹೈನ... ಇಸಲಿಯೇ ಖಾನೆಕೋ ನಹೀ



# ಕೊಂದಹರುಳಿದರೆ...

ಬುಲಾಯೆ...'' ಅಂದ ಯಜಮಾನನ ಕಂಠವು ಪ್ರೀತಿಯ ಅಕ್ಷಯಪಾತ್ರೆಯಂತೆ ಕಂಡಿತು.

ಟ್ರೇನಿನ ಒಳಗೆ ಕತ್ತಲೆಯೊಂದಿಗೆ ಮೌನವೂ ಕೈ ಜೋಡಿಸಿತು. ನನಗೆ ನಿದ್ದೆ ಬರಲೇ ಇಲ್ಲ. ಟ್ರೇನು ಗಡಲ್ ಬಡಲ್ ಶಬ್ದ ಹೊರಡಿಸುತ್ತಾ ಮಾತು ಮಾತಿಗೂ ಸಿಳ್ಳು ಹಾಕುತ ಕತ್ತಲೆಯ ಕೋಟೆ ಒಡೆಯುತ ಮುನ್ನುಗ್ಗುತ್ತಿದೆ. ತನ್ನ ಪಾಡಿಗೆ ತಾನು ತನ್ನದೇ ಮೈಸುತ್ತ ತಿರುಗುತ್ತಿರುವ ಭೂಮಿಯ ಎದೆಯಮೇಲೆ, ಸಾಸಿವೆಯ ಸಹಸ್ರ ಪಾಲಿನೊಂದು ಭಾಗವೂ ಇರದ ಈ ಟ್ರೇನು ನಮ್ಮನ್ನೆಲ್ಲ ಹೊತ್ತು ದೌಡಾಯಿಸುತ್ತಿದೆ. ಕಿಟಕಿಯ ಕಡೆ ಮುಖ ತಿರುಗಿಸಿ ಹೊರಗೆ ಇಣುಕಿದೆ. ಹೊಲ, ಗಿಡ, ಮರ, ಪುಟ್ಟ ಹಳ್ಳಿ, ಲೈಟಿನ ಕಂಬ, ವಿದ್ಯುತ್ ತಂತಿಗಳು. ಸಣ್ಣ ಸಣ್ಣ ಮನೆಗಳು, ಅಲ್ಲೊಂದು ಇಲ್ಲೊಂದು ದೊಡ್ಡ ಬಾಗಿಲಿನ ಮನೆ, ಊರು ದಾಟುವ ಮುನ್ನವೇ ಗುಡಿ, ಮಸೀದಿ, ದರ್ಗಾ, ಕೆಲವು ಕಡೆ ಚರ್ಚು ಕತ್ತಲೆಯಲ್ಲಿಯೂ ಮಸಕು ಮಸಕಾಗಿ ಕಾಣಿಸುತ್ತಿದ್ದವು. ಸುಮ್ಮನೇ ಎಲ್ಲವೂ ನೋಡತೊಡಗಿದೆ. ಊರು ಸರಿದ ಕೂಡಲೇ ಬಯಲಗಲಕ್ಕೂ ಕತ್ತಲೆಯ ರಾಣಿಯು ತನ್ನ ತಲೆಕೂದಲು ಹರವಿಕೊಂಡು ಮೊಳಕಾಲ ಮಂಡಿಯ ನಡುವೆ ಮುಖ ಹುದುಗಿಸಿ ಕೂತಂತೆ ಭಾಸವಾಗುತ್ತಿತ್ತು. ಟೇಪ್ ತೆಗೆದು ತತ್ವಪದಗಳ ಕ್ಯಾಸೆಟ್ ಹಾಕಿ ಕಿವಿಗೆ ವಾಕ್‌ಮನ್ ವೈರ್ ಸಿಕ್ಕಿಸಿಕೊಂಡು ಆಲಿಸತೊಡಗಿದೆ. ಏಕತಾರಿ ಟೀಂವ್ ಟೀಂವ್, ನಿನಾದಿಸಿತು. ಯಾವ ಹಾಡು ?

ನೀಲಾ ಕೆ.

ಹೌದು ಚನ್ನೂರು ಜಲಾಲ ಸಾಹೇಬನ ಹಾಡು

''ಸಬ್ ಕೆಹೆತೆ ಹೈ ಈಶ್ವರ್ ಅಲ್ಲಾ
ಇದರ ಭೇದ ಯಾರಿಗೂ ತಿಳಿದಿಲ್ಲ...''

ನೋಡು ನನಗೀಗ ನೆನಪಾಗಲಿಕ್ಕೆ ಶುರು ಆಯ್ತು. ವಯಸ್ಸಾದ ಒಬ್ಬ ಆಯಿಯ ಬಾಯಿಂದ ಸ್ವಾತಂತ್ರ್ಯ ಚಳುವಳಿಯ ಕತೆ ಕೇಳಲು ಒಂದು ಪುಟ್ಟ ಟೇಪ್ ರೆಕಾರ್ಡರ್ ಮತ್ತು ನೂರರ ನಾಲ್ಕು ನೋಟಿಟ್ಟುಕೊಂಡು ನೀನು, ನಾನು ಬೀದರಿಗೆ ದೌಡಾಯಿಸಿದ್ದೆವು. ಕಲಬುರ್ಗಿ ಎಂಬ ಅಗ್ನಿಕುಂಡದಿಂದ ಪಾರಾಗಿ ಬೆವರಧಾರೆ ಬಸಿಯುತ 'ಬೀದರ' ಅನ್ನುವ ಕೆಂಪು ನೆಲದ ಪುಟ್ಟ ಮಲೆನಾಡಿಗೆ ಧಾವಿಸಿದ್ದೆವು. ಸಣ್ಣ ಹಳ್ಳಿಖೇಡ್ ಮುಂದಿನ ಬತ್ತದ ಅಂಗೈ ಅಗಲ ಕೆರೆಯೊಂದೇ ಸೂರ್ಯನ ಬೆಂಕಿ ಬಾಣಗಳನ್ನು ಹಿಮ್ಮೆಟ್ಟಿಸುತ್ತದೆ.

ಬೀದರ ಬಂತು. ಬಸ್ ಇಳಿದು ಆ ಆಯಿ ಮನೆಗೆ ಹೋಗಿ, ಕೊಟ್ಟಿದ್ದು ಉಂಡು ಅವಳ ಅನುಭವಗಳನ್ನು ಎದೆಯ ಗೂಡೊಳಗಿಟ್ಟುಕೊಂಡು ಬರಲೆಂದು ನಾವಿಬ್ಬರೂ ಬೀಸುಗಾಲಿಂದ ಹೊರಟೆವು. ನಿನಗೆ ನೆನಪಿದೆಯಲ್ಲ... ಆ ಆಯಿಗೆ ಏನಿಲ್ಲಂದ್ರೂ ೭೫-೭೮ ವಯಸ್ಸಿರಬೇಕು. ಇಳಕಲ್ ಸೀರೆಯ ಕೆಂಪು ಸೆರಗು ಬಿಳಿ ಕೂದಲಿನ ತಲೆಯ ಮೇಲೆ ನಿರುಮ್ಮಳಾಗಿತ್ತು. ಸಂಪಿಗೆ ಎಸಳಂಥಾ ಮೂಗಿನ ಸುತ್ತ ಚರ್ಮ ಸುಕ್ಕುಬಿದ್ದು ಇಳಿಬಿದ್ದು ಅದರ ಭಾರಕ್ಕೆ ಗಲ್ಲದ ಮಾಂಸ ಕೆಳಗೆ ಸರಿದು ಕುತ್ತಿಗೆ ಸುತ್ತ ಅಡ್ಡಡ್ಡ ನಿರಿಗೆ ನಿರಿಗೆಯಾಗಿ ಇಳಿಬಿದ್ದಿತ್ತು. ಕಿವಿಯ ಆಲಿಗಳು ಇನ್ನೇನು ಹಣ್ಣಾಗಿ ಕಡದು ಬೀಳುವ ದ್ರಾಕ್ಷಿಯ ಹಣ್ಣಿನಂಗೆ ಇದ್ದರನು ಅಲ್ಲಿ ಆರು ಹರಳಿನ ಹುವ್ವಾ ಫಳ ಫಳಿಸುತ್ತಿದ್ದವು. ಖಣದ ಕುಬುಸ, ಬೆಳ್ಳಿ ಲಿಂಗದ ಚೌಕ, ಸುಕ್ಕಾದ ಕುತ್ತಿಗೆಗೂ ಜೀರಾಮಣಿ ಸರ.

ಊಟ ಮಾಡಿಸಿ ಆ ಆಯಿ ೧೯೪೮ರ ರಜಾಕಾರ ಸಂದರ್ಭದ ಕತೆಯ ಹಕ್ಕಿಯನ್ನು ತನ್ನ ನೆನಪಿನಂಗಳ ದೊಳಗಿಂದ ಪ್ರಯತ್ನಪೂರ್ವಕವಾಗಿ ಈಚೆ ತಂದು ಹಾರಿ ಬಿಟ್ಟಳು. ಹಾಗೆ ಹಾರಿ ಬಿಡುವ ಮೊದಲು ಒಂದು ವೀಳ್ಯದೆಲೆಯ ದೇಟು ತೆಗೆದು ಸುಣ್ಣದ ಲೇಪಿನೊಂದಿಗೆ ಬಟ್ಟಡಕಿ ಬೆರಸಿ,

''ತಗೋರಿ, ಬಾಯಿ ಕೆಂಪಗಾದ್ರ ನಿಮುಗ ನನ ಮ್ಯಾಲ ಜೀವ ಬಕ್ಕೋಳು ಅದಾ ಅಂತರ್ಥ...'' ಅಂತ ನಮ್ಮ ಕೈಯೊಳಗ ಎಲಿ ಕೊಟ್ಟು ಹಲ್ಲಿಲ್ಲದ ಬಾಯೊಳಗೆ ಸ್ಪಷ್ಟ ಉಚ್ಚಾರ ಮಾಡಬೇಕಂತ ನುಣುಪಾದ ದವಡೆಯನ್ನೇ ಹಲ್ಲಿನಂತೆ ಬಳಸಿ, ನಾಲಿಗೆ ಹೊರಳಿಸುತ್ತ ಆ ಆಯಿ ಅವಳಿಗರಿವಿಲ್ಲದನೇ ಚರಿತ್ರೆಯ ಎರಡು ಲೈನುಗಳ ನಡುವಿನ ಮೌನಕ್ಕೆ ಬಾಯಾಗತೊಡಗಿದಳು. ನೀನು ನಾನು ಕೈಯಲ್ಲಿ ಕುಂಚ ಹಿಡಿದು ಬಣ್ಣ ತುಂಬತೊಡಗಿದೆವು. ನಾವಾಗ ಅವಳ ಪಕ್ಕಾ ಬಿದ್ರಿ ಭಾಷೆಗೆ ಕಿವಿಕೊಟ್ಟೆವು.

ಗೆಳತಿ, ನಾನೀಗ ನೆನಪಿನ ಬೆನ್ನೇರಿ ಆ ಆಯಿ ಮುಂದೆ ಕೂತಿದ್ದೇನೆ. ನೀನೂ ಮತ್ತೊಮ್ಮೆ ಕತೆ ಕೇಳು.

* * *

...ಮುಡಿಚೆಟ್ಟಿನೊಳ ಬಂದು
ಮುಟ್ಟಿ ತಟ್ಟಿ ಅಂತೀರಿ
ಮುಡಚೆಟ್ಟ್ಯಾವಲ್ಲಾದ ಹೇಳಣ್ಣಾ ॥೧॥
ಮುಟ್ಟಾದ ಮೂರು ದಿನಕ
ಹುಟ್ಟಿ ಬರತೀರಿ ನೀವು
ಮುಡಚೆಟ್ಟ್ಯಾವಲ್ಲಾದ ಹೇಳಣ್ಣಾ ॥೨॥



ಹೊಸತು

## ವಿಶೇಷ ಸಂಚಿಕೆ – ಜನವರಿ ೨೦೦೬

'ಹೊಸತು' ಜನವರಿ ೨೦೦೬ರ ವಾರ್ಷಿಕ ಸಂಚಿಕೆಯಲ್ಲಿ ನಿಮ್ಮ ಅಭಿಪ್ರಾಯವನ್ನು ಓದುಗರೊಂದಿಗೆ ಹಂಚಿಕೊಳ್ಳಬಯಸುತ್ತೀರಾ ? ಹಾಗಿದ್ದರೆ ಐನೂರು ಪದಗಳ ಮಿತಿಯಲ್ಲಿ ಬರೆದು ನವೆಂಬರ್ ೧೫ರೊಳಗಾಗಿ ನಮಗೆ ಕಳಿಸಿಕೊಡಿ.

ವಿಷಯ : **ಸಾರ್ವಜನಿಕ ಸೇವಾಕ್ಷೇತ್ರವನ್ನು ಸುಧಾರಿಸುವ ಬಗೆ.**

ಖಾಸಗಿ ಎಲ್ಲ ರಮ್ಯವೆಂಬ ಭ್ರಾಂತಿ ಈಗ ಕಳಚಿಹೋಗಿದೆ. ಶಿಕ್ಷಣ, ಆರೋಗ್ಯ, ಸಾರಿಗೆ, ಉದ್ಯಮ, ಇತ್ಯಾದಿಗಳಲ್ಲಿ ಖಾಸಗಿ ಕ್ಷೇತ್ರವು ದುಬಾರಿ ಮಾತ್ರವಲ್ಲ, ಕಳಪೆಯದೂ ಆಗಿದೆ. ಸಾಮಾನ್ಯರಿಗಂತೂ ಅದು ಎಟುಕುವಂತಿಲ್ಲ. ಸಾರ್ವಜನಿಕ ಸೇವಾಕ್ಷೇತ್ರವು ಭ್ರಷ್ಟವಾಗಿ ಇರುವುದು ಜನರಿಗೆ ದೊಡ್ಡ ಮೋಸವಾಗಿದೆ, ಅನಾನುಕೂಲಕರವಾಗಿದೆ. ಇದು ಅಗಾಧವಾದ ವಂಚನೆ. ಜನಸಾಮಾನ್ಯರನ್ನು ಬೆಂಕಿಗೆ ಹಾಕುವಂತಹ ದೌರ್ಜನ್ಯ ಇದಾಗಿದೆ. ಇದನ್ನು ಸುಧಾರಿಸದ ಸರ್ಕಾರ ಜನವಿರೋಧಿ ಸರ್ಕಾರ. ಆದರೆ ಇದರಲ್ಲಿ ಸಾರ್ವಜನಿಕರ ಪಾಲು ಎಷ್ಟರಮಟ್ಟಿನದು ? ಜವಾಬ್ದಾರಿ ಎಷ್ಟು? ಲೋಕಾಯುಕ್ತವನ್ನೋ ಸರ್ಕಾರಿ ಅಧಿಕಾರಿಗಳನ್ನೋ ತೆಗಳುತ್ತಾ ಕೂತರೆ ಆದೀತೆ ? ಹಾಗಿದ್ದರೆ ಸುಧಾರಿಸುವ ಬಗೆ ಯಾವುದು ? ನಾವು ಚಳುವಳಿ ನಡೆಸಬಹುದೆ ಮತ್ತು ಹೇಗೆ ?

ದಯವಿಟ್ಟು ಬರೆಯಿರಿ, ಆಯ್ದ ಐದು ಲೇಖನಗಳನ್ನು ಪ್ರಕಟಿಸಲಾಗುತ್ತದೆ.

**– ಸಂಪಾದಕ**

ಅಂತ ಪೀರಪ್ಪನ ಮನಿ ಮುಂದ ಹತ್ತಾರಾ ಮಂದಿ ಈ ಹಾಡು ಹಾಡ್ತಿದ್ದರು. ಸವಾರಾತ್ರಿ ಆದರ್‍ನೂ ಮನಿಗಿ ಎದ್ದ ಹೋಗ್ತಿದಿಲ್ಲ. ಅಸೂ ಮಂದಿ ಮನೆಯವ್ರು ಉಂಡು ಮಕ್ಕೊಂಡಿರ್‍ತಿದ್ರು. ಆದ್ರ ಗುರುಲಿಂಗಪ್ಪ, ಸಂಗಪ್ಪ ಮೆಹಬೂಬಸಾಬ, ಹುಸೇನಿ ಇವ್ರ ಸಂಗಾಟ ಮಾದ್ರ ಕರೆಪ್ಪನೂ ಅಟ್ಟ ದೂರದಾಗ ನಾಕ್ ನಾಕ್ ಘಂಟಾತನ ಕುಕ್ಕರಗಾಲ ಮ್ಯಾಲ ಕುಂತಿರ್‍ತಿದ್ದ. ಇಲ್ಲಾಂದ್ರ ನಾಲಿ ಬಲ್ಲಿ ಬೀದ್ಯಾಗೆ ಪಡಗಾಲಪಂಚಿ ಹಾಕ್ಕೊಂಡು ತಾನನೂ ''ಮುಡಚಟ್ಟಿನೊಳ ಬಂದು...'' ಅಂತ ದನಿ ಸೇರಸ್ತಿದ್ದ. ಜರಾ ತಡಾ ಮಾಡಿ ಬಂದ್ರೂನೂ ಲಿಂಗಯ್ಯ ಸ್ವಾಮಿ ಹೆಗಲ ಮ್ಯಾಲ ಕಾವಿ ಟಾವೆಲ್ ಹಾಕ್ಕೊಂಡು ಕಟ್ಟಿ ಮ್ಯಾಲ ಕುಂತು ತಾಳಹಾಕ್ತಿದ್ದ. ಗೂನು ಬೆನ್ನಿನ ಬಂಡಯ್ಯ ಮುತ್ಯಾಂದು ಮದಿ ಮುಂಜಿ ಆಗಿದ್ದಿಲ್ಲ. ಹಿಂಗಾಗಿ ಎಲ್ಲರೂ ಎದ್ದು ಹೋದರ್‍ನೂ ಬಂಡಯ್ಯ ಅಲ್ಲೇ ಪೀರಪ್ಪನ ಢಲೋಜ್ಯಾಗ ಗೊಂಗಡಿ ಅಂಬಾದೇ ಹಾಸ್ಗಿ ಹೊದ್ಕಿ ಮಾಡ್ಗೊಂಡು ಮಕ್ಕೊತಿದ್ದ. ಯಾರ ಇದ್ದಿಲಂದ್ರನೂ ಏಕತಾರಿ ಹಿಡ್ಕೊಂಡು ನಿದ್ದಿ ಬರಾತನಾ ಹಾಡ್ತಿದ್ದ. ''ಹ್ಯಾಂಗ ಭ್ರಾಂತಿ ನೀಗುತಿ. ನೀ ಹ್ಯಾಂಗ ಮಹಾಂತನಾಗುತಿ. ಹಾಂಗ ಹೀಂಗ ಹೊತ್ತುಗಳೆದು ಹಿಂಗೆ ನೀ ಸತ್ತ್ಹೋಗುತಿ...''

ಹುಣವಿ ದಿನಾ ಅಂತೂ ಮುತ್ತೈದಿ ಹಣಿಮ್ಯಾಲಿನ ಕಾಸಿನಗಲ ಕುಂಕುಮದಂಗ ಹೊಳಿತಿದ್ದ ಚಂದ್ರಾಮ. ಮುಗಲ ಮ್ಯಾಲಿಂದಲೇ ಈ ಬಂಡಯ್ಯ ಮುತ್ಯಾನ ಹಾಡ ಕೇಳತಿದ್ದ ಅನ್ನಸ್ತಿತ್ತು. ಮತ್ತ ಸುತ್ತ ಕುಂತ ಮಂದಿಗಿ ನಿದ್ದಿ ಬಾ ಅಂದ್ರ ಹ್ಯಾಂಗ ಬರ್‍ತದ...? ಇಡೀ ದಿನ ದುಡದು ಸಂಸಾರದ ನೊಗಕ್ಕೆ ಹೆಗಲು ಕೊಟ್ಟು ಹೈರಾಣಾದ ಜೀವ ಒಂದು ಅರೆಗಳಿಗಿಯರೇ ತನ್ನೊಳಗೆ ತಾ ಕಳದ ಹೋಗ ಬೇಕಂತಾನ. ಅದು ಒಂದು ನಮೂನಿಯ ಸಾಂತ ಸ್ಥಿತಿಯಾಗಿರ್‍ತದ. ಏರದನಿಯೊಳಗೆ, ಒಮ್ಮೊಮ್ಮೆ ತಣ್ಣಗ ತಗ್ಗಿದ ಆ ಹಾಡಿನ ಶಬ್ದಗಳಿಗೆ ಭಾವ ತುಂಬಿ, ಜೀವ ಬರಿಸಿ ಅದಕ್ಕ ತಕ್ಕಂಗ ತನ್ಮಯವಾಗಿ ಹಾಡ್ತಾ ಹಾಡ್ತಾ ಕೊನಿಗಿ ಈ ಭೂಮಂಡಲೇ ಒಂದು ತೊಟ್ಟಿಲಾಗಿ ಅದ್ರೊಳಗ ಕೂಸಿನಂಗ ನಿದ್ದಿಗಿ ಜಾರಾ ಹೊತ್ನಾಗ ಅವರಿಗೆ ಅರಿವಿಲ್ಲದೆನೆ ''ತನ್ನ ತಾನು ತಿಳಿದ ಮ್ಯಾಲ ಇನ್ನೇನಿನ್ನೇನೋ...'' ಅಂಬಾ ಹಾಡು ಎದೆಗೂಡೊಳಗಿಂದ ಅನನ್ಯವಾಗಿ ಹೊರಹೊಮ್ಮಿತ್ತು. ಈ ಪದ ಹಾಡದ್ರಾಗರೇ ಮೆಹಬೂಬಸಾ ಬಂದು ಎತ್ತಿದ ಕೈ.

ಅವತ್ತಬೀ ಎಂದಿನಂಗ ಆ ಹಾಡಿನ ಮ್ಯಾಳ ಪೀರಪ್ಪನ ಮನಿ ಮುಂದ ಸೇರಿತ್ತು. ಪೀರಪ್ಪ ಒಮ್ಮೊಮ್ಮೆ ಬಂದವರಿಗೆಲ್ಲಾ ಚಾ ಕುಡ್ತಿದ್ದ. ಚಾ ಕುಡಾದು ಅಂದ್ರ ಸುಮ್ನಲ್ಲ... ಅದು ದೊಡ್ಡಸ್ತನಕಿ ಮಾತಾಗಿತ್ತು. ಅವತ್ತನೂ ಆಳಮನಶ್ಯಾರಿಗಿ ಹೇಳಿ ಎಲ್ಲರಿಗ್ನೂ ಚಾ ಮಾಡಿಸ್ದ ಪೀರಪ್ಪ. ಕರೆಪ್ಪನ ಸಲ್ಯಾಕ ಹೊರಗೆ ಇಟ್ಟಿದ್ದ ಜರ್ಮನ್ ಗಿಲಾಸ್‍ನಾಗ ಹಾಕಿಕೊಟ್ಟು. ಖರೇ ಅಂದ್ರ ಪೀರಪ್ಪ ಲಿಂಗಾಯತ್ರ ಮನಶ್ಯಾ. ಅವರವ್ವಗ ಮಕ್ಕಳು ಹುಟ್ಟಿ ಹುಟ್ಟಿ ಸಾಯಿತ್ತಿದ್ದವು. ಆಗ ಅವರವ್ವ ಕಲ್ಯಾಣ ಊರಾನ ರಾಜಾ ಭಾಕ್ಸಾರ ಪೀರನ ಮುಂದ ಉಡಿಚಾಚಿ, ಫಾಜಾಕ ಹಣಿಹಚ್ಚಿ ಒಂದರೇ ಕೂಸೂ ಕೊಟ್ಟು ನನ ಉಡಿ ತುಂಬು. ನಿನ ಹೆಸರಿಟ್ಟು ನಿನಗೆ ಧಟ್ಟಿ ಏರಸ್ತಿನಿ ಅಂತ ಹರಕಿ ಹೊತ್ತಿದ ವರ್ಷದಾಗೇ ಪೀರಪ್ಪ ತಿಂಗಳ ಕೂಸಾಗಿ ಕೈಕಾಲು ಬಡದು ಆಡ್ತಿದ್ದ. ಹರಕಿ ಹಂಗ ಮಗನಿಗಿ ಪೀರಪ್ಪ ಅಂತ ಹೆಸರಿಟ್ಟು ಮೊಹರಂದಾಗ ಮಲೋದಿ ಮಾಡಿ ಕಲ್ಯಾಣಕ ಹೋಗಿ ಪೀರಗ ಬಣ್ಣಬಣ್ಣದ ಧಟ್ಟಿ ಏರ್‍ಸಿ ಬಂದರು. ಮುಸಲ್ಮಾನ ದೇವರ್‍ಲಿಂದ ವಂಶಕ್ಕ ಬೆಳಕ ಕಂಡ ಆ ಮನೆತನದೋರು ದಸರಿ, ದೀವಳಗಿ ಮಾಡದಂಗೆ ಮೊಹರಂನೂ ಮಾಡ್ತಿದ್ದರು. ಪೀರಪ್ಪನ ಅವ್ವ ಮಾಡಿದ ಚೊಂಗ್ಯಾದ ರುಚಿಗೆ ಖಿದ್ ಮೆಹೆಬೂಬ, ಹುಸೇನಿ ಅಜೀಬ್ ಆಗ್ತಿದ್ದರು. ''ಯವ್ವ ನಮ್ಮನ್ಯಾಗ ಹೆಂಗಸೂರಿಗಿ ಚೊಂಗ್ಯ ಮಾಡಾದು ಜರಾ ಕಲ್ಸು...'' ಅಂತಿದ್ದರು. ಆಗ ಅವರವ್ವ, ''ಹಂಗ್ಯಾಕಂತೋ ಹುಸೇನಿ. ನಿನ್ ಹೆಂಡ್ತಿ ತರಗಾ, ಕರ್ಜಿಕಾಯಿ ನನಕ್ಕಿನಾರೇ ಛಂದ ಮಾಡ್ತಾಳಲ್ಲ... ಚೊಂಗ್ಯಾ ಬಂದಿಲ್ಲ ಅಂದ್ರೇನಾಯ್ತು...'' ಅಂತ ನಕ್ಕೊಂತ ಅಂತಿದ್ದಳು. ಪೀರಪ್ಪ ನಡುವಿಗೆ ಬಾಯಿ ಹಾಕಿ ''ಹುಂ. ಹೈರಾಣ ಯಾಕ್ರೋ? ಮೊಹರಂದಾಗ ನೀವೆಲ್ಲ ನಮ್ಮನಿಗಿ ಬರ್‍ರಿ. ದಸರಾದಾಗ ನಾವೆಲ್ಲ ನಿಮ್ಮನಿಗಿ ಬರ್‍ತೇವು. ಫಿಟ್ಟಂಫಿಟ್ಟಾ...'' ಅಂತ ಮಜಾಕ ಮಾಡ್ಕೋತಿದ್ದರು.

ಮಜಾಕ್ ಏನು... ಖರೇನೇ ಆ ಹಳ್ಳ್ಯಾಗ ಮಲ್ಲಯ್ಯನ

ಮಠದ ಜಾತ್ರಿ ಮತ್ತ ದರ್ಗಾ ಜಾತ್ರಿ ನಡದ್ರ ಊರಿಗ ಊರ ಮಂದಿ ಹಬ್ಬ ಮಾಡಿ ಹೋಳಿಗಿ ಉಣ್ತಿದ್ದರು. ಇಪ್ಪತ್ತೈದು ಮೂವತ್ತು ತುರ್ಕರ ಮನಿಗೋಳು ಇದ್ದರ್ರೂ ಅವರು ತುರ್ಕುರು ಅಂತ ಖಿನಾ ಹಿಡ್ಯಾದಾಗ್ತಿದ್ದಿಲ್ಲ. ಹೆಂಗಸೂರು ಭೂರ್ಖಾ ಹಾಕ್ತಿದ್ದಿಲ್ಲ. ಮಮ್ತಾಜಬೀಬಿ ಮಮ್ತಕ್ಕ ಅಂತ ಕರದ್ರ ಹರದಾರಿ ದೂರ ಇದ್ದರ್ರೂ ಓ... ಅಂತ ಆವಾಜ್ ಕೊಡ್ತಿದ್ದಳು. ಹುಸೇನಿಗೆ ಒಮ್ಮೆರೇ 'ಹುಸೇನಸಾಬ' ಅಂತಿದ್ದಿಲ್ಲ. ಹುಸ್ನಪ್ಪ ಅಂದ್ರೇ ಹುಸೇನಿ ಕಿವಿ ನೆಟ್ಟಗಾಗ್ತಿದ್ದವು.

ಒಂದಿನ, ಪೀರಪ್ಪನ ಮನಿ ಮುಂದಿಂದ ಮಾತು ಕತಿ ಹಾಡ ಮುಗಸ್ಕೊಂಡು ಗುರುಲಿಂಗಪ್ಪ ತನ್ನ ಮನಿಗಿ ಹೊಂಟಿದ್ದ. ಯಾರೋ ಕರದಂಗಾಯ್ತು. ಯಾರಂತ ನೋಡಿದ್ರ, ಕುಲ್ಕರ್ಣಿ ವಿಠಲರಾವ ಬರಿಮೈಲಿಂದ ಜನಿವಾರ ತೀಡ್ಕೊಂತ ತನ್ನ ಮನಿ ಪಡಸಾಲ್ಯಾಗ ಕುಂತು, ''ಗುರುಲಿಂಗಪ್ನೋರೇ ದಾವ ಕಡಿಗಿ ಹೊಂಟೇರೀ? ಬರ್‍ರೆಲಾ ಜರಾ...'' ಅಂತಾ ಕರದ. ಗುರುಲಿಂಗಪ್ಪ, ಕುಲಕರ್ಣೀರ ತಲಬಾಗಲ ಧಾಟಿ ಒಳಗ ಹೆಜ್ಜಿ ಇಡದ್ರಾಗ ಖಿದ್ ವಿಠಲರಾವನೇ ಎದ್ದು ಹೊರಗ ಬಂದು ಸನಿ ನಿಂತರ್ರೂ ಮುಟ್ಟುಸ್ಕೊಮಲಾರ್ದೆ, ''ತಮಗ ತಿಳದೂದೇನಿಲ್ಲ... ಹುಸೇನಿ ಮಗ ಅಬ್ದುಲ್ಲ 'ರಜಾಕಾರ' ಆಗ್ಯಾನಂತ... ತುರ್ಕೂರ ಪಾರಗೋಳೆಲ್ಲಾ ನಿನ್ನ ಕಲ್ಯಾಣಕ ಹೋಗಿ 'ನವಾಬ'ಗ ಬೆನ್ನ ಕಟ್ಟಬೇಕಂತ ಸಭಾ ಮಾಡ್ಕೊಂಡು ಬಂದಾರಂತ... ಹೀಂಗಾದ್ರ ಹ್ಯಾಂಗ ಹೇಳ್ರೆಲಾ...? ಈ ರಜಾಕಾರ ಉರಣಗಿ ತಾವೇ ಕೇಳ್ಲತೀರೆಲ್ಲಾ...? ನಮ್ ಆಜಾದಿ ಭಾರತದೊಳಗ ಸೇರಂಗಿಲ್ಲಂತ ಜಿದ್ದ ಮಾಡಿ ಖಿದ್ದ ನವಾಬನೇ ಈ 'ರಜಾಕಾರ'ರಿಗಿ ಛೂ ಬಿಟ್ಟಾನ... ಕಿಷ್ಣ ಕಿಷ್ಣ ಕಿಂವಿಲಿಂದ ಕೇಳಲಾರ್ದ ಪಾಪಾ ನೋಡ್ರಿ...'' ಅಂದು ಗಲ್ಲ ಗಲ್ಲ ಬಡ್ಕೊಂಡು ''ತಮಗೆ ದಾರೂ ಹೇಳ್ಲಿಲ್ಲ ಅನಿಸ್ತದ... ಸುತ್ತಾ ಎಲ್ಲಾ ಊರಾಗ ನಮ್ಮ ಮಂದಿ ಊರ ಬಿಡಾ ಪಾಳಿ ಬಂದದರೀ...'' ಅಂತ ಒಂದೇ ಉಸರ್‍ನಾಗ ಹೇಳಿದ ವಿಠಲರಾವ್. ಅದಕ ಗುರುಲಿಂಗಪ್ಪ, ''ಇದು ಎಕ್ಕಡಿಂದ ಸುದ್ದಿ ತಂದೀರಿ...? ನಮ್ಮೂರಾಗಲೇ ಯಾನೂ ಇಲ್ಲಲ...? ಹುಸೇನಿ, ಕೀಗೇ ನಮ್ ಬಲ್ಲಿಂದ್ ಮನಿಗಿ ಹ್ವಾದನು...?'' ಅಂದು, ತಲಿಗಿ ಏನೋ ಪರಿಹಾರ ಹೊಳ್ದಂಗಾಗಿ ''ಅಕೋರಿ ವಿಠಲರಾವ, ನೀವು ಯಾವಾಗಬೀ ಕಲ್ಯಾಣಕ ಹೊಯ್ತಿರಲ್ಲಾ... ಸೀವರೇ ಸರ್ಕಾರಿ ಮಂದಿ ಹೊಯಿಂದಿಲ್ರೀ...? ಮತ್ತ ನವಾಬಸಾಬರಿಗಿ ಪತ್ರ ಬರ್ದು, ಖಿಂಗ್ ಖಿಂಗ್ ದಾಂಧಲಿ ನಡದೂದ ನಿಂದರಸ್ರೀ.. ಅಂತ ಯಾಕ ಹೇಳಬ್ಯಾಡದು...?'' ಅಂತ ಕೇಳಿದ್ದಕ ಕುಲಕರ್ಣೀರು, ''ಸರ್ಕಾರದಾರ ಮಾತ ಕೇಳ್ತೂದರೀ...? ತಾವೇ ತಮ ತಮ್ ಮಂದೆಲ್ಲಾ ಒಂದಾಗಿ ಎದುರು ನಿಂದರಬೇಕ್ರಪ್ಪಾ'' ಅಂತ ಮರುಸಲಹಾ ಕೊಟ್ಟ. ಗುರುಲಿಂಗಪ್ಪ ಆ ಮಾತಿಗಿ ''ನೋಡಾರಿ ತಗೋರೆಲ... ನಮ್ಮೂರರೇ ಸಾಮ್ ಸೂಮ್ ಆದಾರೆಪ್ಪ... ಬಂದಾಗ ನೋಡಾರಿ..'' ಅಂದು ಮನಿ ಹಾದಿ ಹಿಡ್ದನು. ಕುಲ್ಕರ್ಣಿ ಮತ್ತ ಹೊಳ್ಳಿ ಪಡಸಾಲಿ ಕಂಬಕ್ಕ ಬೆನ್ನ ಹಚ್ಚಿ ''ಹುಚ್ಚ ಮುಂಡೇವು, ಶೂದ್ರ ಮುಂಡೇವು, ಇವುಕದಾರ ಹೇಳಿದ್ರ ತಿಳೀತದೋ...'' ಅಂತ ಗೊಣಗಿ ಕಿಷ್ಣ ಕಿಷ್ಣ ಅಂದು ಮತ್ತ ಜಗ್ಗಿಲಿ ಜನಿವಾರ ಗರ ಗರಂತ ತಿರಗಸ್ತಿದ್ದ.

ದೇಶಕ ಆಜಾದಿ ಬಂದು, ನೆಹರೂ ದಿಲ್ಲಿ ಕಿಲ್ಲಾದ ಮ್ಯಾಲ ತಿರಂಗಾ ಝಂಡಾ ಹಾರ್ಸಿದ್ದು ರಾಂಪೂರ ಮಂದಿಗಿ ಭಾಳ ತಡಮಾಡಿ ಖಿನಾ ಆಗಿತ್ತು. ರಾಜಾರಗೋಳೆಲ್ಲಾ ದಿಲ್ಲಿ ಸರಕಾರದಾಗ ಸೇರಬೇಕಂತ ಆಗಿತ್ತಂತ. ಆದ್ರ ಹೈದ್ರಾಬಾದ ನವಾಬ ಒಲ್ಲೆ ಅಂದನಂತ. ಇಂತಾ ಸುದ್ದಿಗೋಳು ಆಗಾಗ ಕಿವಿಗಿ ಬೀಳ್ತಿದ್ದವು. ಆಕಡಿ ಈಕಡಿ ರಜಾಕಾರರ ಹಾವಳಿ ಸುರು ಆಗ್ಯಾದ ಅಂಬ ಮಾತೇನೋ ಖರೆ. ಆದ್ರ ರಾಂಪುರ ಮುಂಜಾನಿಲಿಂದ ಛೇಂಜಿತನಕ ತನ್ನ ಧಂದ್ಯಾದಾಗ ತಾ ಮುಣಗಿರ್ತಿತ್ತು. ಯಾರಿಗಿ ಪುರಸೊತ್ತ ಇರ್ತಿತ್ತು...? ಕುಂಡಿ ತುರಸ್ಕೊಬೇಕಂದ್ರ 'ಜರಾ ನಿಂದ್ರು' ಅಂಬಾಂಗಿತ್ತು. ಮ್ಯಾಲಿನ ರಾಜಕಾರಣದ ಮಾತ ತೆಗೆದುರ ಕಡಿಮನಿ ಬಸಪ್ಪಣ್ಣ ಮತ್ತು ಬಂಡಯ್ಯ ಮುತ್ಯಾರೇ. ''ನಿಮ್ಮೊವ್ನ ದುಡದು ಉಣ್ರೋ. ನಾವ್ ಝುಗಡಾ ಮಾಡದೂರ ನವಾಬುನ ಖುರ್ಚಿ ಫಟ್ಯ್ಯಾಗ್ತುದ. ನಮಗೇನ ಸಿಗಾದದಾ...?'' ಅಂದು, ''ಬಸಪ್ಪಣ್ಣ ಶೇಂಗಾ ಏಸ್ ಚೀಲ ಆದು?'' ಅಂತ ಮಾತ ಬ್ಯಾರೆ ಕಡೆ ಹೊಳ್ಳಸ್ತಿದ್ದ.

ಆದ್ರ ರಾಂಪುರ ಬರ್‍ತಾ ಬರ್‍ತಾ ಹಂಗೇ ಉಳಿಲಿಲ್ಲ. ಊರಾನ ಪಾರಗೋಳು ಕಲ್ಯಾಣಕ

## ಗುಡಿಸಿಲೊಳಗೊಂದು ಬೆಳ್ಳಿ ಚುಕ್ಕಿ

ಮೋಟುಗೋಡೆಯ
ಮಗ್ಗುಲಲ್ಲೊಂದು ಬೀಡಾಡಿ
ಗುಡಿಸಲು ಗಕ್ಕನೆ ಗದರಿಸುವ
ಹುಲ್ಲು ಜೋಪಡಿಯೊಳಗೆ
ಕನಸು ಕಾಣುತ್ತಿದ್ದ
ಕಾಣುವ ಕಂಗಳಲ್ಲಿ
ಬೆಳ್ಳಿ ಚುಕ್ಕಿ ಹರಸುತ್ತಿದ್ದ.

ದಾರಿಸವೆಸಿ ಸೇತುವೆ ದಾಟಿ
ಹಾದಿ ಹಿಡಿದು ಬಂದ
ಕೋಲು ಹಿಡಿದ ಗಾಂಧಿ

ಮೂಗಿಗಂಟಿದ ಚಸ್ಮ
ಹೆಗಲಿಗೊಂದು ಖಾದಿಚೀಲ
ಒಡಲಲ್ಲಿ ಹಸಿದ ಎಲುಬು
ಎರಡು ಚಕ್ರದ ಮೇಲೇರಿ
ಪುಡಿ ಪತ್ರಿಕೆಯ ಹಂಚುತ್ತಿದ್ದ,
ಹರಿಜನ ಕೇರಿಯೊಳಗೊಬ್ಬ ಸಂತ.

ತಡವಾಗಿ ಬಂದರು, ಬಾಬಾಸಾಹೇಬ
ಸೂಟು ಬೂಟು ಧಾರಿಯಾಗಿ
ಹಂಚುತ್ತಿದ್ದ, ಪತ್ರಿಕೆಯನ್ನು ಓದಿ
ತಿಳಿ ಹೇಳುತ್ತಿದ್ದ.

ಹುಲ್ಲುಜೋಪಡಿಯೊಳಗೆ
ಬೀಡಿ ಮೋಟ ಹಿಡಿದು
ಬೆಂಕಿಗೆ ಮೈಯ್ಯೊಡ್ಡಿದ್ದ
ಕ್ಯಾ ಕ್ಯಾ ಕರಿಸುತ್ತಾ
ನಡುಗುತ್ತಿದ್ದ ಹಿರಿಯಜ್ಜ.

ಗಾಂಧಿ ನಡೆದು ಬಂದರು
ಜೋಪಡಿಯೊಳಗೆ
ಹಿರಿಯಜ್ಜನ ತಲೆಸವರಿ
ಕೆಮ್ಮದಿರು ಅಜ್ಜ
ಹೆದರದಿರು ನಿನ್ನ ಕುಲಕ್ಕೆ
ತೆಗೆದುಕೋ ಈ ಖಾದಿ ವಸ್ತ್ರ
ಪಡೆದುಕೋ ಈ
ಇಂಕುಪೆನ್ನು
ಗಾಂಧಿ ಹೊರಡುವರು.
ಕೊಟ್ಟ ಇಂಕು ಪೆನ್ನು
ಅಜ್ಜನ ಕಿವಿ ಸಂದಿ ಸೇರಿತ್ತು.

ತೊಟ್ಟಿಲಲ್ಲಿ ಮಲಗಿರುವ
ಪುಟ್ಟಕಂದ ಅಜ್ಜ ಸಿಕ್ಕಿಸಿದ್ದ
ಪೆನ್ನ ನೋಡುತ್ತಿತ್ತು.
ಕೊಡು ಎನ್ನಲು ಮಾತಿಲ್ಲ
ಸುಮ್ಮನೆ ನೋಡುತಿತ್ತು
ಅಕ್ಕಳಿಸಿ ನಗುತಿತ್ತು
ಕಂಗಳಲ್ಲಿ ಕನಸಲೆ ಕಾಣುತಿತ್ತು
ಗುಡಿಸಿಲೊಳಗೊಂದು ಬೆಳ್ಳಿಚುಕ್ಕಿ.



–ಬ್ಯಾಡರಹಳ್ಳಿ ಶಿವರಾಜ, ಮಾಧವನಗರ, ಬೆಂಗಳೂರು – ೫೬೦ ೦೦

ಹೋಗಿ ಬರ್ತಿದ್ದವು. ಊರ ಅಗಸಿ ಕಟ್ಟಿ ಮ್ಯಾಲ ತುರ್ಕರ ಪಾರಗೋಳು ಕುಂತು ನೀರ ತರಾ ಹೆಣ್ಮಕ್ಕಳಿಗಿ ನೋಡಿ ಹಲ್ಲ ಕಿಸಿತಿದ್ರು. ಏನೇನೋ ಅವಾರಾಗರ್ದಿ ಮಾಡ್ತಿದ್ದವು. ಕಲ್ಯಾಣದಿಂದ ಯಾರೋ 'ರಜಾಕಾರ' ಲೀಡರ್‌ಗ ಕರಕೊಂಡು ಬಂದು ತುರ್ಕರ ಪಾರಗೋಳು ಸಭಾ ಮಾಡಿದ್ರು... ಖರೇನೇ ಅಬ್ದುಲ್ಲಾ ಆ ಸಭಾದಾಗ ಇದ್ದಂಬಾ ಸುದ್ದಿ ಪೀರಪ್ಪನ ಮನಿಮುಂದ ಮ್ಯಾಳ ಸೇರದಾಗ ಹುಸೇನಿಗಿ ಗುರುಲಿಂಗಪ್ಪ ಕೇಳದ. ಹುಸೇನಿ ದನಿ ಉಡುಗಿ ಹೋಗಿತ್ತು. ''ಗುರುಲಿಂಗಪ್ಪಣ್ಣ ಮುಂಜಾನಿ ನಮ್ಮನಿಗಿ ಬಂದು, ಅಬ್ದುಲ್ಲ್ಯಾಗ ತೆಲಿ ಬಡಿ ಜರಾ...'' ಅಂದು ಕಣ್ಣೀರ ತೆಗೆದ. ಮರದಿನ ಬುದ್ಧಿ ಹೇಳಲಾಕ ಹೋದ ಗುರುಲಿಂಗಪ್ಪಗ ಅಬ್ದುಲ್ಲಾ ಮಾರಿ ತಿರುವಿ, ಕುಂಡಿಗ್ನೇಳು ಅಂಬಂಗ ವರ್ತುಣಕಿ ಮಾಡಿದ ಮ್ಯಾಲ ಹುಸೇನಿಗಿ ಪಿತ್ತ ನೆತ್ತಿಗಿ ಏರ್‍ತು. ''ಮಾದರ್‌ಚೋದ್, ನೀ ನನ್ನ ಮಗಾ ಅಲ್ಲ, ಸೈತಾನ ಇದ್ದಿ... ಗುರುಲಿಂಗಪ್ಪಣ್ಣಂದ್ರ ನಂದು ಖಾಸಾ ಅಣ್ಣ, ಅಂದ್ರ ನಿನ್ನ ದೊಡ್ಡಪ್ಪ... ಅವ್ನಿಗಿ ಇಜ್ಜತ್ ಕೊಟ್ಟಿಲ್ಲಂದ್ರ ನೀ ನನ್ ಮನ್ಯಾಂದು ಹೊರಗ ನಡಿ'' ಅಂದು ಸಿಟ್ಟ್ಯಾಗ ಕುತ್ತಿಗಿ ನರ ಬಿಗದು, ಸಣ್ಣ ಕೂಸುಗೋಳ್ದಂಗ ಮಾರಿಗಿ ಧೋತರ ಹಾಕ್ಕೊಂಡು ಹುಸೇನಿ ಅಳಾದು ನೋಡಿ, ಗುರುಲಿಂಗಪ್ಪ, ''ಹುಸೇನಪ್ಪ ಯಾಕ ಅಳ್ತಿ...?'' ಅಂತ ಸಮಾಧಾನ ಮಾಡದರ್‍ನೂ ಹುಸೇನಿ ಎದಿ ಒಳಗಿನ ಕನ್ನಡಿಗಿ ಕಲ್ಲ ಬಿದ್ದಿತ್ತು. ಮಗನಿಗೇನೋ ಮನಿ ಬಿಡು ಅಂದ. ಆದ್ರ ಖುದ್ ತಾನೆ ಮನಿ ಬಿಟ್ಟುಹೋಗಿ ಮಲ್ಲಣ್ಣದೇವ್ರ ಮಠದ ಕಟ್ಟಿಮ್ಯಾಲ ದಿನ ಕಳಿಲಾಕ ಸುರು ಮಾಡ್ದ.

ರಾಂಪೂರದಾಗ ಹವುರುಗ ವಿಚಿತ್ರ ನಮೂನಾದ ಸುದ್ದಿಗೋಳು ಗೆಜ್ಜಿ ಕಟ್ಕೊಂಡು ಓಡ್ಯಾಡ್ತಿದ್ದವು. ಮಠದಾಗ ಕುಲ್ಕರ್ಣಿ, ದೇಸಾಯಿ, ಗೌಡರೆಲ್ಲ ಸೇರಿ ರಾತ್ರಿಯೆಲ್ಲ ಸಭಾ ಮಾಡ್ತಿದ್ದರು. ತುರ್ಕರ ಪಾರಗೋಳು ಗುಂಪು ಕಟ್ಕೊಂಡು ಅಲ್ಲಿ-ಇಲ್ಲಿ ದಂದ್ಯಾ ಮಾಡಾ ಮಂದಿಗಿ ಸುಮ ಸುಮ್ನೆ ಅಂಜಸ್ತಿದ್ದರು. ಆಗೆಲ್ಲ ಹುಸೇನಿ, ಮೆಹಬೂಬನಂಥ ಹಿರ್‍ಯಾರು ಮಾಸ ಹಾರಲಾರದ ಪೊಟ್ಟ್ಯಾಗೋಳಿಗಿ ಬಯ್ತಿದ್ದರು. ಅಂದುರಬೀ ಹುಚ್ಚ ಕುದರಿ ಏರಿದ ಹರ್‍ಯಾದವರು ಗೋಣಹಾರ್‍ಸಿ ಮಾತಾಡ್ತಿದ್ದರು. ಊರಾಗ ಕುಡ್ಯಾ ನೀರಿನ ಭಾಂಯಿ ಒಂದೇ ಇತ್ತು. ನಾಲ್ಕ ಗಿರಕಿ ಇದ್ದು ಊರ ಹೊರಗೆ ಒಂದ್ ಇತ್ತು. ಊರ ಹೊರಗಿನ ಭಾಂಯಾನ ನೀರು ಮುಸ್ಲಿಂ ಮತ್ತ ಹೊಲೇರು-ಮಾದ್ರು ಒಯ್ತಿದ್ದರು. ಊರಾನ ಭಾಂಯಾನ ನೀರು ಲಿಂಗಾಯತ್ರು, ಹಾರೂರು ಮತ್ತ ಉಳದವರು ಒಯ್ತಿದ್ದರು. ಹುಸೇನಿ ಮತ್ತ ಮೆಹೆಬೂಬ, ಪೋರಾಬಟ್ಟಿ ಪಾರಗೋಳು ಹೆಣ್‌ಮಕ್ಕಳಿಗಿ ಸತಾಸಬಾರದಂತ ಅಲ್ಲೆ ಕಟ್ಟಿಗಿ ಕುಂತು ಕಾಯ್ತಿದ್ದರು. ಇವ್ರಿಬ್ರೂ ಹಿರ್‍ಯಾರು ಕುಂತ್ರ ಆ ಕಡಿ ಕಣ್ ಹಾಕಾ ಹಿಮ್ಮತ್‌ನೂ ಯಾರಿಗಿ ಆಗ್ತಿದ್ದಿಲ್ಲ. ಒಂದೊಂದ ಸಾರಿ ಲಕ್ಷ್ಮವ್ವ, ಸಾಬಮ್ಮ, ಮರೆಮ್ಮಗೆಲ್ಲ ಸೆಹೆಜಾದ್‌ಬೀ, ಮಮ್ತಾಜ್‌ಬೀನೇ ನಾಕ್ ನಾಕ್ ಕೊಡಾ ನೀರು ತಂದ್ಕೊಡ್ತಿದ್ದರು.

ಈಗೀಗ ಬಂಡಯ್ಯ ಮುತ್ಯ ಏಕತಾರಿ ತಗೊಂಡು ಒಮ್ಮೆ ಮಲ್ಲಯ್ಯನ ಮಠದ ಕಟ್ಟಿಗಿ ಕುಂತು ''ಹ್ಯಾಂಗ ಭ್ರಾಂತಿ ನೀಗುತಿ...'' ಅಂತ ಹಾಡಿದ್ರ ಮತ್ತೊಮ್ಮೆ ದರ್ಗಾದ ಬಲ್ಲಿ ಹೋಗಿ ಬೇನಗಿಡದ ಬುಡಕ ಕುಂತು ಕಣ್ ಮುಚ್ಚಿ ತನ್ಮಯನಾಗಿ ಅದೇ ಹಾಡ ಹಾಡ್ತಿದ್ದ. ಬರ್‍ತಾ ಬರ್‍ತಾ, ಬೀದಿ-ಬೀದಿ, ಮ್ಯಾಲಿನ ಗಲ್ಲಿ, ಮತ್ತ ಕೆಳಗಿನ ಗಲ್ಲಿ ಒಡ್ಯಾಡ್ತಿದ್ದ. ಅವನ ವಿಚಿತ್ರ ವರ್ತುಣಕಿಗಿ ಖುದ್ದ ಪೀರಪ್ಪನೇ ಗಾಬರ್‍ಯಾಗಿ ''ಮುತ್ಯ ಉಂಡು ಮನ್ಯಾಗ ಕುಂದ್ರು. ಇಲ್ಲಾಂದ್ರ ಮನಿ ಕಟ್ಟಿ ಮ್ಯಾಲ ಕುಂದ್ರು. ಕಣ್ ಕಾಣಾಲ, ಹಾದಿ ಭೆಂದಿಲ್ಲ ಬಿದ್ದ ಗಿದ್ದರ ಹ್ಯಾಂಗಪ್ಪ...?'' ಅಂತ ಕಾಳಜಲಿಂದ ಕೇಳುದೂರ್‍ನು ''ಸುಮ್ನ ಕುಂತು ಏನ್ ಮಾಡ್ಲಿ...? ಮನಸ್ ಕೇಳಲ್ಲ...'' ಅಂತ ಉತ್ತರ ಕೊಟ್ಟು ಹುಸೇನಗಿ ಹುಡ್ಕೊಂಡು ''ಟೀಂವ್, ಟೀಂವ್...'' ಅಂತ ಏಕತಾರಿ ತಂತಿ ಮೀಟ್ತಾ ತುರ್ಕರ ಗಲ್ಲಿ ಕಡಿಗಿ ಹೆಜ್ಜಿ ಹಾಕದ. ಆ ಕಡಿ ಮೂಲಿ ಸಂದಿಲಿಂದ ಕರೆಪ್ಪ ಜೊಲ್ಲ ಮಾಡಿ ಹಾಕ್ಕೊಂಡು ಬರ್ತಿದ್ದ. ನಡಿಗಿದಾಗ ನಿಶ್ಕಕ್ತಿ ಇತ್ತು. ''ಯಾಕೋ ಕರ್‍ಯಾ. ಮಾರಿ ಬಾಡ್ಯಾದಲಾ...? ಏನಾಗ್ಯಾದ...? ಅಂತ ಬಂಡಯ್ಯ ಮತ್ಯ ಏಕತಾರಿ ತಂತಿ ಮ್ಯಾಲಿನ ಬೆಳ್ಳ ತೆಗದು, ಹಣಿ ಮ್ಯಾಲಿನ ಪಶೀನಾ ಒರಸ್ಕೊಂಡಿದ್ದಕ ಮೂರಬಟ್ಟ ಈಬತ್ತಿ ಮಬ್ಬ ಆಯ್ತು.

ನಾಲ್ಕು ಮಕ್ಕಳ ತಂದಿ ಕರೆಪ್ಪ. ಅವನಪ್ಪ. ಅವನಪ್ಪನ ಅಪ್ಪ ಹಿಂಗ ಹಿಂದಿನ ಏಸ್ ತೆಲಿಗೋಳೋ ಖಿನಾ ಇಲ್ಲ. ಇಲ್ಲಿತನಕ ಊರಿನ ಗೌಡರ ಮನ್ಯಾಗ ಹೆಂಡಿ ಕಸ ಮಾಡ್ತಾರ. ಈಗ ಕರೆಪ್ಪಗ ಶಕ್ತಿ ಉಡಗ್‌ದಂಗಾಗ್ಯಾದ. ಹೆಂಡ್ತಿ ಲಕ್ಷ್ಮವ್ವಗ ಧಮ್ಮು ಸುತ್ಕೊಂಡುದ. ಯಾಡ್ ಹಿರಿ ಮಕ್ಕಳು ಕೂಲಿನಾಲಿ ಮಾಡ್ತಾರೆ. ಕಡಿಮಗನಿಗಿ ಗೌಡರ ಮನಿ ಹೆಂಡಿಕಸಾ ಮಾಡಿ ದನಗೋಳು ಮೇಯಿಸ್ಕೊಂಡು ಬರಾ ದಂದ್ಯಾ ಮಾಡೋ ಅಂದ್ರ, ಆ ಮಗ ಸಿಂಗಪ್ಪ ಒಲ್ಲೆಂದ್ರ ಒಲ್ಲೆಂದಿದ್ದ. ಯಾಕೋ ಅಂತಾ ವಿಚಾರಿಸಿ, ಕರೆಪ್ಪ ನಾಕ್ ಭಾರ್‍ಸಿ ಕೇಳಿದ್ರ. ಊರ ಹೊರಗಿನ ಹಳ್ಳದಾಗ ತನ್ನಟೇ ವಯಸ್ಸಿನ ಗೌಡ್ರ ಮಗ ಇಸಲ ಆಡ್ಲಾಕ್ ಬಂದಿದ್ದ. ಅವ್ನಖಿನಾ ಪೈಲೆ ತಾ ಆ ಹಳ್ಳದಾಗ ಇಸಲ ಆಡ್ತಿದ್ದ. ಆಗ ಗೌಡ್ರ ಮಗ ನಾಗರಾಜಪ್ಪ ''ಏ ಮಾದಗ್ಯಾ, ನಾ ಇಸಲ್ ಆಡಬೇಕು. ನೀ ಪೈಲಾ ಇಸಲ್ ಆಡಿ ನೀರ ಮೈಲಿಗಿ ಮಾಡಿದಿ ಮಗನಾ...'' ಅಂದು ಬಿದರ ಖಟಗಿಲಿಂದ ಹೊಡದಿದ್ದ. ತನ್ನ ದೋಸ್ತುರ ಮುಂದ ತನ್ನಟೇ ವಯಸ್ಸಿನವನ ಕೈಲಿಂದ ಲತ್ತಿ ತಿಂದಿದ್ದಕ ಅವಮಾನ ಆಗಿ ''ಈಗ ಅದೇ ಗೌಡನ ಮನ್ಯಾಗ ಹೆಂಡಿ ಕಸಾ ಮಾಡಾದು ಅಂದ್ರ ತನಗ ಅಜಿಬಾತ್ ಸಾಧ್ಯಿಲ್ಲ...'' ಅಂತ ಜಿದ್ದ ಹಿಡಿದಿದ್ದ. ಹಿಂಗಾಗಿ ಕರೆಪ್ಪ ಹಂಗೇ ಕೈಕಾಲ ಎಳ್ಕೊಂತ ಗೌಡ್ರ ಮನಿಗಿ ಹೋಗಿ ಬರ್ತಿದ್ದ. ಈ ಕಥಿ ಬಂಡಯ್ಯ ಮುತ್ಯಾಗ ಗೊತ್ತಿತ್ತು. ಮತ್ತ ಈ ಘಟನ ನಡೆದು ಐದಾರು ತಿಂಗಳ ಮ್ಯಾಲಗಿತ್ತು. ಆದ್ರ ಇವತ್ತು ಕರೆಪ್ಪ ಯಾಕ ಸತ್ತ ಹೆಣದಂಗ ಮಾರಿ ಮಾಡ್ಯಾನ...? ಬಂಡಯ್ಯ ಮುತ್ಯ ಅಲ್ಲೇ ಸನಿ ಇದ್ದ ಮರಗಮ್ಮನ ಗುಡಿ ಬಲ್ಲಿ ಕುಂತನು. ಮಳಕಾಲೆತ್ತರ ಗುಡಿ ಒಳಗ ಮರಗಮ್ಮನ ಮಾರಿಗಿ ಎಣ್ಣಿ-ಕುಂಕುಮ ಹಚ್ಚಿ ಹಚ್ಚಿ ಜಿಗೂಟ ಕಡಕ ಪಟ್ಟ್ಯಿಂಗ ಮಾಡಿಟ್ಟಿದ್ದರು. ನೊಣ ಜೋಂಯ್ಯ ಅಂತಿದ್ದವು. ಕರೆಪ್ಪನೂ ಕರೆಕಲ್ಲಿನ ಮ್ಯಾಲ ಕುಂಡಿ ಊರಿ ಕುಂತನು. ಕಿಸಾ ಅಂಗಿದಾನ ಚಿಲುಮಿ ತೆಗದು, ಚಿಲುಮಿ ಬಾಯಾಗ ತಂಬಾಕ ಹಾಕಿ ಮ್ಯಾಲೀಟು ಅಳ್ಳಿ ಇಟ್ಟು ಚಕಮಿ ಕಲ್ಲಗೋಳಿಂದ ಭಟ್ ಭಟ್ ಅನಿಸಿದಕ ಮ್ಯಾಲ ಒಂದ್ ಕಲ್ಲಿನ ಬಾಜು ಬೆಳ್ಳಲಿಂದ ಒತ್ತಿ ಆಧಾರ ಹಿಡದ ಅಳ್ಳಿಗಿ ಭಕ್ ಅಂತ ಬೆಂಕಿ ಹತ್ಕೊಂಡ್ತು. ಪುರ್‌ರ್ ಅಂತ ಬೆಂಕಿ ಲಿಗ್ ಲಿಗ್ ಅಂದ ಮ್ಯಾಲ ಬೆಂಕಿ ಅಳ್ಳಿ ಚಿಲುಮಿ ಮಾರ್‍ಯಾಗ ಇಟ್ಟ ಕರೆಪ್ಪ ಚಿಲುಮಿ ಕೊನಿಗಿ ಕೊಳವಿಯಂಥ ತುದಿ, ತೋರಬೆಳ್ಳ ಬಾಜುಲಿಂದ ನುಸುಳಿ ಹೆಬ್ಬೆಟ್ಟ ಮತ್ತ ತೋರಬೆಳ್ಳ ನಡುವಿಗಿ ಗೋಲ ಜಾಗದಿಂದ ಹಾಯ್ಸಿ ಮುಷ್ಟಿ ಮಾಡಿ, ಚಿಲುಮಿ ಮೋತಿ ಅಂಬಾದು ಮುಗಿಲಿಗಿ ಮಾಡಿ, ಬಾಯಾಗ ಇಟ್ಕೊಂಡು, ತಂಬಾಕ ಹೊಗಿ ಅಂಬಾದು ದ್ಯಾವ್ರ ಲೋಕದಾಗಿನ ಸೋಮರಸ ಕುಡೆಂಗ ದಂ ಎಳಿಲಿಕ್ಕ ಸುರು ಮಾಡದ ಕರೆಪ್ಪ. ಅವರಿಬ್ರ ನಡಬರಕ ಮಾತಗೋಳು ಶಬ್ದಾಗಲು ಧಡಪಡಿಸ್ತಿದ್ದವು. ಅವ್ರಿಬ್ರಿಗ್ಗೂ ತಿಳಿಲಾರದ ವಿಚಿತ್ರ ಮೌನ ಒದ್ದಾಡ್ತಿತ್ತು.

''ಎಪ್ಪಾ ಮುತ್ಯಾ, ಯಾಕೋ ಊರು ಮದಲ್ನಂಗಿಲ್ಲ...'' ಅಂದ ಕರೆಪ್ಪ ಖೋಂಯ್ ಖೋಂಯ್... ಖೆಮ್ಕೋಂತ... ಹೈರಾಣಾಗಿ ಎದಿಗೂಡೊಳಗಿಂದ ಮಾತ ಹೊರಗ ಹಾಕ್ದ.

ಕರೆಪ್ಪನ ಮಾರಿಮ್ಯಾಲ ಚಿಂತಿ ಗೆರಿಗೋಳು ಹೆಚ್ಚಾದಂಗಿದ್ದವು. ಬೋಡ ತೆಲಿ, ನಿರಿಗಿ ನಿರಿಗಿ ಹಣಿ, ಕಣ್ಣ ಕುಣಿಯೊಳಗ ಚಿಂತಿ ಕಾಲೂರಿತ್ತು. ಧಿಟ್ಟಿ ಮ್ಯಾಲೆತ್ತಿ ಬಂಡಯ್ಯ ಮುತ್ಯಾಗ ಒಮ್ಮ ನೋಡ್ದ ಕರೆಪ್ಪ... ಕಣ್ಣಿನ ಆಳದೊಳಗ ಏನೋ ಅದಾ ಅಂತಾ ಖಿನಾ ಹಿಡದ ಬಂಡಯ್ಯ. ಮುತ್ಯಾ ''ಹೇಳೋ ಕರೆಪ್ಪ... ಏನಾಗ್ಯಾದ ಊರಿಗಿ? ನೀ ಏನೋ ಮುಚ್ಚಿಡಲತೀದಿ...'' ಅಂತ ಕಕ್ಕುಲತಿಯಿಂದ ಕೇಳದ. ಕೈಯಾನ ಏಕತಾರಿ ಬಾಜು ಇಟ್ಟು ಕಾಲ ಮಡಚ್ಕೊಂಡು ಕುಂತನು ಮುತ್ಯಾ.

''ಏನಿಲ್ಲೆಪ್ಪಾ... ನಿನ್ನ ರಾತ್ರಿ ಗೌಡುನ ಹಗೆವು ಕಳ್ಳತನ ಮಾಡ್ಯಾರ'' ಅಂತ ಕರೆಪ್ಪ ಬ್ಯಾಸರದಿಂದ ಮಾತ ಒಡದನು.

''ಹಂಗ? ಯಾರ ಮಾಡ್ಯಾರೋ ಇವನವ್ವ ತುಡುಗ್ರು...? ಬಂಡಯ್ಯ ಮುತ್ಯಾ ಹಣಿ ಗಂಟಿಗಿ ಇನ್ನೊಂದು ಸೇರ್‍ಸಿ ಕೇಳದ.

''ಊರಾಗ ನಾಕ ಪಾರಗೋಳು ಅವಾ ಅಲಾ. ಅವ್ರ ಗೂಡ ನಮ್ಮ ಸಿಂಗ್ಯಾನೂ ಸೇರ್‍ಯಾದ...'' ಕರೆಪ್ಪನ ದನ್ಯಾಗ ಆಳದ ಬ್ಯಾನಿ ಹೆಡಿ ಆಡಸಿತ್ತು. ''... ಏನ್ ಮಾಡಬೇಕ ಮುತ್ಯಾ... ಮಗನಿಗಿ ಏಟ ಬುದ್ಧಿ ಹೇಳಿ ನೋಡೀನಿ... ಪಾರಗೋಳಗೂಡಾ ಹೋಗ ಬ್ಯಾಡೋ ಅಂತಾ. ಅದಕ್ಕ ನಮ್ಮ ಸಿಂಗ್ಯಾ ಏನಂತೂದ ಗೊತ್ತೇನ ಮುತ್ಯ? ಎಪ್ಪಾ ನೀ ಯಾರ ಮನ್ಯಾಗ ಜಿಂದಗಿ ಪೂರಾ ದುಡದೀದಿ ಆ ಮಂದಿ ನಮಗ ಪಡಸಾಲಿ ಕಬ್ಬಿಗರೇ ಕರೀತಾರಾ...? ಹೈದರಾಬಾದದಾಗ ನವಾಬೇ ರಾಜಾ ಆಗಿ ಮುಂದುವರದ್ರ ನಮಗ ಹೆಂಡಿ ಕಸ ಮಾಡಾದು ಮತ್ತ ಅಪಮಾನ ಮಾಡ್ಸಕೋಮಾದು ತಪ್ತದ... ಅಂತ ನನಸಂಗಾಟೇ ವಾದ ಮಾಡ್ತೂದ ಮುತ್ಯಾ... ನಮ್ಮ ಗಲ್ಯಾಂದು ಭಾಳ ಮಂದಿ ರಜಾಕಾರ ಆಗ್ಯಾರ... ಈಗ ಈ ಊರ ಗತಿಹ್ಯಾಂಗ ಯಪ್ಪಾ... ಮುತ್ಯ...?'' ಅಂತ ಕರೆಪ್ಪ ಮುಗಿಲು ನೋಡ್ಕೋಂತ ನಿಟ್ಟುಸಿರಬಿಟ್ಟನು.

ಬಂಡಯ್ಯ ಮುತ್ಯಗನೂ ಈ ಮಾತು ಹೊಸದಾಗಿ ಕೇಳ್ತಿರಾದ್ರಿಂದ ಚಿಂತಿ ಅಂಬಾ ಹೆಬ್ಬಾವು ಮೈ ಮನಸು ಸುತ್ತತಿತ್ತು. ಆದುರ್‍ನೂ, ''ಕರೆಪ್ಪ, ಯಾಕ ಚಿಂತಿ ಮಾಡ್ತಿ...? ನೋಡು ಊರಾನ ಕುಲ್ಕರ್ಣಿ, ದೇಸಾಯಿ, ಸೈತ ನವಾಬನ ಕಡಿನೇ ಹರಾ... ಊರಾಗ ಈಟೆಲ್ಲಾ ನಡದೂರ್‍ನು ಇದು ಸರಿ ಅದಾ ತಪ್ಪದಾ ಅಂತ ಏನರೇ ಹೇಳ್ಯಾರೇನು? ಇಲ್ಲ. ಹಂತದ್ರಾಗ ನಿನ್ನ ಮಗ ಸಿಂಗ್ಯಾ ಹೋಗಾದರೇ ಏನ್ ದೊಡ್ಡ ಮಾತದಾ... ಸುಮ್ನಿರು ಎಲ್ಲ ಛೆಂದ ಆಗ್ತದ...'' ಅಂದು ಬಂಡಯ್ಯ ಮುತ್ಯ ಏಕತಾರಿ ಕೈಗಿ ತೊಗೊಂಡು...

ಈ ಭೂಪತಿಗಳ ಮೆಚ್ಚಿ
ಅರಸುಖ ತನಗಾಯ್ತು
ತಾ ಪೂರ್ಣ ಸುಖವಿಲ್ಲದ್ಹೋಯ್ತೋ... ಅಂತ
ಹಾಡಲಾಕ ಸುರು ಮಾಡದುನು. ಕರೆಪ್ಪ ದನಿ ಗೂಡಸ್ದ.

* * *

ನಮ್ಮ ದೇಸ್ಯಾದು ಮಾತು ದಿಲ್ಲಿತನಾ ಹೋಗಿ, ದಿಲ್ಲಿ ಸರಕಾರ ಸೇನ್ಯಾ ಕಳಿಸಿ ''ನವಾಬ ನಮ್ಮ ದೇಸ್ಯಾದು ಸರಕಾರದಾಗ ಸೇರಬೇಕು...'' ಅಂತ ಫರಮಾನ ಹೊರಡ್ಸಿ ಮಿಲ್ಟ್ರಿ ಸಂಗಾಟೇ ಕಳಸದೂರು. ನವಾಬ ಶರಣಾದ. ಢಮಾರ, ಢಸ್, ಢಫಲ್... ಮುಗಿಲ

ಮ್ಯಾಲ ಕಬ್ಬಿಣದ ಹಕ್ಕಿ ಹಾರ್ಯೋತ ಬಂದ್ವು. ಗೋಲಿಗೋಳು ಹಸಿ ಗ್ವಾಡ್ಯಾಗ ನಾಟ್ತಿದ್ದವು. ಅಲ್ಲಿ ತನಕ ಊರಾಗ ಗೂಂಡಾಗರ್ದಿ ಮಾಡ್ಕೊಂಡು ಠಳಾಯಿಸ್ತಿದ್ದ ಗುಂಪು ಇದ್ದಕ್ಕಿದ್ದಂಗ ನಾಪತ್ತಾ ಆಯ್ತು. ರಾಂಪುರ ಊರಂಬಾ ಊರು ಖಾಲಿ ಖಾಲಿ ಆಯ್ತು. ಸಿಂಗಪ್ಪ, ದುರಗ್ಯಾ, ಅಬ್ದುಲ್, ನಾಸೀರನಂಥ ನೂರಾರು ಹರೇದ ಪಾರಗೋಳು ಊರ ಬಿಟ್ಟು ಓಡಿ ಹೋದ್ರು. ದಿಲ್ಲಿ ಸೇನ್ಯಾ ನೂರ ಘಂಟಾ, ದೀವಳಗ್ಯಾಗ ಫಟಾಕಿ ಹೊಡ್ತಂಗ ಥನ್-ಧುಸ್ ಮಾಡ್ಕೊಂತೇ ಇತ್ತು. ಮೂರಾನ ಮೂರು ದಿನ ಸೂತಕದ ಮನಿಹಂಗ ಊರು ಗಂವ್ ಅಂತಿತ್ತುತ. ಹಾರಾಡಾ ಹಕ್ಕಿ-ಪಕ್ಕಿಗೋಳು ಸೈತ ರೆಕ್ಕಿ ಮುದಡುಸ್ಕೊಂಡು ಮೂಲಿ ಹಿಡಿದವು. ಹುಟ್ಟಿದ ಕೂಸನೂ ಕ್ಯಾಂ ಅನಲಾರದೇ ಪಿಳಿಪಿಳಿ ಕಣ್ ಬಿಡ್ತಿತ್ತು. ಬೀದಿ ಅಂಬಾ ಬೀದಿ ಸತ್ತ ಹೆಣದಂಗ ಅಂಗಾತ ಬಿದ್ದಿತ್ತು. ಪೂರಾ ಊರಿಗಿ ಊರೇ ಗಕ್ಕಂತ ನಿಂತಬಿಟ್ಟಿತ್ತು.

ಕತ್ತಲು ಸಾವಿನಬಾಯಿ ಹಂಗ ಮೈಯೆಲ್ಲ ಕೈಯಾಗಿ ನಿಂತಿದ ರಾತ್ರಿ ಮಾತ್ರ ಪೀರಪ್ಪನ ಮನಿಮುಂದ ಬಂಡಯ್ಯ ಮುತ್ಯ ಮತ್ತದೇ ಹಾಡ ಬ್ಯಾಸ್ರಿಲ್ಲದೇ ಒಬ್ಬನೇ ಹಾಡ್ತಿದ್ದ. ''ಹ್ಯಾಂಗ ಭ್ರಾಂತಿ ನೀಗುತಿ...'' ಮಾತೇ ಸತ್ತಂತ ಊರಾಗ ಆ ಹಾಡೊಂದೇ ಊರ ತುಂಬ ಗಿಲಿಗಿಲಿ ಆಡಿಸಿ ಅಳಾ ಕೂಸಿಗಿ ರಮಿಸಲತದ ಅನ್ನಂಗ ತೇಲಿತೇಲಿ ಹಾರಾಡ್ತಿತ್ತು.

ಯಾರೋ ಕೈಯಾಗ ಕತ್ತಿ ಹಿಡ್ಕೊಂಡು ಧಿಗಿ ಧಿಗಿ ಅಂತ ಊರೊಳಗ ನಡದ ಬರ್ತಿದ್ದರು. ಆ ಹೆಜ್ಜೆ ಸಪ್ಪಳ ಎರಡಕ್ಕ ನಾಕು, ನಾಕಕ್ಕ ಎಂಟು, ಹದ್ನಾರು... ಬಂಡಯ್ಯನ ಬೆಳ್ಳು ಏಕತಾರೀ ತಂತಿ ಮೀಟ್ತಿತ್ತು. ಕೈಯಾಗ ಲಾಠಿ ಮತ್ತ ಪಂಜ ಹಿಡಕೊಂಡು ಹಿಂಡೊಂದು ಅಡವಿ ಹೊಕ್ಕ ಪ್ರಾಣಿಗೋಳ ಬ್ಯಾಟಿಗಿ ಹೊಂಟಂಗಿತ್ತು.

ಬಂಡಯ್ಯ ಮುತ್ಯ ಕಣ್ಣ ಸಣ್ಣದ ಮಾಡಿ ತಲಿಮ್ಯಾಲಿಂದ ಕೆಂಪು ರುಮಾಲ ಹಿನಾ ಜರಾ ಒತ್ಕೊಂಡು ಜರ್ರಾ ಬಗ್ಗಿ ನೋಡದುನು. ಬರಾ ಹೆಜ್ಜೆಗೋಳು ಹಿನಾ ಸನಿ ಆದುವು. ''ಯಾರ್ರೋ...?'' ಅಂದ ಬಂಡಯ್ಯನ ಗಂಟಲ್ದಾನ ದನಿಗಿ ಗಾಬರಿ ಮೆತ್ತದಂಗಿತ್ತು. ಯಾರೋ ಅಲ್ಲೇ ನಿಂತು, ''ಏಯ್ ಮುತ್ಯಾ ನಜರ್ಯಾ. ಖಾನ್‌ಸಾಬ್ಯಾ ಈಕಡಿ ಬಂದಾರೇನು...?'' ಅಂತ ಚೀರಿ ಚೀರಿ ಕೇಳ್ದುರು. ಬಂಡಯ್ಯ ಮುತ್ಯಾಗ ಖಿನಾ ಆಯ್ತು. ಈಗ ಬ್ಯಾಟಿ ಸುರು ಆಗ್ಯಾದ! ಎದ್ಯಾಗ ಮುಳ್ಳಾಡಸ್ದಂಗಾಯ್ತು. ನಡ್ಕೋತ ಮುಂದ ಹೋದನು. ಗುಂಪಿನ ಕೈಯಾಗ ಬಡಿಗಿ, ಕತ್ತಿ ಇದ್ದು, ಅದರಾಗ ಒಬ್ಬ ಈರಪಣ್ಣ ಮುಂದ ಬಂದು ''ಮುತ್ಯ ನಿಂಗ ಗೊತ್ತಿಲ್ಲ. ಬ್ಯಾರೆ ಊರಾಗೆಲ್ಲ ಇವನವ್ನ ಈ ಮಕ್ಕಳು ಬಕ್ಕೋಳು ಉರದಾರಂತ. ಖೂನ್ ಖತಲ್ ಮಾಡ್ಯಾರಂತ. ನಮ್ ಹೆಂಗಸೂರ ಇಜ್ಜತ್ ತೆಗದಾರಂತ...'' ಈರಪ್ಪಣ್ಣ ಹಿನಾ ಹೇಳಲತಿದ್ದ, ಬಂಡಯ್ಯ ಮುತ್ಯ ನಡುವೆ ''ಯಾ ದೇಸ್ಯಾದಾಗ ಯಾನರೇ ಆಗಿರಬೇಕು. ನಮ್ಮೂರಾಗ ಯಾನೂ ಆಗಿಲಲ್ರೋ. ಸುಮ್ಮ ಯಾಕ ಹೊಡಿಪೆಟ್ಟ? ಹೋಗ್ರಿ ಹೋಗಿ ಮನ್ಯಾಗ ಮಕ್ಕೋರಿ...'' ಅಂತ ಕೈ ಆಡಿಸಿ ಅವ್ರಿಗಿ ವಾಪಾಸ ಕಳಸ್ಲಾಕ ನೋಡದ. ಬಂದೋರ ಮೈಯಾಗ ದುಷ್ಟಶಕ್ತಿ ಹೊಕ್ಕಂಗಾಗಿತ್ತು.

''ಯಾಕೋ ಮುತ್ಯ ಇವನವ್ನ ಆ ಹೊಲಿ ಮಾದರಂಗ ನೀಬೀ ಅವ್ರ ಕಡೀಸೇ ಆದೇನು...?'' ಅಂತ ಬಸಪ್ಪಗೌಡ ಮೀಸಿ ಮ್ಯಾಲ ಕೈಯಾಡಿಸಿ ಧೋತರ ಚುಂಗ ಎಡಗೈಯಾಗ ಹಿಡದು ಮುಂದ ಬಂದು ಮುತ್ಯಾನ ಮಾರಿಗಿ ತಿವ್ಯಾಂಗ ಕಣ್ಣ ಕಿಸದು ಕೇಳದ.

ಅದಕ್ಕ ಬಂಡಯ್ಯ ಮುತ್ಯ ''ಗೌಡಾ ನಾ ಹಿಂದಿಲ್ಲ-ಮುಂದಿಲ್ಲ ಪರದೇಶಿ. ಯಾರ ಕಡಿ ತಗೊಂಡು ನಂಗೇನ ಮಾಡಾದದಾ... ಹೊಡಿತೀರೇನು? ನಂಗೇ ಪೈಲಾ ಹೋಡೀರಿ. ಭ್ರಾಂತಿ ಬೇರ ಕಡದು ಹೋಗಲಿ... '' ಅಂದು ಒಂದೊಂದೇ ಹೆಜ್ಜಿ ನಡ್ಕೋತ ನಡ್ಕೋತ... ಏಕತಾರಿ ತಂತಿ ಮೀಟ್ತಾ ಮತ್ತದೇ ಹಾಡು ''ಹ್ಯಾಂಗ ಭ್ರಾಂತಿ ನೀಗುತಿ...'' ಹಾಡ್ತಾ... ಕತ್ತಲ್ನಾಗ ನಡದ. ಮಲ್ಲಯ್ಯನ ಮಠದ ಗಿಡದ ಬಲ್ಲಿ ಹುಸೇನಿ ಕುಂತಿದ್ದ. ಬಂಡಯ್ಯ ಹುಸೇನಿಗೇ ಹುಡಕಲತಾನ ಏನೋ ಅಂಬಂಗ ಅಂವ ಸಿಕ್ಕಿದ್ದೆ ''ಬಾರೋ ಹುಸೇನಿ. ಯಾಕೋ ನನ್ನ ದನಿ ಏಳಲ್ದು. ನನ್ನ ಸಂಗಾಟ ಇರು...'' ಅಂತ ಅವ್ನ ಕೈ ಹಿಡ್ಕೊಂಡು ಎಬ್ಬಿಸ್ಕೊಂಡು ಹೊಂಟ. ಹುಸೇನಿ ಕಣ್ಣಾಗ ಬೆಳಕಿರಲಿಲ್ಲ. ನಡಗಿದಾಗ ಶಕ್ತಿ ಇದ್ದಿರಲಿಲ್ಲ. ಆಸಿ ಅಂಬಾ ಹೆಣಕ್ಕ ನೆಲಕ್ಕ ಹಾಕಿ ಮ್ಯಾಲ ನಡದಂಗ ಹೆಜ್ಜಿ ಇಡ್ತಿದ್ದ.

* * *

ಆಕಡಿ ಬ್ಯಾಟಿಗಿ ಹೊಂಟ ಗುಂಪು ಕೆಳಗಿನ ಗಲ್ಲಿ ಪೂರಾ ಜಲ್ದಿ ಹಂಗ ಸೋಸ್ದುರು. ಹೆಂಗಸೂರು ಮಕ್ಕಳು ಎದಿ ಬಡ್ಕೊಂಡು ಅಳ್ಕೋತ ''ನಮ್ ಗಣಸೂರಿಗಿ ಏನಬೀ ಮಾಡಬ್ಯಾಡಲಿ. ನಮ್ಮ ಜೀವ ಹೊಡಿರಿ ಬೇಕಾದ್ರ...'' ಅಂತ ಎದಿಮ್ಯಾಲಿನ ಸೆರಗ ಮತ್ತ ತಮ್ಮ ಕಳ್ಳಕುಡಿಗೋಳಿಗಿ ಬ್ಯಾಟಿ ಪಾದದ ಬುಡಕ ಹಾಕಿ ಭೂಮಿನೇ ಕರಗಿ ನೀರಾಗಂಗ ಅಳ್ತಿದ್ದರು. ''ಹೇ ನಡಿರೋ...'' ಅಂತ ಬ್ಯಾಟಿ ದಾಟಿ ಹೊಂಟ್ತು. ಕತ್ತಲ ಗುಹೆದಾಗ ಹೆಜ್ಜೆ ಸಪ್ಪಳ ಸಾವಿನ ಪಂಜ ಹಿಡದು ಗಸ್ತ ಹೊಡಿತಿದ್ದಂಗಿತ್ತು.

ಊರು ಮುಗದು ಬ್ಯಾಟಿ ಮಂದಿ, ಹೊಲ-ಮಳ, ಕಂಟಿ ಕಣವಿದಾಗ ನುಗ್ಗುದುರು. ಖಂದಿಲ ಕುಡಿ ಹೆಚ್ಚ ಮಾಡಿ ನೋಡದುರು. ಸಣ್ಣ ಮಾಡಿ ನೋಡದುರು. ಭೌಂವ್ ಅಂಬಾ ನಾಯಿಗೋಳ್ನೂ ಕುಂಡ್ಯಾಗ ಬಾಲ ಹಾಕ್ಕೊಂಡು ತಮ್ಮ ಮ್ಯಾಲೇ ಸಾವು ಬಂದು ಎರಗಲತಾದೇ:ೋ ಅಂಬಂಗ ಜೀವ ಕೈಯಾಗ ಹಿಡಕೊಂಡು ಕುಯ್‌ಗುಡುತ್ತಿದ್ದು, ಮಾಯ್ನ್‌ಗಿಡ, ಬೇನಗಿಡಗೋಳ ಬಡ್ಡಿ ಸುತ್ತ, ಮ್ಯಾಲ ಕಣ್ಣ ದಿಟ್ಟಿ ಕೀಲ್ಸಿ ಹುಡುಕಾಡದುರು. ದಟ್ಟ ಟೊಂಗಿ ಮ್ಯಾಲ ಕುಂತಿದ ಗೂಗಿ ಟುಳುಕ್ ಟುಳುಕ್ ದಿಟ್ಟಿಹಾಕಿ ''ಗೂಂಕ್'' ಅಂತು.



ಇನ್ನೆಲ್ಲಿಯ ರಾಮರಾಜ್ಯ...
ಇನ್ಮುಂದೆ ಏನಿದ್ರೂ, ಕುಡುಕರ ಸಾಮ್ರಾಜ್ಯ!

ಬ್ಯಾಟಿ ನಾರಾಜ್ ಆಯ್ತು. ವಾಪಸ್ ತಿರಗ್ತು. ಊರ ಹಾದಿ ಹಿಡಿಬೇಕು ಅಟ್ರಾಗ್ ಶಿವರಾಜಪ್ಪಗ 'ಒಂದ' ಬಂದು ಜರಾ ಬಾಜೂಕ ಹೋಗಿ ಧೋತುರ ಸರ್ಸಿ ಕೂಡಬೇಕು. ಅವ್ನ ಕಣ್ಣಮುಂದೇ ಎಲಿ ಸಪ್ಪಳಾದಂಗಾಯ್ತು. ಒಂದಕ್ಕ ಕುಂತವ್ನಿಗಿ ತನ್ನ ಮುಂದ ಕಾಲಿನ ಪಾದಗೋಳು ಕಾಣಿಸಿತು. ಸತ್ತ ಹೆಣಾ ಇರಬೇಕನ್ಸಿ ಎದಿ ಗುಂಡಿಗಿ ಧಡ್‌ಕ್ ಧಡ್‌ಕ್ ಅಂತಿತ್ತು. ''ಏ ಈರಪ್ಪಣ್ಣ ಬಾ ಇಲ್ಲಿ. ಯಾನದಾ ನೋಡು...'' ಅಂತ ಅಂಜಿ ಜೋರ್ ಕರದ್ನು... ಪಾದ ಮಿಸಕಾಡ್ತು. ಪಾದ ಹೊತ್ತ ದೇಹ ಝುಟ್ಟಂತ ಎದ್ದು ಓಡಬೇಕು ಅಟ್ರಾಗ ಇಡೀ ಗುಂಪು ಬ್ಯಾಟಿ ಸಿಕ್ಕಿದ ಹರ್ಷದ್ಗಾ ಹುಯ್ಯಿ ಅಂತ ಮುಗಿಬಿದ್ದು ಪಾದ ಹಿಡದು ದರದರಾ ಎಳದು ಈ ಕಡಿಗಿ ತೆಗದುರು. ಮುಳ್ಳು ಕಲ್ಲು ತರಚಿ ಮೈಮಾರಿ ರಕ್ತ ಆಗಿದ್ದವನಿಗಿ ಕಡಿಗ್ನೂ ಖಿನಾ ಹಿಡದುರು. ''ಅಂವ 'ಖಾನಸಾಬ್' ಹಿಡಿರ್ರೋ... ಇವನವ್ನ... ಸುವ್ವರ ಮಗನಾ... ಉಳಿದವರೆಲ್ಲ ಎಲ್ಲಿ ಹರಾ...?'' ಖಾನಸಾಬ ಅಂಜಿ ಬಾಯಿ ಬಿಟ್ಟ.

ಬಾರಾ ಮಂದಿ ಬ್ಯಾಟಿ ಕೈಯಾಗ ಸಿಕ್ಕು, ತಮ್ಮ ಜೀವ ಮುಟ್ಟ್ಯಾಗ ಹಿಡ್ಕೊಂಡು ತೆಲಿ ಕೆಳಗ ಹಾಕಿ ಹೊಂಟ್ರು. ಬ್ಯಾಟಿ, ಸೂರ ಕೆಲಸ ಮಾಡದಂಗ ಕೇಕೇ ಹಾಕ್ತಿತ್ತು. ಅವ್ರಿಗೆಲ್ಲ ಮಲ್ಲಯ್ಯನ ಮಠದ ಬಲ್ಲಿ ತಂದ್ರು. ನಡುರಾತ್ರಿ ಆಗಿತ್ತು. ಈರಪ್ಪಣ್ಣ ಇಬ್ರ ಆಳಗೋಳಗಿ ಕರಸ್ದ. ''ಏಯ್, ಇವ್ರೆಲ್ಲ ಹಸ್ದಾರ. ಅನ್ನ ಖರಬ್ಯಾಳಿ ಮಾಡು ಜಲ್ದಿ...'' ಅಂತ ಅಪ್ಪಣೆ ಮಾಡದ. ಬಾರಾ ಮಂದಿಗಿ ಜೀವ ವಾಪಸ್ ಬಂದಂಗಾಯ್ತು. ಅದರೊಳಗೆ ಒಬ್ಬಾಂವ ನಜೀರಸಾಬ ಅಂಬಾಂವ, ''ಭಾಯಿಸಾಬ್, ನಮ್ ಪಾರಗೋಳು ಗಲತ್ ಮಾಡ್ಯಾವ. ನಾವ್ ಯಾನಬೀ ಮಾಡಿಲ್ಲ. ನಮುಗ ಮಾಫ್ ಮಾಡ್ರಿ. ನಮ್ಮ ಪಾರಗೋಳಿಗಿ ಶಿಕ್ಷಾ ಕುಡಾರಿ...'' ಅಂತ ಧಡಕ್ಕಂತ ಗೌಡನ ಕಾಲ ಮ್ಯಾಲ ಬಿದ್ದು ಪಾದ ಹಿಡ್ಕೊಂಡ.

ನಜೀರಸಾಬಗ ಏನಿಲ್ಲಂದ್ರ ಪನ್ನಾಸ ಸನಿ ವಯಸ್ಸಾಗಿತ್ತು. ಗಡ್ಡದಾಗ ಹುಡಕಿದುರ್ನೂ ಒಂದ ಕರಿ ಕೂದಲ ಸಿಗ್ತಿದ್ದಿಲ್ಲ. ಮಲ್ಲಯ್ಯನ ಮಠದಾಗ ವರ್ಷಗೊಮ್ಮ ಪುರಾಣ, ಭಜನಿ ಮಾಡಾಗ ಇಂವಂದನೂ ಒಂದು ಹಾಡ ಇದ್ದೇ ಇರ್ತಿತ್ತು. ಭಜನಿಗಿ ಖುದ್ ಮನ್ಯಾಂದು ನಾಕೈದು ಜೋಡಿ 'ಚೆಳ್ಳಮ' ತರ್ತಿದ್ದ.

ಆದ್ರ ಈಗ ಅಂವ ಗೌಡನ ಪಾದದ ಮ್ಯಾಲ ರುಮಾಲ ಇಟ್ಟು ಜೀವದಾನ ಮಾಡ್ರೀ ಅಂತ ಗೋಗರಿತಿದ್ದ.

ಅಡಿಗಿ ಆಯ್ತು. ಬ್ಯಾಟಿ ಸುತ್ತ ನಿಂತು, ಬಾರಾ ಮಂದಿಗಿ ಪೂರಾ ಉಳ್ಳಾಕ ಹಾಕದುರು. ಮುಂದೇನಾದಾತು ಅಂಬಾ ಚಿಂತಿಯ ಹಾವು ಕುತ್ತಿಗಿಗಿ ಬಿಗದಂಗಾಗಿ ಬಾಯಾಗ ಇಟ್ಟ ಅನ್ನದ ತುತ್ತು ಕಳ್ಳಿಗಿ ಇಳಿಲಾರದಂಗಾಗಿತ್ತು. ಕಂದಿಲ ಒಳಗಿನ ದೀಪದ ಕುಡಿ ಬೆಳಕಿನ ಬದಲಿಗಿ ಬೆಂಕಿ ಕೆನ್ನಾಲಿಗಿ ಹಂಗ ಭಾಸ ಆಗ್ತಿತ್ತು. ಯಾರೋ ಮಾಡಿದ ತಪ್ಪಿಗಿ ಯಾರೋ ಕುತ್ತಿಗಿ ಕುಡಾ ಪಾಳಿ ಬಂದಿತ್ತು.

ಊರಂಬೋ ಊರೇ ಕೌದಿ ಮುಸುಕು ಹಾಕ್ಕೊಂಡು ಮಲಗಿತ್ತು. ಆದರ ಅದು ಸುಳ್ಳ ನಿದ್ದಿ ಇತ್ತು. ನಿದ್ದಿ ಬರಲಾರದೆ ಒಳಗೇ ಹೊಳ್ಯ್ಯಾಡಕೋತ ಒದ್ದ್ಯಾಡಕೋತ ಬಿದ್ದಿತ್ತು ಆ ಊರು.

ಗಂಗಾಳದಾಂಡ ಬಾಸಾ ಬ್ಯಾಳಿ ಕೆಲಸಾಗ ಹರೇದ ಮುಖಬುಲ್ ಶೇಖಗ ತನ್ನ ಮನಿ ನೆಂಪಾಯ್ತು. ನಿನ್ನ ರಾತ್ರಿ ಬಸರ್‌ಹೆಂಡ್ತಿ ಅಮೀನಾಬೇಗಂಗ ಹಡ್ಯಾಬ್ಯಾನಿ ಸಣ್ಣಗ ಸುರು ಆಗಿದ್ವು. ''ನಿಮ ಜೀವ ಉಳದುರ ಸಾಕು. ನಾ ಹೆಣ್ಣ

ಹೆಂಗಸ ನಂಗ ಯಾರೇನ ಮಾಡ್ತಾರ...? ಮುಂಜಾನೆದ್ದು ಕೂಸುಗೋಳಿಗಿ ತಗೊಂಡು ಪೀರಪ್ಪಣ್ಣನ ಮನಿಗಿ ಹೋಗ್ತಿನಿ...'' ಅಂತ ಅಮೀನಾಬೇಗಂ ಗಂಡಗ ಹಿಮ್ಮತ್ ಹೇಳಿಕಳ್ಸಿದ್ದಳು. ಏಟ್ ಕಣ್ಣಿಗಿ ಬೀಳಬ್ಯಾಡದು. ತಪ್ಪಿಸ್ಕೊ ಬೇಕು ಅಂದರ್ರೂ ಖೊಟ್ಟಿ ನಸೀಬ್ ಸಿಕ್ಕಿಬಿದ್ದಿದಾಗ್ಯಾದ. ಈಗ ತನಗೊಂದು ಕೂಸು ಹುಟ್ಟಿರ್ತದ. ಹೆಣ್ಣಾದ್ನೋ ಗಂಡದಾನೋ? ಅದರ ಮಾರಿ ನೋಡಬೇಕು ಅಂತ ಅನ್ಸಿಘಳ್ಳಂತ ಕಣ್ಣಾಂದು ನೀರ ಬಂದುವು.

ಬ್ಯಾಟಿದವರು ತಮದ್ರಾಗೇ ಏನೇನೋ ಮಾತಾಡ್ಕೊಂಡರು. ಬಾರಾ ಮಂದಿಗೆಲ್ಲ ಊರ ಹೊರಗ ತಂದರು. ಕಣ್ಣ ಕಟ್ಟಿದ್ರು. ನಡಸ್ಕೋತ ಹೊಳಿ ದಂಡಿ ಏರಿ ಮ್ಯಾಲ ಬಂದ್ರು. ಹೊಳಿಯೊಳಗ ಹುಚ್ಚ ಪ್ರವಾಹ ಸಹಸ್ರ ಕೈ ಕಾಲಗೋಳಿಂದ ಕುಣದು ಕಪ್ಪಳಸ್ಕೋಂತ ಭೋರ್‍ರಂತ ಹರಿತಿತ್ತು. ಒಬ್ಬೊಬ್ರು ಒಬ್ಬೊಬ್ರಿಗಿ ಹಂಚ್ಕೊಂಡ್ರು ''ಚಿಟಕಿ ಹೊಡ್ಯಾದ್ರಾಗ ಇವನವ್ವ ಇವ್ರಿಗಿ ಹುಟ್ಟಿಲ್ಲ ಅನ್ನಾರಿ...'' ಅಂತ ಬಾರಾ ಮಂದಿಗಿ ಹಿಂದ ಬೆನ್ನಿಗಿ ಕೈ ಕಟ್ಟಿ ಸಾಲಾಗಿ ನಿಂದರಸುದ್ರು.

ನಾಗರಾಜಪ್ಪನ ಪಾಲಿಗಿ ಮುಖಬುಲ್ ಬಂದಿದ್ದ.

ಅಟ್ಟೊತ್ತನ ಗಪ್-ಚುಪ್ ಇದ್ದ ಮುಗಲು ಅಚಾನಕ್ ಗುಡಗಲಾಕ್ ಸುರು ಆಯ್ತು. ಅಲ್ಲಿತನಕ ಎಲ್ಲಿದ್ದು ಮಾಡಗೋಳು? ಗೊತ್ತಿಲ್ಲ. ಕೆಳಗ ಗಲಾಗಲಾ ಅಂತ ಸೊಕ್ಕಿ ಹರ್‍ಯಾಹೊಳಿ. ಮ್ಯಾಲ ಉಡಿಯೊಳಗ ಜಲರಾಶಿ ತುಂಬ್ಕೊಂಡು ನಿಂತ ಮಾಡ. ಕಣ್‌ರೆಪ್ಪಿ ಬಡದ್ ತೆಗೆದ್ರಾಗ ಮಾಡದ ಉಡಿ ಬಿಚ್ಚೊಂಡ್ತು. ರಪ ರಪ ರಪ ರಪ ಮಳಿರಾಶಿ ಸುರು ಆಯ್ತು.

ನಾಗರಾಜಪ್ಪ ಧೋತರಚುಂಗ್ ಟೊಂಕಿಗಿ ಸಿಕ್ಕುಸ್ದ. ತೆಲಿ ಮ್ಯಾಲಿಂದ ಗಾಂಧೀ ಟೋಪಿ ತೋಯ್ದು ಹೋಗಿತ್ತು. ''ಹಿಂತಾ ಮಳ್ಯಾಗ ಜರಾ ಧಕ್ಕಿ ಕೊಟ್ಟುರ್ರೂ ಹೊಳ್ಯಾಗ ಬಿದ್ದ ಜೀವ ಗೊಟಕ್ ಅಂತುದ. ಆದ್ರ ಹೊಟ್ಟ್ಯಾಗ ಕತ್ತಿ ತಿವುದು ಹೊಳ್ಯಾಗ ಹಾಕಬೇಕು ಅಂತ ಫೈಸಲಾ ಆಗಿತ್ತು. ಹಂಗೆ ಹೊಳ್ಯಾಗ ಹಾಕದುರ, ನವ್ವನ್, ಇಸಲ್ ಆಡಿ ಆ ದಂಡಿಗಿ ಹೋಗಿ ಮುಟ್ತಾರ...'' ಅಂತ ಈರಪ್ಪಣ್ಣ ಫರಮಾನ್ ಮಾಡಿದ್ದ.

ಕೈಯಾನ ಕಂದಿಲ ಜರಾ ಮ್ಯಾಲೆತ್ತಿದ ನಾಗರಾಜಪ್ಪ ಗವ್ವನ್ನಾ ಥಾಳ ಕತ್ತಲ್ನಾಗ ಕಂದಿಲ ಒಳಗಿನ ಮಂದ ಬೆಳಕೇ ಜ್ವಾಜಲ್ಯದಂಗ ಬೆಳಬೆಳಗಿ ಆ ಬೆಳಕಿನಾಗ ಮುಖಬುಲನ ಕಣ್ಣ ಕಟ್ಟಿದ ಮಾರಿ ಥಳ್ಳಂತ ಹೊಳದು ಕಾಣಸ್ತು. ಮತ್ತ ಸಂಗಾಟೇ ಕಣ್ಣ ಕಟ್ಟಿದ ಪಟ್ಟಿ ಕೆಳಗ ಮೂಗಿನ ಬಾಜು ಚಾರಾಣಿ ಬಂದಿ ಅಟು ಕರ್‍ರಗ ಮಚ್ಚಿ ಕಾಣಸ್ತು. ನಾಗರಾಜಪ್ಪನ ಎದ್ಯಾಗ ಏನೋ ಆಡಸ್ದಂಗಾಯ್ತು. ಒಣಕಿಧಾರಿ ಮಳಿ ಮೆಲ್ಲಗೆ ಮೆತ್ತಗಾಗಿತ್ತು. ಅಟ್ರಾಗೇ, ತಲಿ ಮ್ಯಾಲಿನ ಮುಗಲಿಗಿ ಖಡಿ ನಿಂದರ್‍ಸಿ ಅಡ್ಡಡ್ಡ ಸೀಳದಂಗೆ ಒಂದು ಮಿಂಚಿನ ಸೆಳಕು ಸರ್‍ರಕ್ಕಂತ ಗೆರಿ ಕೊರದು ಮಾಯ ಆಯ್ತು. ಹೆಂಥಾ ಬೆಳಕದು...! ಆ ಬೆಳಕ್ನಾಗಲೇ ಮುಖಬುಲಗೆ ನಾಗರಾಜಪ್ಪ ಪೂರಾ ಖುನಾ ಹಿಡಿದ. ಖಾತ್ರಿ ಮಾಡ್ಕೋಲಾಕ ತೇಲ್ಯಾಂದು ನೆಂಪಂಬಾ ಸಂದೂಕಿನ ಕೊಂಡಿ ತೆಗಿಬೇಕಾಯ್ತು.

''... ಸಣ್ಣಾಂವ ಇದ್ದಾಗ ಒಂದಿನ ತಾ ಹೊಲ್ಕ ಹೋಗಿದ್ದೆ. ಅಪ್ಪ, ಹಿಂಥದೇ ಮಚ್ಚಿ ಇದ್ದ ರುಮಾಲ ಸುತ್ಕೊಂಡಿದ ಮನಶ್ಯಾನ ಗೂಡಾ ಮಾತಾಡ್ಕೋಂತ ಕುಂತಿದ್ದ. ನಾ ಒಡ್ಕೋತ ಹೋಗಿ ಅಪ್ಪನ ಕೊಳ್ಳಿನ ಸುತ್ತ ಕೈಹಾಕಿ ಬೆನ್ನ ಮ್ಯಾಲ ಬಿದ್ದು, 'ಆನಿ ಬಂತ ಆನಿ...' ಆಡಲಾಕ ಸುರು ಮಾಡಿದ್ದೆ. ಆಗ ಆ ಮನಶ್ಯಾ ನಕ್ಕೋಂತ, 'ಬಾರೋ ನಾಗೂ, ಏಟ್ ಧೊಡ್ಡಾಂವ ಆಗಿದ್ಯೋ ಬೇಟಾ... ಬಾ ಬಾ...' ಅಂತ ಎರಡು ಕೈ ಮುಂದ ಮಾಡಿ ಕರದ. ನಾ ಒಲ್ಲೆ ಅಂತ ಗೋಣ ಹಾಕಿದ್ದೆ. ಆಗ ಅಪ್ಪ 'ಒಲ್ಲ ಅನಬ್ಯಾಡದು ನಾಗರಾಜು. ಹೋಗು. ಚಾಚಾನ ಬಲ್ಲಿ ಹೋಗು. ಇವ್ರಿಗೇನ ತಿಳಿದಿದ್ಯೋ...? ನೀ ಹಿನಾ ಸಣ್ಣಾಂವ ಇದ್ದಾಗ ಆಡ್ಕೋತ ಹೋಗಿ ಭಾಂಯಾಗ ಬಿದ್ದಿದ್ದಿ. ಆಗ ಇಂವನೇ ಚಾಚಾ ನಿನ್ನ ಜೀವ ಉಳಸ್ಯಾನೋ ಮಗಾ... ಅವ್ರ ಬಲ್ಲಿ ಹೋಗಬೇಕಪ್ಪಾ' ಅಂತ ನನ್ನ ಕೈ ಹಿಡದು ಆ ಚಾಚಾನ ತೊಡಿ ಮ್ಯಾಲ ಕುಂಡರಸುದ್ರು. ನಾ ಅಂವನ ಮೀಸಿ ಗಡ್ಡದ ಗೂಡ ಹಂಗೆ ಆಟಾ ಆಡ್ತಾ ಆಡ್ತಾ ಮೂಗಿನ ಬಾಜು, ಕಣ್ಣ ಕೆಳಗ ಚಾರಾಣಿ ಬಂದಿ ಅಟಿದ್ದ ಕರ್‍ರನ ಮಚ್ಚಿಗಿ ಮುಟ್ಟಿ ಮುಟ್ಟಿ ಮಜಾ ಮಾಡಿದ್ದೆ.''

... ಇವ್ನ ಮಾರಿ ಮ್ಯಾಲಿನ ಮಚ್ಚಿ ಅದರಂಗೇ ಅದಾ ಅಲಾ...? ನಾಗರಾಜಪ್ಪನ ಕಣ್ಣಾಗ ಕಾಲೂರಿದ ಆಕ್ರೋಶ, ಸೇಡು. ಹೊಳಿ ನೀರಿನ ಸೆಳವು ಕಮ್ಮ ಆದಂಗ ಇಳಿಲಕ ಸುರು ಆಯ್ತು. ಕಂದೀಲ ಕೆಳಗ ಇಟ್ಟು ಮುಖಬುಲ್ ಕಣ್ಣ ಪಟ್ಟಿ ಬಿಚ್ಚದ. ಮುಖಬುಲ ಮೆಲ್ಲಗ ಕಣ್ಣ ಬಿಟ್ಟ. ಕಣ್ಣಾಗ ಅಂಜಕಿ ಅಂಬಾದು ಬ್ರಹ್ಮಾಂಡದಂಗ ಬೆಳದ ಬಿಟ್ಟಿತ್ತು. ಆ ಕಣ್ಣೊಳಗ ದಯನೀಯ ನೋವು ಕಾಣಸ್ತಿತ್ತು. ಒಂದ್ ನಮುನಿ ಹತಾಶ ಸ್ಥಿತಿ ಇತ್ತು. ಕಣ್ಣ ಪಟ್ಟಿ ಬಿಚ್ಚಿದ ಕೂಡಲೇ ಮುಖಬುಲ್ ನಾಗರಾಜಪ್ಪನ ಕಣ್ಣೊಳಗ ಹಣಕಾ ಧೈರ್ಯ ಮಾಡಲಿಲ್ಲ. ಕೆಳಗ ಹರ್‍ಯಾ ಹೊಳಿ ಮತ್ತ ಮುಂದ ನಿಂತ ನಾಗರಾಜಪ್ಪ ಒಂದೇ ಭಾವನಿ ಅವನೊಳಗ ಹುಟ್ಟಹಾಕಿದ್ರು. ಆದರನೂ ಸಣ್ಣ 'ಆಸಿ' ಮಿಂಚ ಹುಳದಂಗ ಹಾರ್‍ಯಾಡದಂಗಾಯ್ತು.

ದೂರದಾಗ ಬಂಡಯ್ಯ ಮುತ್ಯಾನ ಏಕತಾರಿ ಟೇಂವ್ ಟೇಂವ್ ಅಂತಿತ್ತು. ಸಣ್ಣ ದನಿ ರಾಗಬದ್ಧಾಗಿ ಕೇಳಸ್ತಿತ್ತು.

''ಆವ ಭಯವು ಇನ್ನೇನವಗ
ಮರಣವೇ ಮಹಾನವಮಿ ಆದವಗ
ಹುಟ್ಟೂದು ಸಾವುದು ಜೀವ ಭಾವದ ಭ್ರಮಿ
ಸಾವೇ ಸಾವೇನವಗ. ನೋವೇ ನೋವೇನವಗ...''

ಮುಖಬುಲ್ ಈಗ ಖರೇನೇ ನಾಗರಾಜಪ್ಪನ ಕಣ್ಣಾಗ ಕಣ್ಣಿಟ್ಟು ನೋಡದ. ನಾಗರಾಜಪ್ಪ ಯಾಡ ಹೆಜ್ಜಿ ಮುಂದೆ ಬಂದ. ಮುಖಬುಲ್ ಅಂಜಲಿಲ್ಲ. ಎದಿ ಬಡಿಲಾರ್ದೆ ನಾಗರಾಜಪ್ಪಗ ನೋಡ್ತಿದ್ದ. ಈಗ ಮುಖಬುಲನ ಮಾರಿ ಸನಿ ನಾಗರಾಜಪ್ಪನ ಬಲಗೈ ಬಂತು. ಅದೇ ಆ 'ಚಾರಾಣಿ ಬಂದಿ' ಅಟು ಕರ್‍ರನ ಮಚ್ಚಿ ಮ್ಯಾಲ ಒಂದ ಬೆಳ್ಳಿನಿಂದ ಮೆಲ್ಲಗ ಸವ್ರರದ. ಥೇಟ್ ಚಾಚಾನ ಮಾರಿ. ಅದೇ ಮೂಗು, ಅದೇ ಗಡ್ಡ! ಮತ್ತದೇ ಮಚ್ಚಿ!!

ಕೆಳಗಿನ ಹೊಳಿ ಪೂರಾ ಶಾಂತ ಆಯ್ತು. ಮ್ಯಾಲಿನ ಮಳಿ ಸಣ್ಣಗ ತುಂತುರ ಹನಿ ಹಂಗ ಉದುರ್ತಿತ್ತು. ಮತ್ತ ದೂರದಿಂದ ಬಂಡಯ್ಯ ಮುತ್ಯಾನ ಟೇಂವ್ ಟೇಂವ್... ಏಕತಾರಿ ಸಂಗಾಟೇ ಬಂಡಯ್ಯ ಮುತ್ಯಾನ ದನಿಗಿ ಹುಸೇನಿ ದನಿನೂ ಸೇರ್‍ಕೊಂಡು ತಣ್ಣನ ಶಾಂತ ಗಾಳ್ಯಾಗ ಬೆರ್‍ತು ತೇಲ್ಕೊಂಡು ಹರದು ಹರದು ಬರ್‍ತಿತ್ತು.

''ತನ್ನ ತಾನು ತಿಳಿದ ಮ್ಯಾಲ ಇನ್ನೇನಿನ್ನೇನೋ...
ತನ್ನಂತೆ ತಾನು ಸರ್ವರ ಜೀವ ಮನ್ನಿಸಿ ಮೂಕಾದ ಮೇಲೆ
ಇನ್ನೇನಿನ್ನೇನೋ...''

ನಾಗರಾಜಪ್ಪ ಮತ್ತು ಮುಖಬುಲ್ ಪರಸ್ಪರ ಪ್ರೀತಿ ಕಾಲೂರಿ ನಿಂತ ಆ ಎರಡು ಕಣ್ಣಗೋಳು ನೋಡ್ಕೋತ ನಿಂತರು. ಧಡಲ್, ಢಡಲ್, ಧಢ್, ಧಡ್ ಯಥಾಪ್ರಕಾರ ಟ್ರೇನು ತನ್ನ ಪಾಡಿಗೆ ತಾನು ಓಡುತ್ತಲೇ ಇತ್ತು. ದೊಡ್ಡದೊಂದು ಸೀಳಿನೊಂದಿಗೆ ಸ್ಟೇಷನ್ ಒಂದರಲ್ಲಿ ಧಡಕ್ ಎಂದು ನಿಂತಾಗಲೇ ನಾನು ನೆನಪಿನ ಸುರಳಿಯೊಳಗಿಂದ ವಾಸ್ತವಕ್ಕೆ ಇಳಿದೆ.

ನೀಲಾ ಕೆ.
ಪಿ.ಡಬ್ಲ್ಯು.ಡಿ ಕ್ವಾಟರ್ಸ್, ಹಳೇ ಜೇವರ್ಗಿ ರಸ್ತೆ
ಗುಲಬರ್ಗಾ

# ಪುರಾಣ ಪಠ್ಯ ಮತ್ತು ಪ್ರತಿಪಠ್ಯ ನಿರ್ಮಾಣ



ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಘಟಿಸಿರುವ ಒಂದು ಬಹುಮುಖ್ಯವಾದ ಬರಹ ಮಾದರಿ ಎಂದರೆ ಅದು ವರ್ತಮಾನದ ಪುರಾಣೀಕರಣ. ಪಂಪ ರನ್ನರಿರಬಹುದು, ಹರಿಹರ ರಾಘವಾಂಕರಿರಬಹುದು, ನಂಜುಂಡ ಭೀಮಕವಿಗಳಿರಬಹುದು, ಮುದ್ದಣ-ಕುವೆಂಪು ಈ ಎಲ್ಲರೂ ಚರಿತ್ರೆ-ವರ್ತಮಾನಗಳನ್ನು ಪುರಾಣೀಕರಿಸುವ ಮೂಲಕವೇ ಸಾಹಿತ್ಯ ಕಥನಗಳನ್ನು ಸಂಸ್ಕೃತಿ ಕಥನಗಳನ್ನಾಗಿ ಕಟ್ಟಿದ್ದಾರೆ. ನಮ್ಮ ಪರಂಪರೆಯಲ್ಲಿ ಚರಿತ್ರೆ, ಚಾರಿತ್ರ್ಯ, ಪುರಾಣ, ವರ್ತಮಾನಗಳನ್ನು ಬೇರೆ ಬೇರೆ ಗೂಡುಗಳಂತೆ ನೋಡದೇ ಅಭೇದವಾಗಿಯೇ ಕಲ್ಪಿಸುತ್ತ ಬರಲಾಗಿದೆ. ಪಂಪನು ಅರಿಕೇಸರಿ, ಅರ್ಜುನರನ್ನು ಒಂದಾಗಿ ಕಂಡದ್ದನ್ನು ನಾವು ಸಮೀಕರಣವೆಂಬ ಪರಿಭಾಷೆಯಿಂದ ಗುರ್ತಿಸಿದ್ದೇವೆ. ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ, ರನ್ನನು ತನ್ನ ಗದಾಯುದ್ಧದಲ್ಲಿ ಮಾಡುವುದು ವರ್ತಮಾನದ ಪುರಾಣೀಕರಣವನ್ನೇ. ನಮಗದು ಚರಿತ್ರೆಯ ಪುರಾಣೀಕರಣವಾಗಿ ಇಂದು ಕಾಣುತ್ತಿದೆ. ಹರಿಹರ ಬರೆದಿರುವ ಬಹುಪಾಲು ಕನ್ನಡ ಶೈವ ರಗಳೆಗಳೆಲ್ಲವೂ ವರ್ತಮಾನದ (ಚರಿತ್ರೆಯ) ಪುರಾಣೀಕರಣಗಳೇ ಆಗಿವೆ. ರಾಘವಾಂಕನ ಸಿದ್ಧರಾಮ ಚಾರಿತ್ರ್ಯ ಕೂಡ ನಿಕಟಪೂರ್ವ ವರ್ತಮಾನದ ಪುರಾಣೀಕರಣವೇ. ನಂಜುಂಡ ಕವಿಯ ಕುಮಾರರಾಮನ ಸಾಂಗತ್ಯ ಕೂಡ ಈ ಥರದ ಕಾವ್ಯವೇ. ಕುಮಾರರಾಮನನ್ನು ನಂಜುಂಡ ಅರ್ಜುನನ ಪುನರ್ಜನ್ಮವೆಂದೇ ಕರೆಯುತ್ತಾನೆ. ಇನ್ನು ಭೀಮಕವಿಯ ಬಸವ ಪುರಾಣವಾದರೋ ಚಾರಿತ್ರಿಕ ವ್ಯಕ್ತಿಯೊಬ್ಬನನ್ನು - ಸನ್ನಿವೇಶವನ್ನು ಪುರಾಣೀಕರಿಸುವ ಕಾವ್ಯ. ಹೀಗೆ ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಈ ವರ್ತಮಾನದ ಪುರಾಣೀಕರಣ ಪ್ರಕ್ರಿಯೆಯ ಹೆಜ್ಜೆ ಗುರುತುಗಳನ್ನು ಕಾಣಬಹುದು. ಕುವೆಂಪು ಅವರ ನಾಟಕಗಳು ಈ ಪರಂಪರೆಯ ಸಮರ್ಥ ಮುಂದುವರಿಕೆಯೇ ಆಗಿದೆ. ಆ ನಂತರದ ಕಂಬಾರ, ಕಾರ್ನಾಡ, ಲಂಕೇಶ, ಶಿವಪ್ರಕಾಶರೂ ಈ ಪರಂಪರೆಯನ್ನು ಮುಂದುವರೆಸಿದ್ದಾರೆ. ಇವರ ನಾಟಕಗಳು ಚರಿತ್ರೆ, ವರ್ತಮಾನ, ಪುರಾಣಗಳ ಜೊತೆಗೆ ಜಾನಪದದಿಂದಲೂ ಸಾಮಗ್ರಿ ಪಡಕೊಂಡಿವೆ.

ಈ ಪ್ರಕ್ರಿಯೆಯಲ್ಲಿ ಬರಹಗಾರನಾದವನು ಯಾವ ಉದ್ದೇಶಕ್ಕೆ ತನ್ನ ಪುರಾಣ ಪ್ರತಿಮೆಯನ್ನು ನಿರ್ಮಿಸುತ್ತಾನೆ ಎಂಬುದು ವಿಚಾರಾರ್ಹ. ಇಂಥ ಪ್ರಕ್ರಿಯೆಯು ಬಹುಮುಖಿಯಾದದ್ದು. (೧) ಭಂಜನ, (೨) ಭಜನ, (೩) ಸ್ಥಿರೀಕರಣ, (೪) ಸ್ಥಿತ್ಯಂತರಣ, (೫) ಉನ್ನತೀಕರಣ, (೬) ವೈಭವೀಕರಣ, (೭) ವರ್ತಮಾನೀಕರಣ, (೮) ಪ್ರಸರಣ (ಪಠ್ಯ ಸಮುದಾಯಕ್ಕೆ ಸುಲಭವಾಗಿ ಪಡೆಯಬಹುದಾದ ಪ್ರವೇಶ) ಹೀಗೆ ಭಿನ್ನ ನೆಲೆಗಳಲ್ಲಿ ಈ ಪ್ರಕ್ರಿಯೆ ನಡೆಯುತ್ತಿರುತ್ತದೆ (ನಡೆದಿದೆ). ಒಂದೇ ಕೃತಿಯಲ್ಲಿ ಇಲ್ಲಿನ ಹಲವು ಆಯಾಮಗಳು ಜಾಗ ಪಡೆಯಬಹುದು. ಪುರಾಣ ಪ್ರತಿಮಾ ನಿರ್ಮಾಣವು ಯಾವಾಗಲೂ ಏಕಾಕಾರಿಯಾದುದಲ್ಲ. ಅದು ಕಾಲ ಮತ್ತು ಸಂಸ್ಕೃತಿಯ ಅಗತ್ಯ ಹಾಗೂ ಜ್ಞಾನ ಮತ್ತು ಆಡಳಿತಶಾಹಿಯ ವರ್ಗ ರಾಜಕಾರಣಗಳ ಉದ್ದೇಶಗಳಿಗನುಗುಣವಾಗಿ ನಿರ್ಮಾಣವಾಗುತ್ತಿರುತ್ತದೆ. ನವಪುರಾಣ ನಿರ್ಮಾಣ – ವರ್ತಮಾನದ ಪುರಾಣೀಕರಣಗಳು ದಮನಿತ ದನಿಗಳ ಮೇಲ್ಮುಖ ಚಲನೆಯ ನೆಲೆಯಲ್ಲಿ ಹೆಚ್ಚು ನಡೆಯುತ್ತವೆಯೆಂದು ಶೈವ ರಗಳೆ ಪುರಾಣಗಳನ್ನು ನೋಡಿದರೆ ತಿಳಿಯುತ್ತದೆ. ಪಂಪನನ್ನು ನೋಡಿದರೆ ಆಡಳಿತಶಾಹಿ ರಾಜಕಾರಣ ಮತ್ತು ಕನ್ನಡವೆಂಬ ನಿಮ್ನ ಭಾಷೆಗಳೆರಡೂ ವರ್ತಮಾನದ ಪುರಾಣೀಕರಣದ ಹಿನ್ನೆಲೆಗೆ ಕೆಲಸ ಮಾಡಿರುವುದು ತಿಳಿಯುತ್ತದೆ. ಕಾರ್ನಾಡರಂತಹ ನಾಟಕಕಾರರ ಪುರಾಣ ವಸ್ತು ವಿನ್ಯಾಸವು ಮುಖ್ಯವಾಗಿ ವರ್ತಮಾನದ ವಿಮರ್ಶೆಗೆ, 'ಕಾಲಾತೀತ ಸಾಮಾನ್ಯ ಮಾನವ ನಡಾವಳಿ'ಗಳ ಕುರಿತ ವಿಶ್ಲೇಷಣೆಗೆ ಬಳಕೆಯಾಗುತ್ತದೆ. ಕುವೆಂಪು ನಾಟಕಗಳನ್ನು ನೋಡಿದರೆ ವರ್ತಮಾನದ ತಲ್ಲಣ, ತರತಮ, ಶೋಷಣೆಗಳನ್ನು ಹಾಗೇ ಹಸಿ ಹಸಿಯಾಗಿ ಹೇಳಲಾಗದ ಕವಿ ಪ್ರತಿಭೆ ಪುರಾಣ ಪ್ರತಿಮಾ ವಿಧಾನವನ್ನು ಆಶ್ರಯಿಸಿರುವಂತೆ ಕಾಣುತ್ತದೆ.

ಪುರಾಣವು ನಮ್ಮಲ್ಲಿ ಯಾವತ್ತೂ ವರ್ತಮಾನವನ್ನು ಅಭಿವ್ಯಕ್ತಿಸಲು ಒದಗಿ ಬಂದಿರುವ ಒಂದು 'ಭಾಷೆ'. ಇದು ಅವಾಸ್ತವ, ಅಪ್ರಸ್ತುತ ಎಂಬ ತಿಳುವಳಿಕೆಯೆಲ್ಲವೂ ವಾಸ್ತವವಾಗಿ ಮಾರ್ಗಿಗಳ ಅಪಕಲ್ಪನೆಯಷ್ಟೆ. ಇದು ಸಾಹಿತ್ಯ ಪ್ರತಿರೋಧವು ಪ್ರಕಟಗೊಳ್ಳುವ ಹಲ ಮಾರ್ಗಗಳಲ್ಲಿ ಒಂದು ಮುಖ್ಯವಾದ ಮಾರ್ಗ. ಕುವೆಂಪು ನಾಟಕಗಳು ಇಂಥ ಪುರಾಣ ಮಾರ್ಗವನ್ನು ಆಶ್ರಯಿಸಿದ ಸ್ಥಿತ್ಯಂತರ ವರ್ತಮಾನದ ತಲ್ಲಣಗಳಾಗಿವೆ. ''ಈಗಿನ ಜನ ಯಥಾರ್ಥ ವಿಜ್ಞಾನದ ಮರುಳಿನಲ್ಲಿ ಸಿಲುಕಿ ಪುರಾಣವನ್ನು ಅವೈಜ್ಞಾನಿಕ, ಕಾಲ್ಪನಿಕ, ಅಪ್ರಸ್ತುತ, ಹಳೆಯ ಕಸ ಎಂದೆಲ್ಲ ಭಾವಿಸಿದ್ದಾರೆ. ಆದರೆ ಅವುಗಳನ್ನು ಸಾಂಕೇತಿಕವಾಗಿ ನೋಡಿದರೆ ನಮ್ಮ ಹೃದಯಕ್ಕೆ ದೀಪಧಾರಿಯಾಗಬಲ್ಲ ಶಕ್ತಿ ಅವುಗಳಲ್ಲಿರುವುದನ್ನು ಕಾಣಬಹುದು'' ಎನ್ನುವ ಕುವೆಂಪು ತಮ್ಮ 'ನಾಟಕ ಕಲೆಯಲ್ಲಿ ಪ್ರತಿಕೃತಿ ಮತ್ತು ಪ್ರತಿಮಾ ವಿಧಾನಗಳು' ಎಂಬ ಲೇಖನದಲ್ಲಿ ಪುರಾಣ ವಸ್ತುವಿಗೆ ಒಪ್ಪುವ ವಿಧಾನ ಪ್ರತಿಮಾ ವಿಧಾನವಲ್ಲದೆ ಬೇರೊಂದಲ್ಲ ಎನ್ನುತ್ತಾರೆ (ಸಮಗ್ರ ಗದ್ಯ-೧; ಪು. ೨೩೮-೩೯)

ಕುವೆಂಪು ಆಗಲಿ ಅಥವಾ ಕನ್ನಡ ಸಾಹಿತ್ಯ ಚರಿತ್ರೆಯ ಮುಖ್ಯ ಕವಿಗಳೇ ಆಗಲಿ ಯಾಕೆ ವರ್ತಮಾನಕ್ಕೆ ಮುಖಾಮುಖಿಯಾಗಲು ಮತ್ತೆ ಮತ್ತೆ ಪುರಾಣವನ್ನು ಬಳಸುವುದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದ ಮೂರು ಕಾರಣಗಳೆಂದರೆ; (೧) ಪುರಾಣ ಕಥನಕ್ಕಿರುವ ಸಾಮಾಜಿಕ ಪ್ರಾಮಾಣೀಯತೆ, (೨) ಇಂಥ ಕಥನಗಳ ಸೃಜನ ಸಾಧ್ಯತೆ ಅಥವಾ ಬಹುರೂಪೀ ಸಂಕೀರ್ಣತೆ, ಹಾಗೇ (೩) ಪುರಾಣವೆಂಬುದು ಜನರು ಬಲ್ಲ ಭಾಷೆಯಾಗಿರುವುದು.

ರಾಮಲಿಂಗಪ್ಪ ಟಿ. ಬೇಗೂರು

**ಪ್ರಜ್ಞಾವಂತ ಚಲನಶೀಲ ಸಮಾಜದಲ್ಲಿ ಪುರಾಣ ಕಥನಗಳಿಗೆ ಸದಾ ಪ್ರತಿಪಠ್ಯ-ಸಹಪಠ್ಯಗಳು ನಿರ್ಮಾಣಗೊಳ್ಳುತ್ತಲೇ ಇರುತ್ತವೆ. ಈ ಪ್ರತಿಪಠ್ಯ ನಿರ್ಮಾಣಗಳು ಬಹುವೇಳೆ ಸ್ಥಾಪಿತ ಪ್ರಮಾಣಗಳ ವಿರುದ್ಧ ಹೂಡಿದ ಯುದ್ಧಗಳೇ ಆಗಿರುತ್ತವೆ. ಇಂಥ ಯುದ್ಧಗಳಿಂದ ಸಮಾಜದಲ್ಲಿ ಸಹಜವಾಗಿ ಪ್ರಕ್ಷೋಭೆ ಉಂಟಾಗುತ್ತಿರುತ್ತದೆ. ಏಕೆಂದರೆ ಸ್ಥಾಪಿತ ಪ್ರಮಾಣಗಳು ನಿರ್ಮಿಸಿರುವ ಜನಜನಿತ ಮೌಲ್ಯ-ಇಮೇಜುಗಳಿಗೆ ಇದರಿಂದ ಹೊಡೆತ ಬಿದ್ದಿರುತ್ತದೆ. ದಮನಿತ ವರ್ಗವು ಪ್ರಜ್ಞಾವಂತವಾದಾಗೆಲ್ಲ ಇಂಥ ಕ್ರಿಯೆ ಸರ್ವೇ ಸಾಮಾನ್ಯ. ಕುವೆಂಪು ಅವರ ಶೂದ್ರತಪಸ್ವಿ, ಬೆರಳ್‌ಗೆ ಕೊರಳ್, ಕಾನೀನ ನಾಟಕಗಳು ಬಲು ಜೋರಾದ ಇಂಥ ಪ್ರತಿಪಠ್ಯ ನಿರ್ಮಾಣಗಳಾಗಿವೆ. ಈ ನಿರ್ಮಾಣಗಳಿಂದ ಜ್ಞಾನಶಾಸ್ತ್ರೀಯ ಪಲ್ಲಟಗಳು ಜರುಗಿವೆ.**

ಸಿದ್ಧ ಕಥನವನ್ನು ವರ್ತಮಾನೀಕರಿಸುವಾಗ ನವಕಥನ ನಿರ್ಮಾಣದ ತೊಡಕುಗಳು ಇರುವುದಿಲ್ಲ. ಅಲ್ಲದೆ ಅದು ಸಮಾಜದಲ್ಲಿ ಸ್ವೀಕೃತವಾದ ಕಥನ ಶರೀರವಾದ್ದರಿಂದ ಅದರ ಕುರಿತಾಗಿ ಜನರಲ್ಲಿ ತಕರಾರುಗಳು ಇರುವುದಿಲ್ಲ. ಹಾಗೇ ನವಕಥನ ಪ್ರವೇಶಕ್ಕೆ ಮತ್ತು ಅದರ ಅಂತರಂಗೀಕರಣಕ್ಕೆ ಬೇಕಾದ ಸಿದ್ಧತೆಗಳು ಅಗತ್ಯವಿರುವುದಿಲ್ಲ. ನವಕಥನವೊಂದನ್ನು ನಿರ್ಮಿಸಿದಾಗ ಕವಿಗೆ ತನ್ನ ಪಠ್ಯ ಸಮುದಾಯವನ್ನು ಕಟ್ಟಿಕೊಳ್ಳಬೇಕಾದ ಜವಾಬ್ದಾರಿಗಳು ಇರುತ್ತವೆ. ಆದರೆ ಸಮಾಜ ಚಾಲ್ತಿಯ ಪುರಾಣಕಥನವೊಂದನ್ನು ಸ್ವೀಕರಿಸುವಾಗ ಇಂಥ ಪಠ್ಯ ಸಮುದಾಯ ನಿರ್ಮಾಣದ ಜವಾಬ್ದಾರಿ ಇರುವುದಿಲ್ಲ. (ಆದರೆ ಈವತ್ತಿನ ಸಂದರ್ಭದಲ್ಲಿ ಪಠ್ಯ ಸಮುದಾಯ ನಿರ್ಮಾಣದ ಜವಾಬ್ದಾರಿ ವಿಕೇಂದ್ರೀಕೃತವಾಗಿದ್ದಾಗ್ಯೂ ಯಾರೂ ಈ ಜವಾಬ್ದಾರಿಯನ್ನು ನಿಭಾಯಿಸುತ್ತಿಲ್ಲವೆಂಬುದು ಬೇರೆ ಮಾತು). ಅಲ್ಲದೆ ಪುರಾಣ ಕಥನವು ಜನಜನಿತ ಕಥನವಾಗಿರುವುದರಿಂದ ಜನರೊಂದಿಗೆ ಸಂವಾದ ನಡೆಸಲು ಸುಲಭವಾಗುತ್ತದೆ ಕೂಡ. (ಆದರೆ, ಈವತ್ತಿನ ಜಾಗತೀಕರಣ ಮತ್ತು ಮಾಹಿತಿ ತಂತ್ರಜ್ಞಾನದ ಉತ್ಕರ್ಷದ ಸಂದರ್ಭದಲ್ಲಿ ಸ್ಥಳೀಯ ಜನತೆ 'ಪಠ್ಯ ಸಮುದಾಯ'ವಾಗಿ ನವೀಕರಣಗೊಳ್ಳುತ್ತಿದೆಯೇ ಎಂಬುದು ಪ್ರಶ್ನೆ. ಸದ್ಯಕ್ಕಿದು ಒತ್ತಟ್ಟಿಗಿರಲಿ.) ಪುರಾಣಗಳು ಜನರ ಭಾವಕೋಶದ ಅವಿಭಾಜ್ಯ ಭಾಗವೇ ಆಗಿಹೋಗಿರುವುದರಿಂದ ಕೃತಿಕಾರನು ಜನರ ಭಾವನಾಡಿಯನ್ನು ಇಂಥ ಕಥನಗಳ ಮೂಲಕ ಬೇಗ ಹಿಡಿಯಬಲ್ಲ. ಕುವೆಂಪು ಅವರ ಏಕಲವ್ಯ (ಬೆರಳ್ಗೆ ಕೊರಳ್) ನಾಟಕವನ್ನು ಯಾವುದಾದರೂ ಒಂದು ಹಳ್ಳಿಯಲ್ಲಿ ಪ್ರದರ್ಶಿಸಿದಾಗ ಈ ನಾಟಕಭಾಷೆ ಹಳ್ಳಿಗರಿಗೆ ಯಾವ ಕಾರಣಕ್ಕೂ ತೊಡಕು ಎಂದೆನಿಸುವುದಿಲ್ಲ. ಏಕೆಂದರೆ, ಅದು ಅವರು ಬಲ್ಲ ಕಥನವೇ ಆಗಿರುತ್ತದೆ. ಇಂಥ ಕಥನಗಳಲ್ಲಿ ಕಥನವೇ ಒಂದು ಭಾಷೆ. ಪಾತ್ರಗಳು ಆಡುವ ಭಾಷೆಗಿಂತ ಒಟ್ಟಾರೆ ದೃಶ್ಯಗಳ ಮೂಲಕ ಕಟ್ಟಲ್ಪಡುವ ಕಥನ ಇಂಥ ಕಡೆ ಹೆಚ್ಚು ಸಂವಾದಶಾಲಿಯಾಗಿರುತ್ತದೆ. ಹಾಗಾಗಿ ಹೊಸ ಪ್ಲಾಟೊಂದನ್ನು ಸೃಷ್ಟಿಸುವುದಕ್ಕಿಂತ ಜನಜನಿತ ಕಥನವೊಂದನ್ನು ನಾಟಕವಾಗಿ ರೂಪಿಸುವುದು ಲೇಖಕನಿಗೆ ಹೆಚ್ಚು ಅನುಕೂಲಕಾರಿ.

ಪುರಾಣ ಕಥನಗಳನ್ನು ಆರಿಸಿಕೊಂಡಾಗ ಒದಗುವ ಸೌಲಭ್ಯಗಳ ಜೊತೆಗೇ ಹಲವು ಮಿತಿಗಳೂ ಒದಗುತ್ತವೆ. ಇಂಥ ಮಿತಿಗಳಲ್ಲಿ ಪುರಾಣ ಕಥನದ ಪಾತ್ರಸಂವಿಧಾನವೂ ಒಂದು. ಕರ್ಣ ಅಂದರೆ ಇಂಥವನು, ದುರ್ಯೋಧನ ಅಂದರೆ ಇಂಥವನು, ಮಂಥರೆಯೆಂದರೆ ಇಂಥವಳು ಎಂಬ ಪಾತ್ರ ಸಂವಿಧಾನ ಒಂದು ಬಗೆಯದಾದರೆ, ಇಡೀ ಕಥನವೇ ನಾಯಕ ಪ್ರಧಾನವಾಗುವುದು ಇನ್ನೊಂದು ಬಗೆ. ಇದರಲ್ಲಿ ಒಂದನೆಯದು ಪಾತ್ರದ ಸ್ಥಾಪಿತ ಇಮೇಜಿನ ಮಿತಿ, ಇನ್ನೊಂದು ಹೀರೋ ವರ್ಷಿಪ್ಪಿನ ಅಪಾಯ. ಈ ಎರಡನ್ನೂ ಕುವೆಂಪು ತಕ್ಕಮಟ್ಟಿಗೆ ಮೀರಿದ್ದಾರೆ. ಹಾಗೆ ನೋಡಿದರೆ ಪುರಾಣವೊಂದರ ಪಾತ್ರ ಸಂವಿಧಾನದ ಸ್ವೀಕರಣ ಸಂದರ್ಭದಲ್ಲಿ ಅವುಗಳ ಮಿತಿಗಳನ್ನು ಸಂಪೂರ್ಣವಾಗಿ ಮೀರುವುದು ಕಷ್ಟ. ಇಂಥ ಕಡೆ ಒಂದೊಂದು ಮೀರುವಿಕೆಯೂ ಒಂದೊಂದು ಹೊಸ ವ್ಯಾಖ್ಯಾನವಾಗುವ ಸಾಧ್ಯತೆಯೇ ಹೆಚ್ಚು. ಪುರಾಣ ಕಥನದ ಆಯ್ಕೆಯಿಂದ ಒದಗುವ ಇನ್ನೊಂದು ಮುಖ್ಯ ಮಿತಿಯೆಂದರೆ; ಪುರಾಣ ಕಥನವು ತನ್ನೊಳಗೆ ಹುದುಗಿಸಿಕೊಂಡಿರಬಹುದಾದ ಕಥನ ದರ್ಶನವು ಸ್ವೀಕಾರ ಮಾಡುವ ಕೃತಿಕಾರನ ದರ್ಶನವೂ ಆಗಿಬಿಡಬಲ್ಲ ಸಾಧ್ಯತೆಯಿದೆ. ಆದರೆ ಕುವೆಂಪು ತಾವು ಆರಿಸಿಕೊಂಡ ಕಥನಗಳೆಲ್ಲ ಅವುಗಳ ಮೌಲ್ಯ ರಾಜಕಾರಣವನ್ನು ಪಲ್ಲಟಿಸಿ ಪುನಾ ರಚಿಸಲೆಂದೇ ಆಯ್ಕೆ ಮಾಡಿಕೊಂಡ ಕಥನಗಳು. ಹೀಗಾಗಿ ಕುವೆಂಪು ಇಂಥ ಮಿತಿಯನ್ನು ತಮ್ಮ ಪುರಾಣ ಪ್ಲಾಟುಗಳಲ್ಲಿ ಮೀರಿದ್ದಾರೆ.

೨

ಪ್ರಜ್ಞಾವಂತ ಚಲನಶೀಲ ಸಮಾಜದಲ್ಲಿ ಪುರಾಣ ಕಥನಗಳಿಗೆ ಸದಾ ಪ್ರತಿಪಠ್ಯ-ಸಹಪಠ್ಯಗಳು ನಿರ್ಮಾಣಗೊಳ್ಳುತ್ತಲೇ ಇರುತ್ತವೆ. ಈ ಪ್ರತಿಪಠ್ಯ ನಿರ್ಮಾಣಗಳು ಬಹುವೇಳೆ ಸ್ಥಾಪಿತ ಪ್ರಮಾಣಗಳ ವಿರುದ್ಧ ಹೂಡಿದ ಯುದ್ಧಗಳೇ ಆಗಿರುತ್ತವೆ. ಇಂಥ ಯುದ್ಧಗಳಿಂದ ಸಮಾಜದಲ್ಲಿ ಸಹಜವಾಗಿ ಪ್ರಕ್ಷೋಭೆ ಉಂಟಾಗುತ್ತಿರುತ್ತದೆ. ಏಕೆಂದರೆ ಸ್ಥಾಪಿತ ಪ್ರಮಾಣಗಳು ನಿರ್ಮಿಸಿರುವ ಜನಜನಿತ ಮೌಲ್ಯ-ಇಮೇಜುಗಳಿಗೆ ಇದರಿಂದ ಹೊಡೆತ ಬಿದ್ದಿರುತ್ತದೆ. ದಮನಿತ ವರ್ಗವು ಪ್ರಜ್ಞಾವಂತವಾದಾಗೆಲ್ಲ ಇಂಥ ಕ್ರಿಯೆ ಸರ್ವೇಸಾಮಾನ್ಯ. ಕುವೆಂಪು ಅವರ ಶೂದ್ರತಪಸ್ವಿ, ಬೆರಳ್‌ಗೆ ಕೊರಳ್, ಕಾನೀನ ನಾಟಕಗಳು ಬಲು ಜೋರಾದ ಇಂಥ ಪ್ರತಿಪಠ್ಯ ನಿರ್ಮಾಣಗಳಾಗಿವೆ. ಈ ನಿರ್ಮಾಣಗಳಿಂದ ಜ್ಞಾನಶಾಸ್ತ್ರೀಯ ಪಲ್ಲಟಗಳು ಜರುಗಿವೆ.

ಪುರಾಣಕ್ಕೆ ಪ್ರತಿಪಠ್ಯಗಳು ನಿರ್ಮಾಣವಾದಾಗ ಅವುಗಳನ್ನು ಜನ ಸ್ವಾಗತಿಸಿ, ಅಂತರಂಗೀಕರಿಸಿಕೊಂಡು, ಮರುಪ್ರಸಾರಕ್ಕೆ ಒಡ್ಡುತ್ತ ಹೋದಂತೆಲ್ಲ ಆ ಪ್ರತಿಪಠ್ಯಗಳ ತಾಕತ್ತು ಹೆಚ್ಚುತ್ತ ಹೋಗುತ್ತದೆ. ಪ್ರತಿಪಠ್ಯವೇ ಸಮಾಜದಲ್ಲಿ ಸ್ವೀಕೃತ ಪಠ್ಯವಾಗಿ ಬೆಳೆಯುವುದು ಆ ಪಠ್ಯವು ಸಮಾಜದ ಸಮಷ್ಟಿ ದನಿಯಾಗಿದ್ದಾಗ ಮಾತ್ರ. ಕುವೆಂಪು ಅವರ ಪ್ರತಿಪಠ್ಯಗಳಿಗೆ ಇಂಥ ಚಾಲನೆ - ಸ್ವೀಕರಣ - ಪ್ರಾಮಾಣೀಯತೆ ದಕ್ಕಿದೆ ಎನ್ನಿಸುತ್ತದೆ. ಕುವೆಂಪು ಅಥವಾ ಅಂಥ ಯಾವುದಾದರೂ ಸಮರ್ಥ ಲೇಖಕನಿಂದ ವರ್ತಮಾನದ ಅಗತ್ಯವು ಇಂಥ ಪಠ್ಯಭಂಜನ, ಪುರಾಣಭಂಜನ ಮತ್ತು ಆ ಮೂಲಕವೇ ನವನಿರ್ಮಾಣ ಕಾರ್ಯಗಳನ್ನೂ ಮಾಡಿಸುತ್ತಿರುತ್ತದೆ. ಇದು ಪರಂಪರೆಯನ್ನು ತಿರಸ್ಕರಿಸುವ ಕಾರ್ಯವಲ್ಲ, ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಅದನ್ನು ಮುರಿದು ಒಗ್ಗಿಸಿಕೊಳ್ಳುವ ಕಾರ್ಯ, ತಮ್ಮದೇ ಸಾಂಸ್ಕೃತಿಕ ಐಡೆಂಟಿಟಿಯನ್ನು ನವೀಕರಿಸಿಕೊಳ್ಳುವ ಕಾರ್ಯ, ಸಾಹಿತ್ಯ ಪ್ರಮಾಣವು ವರ್ಗ ಹಿತಾಸಕ್ತಿಯ ಸಾಧನ ಸಾಮಗ್ರಿಯಾಗಿ ಬಳಕೆಯಾಗುವ ಹುನ್ನಾರಕ್ಕೆ ಪ್ರತಿರೋಧ ಒಡ್ಡುವ ಕಾರ್ಯ.

ಚಲನಶೀಲ ಸಮಾಜವು ಮತ್ತೆ ಮತ್ತೆ ತನ್ನ ಗತವನ್ನು ವರ್ತಮಾನದ ಹಿತಕ್ಕೆ ತಕ್ಕಂತೆ ಪುನಾರಚಿಸಿಕೊಳ್ಳುವುದರ ಸಂಕೇತ ಕುವೆಂಪು. ಇವರ ಶೂದ್ರತಪಸ್ವಿ, ಬೆರಳ್ಗೆ ಕೊರಳ್, ಕಾನೀನ ಇಂಥ ಪ್ರತಿಪಠ್ಯಗಳು ಪುರಾಣ ಪ್ಲಾಟಿನ ಪುನಾರಚನೆಗಳಾಗಿವೆ. ಚಂದ್ರಹಾಸ, ವಾಲ್ಮೀಕಿಯ ಭಾಗ್ಯ, ಮಹಾರಾತ್ರಿ, ಯಮನ ಸೋಲು ಇಂಥ ಪ್ರತಿ ಪಠ್ಯಗಳೂ ಕೂಡ ಪುರಾಣಗಳ ಪುನಾರಚನೆಯಿಂದಲೇ ಸಂಭವಿಸಿರುವ ಪಠ್ಯಗಳಾಗಿವೆ. ಇವೆಲ್ಲವೂ ಕುವೆಂಪು ಅವರ ನಿರ್ದಿಷ್ಟ ಆಶಯ ಮತ್ತು ವಿಚಾರ ಮಂಡನೆಯ ಪುರಾಣಶರೀರಗಳೂ ಆಗಿವೆ. ಈ ಒಂದೊಂದು ನಾಟಕಗಳೂ ಪ್ರಜಾಪ್ರಭುತ್ವೀಯತೆಯ ಹೊಸ ಬಾಳಿಗೆ ಹೊರಳಿಕೊಳ್ಳುವ ಸಮಾಜದ ಪ್ರಜ್ಞಾವಂತಿಕೆಯ ವಿಚಾರ ಪ್ರತಿಮೆಗಳಾಗಿ ಇವರಲ್ಲಿ ಬೆಳೆದಿವೆ. ಸ್ಮಶಾನ ಕುರುಕ್ಷೇತ್ರ, ನನ್ನ ಗೋಪಾಲದಂಥ ನಾಟಕಗಳು ಪುರಾಣ ಸ್ವೀಕರಣಗಳೂ ಅಲ್ಲದ, ಪುರಾಣ ಪುನಾರಚನೆಗಳೂ ಅಲ್ಲದ ಕಲ್ಪಿತ ಪುರಾಣ ಪ್ಲಾಟುಗಳಾಗಿವೆ. ಇವೆಲ್ಲವೂ ನವೀನ ಪುರಾಣ ನಿರ್ಮಾಣಗಳು. ಜಲಗಾರ, ಬಲಿದಾನಗಳು ಕೂಡ ರಂಗಪ್ರತಿಮೆಗಳೇ ಆಗಿದ್ದು ನವ ಪುರಾಣಗಳಾಗಿವೆ. ವರ್ತಮಾನದ ಪುರಾಣೀಕರಣಗಳಾಗಿವೆ. ಕುವೆಂಪು ರಚಿಸಿರುವ ೧೪ ನಾಟಕಗಳಲ್ಲಿ ಮೇಲ್ನೋಟಕ್ಕೆ ಜಲಗಾರ, ಬಲಿದಾನಗಳು ವರ್ತಮಾನದ ವಸ್ತುವಿನ್ಯಾಸಗಳಂತೆ ಮತ್ತು ಮಿಕ್ಕವು ಪುರಾಣ ವಸ್ತುವಿನ್ಯಾಸಗಳಂತೆ ಕಾಣುತ್ತವಾದರೂ ನಿಜವಾಗಿಯೂ, ಕುವೆಂಪು ಅವರ ಎಲ್ಲ ನಾಟಕಗಳೂ ಪುರಾಣ ವಿನ್ಯಾಸಗಳ ಭಿನ್ನ ಅಭಿವ್ಯಕ್ತಿಗಳೇ ಆಗಿವೆ.

೩

ನಮ್ಮ ನಾಟಕ ಚರಿತ್ರೆಯನ್ನು ಒಂದಿಷ್ಟು ನೋಡಿದರೆ ಅಲ್ಲಿ ವೃತ್ತಿರಂಗಭೂಮಿಯಾಗಲೀ, ಧಾರ್ಮಿಕ-ಜಾನಪದ ರಂಗಭೂಮಿಯಾಗಲೀ, ಎಲ್ಲಾ ಕಡೆಗೂ ಪುರಾಣ ವಸ್ತು ವಿನ್ಯಾಸವೇ ಪ್ರಧಾನವಾಗಿ ವ್ಯಾಪಿಸಿರುವುದನ್ನು ಕಾಣಬಹುದು. ವೃತ್ತಿರಂಗಭೂಮಿ, ನಗರ ಕೇಂದ್ರಿತ ಹವ್ಯಾಸಿ ರಂಗಭೂಮಿ, ಗ್ರಾಮೀಣ ಋತುಮಾನ ರಂಗಭೂಮಿ, ಆಧುನಿಕೋತ್ತರ ರಂಗಭೂಮಿಗಳನ್ನು ನೋಡಿದರೆ ಅಲ್ಲಿ ಸಾಮಾಜಿಕ, ಐತಿಹಾಸಿಕ, ಪೌರಾಣಿಕ ವಸ್ತು ವಿನ್ಯಾಸಗಳ ಆದಾನ ಪ್ರದಾನಗಳು ಪರಸ್ಪರ ಕಲಸಿ ಹೋಗಿರುವುದನ್ನು ಕಾಣಬಹುದು. ನಮ್ಮ ಲಿಪಿಕ ನಾಟಕ ಚರಿತ್ರೆಗಾದರೋ ಏನು ಮಹಾ ಚರಿತ್ರೆಯಿದೆ ? ಅಮ್ಮಮ್ಮಾ ಅಂದರೆ ೧೨೫ ವರ್ಷಗಳ ಚರಿತ್ರೆ ಇರಬಹುದು ಅಷ್ಟೆ. ಆದರೆ ಜಾನಪದ ರಂಗಭೂಮಿಗೆ ಹೋದರೆ ಅಲ್ಲಿ ಅದು ಧಾರ್ಮಿಕ ವಿಧಿ, ಆಚರಣೆ-ಆರಾಧನೆಗಳು ಹುಟ್ಟಿದ ಕಾಲದಿಂದಲೂ ಬೆಳೆದುಬಂದಿರುವುದನ್ನು ಕಾಣಬಹುದು. ನಮ್ಮ ಇಂದಿನ ಹಳ್ಳಿಯ ಅನುಭವಗಳ ಮೂಲಕವೇ ಹೇಳುವುದಾದರೆ ಅಲ್ಲಿನ ಪ್ಲಾಟುಗಳಿಗೆ, ಇತಿಹಾಸ, ಪುರಾಣ, ಸಮಾಜಗಳೆಲ್ಲವೂ ಒಂದೇ; ಅವು ಬೇರೆ ಬೇರೆಯಲ್ಲ. ಕಂಬಾರ, ಲಂಕೇಶ, ಕಾರ್ನಾಡ, ಶಿವಪ್ರಕಾಶರನ್ನು ಉದಾಹರಣೆಗೆ ತೆಗೆದುಕೊಂಡರೂ ಈ ವಿಚಾರ ನಿಜ. ಇವರ ನಾಟಕದ ವಸ್ತು ವಿನ್ಯಾಸಗಳು ಇತಿಹಾಸದಿಂದ ವರ್ತಮಾನಕ್ಕೆ, ವರ್ತಮಾನದಿಂದ ಪುರಾಣಕ್ಕೆ ಇತಿಹಾಸ ಪುರಾಣಗಳ ಆದಿ ಪ್ರತೀಕಗಳಿಂದ ಆಧುನಿಕ ಸಂವೇದನೆಗಳಿಗೆ ಜೀಕುತ್ತಿರುತ್ತವೆ. ಶುದ್ಧ ಸಾಮಾಜಿಕವೆಂಬ, ಪೌರಾಣಿಕವೆಂಬ, ಐತಿಹಾಸಿಕವೆಂಬ ವಿಭಾಗೀಕರಣಗಳು ನಮ್ಮಲ್ಲಿದ್ದರೂ ಅವೆಲ್ಲವೂ ಅಂತಿಮವಾಗಿ ಸಾಮಾಜಿಕ ನಾಟಕಗಳೇ. ಏನೇ ಆಗಲಿ, ನಾಟಕ ಚರಿತ್ರೆಯಲ್ಲಿ ಮತ್ತೆ ಮತ್ತೆ ವರ್ತಮಾನದ ವಿವೇಕವು ಪುರಾಣ ಪ್ರತೀಕಗಳಿಗೆ ಲಗ್ಗೆ ಹಾಕುವ ಮೂಲಕ ಪ್ರಕಟವಾಗಿರುವುದಂತೂ ಢಾಳಾಗಿ ಕಾಣುತ್ತದೆ. ನಮ್ಮಲ್ಲಿ ಪುರಾಣ, ಚರಿತ್ರೆ, ಜಾನಪದ, ಫ್ಯಾಂಟಸಿ, ಸಾಮಾಜಿಕ ಹೀಗೆ ಯಾವುದೇ ವಸ್ತು ವಿನ್ಯಾಸವಾದರೂ ಅವೆಲ್ಲವೂ ವರ್ತಮಾನದ ಚಿಕಿತ್ಸೆಗೆಂದೇ ನಾಟಕದ ರೂಪ ತಾಳುತ್ತವೆ. ನಮ್ಮ ನಾಟಕ ಚರಿತ್ರೆಯಲ್ಲಿ ಈ ಎಲ್ಲವುಗಳ ನಡುವಿನ ಗೆರೆ ಬಲು ತೆಳುವು. ಕುವೆಂಪು ಕೂಡ ಇದಕ್ಕೆ ಹೊರತಲ್ಲ.

ರಾಮಲಿಂಗಪ್ಪ ಟಿ. ಬೇಗೂರು
ಉಪನ್ಯಾಸಕ, ಸರ್ಕಾರಿ ಬಾಲಕರ ಕಾಲೇಜು, ಕೋಲಾರ - ೫೬೩ ೧೦೧

# ಕನಸಲ್ಲಿ ಕಂಡ ಟಿಪ್ಪೂ ಸುಲ್ತಾನ್



-ರಾಮದಾಸ ಪ್ರಭು

ಮರುದಿನ ವಿದ್ಯಾರ್ಥಿಗಳಿಗೆ ಟಿಪ್ಪೂ ಬಗ್ಗೆ ಉಪನ್ಯಾಸ ನೀಡಬೇಕಿತ್ತು. ಅದಕ್ಕಾಗಿ ಹಿಂದಿನ ದಿನ ರಾತ್ರಿ ತಯಾರಿ ಮಾಡುತ್ತಿದ್ದೆ. ಎಷ್ಟೊಂದು ಬಗೆಯ ಗೊಂದಲ, ವಾದ, ವಿವಾದಗಳು ಟಿಪ್ಪೂ ಬಗ್ಗೆ! ಕೆಲವರು ಟಿಪ್ಪೂ ಹಿಂದು ಧರ್ಮದ ಅಭಿಮಾನಿ ಎನ್ನುತ್ತಾರೆ. ಮತ್ತೆ ಕೆಲವರಿಗೆ ಟಿಪ್ಪೂ ಹಿಂದೂ ವಿರೋಧಿ. ಇನ್ನುಳಿದವರು ಟಿಪ್ಪೂ ಜಾತ್ಯತೀತ ಮನೋಭಾವವುಳ್ಳ ಆಧುನಿಕನೆನ್ನುತ್ತಾರೆ. ಕೆಲವರು ಟಿಪ್ಪೂ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಿ ಎಂದರೆ ಇನ್ನು ಕೆಲವರು ಇವನನ್ನು ಸ್ವಾರ್ಥಿ ಎನ್ನುವವರು. ಕನ್ನಡ ಪ್ರೇಮಿಗಳಿಗೆ ಟಿಪ್ಪೂ ಕನ್ನಡ ವಿರೋಧಿ ಎಂಬ ಭಾವನೆ. ಈ ಎಲ್ಲಾ ವಾದ ವಿವಾದಗಳಿಗೂ ಇತಿಹಾಸಕಾರರಲ್ಲಿ ಐತಿಹಾಸಿಕ ದಾಖಲೆಗಳಿಗೇನೂ ಕಡಿಮೆ ಇಲ್ಲ. ನನಗಂತೂ ಗೊಂದಲವೇ ಗೊಂದಲ. ಮರುದಿನ ವಿದ್ಯಾರ್ಥಿಗಳಿಗೆ ಏನೆಂದು ಹೇಳಲಿ ? ಮನಸ್ಸಿನಲ್ಲಿ ಒಂದು ಯೋಚನೆ ಬಂತು: ಈ ಇತಿಹಾಸಕಾರರನ್ನೆಲ್ಲಾ ಬಿಟ್ಟು ಟಿಪ್ಪೂ ಸುಲ್ತಾನನೇ ಒಂದೊಮ್ಮೆ ಮಾತುಕತೆಗೆ ದೊರೆತರೆ ಈ ಗೊಂದಲಗಳಿಗೆ ಉತ್ತರ ದೊರಕಬಹುದಲ್ಲ ಎಂದು. ಅಷ್ಟರಲ್ಲೇ ಮಧ್ಯರಾತ್ರಿಯಾಗಿತ್ತು. ಅಲ್ಲೇ ಮಂಪರು ಹತ್ತಿತು.

ಆಶ್ಚರ್ಯ! ನನ್ನ ಕಣ್ಣ ಮುಂದೆ ಒಬ್ಬ ಸುಲ್ತಾನ. ಅವರ ಚಿತ್ರಪಟವನ್ನು ನೋಡಿದ್ದ ನನಗೆ ಇವರೇ ಟಿಪ್ಪೂ ಎಂದು ತಿಳಿಯಿತು. ಮಾತನಾಡಿಸಲೇ ? ಕೊನೆಗೂ ಧೈರ್ಯ ಮಾಡಿ 'ಸುಲ್ತಾನರಿಗೆ ವಂದನೆಗಳು' ಎಂದೆ. ಯಾರು ನೀನು ಎಂದು ಕೇಳಿದರು. ನಾನೊಬ್ಬ ಇತಿಹಾಸ ಉಪನ್ಯಾಸಕ ಎಂದೆ.

ಸುಲ್ತಾನರಿಗೆ ನನ್ನ ಬಗ್ಗೆ ತಿರಸ್ಕಾರಭಾವ ಹುಟ್ಟಿದಂತೆ ಕಂಡಿತು. ಅವರೆಂದರು – ನೀವು ಇತಿಹಾಸ ಕಾರರು ನನ್ನ ಹೆಸರು ಕೆಡಿಸಿದ್ದೀರಿ. ನನ್ನ ಕಾಲದಲ್ಲೂ ನನ್ನನ್ನು ಅರ್ಥ ಮಾಡಿಕೊಳ್ಳಲಿಲ್ಲ. ಈಗ ಎರಡು ಶತಮಾನಗಳ ನಂತರವೂ ನನ್ನನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಎಂಬುದು ಬೇಸರದ ಸಂಗತಿ.

ಹೌದು ಸುಲ್ತಾನರೇ, ನಿಮ್ಮ ಬಗ್ಗೆ ಇರುವ ಸಂಶಯಗಳಿಗೆಲ್ಲಾ ಉತ್ತರ ಸಿಗಬಹುದು ಎಂದು ನಿಮ್ಮ ಬಳಿ ಬಂದೆ. ನೀವು ಸಹಾಯ ಮಾಡಬೇಕು ಎಂದೆ.

ಆಗ ಸುಲ್ತಾನರು ನನಗೂ ಬಹಳ ಸಮಯದಿಂದ ನನ್ನ ಬಗ್ಗೆ ಹುಟ್ಟಿದ ಹಲವು ವಿವಾದಗಳಿಗೆ ಉತ್ತರಿಸಬೇಕೆಂದು ಇಚ್ಛೆ ಇತ್ತು ಎಂದರು.

ನನ್ನ ಸಂಶಯ ಪರಿಹರಿಸಿಕೊಳ್ಳಲು ಇದೇ ಸಮಯವೆಂದು ತಿಳಿದು ನಾನು ಮಾತು ಮುಂದುವರಿಸಿದೆ.

ಸುಲ್ತಾನರೇ, ಬ್ರಿಟೀಷರ ವಿರುದ್ಧ ಪ್ರಾಣವನ್ನೇ ಪಣವಾಗಿಟ್ಟು ಹೋರಾಡಿದವರು ನೀವು. ನಿಮ್ಮನ್ನು ಕೆಲವರು ಪ್ರಥಮ ಸ್ವಾತಂತ್ರ್ಯ ಸಂಗ್ರಾಮಿ ಎಂದೂ ಇನ್ನು ಕೆಲವರು ಸ್ವಾರ್ಥಿ ಎಂದೂ ಆಪಾದಿಸುತ್ತಾರೆ, ಇದಕ್ಕೆ ನೀವೇನು ಹೇಳುತ್ತೀರಿ ? ಎಂದೆ.

ನೋಡಿ ನಿಮ್ಮ ಇತಿಹಾಸಕಾರರಲ್ಲಿ ಒಂದು ದೋಷವಿದೆ. ಅವರು ತಮ್ಮ ವರ್ತಮಾನದ ದೃಷ್ಟಿಕೋನ ದಿಂದಲೇ ನನ್ನನ್ನು ಅಳೆಯುತ್ತಾರೆ. ನಾನಿದ್ದ ೧೮ನೇ ಶತಮಾನದ ಪರಿಸ್ಥಿತಿ ಮತ್ತು ದೃಷ್ಟಿಕೋನವೇ ಬೇರೆ. ನನಗಿದ್ದ ಪ್ರಬಲ ಮೂವರು ಶತ್ರುಗಳಲ್ಲಿ ಬ್ರಿಟಿಷರು ಮೊದಲಿಗರು. ಅವರು ದುಷ್ಟರು, ವಂಚಕರು ಹಾಗೆಯೇ ತಾಂತ್ರಿಕತೆಯಲ್ಲಿ ಮುಂದುವರಿದವರೂ ಆಗಿದ್ದರು. ನಮ್ಮ ತಂದೆಗೆ ಅವರಿಂದ ದ್ರೋಹವಾಗಿತ್ತು. ನಮ್ಮ ರಾಜ್ಯದ ರಕ್ಷಣೆಗೆ ಬ್ರಿಟಿಷರನ್ನು ನಿಗ್ರಹಿಸುವುದು ನನಗೆ ಅಗತ್ಯವಾಗಿತ್ತು. ನಾನು ಹೋರಾಡಿದ್ದು ನನ್ನ ರಾಜ್ಯದ ರಕ್ಷಣೆಗಾಗಿ. 'ರಾಷ್ಟ್ರೀಯತೆ' ಎಂಬ ನಿಮ್ಮ ಆಧುನಿಕ ಪರಿಕಲ್ಪನೆ ನನ್ನ ಕಾಲದಲ್ಲಿರಲಿಲ್ಲ. ಇಪ್ಪತ್ತನೇ ಶತಮಾನದಲ್ಲಿ ಮಹಾತ್ಮಾ ಗಾಂಧಿ ನಡೆಸಿದ ಸ್ವಾತಂತ್ರ್ಯ ಚಳುವಳಿ ನನ್ನ ಮಾದರಿಯದಲ್ಲ. ನನ್ನ ಕಾಲದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಎಂದರೆ ನಮ್ಮ ರಾಜ್ಯದ ರಕ್ಷಣೆಗಾಗಿ ಹೋರಾಡುವುದು. ನನ್ನ ಕಾಲದ ದೊರೆಗಳೆಲ್ಲಾ ಮಾಡಿದ್ದು ಇದನ್ನೇ. ನನ್ನ ಕಾಲದಲ್ಲಿ ಇಲ್ಲದ ಸಿದ್ಧಾಂತಗಳಿಗಾಗಿ ನಾನು ಹೋರಾಟ ಮಾಡಲು ಹೇಗೆ ಸಾಧ್ಯ ಹೇಳಿ? ಭಾರತ ಸ್ವಾತಂತ್ರ್ಯ ಪಡೆದ ನಂತರ ಇತಿಹಾಸಕಾರರು ಬ್ರಿಟಿಷರೊಂದಿಗೆ ಹೋರಾಟ ಮಾಡಿದವರನ್ನೆಲ್ಲಾ ರಾಷ್ಟ್ರೀಯ ಹೋರಾಟಗಾರರ ಸಾಲಿಗೆ ಸೇರಿಸಿದರು. ಆಗ ನನ್ನನ್ನೂ ಆ ಸಾಲಿಗೆ ಸೇರಿಸಿರಬೇಕು ಎಂದು ಸುಲ್ತಾನರು ಮಾತು ಮುಗಿಸಿದರು.

ನಿಮ್ಮ ತಂದೆಯವರು ಮೈಸೂರು ಅರಸರ ರಕ್ಷಕರೆಂದುಕೊಂಡು ಆಡಳಿತದಲ್ಲಿ ಹೆಚ್ಚೇನೂ ಬದಲಾವಣೆ ಮಾಡದೆ ಅಧಿಕಾರ ಚಲಾಯಿಸಿದರು. ಆದರೆ ನೀವು 'ರಾಜ್ಯ'ವನ್ನು ಹೆಚ್ಚು ಹೆಚ್ಚು ಇಸ್ಲಾಮೀಕರಣಗೊಳಿಸಿದಿರಿ ಮತ್ತು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳನ್ನು ಕನ್ನಡದ ಮೇಲೆ ಹೇರಿದಿರೆಂದು ನಿಮ್ಮನ್ನು ಟೀಕಿಸುತ್ತಾರೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು? ಎಂದು ನಾನು ಕೇಳಿದೆ.

ನನ್ನ ಕಾಲದ ಚಿಕ್ಕ ಪುಟ್ಟ ಮುಸ್ಲಿಂ ಅರಸರೆಲ್ಲಾ ಮುಘಲರ ಉತ್ತರಾಧಿಕಾರಿಗಳೆಂದು ತಮ್ಮ ಸ್ಥಾನವನ್ನು ಸಮರ್ಥಿಸಿಕೊಳ್ಳುತ್ತಿದ್ದರು. ಆದರೆ ನನ್ನ ಕಣ್ಣೆದುರಿಗೇ ಮುಘಲರ ಪತನವಾಗಿತ್ತು. ಆದುದರಿಂದ ಮುಘಲರ ಬಗ್ಗೆ ನನಗೇನೂ ವಿಶೇಷ ಆಕರ್ಷಣೆ ಉಳಿದಿರಲಿಲ್ಲ. ನನ್ನ ತಂದೆ ಮೈಸೂರು ಒಡೆಯರ್ ಆಶ್ರಯದಲ್ಲಿ ಬೆಳೆದವರು. ಅವರು ಮೈಸೂರು ಸಂಸ್ಥಾನದ ರಕ್ಷಕರೆಂದುಕೊಂಡೇ ಜನ ಬೆಂಬಲ ಪಡೆದು ಆಡಳಿತ ನಡೆಸಿದರು. ನಾನು ಮಹತ್ವಾಕಾಂಕ್ಷಿ ಕೂಡ. ಒಡೆಯರ್ ವಂಶದ ರಕ್ಷಕನೆಂದು ಕರೆಸಿಕೊಳ್ಳಲು ನನಗಿಷ್ಟವಿರಲಿಲ್ಲ. ಬಹುಸಂಖ್ಯಾತ ಹಿಂದುಗಳಿರುವ ಮೈಸೂರು ಸಂಸ್ಥಾನಕ್ಕೆ ನನ್ನದೇ ರಾಜ್ಯದ ಅಸ್ತಿತ್ವ ಮೂಡಿಸಿ ಒಡೆಯರ್ ವಂಶದ ನೆನಪನ್ನು ಅಳಿಸುವುದು ನನ್ನ ಉದ್ದೇಶ. ಇದಕ್ಕಾಗಿ ನಾನು ಹೊಸ ಇಸ್ಲಾಮಿ ರಾಜ್ಯದ ಪರಿಕಲ್ಪನೆಗಳನ್ನು ಬಳಸಿಕೊಳ್ಳತೊಡಗಿದೆ. ಇದರ ಹಿಂದಿರುವುದು ಶುದ್ಧ ರಾಜಕೀಯ ಉದ್ದೇಶ. ಹಾಗೆಯೇ ನನ್ನ ರಾಜ್ಯದಲ್ಲಿರುವ ಇಸ್ಲಾಮಿನ ಮತ ಪಂಡಿತರನ್ನು ಓಲೈಸಿ ಅವರ ಬೆಂಬಲ ಗಳಿಸುವುದು ಕೂಡ ನನ್ನ ಗುರಿ. ಟರ್ಕಿ, ಅಫಘಾನಿಸ್ತಾನ ಮುಂತಾದ ಸುಲ್ತಾನರೊಂದಿಗೆ ಪತ್ರ ವ್ಯವಹಾರ ಮಾಡುವಾಗ ನಾನೊಬ್ಬ ಇಸ್ಲಾಮಿನ ರಕ್ಷಕನೆಂದು ಅವರಿಗೆ ಮನವರಿಕೆ ಮಾಡಿ ಅವರ ಅನುಕಂಪ ಗಳಿಸಿ ಅವರ ಸಹಾಯ ಪಡೆಯುವುದು ನನ್ನ ಉದ್ದೇಶವಾಗಿತ್ತು. ಅಧಿಕಾರದಲ್ಲಿರುವವರಿಗೆ ಅನೇಕ ಒತ್ತಡಗಳಿರುತ್ತವೆ. ಎಷ್ಟೋ ಸಂದರ್ಭಗಳಲ್ಲಿ ನನಗೆ ನನ್ನ ಇಚ್ಛೆಯಂತೆ ನಡೆದುಕೊಳ್ಳಲಾಗಲಿಲ್ಲ. ನಾನು ಮಾಡಿರುವುದೆಲ್ಲಾ ನನ್ನ ಇಚ್ಛೆಯಲ್ಲ, ಅದು ನನ್ನ ರಾಜಕೀಯ ಅವಶ್ಯಕತೆ ಎಂದು ನೀವು ತಿಳಿದುಕೊಳ್ಳಬೇಕು. ಭಾಷೆಗಳ ಬಗ್ಗೆ ನನ್ನ ಕಾಲದಲ್ಲೇನೂ ಜನರಲ್ಲಿ ಉದ್ವೇಗವಿರಲಿಲ್ಲ. ಭಾಷಾ ಚಳುವಳಿ, ಭಾಷಾವಾರು ಪ್ರಾಂತಗಳನ್ನು ಮಾಡಿಕೊಂಡಿರುವ ನಿಮ್ಮಂಥ ಆಧುನಿಕರಿಗೆ ಇಂಥ ಪ್ರಶ್ನೆಗಳೇಳುವುದು ಸಹಜ. ಇವು ನನ್ನ ಕಾಲದಲ್ಲಿ ಪ್ರಶ್ನೆಗಳೇ ಆಗಿರಲಿಲ್ಲ ಎಂದರು ಟಿಪ್ಪೂ.

ಸುಲ್ತಾನರೇ, ನೀವು ಶೃಂಗೇರಿ, ಶ್ರೀರಂಗಪಟ್ಟಣ, ನಂಜನಗೂಡು ಮುಂತಾದ ದೇವಾಲಯಗಳಿಗೆ ದಾನ, ಧರ್ಮ ಮಾಡಿದ್ದನ್ನು ಉಲ್ಲೇಖಿಸಿ ಕೆಲವರು ನಿಮ್ಮನ್ನು ಹಿಂದು ಧರ್ಮದ

ಅಭಿಮಾನಿ ಎಂದೂ ಜಾತ್ಯತೀತರೆಂದೂ ಪ್ರಶಂಸಿಸುತ್ತಾರೆ. ಹಾಗೆಯೇ ಕೊಡಗು, ಮಂಗಳೂರು ಮತ್ತು ಮಲಬಾರ್‌ನಲ್ಲಿ ಕೊಡವರನ್ನು, ಕ್ರೈಸ್ತರನ್ನು ಮತ್ತು ನಾಯರ್ ಮುಖ್ಯಸ್ಥರನ್ನು ದಂಡಿಸಿ, ಹಿಂಸಿಸಿ, ಮತಾಂತರ ಮಾಡಿದ್ದನ್ನು ಉಲ್ಲೇಖಿಸಿ ನೀವು ಪರಮತ ದ್ವೇಷಿಗಳೆಂದೂ ಟೀಕಿಸುತ್ತಾರೆ. ಈ ತರಹದ ಪರಸ್ಪರ ವಿರುದ್ಧವಾದ ನಿಮ್ಮ ನಡವಳಿಕೆಯನ್ನು ಹೇಗೆ ಸಮರ್ಥಿಸಿಕೊಳ್ಳುತ್ತೀರಿ ಎಂದು ಕೇಳಿದೆ.

ನಿಮ್ಮ ಈ ಅಭಿಪ್ರಾಯಗಳಿಗೆಲ್ಲಾ ನೀವು ನೆಚ್ಚಿಕೊಂಡಿರುವ ಆಧುನಿಕ ರಾಜಕೀಯ ಸಿದ್ಧಾಂತಗಳು ಮತ್ತು ಪರಿಕಲ್ಪನೆಗಳೇ ಕಾರಣ. ನನ್ನ ವೈಯಕ್ತಿಕ ಧಾರ್ಮಿಕ ಒಲವುಗಳು ಏನೇ ಇರಲಿ ನಾನು ಅಧಿಕಾರದಲ್ಲಿದ್ದದ್ದು ಅತ್ಯಂತ ಸಂಕೀರ್ಣ ಮತ್ತು ಸಂದಿಗ್ಧ ರಾಜಕೀಯ ಪರಿಸ್ಥಿತಿಯಲ್ಲಿ. ಆಗ ನಾನು ನನ್ನ ಅಧಿಕಾರ ಮತ್ತು ರಾಜ್ಯವನ್ನು ಉಳಿಸುವುದ ಕ್ಕೋಸ್ಕರ ಕ್ಷಣ ಕ್ಷಣಕ್ಕೆ ಎದುರಾಗುವ ಪರಿಸ್ಥಿತಿಗೆ ಹೇಗೆ ಬೇಕೊ ಹಾಗೆ ವರ್ತಿಸ ಬೇಕಾಗುತ್ತಿತ್ತು. ಆದ್ದರಿಂದ ನನ್ನ ನೀತಿಯಲ್ಲಿ ನಿಮಗೆ ವೈರುಧ್ಯಗಳು ಕಾಣಸಿಗುತ್ತವೆ.

ನನ್ನ ರಾಜ್ಯದಲ್ಲಿ ಬಹುಸಂಖ್ಯಾತ ಪ್ರಜೆಗಳು ಹಿಂದುಗಳು. ಅವರ ಪ್ರೀತಿ, ಗೌರವ, ನಿಷ್ಠೆ ಸಂಪಾದಿಸುವುದು ನನ್ನ ಅಗತ್ಯತೆ. ಅದಕ್ಕೆ ಬೇಕಾದುದನ್ನೆಲ್ಲಾ ಮಾಡಿದ್ದೇನೆ. ನನ್ನ ಶತ್ರುಗಳಾದ ಮರಾಠರು ಶೃಂಗೇರಿ ಮಠವನ್ನು ಲೂಟಿ ಮಾಡಿದಾಗ ನಾನು ನನ್ನ ಹಿಂದೂ ಪ್ರಜೆಗಳ ಒಲವು ಗಳಿಸಲು ಮಾಡಬೇಕಾದ್ದನ್ನು ಮಾಡಿದೆ. ಮತ್ತು ನೀವು ಹೇಳಿದ ಜಾತ್ಯತೀತ ಸಿದ್ಧಾಂತ ನನ್ನ ಕಾಲದಲ್ಲಿ ಹಿಂದುಸ್ತಾನದಲ್ಲೇ ಇರಲಿಲ್ಲ. ಇದು ಪಶ್ಚಿಮದಿಂದ ಬಂದ ಆಧುನಿಕ ಪರಿಕಲ್ಪನೆ. ನನಗೆ ಸಾರ್ವಜನಿಕ ಜೀವನದಲ್ಲಿ ಧರ್ಮಕ್ಕಿಂತ ರಾಜಕೀಯವೇ ಪ್ರಧಾನ. ರಾಜಕೀಯಕ್ಕೆ ಪೂರಕವಾದ ಧಾರ್ಮಿಕ ನೀತಿ ಅನುಸರಿಸುವುದು ನನ್ನ ಉದ್ದೇಶ.

ಕೊಡಗು, ಮಂಗಳೂರು ಮತ್ತು ಮಲಬಾರ್ ನಾನು ವಶಪಡಿಸಿಕೊಂಡ ಪ್ರಾಂತಗಳು. ಅಲ್ಲಿನ ಪ್ರಜೆಗಳು ನನಗೆ ನಿಷ್ಠಾವಂತರಾಗಿರಲಿಲ್ಲ. ಅಲ್ಲದೇ ನನ್ನ ಶತ್ರುಗಳಾದ ಬ್ರಿಟಿಷರೊಡನೆ ಸಹಕರಿಸಿದ್ದರು. ಅಲ್ಲಿನ ಪ್ರಜೆಗಳ ಪ್ರೀತಿ, ನಿಷ್ಠೆ ಗೆಲ್ಲುವ ಯೋಚನೆಯೂ ನನಗಿರಲಿಲ್ಲ. ಮಂಗಳೂರಿನ ಕ್ರೈಸ್ತರು ಬ್ರಿಟಿಷರಿಗೆ ಪರೋಕ್ಷವಾಗಿ ಸಹಾಯ ಮಾಡಿದ್ದು ತಿಳಿದಾಕ್ಷಣ ಅವರನ್ನು ಶಿಕ್ಷಿಸಿ ಮತಾಂತರ ಮಾಡಿದ್ದು ನಿಜ. ಇಲ್ಲಿ ಅವರ ಧರ್ಮ ನನ್ನ ದ್ವೇಷಕ್ಕೆ ಕಾರಣವಲ್ಲ, ಅವರ ರಾಜಕೀಯ ಒಲವು ನನ್ನ ಸಿಟ್ಟಿಗೆ ಕಾರಣವಾಗಿತ್ತು. ಆದರೆ ವ್ಯಾಪಾರಿಗಳಾಗಿ, ಪ್ರವಾಸಿಗಳಾಗಿ, ಅಥವಾ ಫ್ರೆಂಚರಂತೆ ಮಿತ್ರರಾಗಿ ಬಂದ ಕ್ರೈಸ್ತರ ಬಗ್ಗೆ ನನಗೇನೂ ಪೂರ್ವಗ್ರಹವಿರಲಿಲ್ಲ. ಹಾಗೆಯೇ ಕೊಡವರು ಮತ್ತು ಮಲಬಾರಿನ ನಾಯರ್ ಮುಖ್ಯಸ್ಥರು ಮಹಾ ಹಠಮಾರಿಗಳು. ಇವರು ನಮಗೆ ಶಾಶ್ವತ ಸವಾಲಾಗಿದ್ದು ಬ್ರಿಟಿಷರೊಂದಿಗೆ ಸೇರಿಕೊಂಡಿದ್ದರು. ಇವರು ಯುದ್ಧದಲ್ಲಿ ಮಾತ್ರ ಸೋಲುವುದಲ್ಲದೇ ತಮ್ಮ 'ಪ್ರತ್ಯೇಕ ಅಸ್ತಿತ್ವ'ವನ್ನು ಕಳೆದುಕೊಳ್ಳ ಬೇಕೆಂದು ಕ್ರೂರವಾಗಿ ಅವರನ್ನು ದಂಡಿಸಿದ್ದು ನಿಜ. ರಾಜದ್ರೋಹವನ್ನು ಯಾವ ರಾಜ ತಾನೇ ಸಹಿಸಿಕೊಳ್ಳಬಲ್ಲ ಹೇಳಿ? ಇದನ್ನೇ ಆಧರಿಸಿ ನನ್ನನ್ನು ಪರಮತ ದ್ವೇಷಿ ಅನ್ನುತ್ತಾರೆ. ಆದರೆ ಇಲ್ಲಿ ಕೂಡ ನನ್ನ ಉದ್ದೇಶ ಸ್ಪಷ್ಟವಾಗಿಯೇ ಇದೆ. ಮರಾಠರು ಶೃಂಗೇರಿಯನ್ನು ಲೂಟಿಮಾಡಿ, ಮಠದಿಂದ ಲಕ್ಷಾಂತರ ರೂಪಾಯಿ ದೋಚಲಿಲ್ಲವೇ? ಮರಾಠರು 'ಹಿಂದು ಪದ ಪಾದಶಾಹಿ' ಎಂದು ಬಿರುದು ಇಟ್ಟುಕೊಂಡು ಈ ಕೆಲಸ ಮಾಡಲಿಲ್ಲವೇ? ಇದು ಶತ್ರುರಾಜ್ಯದಲ್ಲಿ ಆ ಕ್ಷಣಕ್ಕೆ ಅವರು ಅನುಸರಿಸಿದ ನೀತಿ. ಹದಿನೆಂಟನೇ ಶತಮಾನದ ರಾಜನೀತಿಯಲ್ಲಿ ಒಂದೇ ಸಿದ್ಧಾಂತಕ್ಕೆ ಕಟ್ಟುಬಿದ್ದಿರುವುದು ಸಾಧ್ಯವಿರಲಿಲ್ಲ. ಕಾಲ, ದೇಶ, ಪರಿಸ್ಥಿತಿಗೆ ಅನುಗುಣವಾಗಿ ನಾವು ಪ್ರತಿಕ್ರಿಯಿಸ ಬೇಕಾಗುತ್ತಿತ್ತು ಎಂಬುದನ್ನು ನೀವು ತಿಳಿದುಕೊಳ್ಳಬೇಕು ಎಂದು ಮಾತು ನಿಲ್ಲಿಸಿದರು.

ಸುಲ್ತಾನರ ಮಾತು ನನ್ನ ಮನಮುಟ್ಟುವಂತೆ ಇತ್ತು. ನನ್ನ ಹಲವು ಸಂದೇಹಗಳಿಗೆ ಅಲ್ಲಿ ಉತ್ತರವಿತ್ತು. ಕೊನೆಯದಾಗಿ ಕೇಳಿದೆ: ಸುಲ್ತಾನರೇ, ಇತಿಹಾಸಕಾರರ ಬಗ್ಗೆ ನಿಮಗೆ ತಿರಸ್ಕಾರ ಭಾವನೆ ಇದ್ದಂತೆ ಇದೆಯಲ್ಲಾ ಯಾಕೆ?

''ನನಗೆ ಇತಿಹಾಸಕಾರರ ಬಗ್ಗೆ ಬೇಸರವಿದೆ ನಿಜ. ನನ್ನ ಕಾಲದಲ್ಲಿ ಇತಿಹಾಸಕಾರ ರೆಂದರೆ ಹೊಗಳುಭಟರು. ರಾಜನ ಅಪೇಕ್ಷೆಯಂತೆ ಇತಿಹಾಸದ ರಚನೆ. ನಿಮ್ಮ ಕಾಲದಲ್ಲಿ ರಾಜ ಮಹಾರಾಜರಿಲ್ಲ. ಆದರೆ ಸಮಾಜದ ವಿವಿಧ ಶಕ್ತಿಗಳು, ಸಿದ್ಧಾಂತಗಳು ಇತಿಹಾಸಕಾರರನ್ನು ವಸ್ತುನಿಷ್ಠವಾಗಿ ಬರೆಯಲು ಬಿಡುತ್ತಿಲ್ಲ. ಐತಿಹಾಸಿಕ ವ್ಯಕ್ತಿಗಳೆಲ್ಲಾ ಆಧುನಿಕ ಸಿದ್ಧಾಂತ ಮತ್ತು ಪರಿಕಲ್ಪನೆಗಳಿಗೆ ಸರಿಯಾಗಿ ನಡೆದುಕೊಳ್ಳಬೇಕಿತ್ತೆಂದು ನೀವು ಬಯಸುವುದು ತಪ್ಪು. ಇತಿಹಾಸಕಾರ ಕೇವಲ ಗತಕಾಲವನ್ನು ಹೊಗಳುವುದು ಅಥವಾ ತೆಗಳುವುದರಲ್ಲಿ ತೊಡಗುವುದಕ್ಕಿಂತ ಗತಕಾಲವನ್ನು ವಿಶ್ಲೇಷಿಸಿ ಅರ್ಥ ಮಾಡಿಕೊಳ್ಳಬೇಕು. ಐತಿಹಾಸಿಕ ವ್ಯಕ್ತಿಗಳ ವ್ಯಕ್ತಿತ್ವ ಬಹಳ ಸಂಕೀರ್ಣವಾದದ್ದು. ಇಲ್ಲಿ 'ನಾಯಕ' ಮತ್ತು 'ಖಳನಾಯಕ'ರಂತಹ ಸರಳ ಪಾತ್ರಗಳಿಲ್ಲ. ಪ್ರತಿಯೊಬ್ಬನ ವ್ಯಕ್ತಿತ್ವವೂ ಬಹು ಸಂಕೀರ್ಣ. ಐತಿಹಾಸಿಕ ಘಟನೆಗಳಲ್ಲಿ ಕೆಲವಕ್ಕೆ 'ನಾವು' ಮತ್ತು ಇನ್ನು ಕೆಲವಕ್ಕೆ 'ನೀವು' ಜವಾಬ್ದಾರರು ಎಂದು ಹೇಳಿಕೊಳ್ಳುವುದು ಅತಾರ್ಕಿಕ. ಇತಿಹಾಸವನ್ನು ಚರ್ಚಿಸುವಾಗ ಅತೀವ ಉತ್ಸಾಹ ಅಥವಾ ಅತೀವ ಕ್ರೋಧ ತಾಳಿದರಂತೂ 'ಸತ್ಯದರ್ಶನ' ವಾಗುವುದು ಸಾಧ್ಯವಿಲ್ಲ'' ಎಂದು ಸುಮ್ಮನಾದರು.

ಮರುದಿವಸ ಬೆಳಿಗ್ಗೆ ಎಚ್ಚರಗೊಂಡಾಗ ತಿಳಿಯಿತು ಟಿಪ್ಪೂ ಸುಲ್ತಾನರೊಂದಿಗೆ ನಾನು ನಡೆಸಿದ ಸಂಭಾಷಣೆ ಕನಸಿನಲ್ಲಿ ಎಂದು. ಕನಸೇ ವಾಸ್ತವಕ್ಕೆ ತುಂಬಾ ಹತ್ತಿರ ಇದ್ದಂತೆ ಕಂಡಿತು. ಟಿಪ್ಪೂ ಬಗ್ಗೆ ನನಗಿದ್ದ ಸಂದೇಹಗಳು ನಿವಾರಣೆಯಾಗಿದ್ದವು. ಆದರೆ ಒಂದು ಹೊಸ ಸಂದೇಹ ಪುನಃ ಕಾಡತೊಡಗಿತು. ವಿದ್ಯಾರ್ಥಿಗಳಿಗೆ ನನ್ನ ಕನಸಿನ ವಿಷಯ ತಿಳಿಸಲೇ? ತಿಳಿಸಿದರೆ ಅಪಹಾಸ್ಯಕ್ಕೊಳಗಾದರೆ? ಇದನ್ನೇ ಯೋಚಿಸುತ್ತಾ ಮರುದಿನದ ತರಗತಿಯತ್ತ ನಡೆದೆ...

ರಾಮದಾಸ ಪ್ರಭು, ಸಿಂಗನಕೋಡಿ
ಇತಿಹಾಸ ಉಪನ್ಯಾಸಕರು, ಆಳ್ವಾಸ್ ಕಾಲೇಜು, ಮೂಡಬಿದರೆ

# ಮಂಜುಳಗಾನ



**ಚ**ಲನಚಿತ್ರ ಗೀತೆಗಳು ನಿರ್ಮಿಸುವ ಮೋಹಕ ಪ್ರಪಂಚದಲ್ಲಿ ತರುಣ-ತರುಣಿಯರು ವಿಹರಿಸುವುದು, ತಾವೇ ನಾಯಕ (ನಾಯಕಿ) ಎಂದು ಭಾವಿಸುವುದು ಸರ್ವೇ ಸಾಮಾನ್ಯ. ನಾನು, ನೀವು ಅದಕ್ಕೆ ಹೊರತಲ್ಲ. ಆದರೆ ಮಧ್ಯವಯಸ್ಸು ದಾಟಿದ ಮೇಲೂ, ನಮ್ಮ ಮೇಲೆ ನಿಜಕ್ಕೂ ಪ್ರಭಾವ ಬೀರಿದ, ಅಚ್ಚಳಿಯದ ಪರಿಣಾಮ ಮಾಡಿದ, ನಮ್ಮ ಹೃದಯವನ್ನು ಸೂರೆಗೊಂಡ ಚಲನಚಿತ್ರ ಗೀತೆಗಳು, ಎಲ್ಲೋ ಹತ್ತಾರು ಮಾತ್ರ.

ನಮ್ಮ ಶ್ರೇಷ್ಠ ಕವಿಗಳು ರಚಿಸಿದ ಭಾವಗೀತೆಗಳು ಕನ್ನಡ ಚಲನಚಿತ್ರದಲ್ಲಿ ಸಮರ್ಥವಾಗಿ ಬಳಕೆಯಾದಾಗ ಅವು ನಮ್ಮ ಹೃದಯವನ್ನು ಸೆರೆಹಿಡಿದಿವೆ. ನಾವು ಹೈಸ್ಕೂಲ್, ಕಾಲೇಜುಗಳಲ್ಲಿ ಓದುತ್ತಿದ್ದಾಗ ನೋಡಿದ, ಕೆಲವು ಇಂಥ ಚಲನಚಿತ್ರ ಗೀತೆಗಳು ಇಂದಿಗೂ ಕಿವಿಗೆ ಬಿದ್ದಾಗ ಮಧುರಾನುಭೂತಿ ಉಂಟಾಗುತ್ತದೆ. ನಾವು ಸಣ್ಣವರಿದ್ದಾಗ ನಮಗಿದ್ದ ರುಚಿ-ಅಭಿರುಚಿಗೂ, ಇಂದಿನವರದಕ್ಕೂ ಅಗಾಧವಾದ ವ್ಯತ್ಯಾಸವಿದೆ. ನಮಗೆ ಪಂಚಪ್ರಾಣವಾಗಿದ್ದ ಮುಖೇಶ್, ಸೈಗಾಲ್, ನೂರಜಹಾನ್, ಘಂಟಸಾಲ, ಪಿ.ಬಿ. ಶ್ರೀನಿವಾಸರ ಹಾಡುಗಳು ಇಂದಿನ (ಹಲ) ಯುವಕರಿಗೆ ಗೋಳುಕರೆಯಾಗಿ ಕೇಳಿಸುತ್ತದೆ. ಇಂದಿನ ಅಬ್ಬರದ ಸಂಗೀತ ನಮಗೆ ಕರ್ಣಕಠೋರವೆನಿಸುವಂತೆ! 'ಇದು ತಲೆಮಾರಿನ ಅಂತರ' ಅಷ್ಟೆ !

ಚಲನಚಿತ್ರಕ್ಕಾಗೇ ಹಾಡು ಹೊಸೆಯುವುದಕ್ಕೂ, ಈಗಾಗಲೇ ಜನಮನ ಸೂರೆಗೊಂಡ ಕವನವನ್ನು ಚಲನ ಚಿತ್ರಕ್ಕೆ ಬಳಸಿಕೊಳ್ಳುವುದಕ್ಕೂ ತುಂಬಾ ಅಂತರವಿದೆ. ಕವಿಯ ಭಾವೋತ್ಕರ್ಷದ ಸಂದರ್ಭದಲ್ಲಿ ರಚನೆಯಾದ ಕವಿತೆಯನ್ನು ಚಲನಚಿತ್ರಕ್ಕೆ ಬಳಸಿಕೊಳ್ಳುವಾಗ ತುಂಬ ಎಚ್ಚರಿಕೆ ಬೇಕಾಗುತ್ತದೆ. ಕವಿತೆಯ ನೈಜ ಸೌಂದರ್ಯಕ್ಕೆ, ಕವಿಯ ಮೂಲ ಆಶಯಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಚಿತ್ರೀಕರಿಸುವುದು ಸುಲಭದ ಮಾತಲ್ಲ.

ಇಂಥ ಒಂದು ಸಾರ್ಥಕ ಪ್ರಯತ್ನ 'ಬೆಳ್ಳಿಮೋಡ' ಚಿತ್ರದಲ್ಲಿ ಬಳಕೆಯಾದ ಬೇಂದ್ರೆಯವರ 'ಬೆಳಗು' ಕವನ. ಅಂಬಿಕಾತನಯದತ್ತರ ಈ ಕವನವನ್ನು, ಅದರ ಶಾಂತಿ ಸಂದೇಶವನ್ನು ಶ್ರೀ ಪುಟ್ಟಣ್ಣ ಕಣಗಾಲ್ ದಕ್ಷರೀತಿಯಲ್ಲಿ ಚಿತ್ರೀಕರಿಸಿದ್ದರು. ತ್ರಿವೇಣಿಯವರ ಕಾದಂಬರಿ, ಕಲ್ಪನಾರ ಅಭಿನಯ, ಪುಟ್ಟಣ್ಣ ಕಣಗಾಲ್‌ರವರ ನಿರ್ದೇಶನದ ತ್ರಿವೇಣಿ ಸಂಗಮದಿಂದ ''ಮೂಡಲ ಮನೆಯಾ ಮುತ್ತಿನ ನೀರಿನ'' ಹಾಡು ಅಂದಿನಂತೆ ಇಂದಿಗೂ ನನ್ನ ಮನವನ್ನು ಮುಗ್ಧಗೊಳಿಸುತ್ತದೆ. ಕೇಳಿದಾಗೊಮ್ಮೆ ಮನಸ್ಸು ಪ್ರಕೃತಿಪೂಜೆಗೆ ಅಣಿಯಾಗುತ್ತದೆ, ಧ್ಯಾನಸ್ಥವಾಗುತ್ತದೆ.

ಒಮ್ಮೆ ನಮ್ಮ ಶಿರ್ಶಿಯ ಹೈಸ್ಕೂಲ್‌ಗೆ ಹೊಸ ಮೇಷ್ಟ್ರು ಬಂದ್ರು. ಶಿರ್ಶಿ ಕನ್ನಡದಲ್ಲಿ ಹೇಳೋದಾದ್ರೆ ಮಾಸ್ತರು ಬಂದ್ರು. ಪಾಠ ಮಾಡುತ್ತಾ ''ಗೌರಿ ಚಿತ್ರ ನೋಡಿದೀರೇನ್ರೀ?'' ಎಂದ್ರು. ಒಬ್ಬ ಗುರುಗಳು ವಿದ್ಯಾರ್ಥಿಗಳನ್ನು ಬಹುವಚನದಲ್ಲಿ ಕರೆಯುವುದು, ಸಿನೇಮಾ ನೋಡಿದಿರಾ? ಅಂತ ಕೇಳುವುದು ಈಗ ೪೦ ವರ್ಷಗಳ ಹಿಂದೆ ತುಂಬ ಆಘಾತಕಾರಿಯಾಗಿತ್ತು. ''ರಾಷ್ಟ್ರಕವಿ ಕುವೆಂಪು ಅವರ 'ಯಾವ ಜನ್ಮದ ಮೈತ್ರಿ' ಎಷ್ಟು ಚೆನ್ನಾಗಿದೆ! ಕೊನೆಯ ಸಾಲುಗಳಂತೂ ಹೇಗಿವೆ ಅಂತ ಅಂದ್ರೆ!'' ಅನ್ನುತ್ತ ''ಬಾರಯ್ಯ ಮಮ ಬಂಧು, ಈ ಜೀವನಪಥ ದೊಳಾವು ಒಂದಾಗಿ ಮುಂದುವರಿಯುವಾ'' ಹಾಡೇ ಬಿಟ್ಟಿದ್ದರು. ಪ್ರೇಮ ಪ್ರಕರಣವೊಂದರಲ್ಲಿ ನೊಂದು ಊರುಬಿಟ್ಟು ಇಲ್ಲಿ ಬಂದಿದ್ರಂತೆ ಆ ಗುರುಗಳು. ಮತ್ತೆ ನಾವು ಆ ಚಿತ್ರ ನೋಡಿ ನಮ್ಮ ಎಳೆ ಹೃದಯದಲ್ಲಿ ಪ್ರೀತಿ-ಪ್ರೇಮದ ಬಗ್ಗೆ ಅಸ್ಪಷ್ಟ ಕಲ್ಪನೆ ಮೂಡಿಸಿಕೊಂಡಿದ್ದೆವು. ಮತ್ತೆ ಒಂದೆರಡು ತಿಂಗಳಲ್ಲೇ ಪ್ರೇಮದ ಬಗ್ಗೆ ಕೊರೆದ ಆ ಮಾಸ್ತರು ನಾಪತ್ತೆ ಯಾಗಿದ್ದರು. ಅವರ ಪ್ರೇಮ ಸುಖಾಂತ್ಯವಾಯ್ತೋ, ದುಃಖಾಂತ್ಯವಾಯ್ತೋ ಗೊತ್ತಾಗಲಿಲ್ಲ.

ನಾನಾಗ ಕಾಲೇಜು ತರುಣಿ. ಹದಿನಾರರ ವಯಸ್ಸು. ಹುಚ್ಚು ಖೋಡಿ ಮನಸ್ಸು. ಸ್ತ್ರೀ ಸ್ವಾತಂತ್ರ್ಯದ ಗಾಳಿ ಮಂದವಾಗಿ ಬೀಸಲು ಪ್ರಾರಂಭಿಸಿತ್ತು. ಶಿರ್ಶಿಯ ಚಿತ್ರಮಂದಿರದಲ್ಲಿ ''ಮಿಸ್ ಲೀಲಾವತಿ'' ಬಿಡುಗಡೆ ಯಾಗಿತ್ತು. ನೋಡಿಬಂದ ಹುಡುಗರು ಸ್ತ್ರೀಸ್ವಾತಂತ್ರ್ಯ ಅಂತ ಹಾರಾಡಿದರೆ ಏನಾಗುತ್ತದೆ ಅಂತ ''ಮಿಸ್ ಲೀಲಾವತಿ'' ನೋಡಿದರೆ ಗೊತ್ತಾಗುತ್ತದೆ ಅಂತ ಕುಹಕದ ನಗು ಬೀರುತ್ತಿದ್ದರು. ನಾವೂ ಕುತೂಹಲದಿಂದ ಚಿತ್ರ ನೋಡಿದೆವು. ಮಿಸ್ ಲೀಲಾವತಿಯಾಗಿ ಅಭಿನಯ ಶಾರದೆ ಜಯಂತಿಯ ಅಭಿನಯ ಮನೋಜ್ಞವಾಗಿತ್ತು. ನಾಯಕ ರಮೇಶನ ಜೊತೆ ದೋಣಿಯಲ್ಲಿ ತೇಲುತ್ತ ಕುವೆಂಪು ವಿರಚಿತ ''ದೋಣಿ ಸಾಗಲಿ, ಮುಂದೆ ಹೋಗಲಿ'' ಹಾಡಿನ ಚಿತ್ರೀಕರಣವಂತೂ ಅದ್ಭುತವಾಗಿತ್ತು. ''ಇಂದು ಇಂದಿಗೆ, ನಿನ್ನೆ ನಿನ್ನೆಗೆ, ಇರಲಿ ನಾಳೆಯು ನಾಳೆಗೆ'' ಎಂದು ಮೋಹಕವಾಗಿ ಜಯಂತಿ ಹಾಡುತ್ತಿದ್ದರೆ ಆ ಕ್ಷಣದಲ್ಲಿ ಅದೇ ಸತ್ಯ ಅಂತ ಅನಿಸಿತ್ತು. ಆದರೆ ಲೀಲಾವತಿಯ ದುರಂತ ಅಂತ್ಯ ನೋಡಿದಾಗ, ಸ್ವಾತಂತ್ರ್ಯ-ಸ್ವಚ್ಛಂದದ ಅರ್ಥವನ್ನು ಸರಿಯಾಗಿ ತಿಳಿದು, ಸ್ತ್ರೀಸ್ವಾತಂತ್ರ್ಯದ ನಮ್ಮ ಗುರಿಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಲು ನೆರವಾಗಿತ್ತು. ಹಾಗೆಯೇ ಕುಹಕನಗೆ ಬೀರಿದವರಿಗೆ, ನಮ್ಮ ಬದುಕೇ ನಿಮ್ಮ ಪ್ರಶ್ನೆಗೆ ಉತ್ತರವಾಗುತ್ತದೆ ಎಂದು ದಿಟ್ಟವಾಗಿ ಹೇಳಲು ಸಾಧ್ಯವಾಗಿತ್ತು.

೩೩ ವರ್ಷಗಳ ಹಿಂದೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾನು ಓದುತ್ತಿದ್ದಾಗ ಕಲ್ಪನಾ – ರಾಜಶೇಖರ ಅಭಿನಯದ ಶ್ರೀ ಇನಾಂದಾರರ ಕಾದಂಬರಿ 'ಶಾಪ' ಆಧಾರಿತ ''ಮುಕ್ತಿ'' ಚಿತ್ರದ ದೃಶ್ಯಗಳ ಶೂಟಿಂಗ್ ನಡೆದಿತ್ತು. ಒಂದು ಚಿತ್ರೀಕರಣ

ವಿಜಯಾ ಶ್ರೀಧರ್

ನೋಡುವ, ಕಲ್ಪನಾರನ್ನು ಮಾತನಾಡಿಸುವ ಅವಕಾಶ ಲಭ್ಯವಾಗಿತ್ತು. ಆದಾಗಲೇ ಅಭಿನಯದಲ್ಲಿ ಪರಾಕಾಷ್ಠೆಯನ್ನು ಮುಟ್ಟಿದ್ದ ಕಲ್ಪನಾ, ಹೊಸಬನಾದ ರಾಜಶೇಖರನನ್ನು ಪ್ರೋತ್ಸಾಹಿಸುತ್ತ ಅಭಿನಯಿಸುತ್ತಿದ್ದರು. ''ನಿಮ್ಮನ್ನು, ನಿಮ್ಮ ಅಭಿನಯವನ್ನು ನಾವು ತುಂಬಾ ಇಷ್ಟಪಡ್ತೀವಿ. ಅಭಿನಯ ಎಷ್ಟು ಕಷ್ಟ ಅಲ್ಲವೇ ?'' ಎಂಬ ನಮ್ಮ ಪ್ರಶ್ನೆಗೆ ಕಲ್ಪನಾ ಗಂಭೀರವಾಗಿ ''ಜನ ಕೆಟ್ಟದಾಗಿ ಕೂಗುವಾಗ ಅಭಿನಯಿಸೋದು ಕಷ್ಟ'' ಅಂತ ವಿಷಾದದಿಂದ ನುಡಿದಿದ್ದರು. ಅಲ್ಲಿ ಚಿತ್ರೀಕರಣಗೊಂಡ, ಕವಿ ಗೋಪಾಲಕೃಷ್ಣ ಅಡಿಗರ ''ಎಂಥ ಕಣ್ಣು, ಎಂಥ ಕಣ್ಣು'' ಕೇಳಿ ಕಲ್ಪನಾ ಅವರ ಕಣ್ಣು ಅಷ್ಟೇನು ಸುಂದರ ಅನಿಸದಿದ್ದರೂ, ಅವರ ಅಭಿನಯ, ಭಾವತುಂಬಿದ ವಿಶಿಷ್ಟ ಧ್ವನಿ, ಅವರ ಕಣ್ಣುಗಳ ಆಳದಲ್ಲಿ ಮಡುಗಟ್ಟಿದ ವಿಷಾದ ನಮ್ಮನ್ನು ತಟ್ಟಿತ್ತು. ಮತ್ತೆ ಹದಿನೈದು ದಿನಗಳ ಕಾಲ ವಿಶ್ವವಿದ್ಯಾಲಯದ ಮೂಲೆ-ಮೂಲೆಗಳೂ ''ಎಂಥ ಕಣ್ಣು - ಎಂಥ ಕಣ್ಣು'' ಹಾಡುತ್ತ ಕಲ್ಪನಾರನ್ನು ನೆನಪಿಸಿಕೊಳ್ಳುವಂತಾಗಿತ್ತು.

ನಮ್ಮ ಉತ್ತರ ಕನ್ನಡದ ಮಂದಿಗೆ ಬೇಂದ್ರೆ ಅಂದರೆ ಹುಚ್ಚು ಸೆಳೆತ. ಬೇಂದ್ರೆ ನಮ್ಮ ಕಾಲೇಜಿಗೆ ಬಂದದ್ದು, ಅವರ ಕವನ ಓದುತ್ತ ಪ್ರತಿ ಶಬ್ದವೂ ಹೊರಡಿಸುವ ಹಲವಾರು ಅರ್ಥಗಳನ್ನು ವಿವರಿಸಿದ್ದು ನಿನ್ನೆ-ಮೊನ್ನೆ ಅನುವಷ್ಟು ಹಸಿಯಾಗಿದೆ. ''ಸಾವಿರದಾ (ಸಾವು ಇರದ) ಲಕ್ಷ-ಲಕ್ಷದಾಚೆಯ ಲಕ್ಷ...'' ಅನ್ನುತ್ತ ನಮ್ಮನ್ನು ಹೊಸ ಪ್ರಪಂಚಕ್ಕೆ ಕರೆದೊಯ್ದಿದ್ದರು. ಆ ಗಾರುಡಿಗರ ಕವನ ಗಂಗಾವತರಣದ ''ಇಳಿದು ಬಾ ತಾಯಿ, ಇಳಿದು ಬಾ'' ಪಿ.ಬಿ. ಶ್ರೀನಿವಾಸರ ತುಂಬು ಕಂಠದಲ್ಲಿ ಚಲನಚಿತ್ರ ಗೀತವಾಗಿ ಕೇಳಿದಾಗ ರೋಮಾಂಚನವಾಗುತ್ತದೆ. ಈ ಗೀತೆಯ ಪ್ರತಿಯೊಂದು ಶಬ್ದವೂ ಹಲವು ಅರ್ಥ ಹೊರಡಿಸುತ್ತ ನಾದಮಯವಾಗಿ ಮೊಳಗಿ ''ಅಂಬಿಕಾತನಯದತ್ತ ಬಾ'' ಅಂದಾಗ ಅದು ಗಂಗೆಗಾಗಿ ನಮ್ಮದೇ ಆರ್ತನಾದ ಅನಿಸಿಬಿಡುತ್ತದೆ.

ರಾಷ್ಟ್ರಕವಿ ಕುವೆಂಪು ಅವರ ಹಲವಾರು ಕವನಗಳು ಚಲನಚಿತ್ರಗೀತೆಗಳಾಗಿಯೂ ಜನಪ್ರಿಯವಾಗಿವೆ. 'ಹೊಸ ಬೆಳಕು' ಚಿತ್ರದಲ್ಲಿ ಬಳಸಲಾದ ''ತೆರೆದಿದೆ ಮನ ಬಾ ಅತಿಥಿ, ಹೊಸ ಬೆಳಕಿನ ಹೊಸ ಭಾವವ ತಾ ಅತಿಥಿ'' ಗೀತೆ ಇಡೀ ಚಿತ್ರದ ಆಶಯವನ್ನೇ ಸಮರ್ಥವಾಗಿ ಬಿಂಬಿಸಿದೆ. ಕೃಷ್ಣಸುಂದರಿ, ಸರಿತಾ, ಸಹನಟಿಯೊಂದಿಗೆ ಹಾಡುತ್ತಿದ್ದಾಗ ಕತ್ತಲಾದ ಅವಳ ಬಾಳಿಗೆ ಬೆಳಕು ಕೊಡಲು ಬಾಗಿಲಲ್ಲೇ ಕಾದಿರುವ ಡಾ|| ರಾಜ್‌ಕುಮಾರ್ ಮುಖದಲ್ಲಿ ಅದೆಷ್ಟು ನೋವು-ಭಾವ !

ಇತ್ತೀಚೆಗೆ ಅಂದಥೆ ೧೫ ವರ್ಷಗಳ ಹಿಂದೆ ತೆರೆ ಕಂಡದ್ದು – 'ಮೈಸೂರು ಮಲ್ಲಿಗೆ'. ಮಲ್ಲಿಗೆಯ ಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರ ಜೀವನವನ್ನೇ ಆಧಾರವಾಗಿಟ್ಟುಕೊಂಡು, ಅವರ ಕವನಗಳನ್ನೇ ಬಳಸಿ ತಯಾರಿಸಿದ ಚಿತ್ರಕಾವ್ಯ 'ಮೈಸೂರು ಮಲ್ಲಿಗೆ'. ಈ ಚಲನಚಿತ್ರದ ಹಲವು ಭಾಗಗಳು ನಮ್ಮ ಶಿವಮೊಗ್ಗದಲ್ಲಿ ಚಿತ್ರೀಕರಣಗೊಂಡಿದ್ದವು. ಸ್ಥಳೀಯ ಕಲಾವಿದರಾದ ಮಂಜು, ಶಿವಮೊಗ್ಗ ವೆಂಕಟೇಶ... ಮುಂತಾದವರು ಭಾಗವಹಿಸಿದ್ದರು. ಅಂತಿಮ ಹಾಡಿನ ದೃಶ್ಯದಲ್ಲಿ ನನ್ನ ಮಗಳು ಚೈತ್ರ, 'ಭಾರತಮಾತೆ' ಆಗಿದ್ದಳು. ತೆರೆಯ ಮೇಲೆ ಒಂದು ನಿಮಿಷ ಕಾಣಿಸಿಕೊಳ್ಳುವ 'ಭಾರತಮಾತೆ'ಗಾಗಿ ಮಾರುದ್ದದ ವಿಗ್ ಧರಿಸಿ, ಎರಡು ದಿನ ಚಿತ್ರೀಕರಣದಲ್ಲಿ ಭಾಗವಹಿಸಬೇಕಾಗಿತ್ತು. ಈ ಚಿತ್ರದ ಯಾವುದೇ ಹಾಡು ಕೇಳಿದರೂ, ಅದು ಮಲ್ಲಿಗೆಯ ಪರಿಮಳ ಸೂಸುತ್ತದೆ.

ಹೀಗೆ ಹಲವಾರು ಚಲನಚಿತ್ರ ಗೀತೆಗಳು ಕಿವಿಗೆ ಬಿದ್ದಾಗ ಬಾಲ್ಯದ, ಯೌವನದ ಯಾವುದೋ ಘಟನೆಗಳ ನೆನಪನ್ನು ತರುತ್ತವೆ. ಪ್ರತಿಬಾರಿ ಕೇಳಿದಾಗ ಹೊಸ ಹೊಸ ಅರ್ಥವನ್ನ, ಆಶಯವನ್ನ ಧ್ವನಿಸುತ್ತದೆ. ಮತ್ತೆ, ಮತ್ತೆ ಕೇಳಬೇಕೆನಿಸುತ್ತದೆ. ಹಾಡಿದ ಹಿನ್ನೆಲೆ ಗಾಯಕರು ಯಾರೇ ಇರಲಿ, ನಾವು ನೋಡುತ್ತಿರುವ ಚಿತ್ರದ ನಾಯಕ(ಕಿಯ)ರೇ ಹಾಡುತ್ತಿದ್ದಾರೆ ಎಂಬ ಭ್ರಮೆ ಮೂಡಿಸುತ್ತದೆ. ಅದೇ ಆ ಗಾಯಕರ ಪ್ರತಿಭೆ, ಅಭಿನಯಿಸಿದವರ ಸಾಮರ್ಥ್ಯ. ಹಾಗೆ ಚಿರಂತನವಾಗಿ ಸಂತೋಷ ನೀಡುವ ಇಂಥ ಕವನಗಳು ಕವಿಗಳ ಅದ್ಭುತ ಸೃಷ್ಟಿ. ಮಧುರವಾದ ಗೀತೆಗಳು ಮಂಜುಳಗಾನವಾಗಿ ನಮ್ಮ ಹೃದಯ ತಟ್ಟಿದಾಗಲೆಲ್ಲ ಮನಸ್ಸು ಆನಂದಾನುಭೂತಿಯಲ್ಲಿ ಮಗ್ನವಾಗುತ್ತದೆ.

ವಿಜಯಾ ಶ್ರೀಧರ್
೧ನೇ ಮುಖ್ಯರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ – ೫೭೭ ೨೦೧



# ಸಮಾಧಾನ

ಇರುಳಿನಲೊಮ್ಮೆ ಇಳೆಮುಖದಿ ಕುಳಿತಾಗ
ಬೆರಳಿನಲೊಮ್ಮೆ ಪುಟವನ್ನು ತೆರೆದಾಗ
ಗೆಳತಿ, ಈ ಗೆಳತಿಯ ನೆನಪು ಮೂಡಿಬರಲಿ
ಕೂಡಿ ಕುಪ್ಪಳಿಸಿದ ಆ ದಿನಗಳು

ಬಹುದೂರ ಹೋದರೇನು
ಬಳಿಬಂದು ಕುಳಿತರೇನು
ಛಲವೆಂಬ ಪಕ್ಷಿ ತಿಳಿಮನದಿ ಹಾಡುತಿರಲು
ಎಂದೆಂದಿಗೂ ನಿನ್ನ ಒಳ್ಳೆಯದನ್ನು
ಬಯಸುವ ಓ! ಗೆಳತಿ

ಎಲ್ಲಾ ಮರೆತೊಮ್ಮೆ ನಕ್ಕುಬಿಡು
ಅದಾಗದಿದ್ದರೆ ಅತ್ತುಬಿಡು
ಮನದೊಳಿಟ್ಟು ಕೊರಗಬೇಡ
ಶೋಕಕ್ಕೆ ದೃಷ್ಟಿಯಿಕ್ಕಬೇಡ

ಅತ್ತುಬಿಡು ಇಲ್ಲವೆ ನಕ್ಕುಬಿಡು
ಬಿರುಗಾಳಿಯಾದರೇನು ದೀಪಹಚ್ಚು
ಯಾರಿಗೆ ಯಾರೂ ಶತ್ರುವಲ್ಲ
ಗಾಳಿಬೀಸಬೇಕು, ದೀಪಬೆಂಗಬೇಕು
ಬದುಕಿಗೆ ಕತ್ತಲೆಯೆ ಉತ್ತರವಲ್ಲ!

ಸುನೀತಾ ಉ. ಅಂಬಲಗೆ
ಶಾಹಪೂರ ಗಲ್ಲಿ, ಬಸವಕಲ್ಯಾಣ – ೫೮೫ ೩೨೭, ಬೀದರ ಜಿಲ್ಲೆ

ನನ್ನ ಜೀವದ ಜೀವ ಜನಪದ
ನನ್ನ ಭಾವದ ಉಸಿರು ಜನಪದ
ನನ್ನ ಭಕ್ತಿಯ ಸೆಲೆಯು ಜನಪದ
ನನ್ನ ಹಾಡಿನ ದ್ರವ್ಯ ಜನಪದ
ಲೋಕವೃಕ್ಷದ ಬೇರು ಜನಪದ
ಜೀವಜಾತ್ರೆಯ ತೇರು ಜನಪದ
ಅಕ್ಷರಲೋಕದ ರಾಕ್ಷಸರಿಂದ ಎನ್ನ
ದೂರದಲ್ಲಿರಿಸಿದ ಅಸ್ತ್ರ ಜನಪದವಯ್ಯಾ
ಸದ್ಗುರು ಬಸವಲಿಂಗ.

ಈ ವಚನ ಜನಪದ ಮತ್ತು ಜಾನಪದರೊಂದಿಗಿನ ನನ್ನ ಬಂಧುತ್ವದ ಪ್ರತೀಕ. ಬಾಲ್ಯದ ದಿನಗಳಿಂದಲೇ ಜಾನಪದದ ಅಮೃತ ಸವಿದ ಭಾಗ್ಯ ನನ್ನದು ; ಬಸವನ ಕೃಪೆಯಿಂದ ಬೆಳೆದುಬಂದ ಧನ್ಯತೆಯ ಬದುಕು ನನ್ನದು.

ಬೆಳಗಾಗಿ ನಾನೆದ್ದು ಯಾರ್ಯಾರ ನೆನಿಯಽಲಿ
ಎಳ್ಳು ಜೀರೀಗಿ ಬೆಳೆಯೋಳ । ಭೂಮಿತಾಯಿ
ಎದ್ದೊಂದು ಗಳಿಗಿ ನೆನದೇನ

ಎಂದು ಹಾಡುವ ಗರತಿಯರ ಹಿಂದೆ ಅಳುತ್ತ ಹೋಗಿ ಬೀಸುಕಲ್ಲಿನ ಹಾಡು ಕೇಳುತ್ತಲೆ ಜಾನಪದವನ್ನು ಒಳಗೆ ತುಂಬಿಕೊಂಡವ.

ಮುಕ್ಕಿಽಗಿ ಮೊದಲ ಬಸವನಂದರ
ಭಾಗ್ಯ ಬಾಗಲದಲ್ಲೇಽ
ಮುಗಿಸುವ ಮೊದಲ ಬಸವನಂದರ
ಶಿವನ ಸದರಿನಲ್ಲೆ.
ಕೈಲಾಸನಂಬೂದು ಬ್ಯಾರಿಲ್ಲ ಕೇಳರಿ
ಕಾಯಕ ಮಾಡುವಲ್ಲೇಽ
ದಾಸೋಗದಿಂದ ಹಂಕಾರಳದು
ನಿಂತ ನಿಲವಿನಲ್ಲೇಽ.
ಮರ್ತ್ಯಕ ಬಂದು ಸರತಿಽಲಿ ಹೋಗೂದು
ತಪ್ಪುವದೇನಿಲ್ಲೇಽ
ಭಗುತಿಲಿ ದುಡಿದರ ಬಡತನ ಇಲ್ಲ
ತಿಳದು ನೋಡಿದಲ್ಲೇಽ.

## ಬಿ. ಆರ್. ಪೊಲೀಸ್ ಪಾಟೀಲ

ಹೀಗೆ ಬೀಸುವಕಲ್ಲು ಮ್ಯೂಜಿಯಂ ಸೇರಿದ್ದರೂ ಜನಪದ ಭಂಡಾರಕ್ಕೆ ಹೊಸ ಬೀಸುವಕಲ್ಲಿನ ಪದ ಭರ್ತಿ ಮಾಡಿದವ. ಹೊಸ ಲಾವಣಿ, ಹೊಸ ತ್ರಿಪದಿ, ಹೊಸ ಹಂತಿ ಹಾಡುಗಳನ್ನು ಹೊಸೆದು ಹಾಡಿದವ. ಇದು ನನ್ನ ತಾಯಿ, ನನ್ನ ಅಕ್ಕಂದಿರು, ನನ್ನ ಅತ್ತೆ, ಹೆಂಡತಿ, ಮಕ್ಕಳು, ನೆರೆ ಹೊರೆಯವರು, ಜೊತೆಗೆ ನನ್ನೂರಿನ ಕವಿ ಗಿರಿಮಲ್ಲ ಇವರ ಕೃಪೆಯಿಂದ ಸಾಧ್ಯವಾದದ್ದು. ನೆಲದ ಮರೆಯ ನಿಧಾನ ವಚನ ಸಾಹಿತ್ಯವನ್ನು ಹೊರತೆಗೆದು ಅಧ್ಯಯನ ಭಾಗ್ಯ ಒದಗಿಸಿದ ಕನ್ನಡದ ಭಾಗ್ಯನಿಧಿ ಫಕೀರಪ್ಪ ಹಳಕಟ್ಟಿ ಅವರ ಬಗ್ಗೆ, ಅವರ ವಚನಕಾಳಜಿಯ ಕುರುಹಾಗಿ :

ಅಳಿದದ್ದು ಮುಕ್ಕೋಟಿ, ಉಳಿದದ್ದು ಒಕ್ಕೋಟಿ
ಉಳಿದದ್ದು ಉಳಿಸಾಕ ಹೈರಾಣ । ಹಳಕಟ್ಟಿ
ಹಿತಚಿಂತಕಽ ಕಳೆದು ಉಳಿಸ್ಯಾನ.
ಹೆಸರು ಫಕೀರ ಹಾನ ತಾ ಕುಬೇರ
ಇವಗಿಂತ ಸಿರಿವಂತರ್ಯಾರಿಲ್ಲ । ಜಗದಾಗ
ವಚನದ ಗುಮ್ಮಟ ಬ್ಯಾರಿಲ್ಲ

ಎಂಬ ಹಂತಿ ಹಾಡು ಕಟ್ಟಿ

ಸಾಕ್ರೆಟೀಸಗ ವಿಷ ಏಸುಕ್ರಿಸ್ತಗ ಮಳಿ
ಅಪ್ಪ ಬಸವಗ ಮಳಿಚಳಿಯಾಕ । ಗಾಂಧಿಽಯ
ಎದಿಮ್ಯಾಲ ಗುಂಡಿಽನ ಕಲಿಯಾಕ ?

ಎಂಬ ಹೊಸ ಪ್ರಶ್ನೆ ಕೇಳಲು ಸಾಧ್ಯವಾದದ್ದು ಇವರಿಂದ. ಜನಪದ ಸಾಯುವ ಬದುಕಲ್ಲ. ಅದು ಬದುಕುವ ಪೈರಿಗೆ ಸಾವಯುವ ಗೊಬ್ಬರ, ಸಾಯುತ್ತಲಿರುವ ಸಂಸ್ಕೃತಿಗೆ ಸಂಜೀವಿನಿ ಎಂದು ನಂಬಿದವ ನಾನು.

ಅತ್ತು ಕರದರು ಇತ್ತ ಸುಳಿಯುವಲ್ಲಿ
ಯಾಕೊ ಮಳಿಽರಾಜಾ
ಹೊರಳಿ ನೋಡ ಹರಗಿದಽ ಹೊಲಾ
ಬಿತ್ತಿಲ್ಲೊಽ ಮಳಿರಾಜಾ.
...............
ಹಸುರಬೆದಿ ಕಡಿಗಣೆಸಿ ಮೋಡ
ಬಂಜಾಯ್ತು ಮಳಿರಾಜಾಽ
ಹಿಡಿದ ಬೀಜ ನೀ ಹುಯ್ಯಂತ
ಸುರಿಯೊ ಮಳಿರಾಜಾ
ಮರಳಗಲ್ಲಿಗೆ ಅಂಟಹಚ್ಚಿಡಧಾಂಗ
ಉಳಿರಾಜಾ,
ಸತ್ತ ಮೋಡ ಕಲಿಹಾಕಿ ಬಿತ್ತಿ
ಬೆಳಸೇನೋ ಮಳಿರಾಜಾಽ.

ಹೀಗೆ ಬೀಜ ಬಿತ್ತನೆಯ ದಿನಗಳಿಂದ ಹಿಡಿದು ಮೋಡ, ಬಿತ್ತನೆಯ ಕ್ಷಣದ ತನಕ ಪ್ರಸ್ತುತನಾಗಬೇಕೆನ್ನುವವ.

ಬಾಲ್ಯದ ದಿನಗಳಿಂದಲೇ ಬಾಲಗೋಪಾಲ, ಗಣಪತಿ ಪಾತ್ರ ನಿರ್ವಹಿಸಿ, ವಿದ್ಯಾರ್ಥಿಜೀವನದಲ್ಲಿ ರಾಮನಾಗಿ, ಕರ್ಣನಾಗಿ, ಅರ್ಜುನನಾಗಿ, ದೊಡ್ಡಾಟದ ಮಾಸ್ತರನಾಗಿ ಪಡೆದ ಅನುಭವದ ಫಲಶ್ರುತಿಯೇ ನನ್ನ 'ಕೊನೇ ನಮಸ್ಕಾರ' ನಾಟಕ; ಅದರ ಗಂಭೀರ ಆವೃತ್ತಿಯೇ 'ದ್ರೌಪದಿ ವಸ್ತ್ರಾಪಹರಣ' ದೊಡ್ಡಾಟ. ಇದಲ್ಲದೆ 'ರಾವಣ ಗರ್ವಭಂಗ', 'ಲವಕುಶ', ಅಲ್ಲದೆ ಆಧುನಿಕ 'ದೊಡ್ಡಾಟ' ಕೃತಿ ರಚನೆ ಮಾಡಿ ದೊಡ್ಡಾಟ ಪ್ರಕಾರವನ್ನು, ಪಾರಿಜಾತದ ತಂತ್ರದ ಬಗ್ಗೆ ಹೇಳುವಾಗ ಪ್ರತಿ ಪಾರಿಜಾತ ರಚಿಸಿ ಪಾರಿಜಾತ ಪ್ರಕಾರವನ್ನು ಉಳಿಸಿಕೊಂಡು ಬಂದವ; ಅಳಿದುಹೋಗಬಲ್ಲ ಹಾಡು ಕೂಡಿಹಾಕಿ ಇಟ್ಟವ. ಗಿರಿಮಲ್ಲನೊಂದಿಗೆ ಅವನ ಹಾಡುಗಳನ್ನು ಕಳಕೊಂಡು ವಿಲಿವಿಲಿ ಒದ್ದಾಡಿ ಮಾಡಿದ ತಪ್ಪಿಗೆ ಪಶ್ಚಾತ್ತಾಪಪಟ್ಟು ಹೊಸ ಲಾವಣಿ ಕಟ್ಟಿಹಾಡುತ್ತ ಹಾಡುಕದ್ದ, ನಾಡು ನುಡಿ ಕದ್ದ ಕಳ್ಳರನ್ನು ಹುಡುಕುತ್ತ

ಎಲ್ಲಿ ಹುಡುಕಿದರೂ ಕಳ್ಳ ಸಿಗಽವೊಲ್ಲ
ಹ್ಯಾಂಗ ಮಾಡುದಿನ್ನೊಽ ಮೈಲಾರದೇವಾ ?
ಬಿಳಿಯ ವಸ್ತ್ರದ ಒಳಗ ಮುಚ್ಚಿದ



*ಸುಳ್ಳ ಬಯಲಿಗ್ಹಾಕೊಽ ಮೈಲಾರದೇವಾ*
*ಕೊಣ್ಣೂರ ಚಿನುಮಾಯಿ ಕಂದ ಬಾಪೂಗೌಡ*
*ಬೇಡತಾನ ನಿನಗೊಽ ಮೈಲಾರದೇವಾ*
*ಖರೆ ಉಳಸವರ ರಟ್ಟೆಮನಸನೀ*
*ಗಟ್ಟಿಮಾಡಬೇಕೊಽ ಮೈಲಾರದೇವಾ*

ಎಂದು ಬೇಡಿಕೊಂಡು ಬದುಕು ಕಟ್ಟುತ್ತಲಿರುವ ನಾನು ಹೊಸ ಹಾಡು ಕಟ್ಟದೆ ಬದುಕಲಿ ಹೇಗೆ ? ಅಂದಿನ ಗಿರಿಮಲ್ಲನ ಬಗ್ಗೆ:

*ಖುಷಿಯಿಂದ ಕುಣಕೊಂಡ ಹಾಡ್ಯಾನ ಗಿರಿಮಲ್ಲ*
*ಊರೆಲ್ಲ ಅಂತಽತಿ ಹುಚಮಲ್ಲ। ಅಂವನ್ಹಾಡ*
*ತಿಳದಾಂವ ತಿಂದಾನ ಸಂವಿಬೆಲ್ಲ*
*ಓದಿಲ್ಲ ಬರದಿಲ್ಲ, ತಿದ್ದಿಲ್ಲ ತೀಡಿಲ್ಲ*
*ಮಾಡಿಽದ ಪದಗೋಳ ಉಣಸಿಲ್ಲ। ಅಂವನ್ಹಾಡ*
*ಒಕ್ಕಿ ಕಣಜಾವ ತುಂಬಿಲ್ಲ*
*ಕಾಲುಂಗುರಿಂದ್ಹಿಡದು ಕೈಲಾಸದಧಿಪತಿ*
*ಪರಶಿವನ ಮಡದಿ ಸಿರಿಗೌರಿ। ಮುಡಿಯಾನ*
*ದಂಡೀಮ್ಯಾಲ್ಹಿಡ ಕತ್ಯಾನ*
*ಹಾಡಂದ್ರೂ ಹಾಡ್ಯಾನ ಬ್ಯಾಡಂದ್ರೂ ಹಾಡ್ಯಾನ*
*ಮನಸಿಽನ ಜಡ್ಡಕಳದಾಗ। ಗಿರಿಮಲ್ಲ*
*ಭವರೋಗ ವೈದ್ಯ ತಾನಾಗ್ಯಾನ.*

ಹೀಗೆ ಕುರಿತೋದದೆಯೂ ಕಾವ್ಯ ಪ್ರಯೋಗ ಪರಿಣತಮತಿಗಳಾದವರ ಬಗ್ಗೆ ಗೌರವವುಳಿಸಿಕೊಂಡು ಅದನ್ನು ಇಂದಿಗೆ ಬೆಸೆಯುತ್ತ ಬಂದು, ಬೆಂದ 'ಬೇಂದ್ರೆ ಅಜ್ಜ'ನ ಬಗ್ಗೆ, ಬಸಿದು ಜನಪದದ ಅಮೃತ ಸಂಗ್ರಹಿಸಿದ ಸಿಂಪಿಸಾಗರ ಸಿಂಪಿ ಲಿಂಗಣ್ಣನವರ ಬಗ್ಗೆ, ದೇವನನ್ನು ಹುಡುಕುತ್ತ ಹೋಗಿ ಕುಣಿವ ನವಿಲಿಗೆ, ಈಜುವ ಮೀನಿಗೆ, ದೇವನಡಗಿರುವನಾವ ಕಡೆಗೆ ಎಂದು ಕೇಳಿದ 'ಮಾಸದ ಹಾಡು ಮಧುರಚೆನ್ನ'ರ ಬಗ್ಗೆ, ಹೇಮರೆಡ್ಡಿ ಮಲ್ಲಮ್ಮನ ಬಗ್ಗೆ, ಗಂಡನ ಬರವಿಗಾಗಿ ಕಾದು ಕಾದು ಕಾಯ್ದು ಉಸುರಿ ಬಸವಳಿದ ಸೀತೆಯ ಬಗ್ಗೆ (ಜನಪದ ಸೀತಾಯಣ), ಜೀವದ ಹಂಗೂ ಹರಿದು ಗಡಿಕಾಯ್ದು ನಮ್ಮನ್ನು ಕಾಪಾಡಿ ಹುತಾತ್ಮರಾದ ಯೋಧರ ಬಗ್ಗೆ (ಕಾರ್ಗಿಲ್ ಲಾವಣಿ) ಕಟ್ಟಿ ಹಾಡುತ್ತಲಿರುವವ; ಬಾಯಿಯಿಂದ ಬಾಯಿಗೆ ಬಂದದ್ದೇ ಜನಪದ ಎಂದು ಹೇಳುವ ಸಾಕ್ಷರ ಬಂಧುಗಳಿಗೆ ''ಅಕ್ಷರ ಅಂದರ ಸಂಸ್ಕೃತಿ ಕೊಲ್ಲೋ ರಾಕ್ಷಸೇನು?'' ಎಂಬ ಪ್ರಶ್ನೆಮಾಡಿದವ ನಾನು.

ಬದುಕು ಅಂದಿಲ್ಲದಂತಿದ್ದರೂ ಇದೆ. ಬದುಕಿನ ಜಾಗವನ್ನು – ಬಂದೂಕು ಆಕ್ರಮಿಸಿದ್ದರೂ ಬಂಧುತ್ವ ಉಳಿದಿದೆ; ತಾಯಿ ಇದ್ದಾಳೆ – ತಾಯ್ತನವಿದೆ. ಹುಟ್ಟು ಇದೆ ಸಾವು ಇದೆ, ಈ ಎರಡರ ನಡುವಿನ ಸಂಸ್ಕಾರಗಳೂ ಇರುವಾಗ ಜನಪದ ಹೇಗೆ – ಸಾಯುತ್ತದೆ ?

*ಹಿರಿಹೊಳಿ ನಾಡಿಽನ ಕೀರುಽತೇನ್ಹೇಳಲಿ*
*ಹಲಗಿ ಸಂಬಾಳ ಕಣಿಹಲಗಿ। ಪಾರಿಜಾತ*
*ಪರೀಮಽಳ ಘಮಘಮ ಊರೆಲ್ಲ*
*ಹಬ್ಬ ಹರಿದಿನಕ್ಹಾಡ ನೆರಿ ನಿಬ್ಬಣಕ್ಹಾಡ*
*ಹುಟ್ಟು ಸಾವಿನ ಕಾರ್ಯಕಾರಣಕ।ಹಿರಿಹೊಳಿ*
*ಹೊರಸೂಸಿ ಹರಿದರ ಜೋಗುಽಳ*
*ಹಸುರಿಽನ ನಾಡಿಽಗಿ ದೊರಿಯಾರು ಗೊತ್ತೇನ*
*ಹಿರಿಹೊಳಿದಂಡಿಽಲಿ ಕರಿಹೋರಿ। ಮೇಸುಽವ*
*ಹಸುಮಗ ನಮ್ಮ ಒಕ್ಕಲಿಗ*
*ಒಕ್ಕಲಿಗ ಹಾಡಿದರ ನಾಡೆಲ್ಲ ನಕ್ಕಿಽತ*
*ಹಾಡಮರತರ ನಾಡ ಬಿಕ್ಕಿಽತ। ಜತೆಗೂಡಿ*
*ಜಯವೆಂದು ಹಾಡೋಣ ಜನಪದರ.*

ಇಂಥ ಹೊಸಹಾಡು ಕಟ್ಟಿಹಾಡುತ್ತ ಹಿರಿಹೊಳಿ ನಾಡಿನ ಸಂಪತ್ತನ್ನು ನಾಡಿಗೆ ತೋರಿಸುತ್ತ, ಮಕ್ಕಳೇ ಇರಲಿ, ಮುದುಕರೇ ಇರಲಿ 'ಹಾಡುಹೇಳ್ರಿ' ಎಂದರೆ ನಕರಾ ಮಾಡದೆ

*ಹಾಡು ಹಾಡಂದರ ಹಾಡೇನ ಪಾವಽನ*
*ಹಾಡಬಿತ್ತಿ ಹಾಡ ಬೆಳದೇವ। ಹಣಿ ಹಾಕಿ*
*ನೀಡಂದ ಗಳಿಗಿ ನೀಡೇವ*

ಎಂದು ಹಗಲು ರಾತ್ರಿ ಹಾಡುತ್ತ, 'ಲಾವಣಿ ಮೇಳ' ಕಟ್ಟಿಕೊಂಡು ನಾಡೆಲ್ಲ ಸುತ್ತುತ್ತಲಿರುವವ.

'ಈಗ ಒಂದು ಕಾಲೇಜಿನ ಪ್ರಾಚಾರ್ಯರಾಗಿದ್ದೀರಿ ಹಾಡು ಬಿಟ್ಟುಬಿಡಿ' ಎಂದು ಸಲಹೆಮಾಡಿದವರಿಗೆ 'ಪ್ರಾಚಾರ್ಯಗಿರಿ ಬಿಟ್ಟೇನು ಆದರೆ ಹಾಡುಬಿಟ್ಟು ಕೊಡುವುದಿಲ್ಲ. ಯಾಕೆಂದರೆ ಹಾಡು ಹಾದಿ ತೋರಿಸುತ್ತದೆ', ಎಂದು ನಂಬಿದವ ನಾನು, ಹಾಡಿನಲ್ಲೇ ಪ್ರಾಣ ಇಟ್ಟುಕೊಂಡವನು. ಹಾಡಿನ ವಾರಸುದಾರ ನಾನು ಎಂದು ಹೇಳಿ ಹಾಡು ಉಳಿಸಿಕೊಂಡವನು.

ಅಂದಿನ ತಾಯಿ :

*ಅಳುವ ಕಂದನ ತುಟಿಯ ಹವಳಽದ ಕುಡಿಹಾಂಗ*
*ಕುಡಿಹುಬ್ಬು ಬೇವಿಽನ ಎಸಳಾಂಗ। ಕಣ್ಣೋಟ*
*ಶಿವನ ಕೈಯಲಗು ಹೊಳೆದಾಂಗ*

ಎಂದು ಹಾಡಿದರೆ ನನ್ನೊಳಗಿನ ತಾಯಿ

*ಓಣ್ಯಾಗ ನನಕಂದ ಚಿಣಿಫಣಿ ಆಡ್ಯಾನ*
*ಜೋರಿಽಲೆ ಒಮ್ಮೆ ಚೀಕ್ಯಾನ। ಆ ಫಣಿ*
*ಶಿವನ ಹಣಿಗ್ಹೋಗಿ ತಾಕೇತಿ*

ಎಂದು ತನ್ನ ಮಗನ ಆಧುನಿಕ ಸಂಸ್ಕೃತಿ, ಸೃಜನಶೀಲತೆಯ ತಾಕತ್ತಿನ ಬಗ್ಗೆ ಹಾಡಿದ್ದು ಹೀಗೆ.

ನನ್ನ ಮಗಳು ಅಶ್ವಿನಿ ಇಂಗ್ಲಿಷ್‌ನಲ್ಲಿ ಎಂ.ಎ. ಮಾಡಿದ್ದರೂ ಅವಳ ಅಳಿಯ (ಅಣ್ಣನ ಮಗ)ನನ್ನು ಆಡಿಸುತ್ತ

*ಬಾರ ಬಾರಽ ಗುಬ್ಬಿ ಬಾರ ಬಾರಽ ಕೋಳಿ*
*ಹಾರಿಽ ಬಾ ಮನೀಗೆ ಪಾರಿವಾಳ। ಆದಿತ್ಯ*
*(ನನ್ನಳಿಯ)*
*ಆಟಕ್ಕ ನಿಮ್ಮ ಕರೆದಾನ*

ಎಂಬ ಹೊಸ ತ್ರಿಪದಿ ಕಟ್ಟಿ ಹಾಡಿದ್ದು ಕೇಳಿ ಪುಳಕಿತನಾಗಿ ಆನಂದಬಾಷ್ಪ ಸುರಿಸಿದವ. ಅದರ ಮುಂದುವರಿಕೆಯಾಗಿ ಈ ಅತ್ತೆ ಅಳಿಯಂದಿರನ್ನೇ ಕೇಂದ್ರವಾಗಿಟ್ಟುಕೊಂಡು ಮತ್ತಷ್ಟು ತ್ರಿಪದಿ ಸೇರಿಸಿದ್ದು ಹೀಗೆ :

*ಸೀರೀಲ್ಯಾಕ್ಯಾತಽಕ, ಫೇರೇಕ್ಸು ನಿನಗ್ಯಾಕ ?*
*ಹಂಚಮ್ಯಾಗಲ ರೊಟ್ಟಿ ಹಾಲಾಗ। ನೆನೆಸೇನಿ*
*ತಿಂದಽರ ನೋಡು ಕಂದಯ್ಯ.*
*ಕಾರು ಕಾರಂತ ಜೋರು ಮಾಡತಿ ಅಳಿಯ*
*ಆಟಽದ ಕಾರು ನಿನಗ್ಯಾಕ। ನನ್ನ ಮಗಳು*
*ಮೋಟಾರ ಕಾರು ತರತಾಳ.*

ಕಾವ್ಯ ಕಾಲಕ್ಕೆ ತಾಯಿಯಾಗಬೇಕು, ಬಾಯಿಯಾಗಬೇಕು. ಯಾಕೆಂದರೆ ನಮ್ಮದು ಸತ್ತದ್ದನ್ನು ನೆನೆದು ಅಳುವ ಪೀಳಿಗೆಯಾಗದೆ ಹುಟ್ಟುವ ಹಸುಗೂಸು (ಹೊಸಹಾಡು-ಹೊಸಹಾದಿ)ಗಳನ್ನು ಉಳಿಸುವ, ಬೆಳೆಸುವ ಏಳಿಗೆಯ ಪಾಲಕಸಂಸ್ಕೃತಿಯಾಗಬೇಕು ಎಂಬ ಆಶಾವಾದಿ ನಾನು, ಇಂದಿಗೆ ಪ್ರಸ್ತುತವಾದವನು.

ಬಾರುಬದಿಯ ಗಟಾರದಲ್ಲಿ (ದಾರಿತಪ್ಪಿ) ಬಿದ್ದ ಬಂಧುವನ್ನು ಎತ್ತಿ ಕರೆದೊಯ್ಯುವಾಗ ನನ್ನೊಳಗಿನ ಗಿರಿಮಲ್ಲ ಅವನೊಂದಿಗೆ ಮಾತಾಡಿದ್ದು ಹೀಗೆ :

*ಬಾರಿಽಗೆ ಹೋಗಾಕ ಕಾರು ಯಾತಕ ಬೇಕ*
*ಗರಿಗರಿ ನೋಟು ಕೈಯಾಗ। ಹಿಡಿದರ*
*ಹೆಗಲ ಪಲ್ಲಕ್ಕೀಲಿ ಒಯ್ಯುವರ*
*ಬಾರಿಽಗೆ ಹೋದಾಂವ ಏನಾದ ಎಂತಾದ!*
*ಊರಿಽಗಿ ಮೊದಲ ಎರವಾದ। ಮರವಾದಿ*
*ಕಳಕೊಂಡು ದಾರಿಽಯ ಹೆಣವಾದ.*

ಇಂತ ಜನಪದದ ಅಮೃತ ಈಗಲೂ ಕುಡಿಯಲಿಕ್ಕೆ ಸಿಗುತ್ತಿರುವಾಗ ಬಾರು ಸುರೆ ಎನ್ನುವ ಅಸುರ ಸಂತಾನ ಹಾದಿಹೆಣವಾಗುತ್ತದೆ ಎಂಬ ಎಚ್ಚರಿಕೆ ಕೊಡದಿರಲು ನನ್ನಿಂದ ಸಾಧ್ಯವಾಗುತ್ತಿಲ್ಲ.

ಹಸಿರಿಲ್ಲದೆ ಉಸಿರು ಕಳಕೊಳ್ಳುತ್ತಲಿರುವ ಹಸಿಬಿಸಿ ಸಂತಾನದ ಬಗ್ಗೆ:

*ಕಡಿಯತಾರೊಽ ಮರಾ ಕಡಿಯತಾರೊಽ*
*ಮಡಿ ಉಟ್ಟ ಮಗಳ ಬತ್ತಲೆ ಮಾಡತಾರೊಽ*
*ಬಣ್ಣಬಣ್ಣದಕ್ಕಿಗೋಳ್ನ ಹಿಡಿಯತಾರೊಽ*
*ರೆಕ್ಕಿ ಪುಚ್ಚ ಕಿತ್ತಿ ಕಾಲ ಮುರಿಯುತಾರೊಽ*
..............................
*ತಾಯಿ ಪದರಿನಾಗ ಬೆಂಕಿ ಕಟ್ಟತಾರೊಽ*
*ಆಕಿ ಉಸುರಿಽನ ಉಗಿಯಾಗ ಬೇಯತಾರೊಽ*
..............................
*ಹುಚ್ಚ ನಾನು ಕೈಯ ಮುಗದು ಬೇಡತೀನೊಽ*
*ಹೆಚ್ಚಾ - ಕಮ್ಮಿ ಆದರ ಸಲಾಮ್ ಮಾಡತೀನೊಽ*
*ನಾಲಿಽಗಿ ಮ್ಯಾಲ ಸಾಲಿ ತೀಡಲೇನೊ*
*ಚಿನುಮಾಯಿ ನುಡಿಸಿದಂಗ ನುಡಿಯತೀನೊ*

ಎಂಬ ಎಚ್ಚರದ ಹಾಡು ಬರೆದರೂ ಈ ಹಸಿ-ಬಿಸಿಯನ್ನು ಬೇಯಿಸುವದು ಹೇಗೆಂದು ಚಡಪಡಿಸುತ್ತಲೇ ಅವರಿಗೆ ಹೊಸ ಲಾವಣಿ ರುಚಿ ತೋರಿಸಿ ಅವರೊಂದಿಗೆ ಹಾಡಿ ಕುಣಿಯುತ್ತ ಕಾಲವನ್ನು ಗೆಲ್ಲುವ ಹವಣಿಕೆಯಲ್ಲಿದ್ದೇನೆ.

ನಂಬಿದವರ ಹೊಟ್ಟೆತುಂಬಿಸಲು ಒಂದು ಇಂಗ್ಲಿಷ್ ಎಮ್ಮೆ ಸಾಕಿರುವ ನಾನು ನಂಬಿದ್ದು ಜನಪದವನ್ನು, ಉಣ್ಣುವುದು ಜನಪದವನ್ನು, ಉಸಿರುವುದೂ ಜನಪದವನ್ನೇ.

ನನ್ನ ಹಾಗೆ ಇರಬೇಕು ಎನ್ನಿಸಿದರೆ, ನನ್ನೊಂದಿಗೆ ಬರಬೇಕು ಎನ್ನಿಸಿದರೆ ಬನ್ನಿ, ನನ್ನ ವಿಳಾಸ ಬರಕೊಳ್ಳಿ.

ಮುದ್ದೇಬಾಳ ತಾಲೂಕು ಶಾರಾ, ಜಿಲ್ಲೆ ವಿಜಾಪೂರಾ
ಕೊಣ್ಣೂರ ಕವಿ ಊರಾ
ಬಾಪೂಗೌಡ ಚಿನುಮಾಯಿ ವಂತುವರಾ
ಕಾಯಬೇಕೋ ಕಡಿತನಕ ನಂಬಿದವರಾ,
ಜಿಽ ಜಿಽಽಽ
ನಮಸ್ಕಾರ.

ಬಿ. ಆರ್. ಪೊಲೀಸ್ ಪಾಟೀಲ
ಬನಹಟ್ಟಿ, ಜಮಖಂಡಿ ತಾಲೂಕ
ಜಿಲ್ಲಾ: ಬಾಗಲಕೋಟ

‘ಅಪ್ರಿಯವಾದ ಸತ್ಯವನ್ನು ಹೇಳುವವರೂ ಕೇಳಿಸಿಕೊಳ್ಳುವವರೂ ದುರ್ಲಭ’ ಎಂಬುದು ವಾಲ್ಮೀಕಿ ರಾಮಾಯಣದ ಒಂದು ಮಾತು. ಹೀಗಿದ್ದೂ ‘ಭಗವಂತರೆಷ್ಟು?’ ಎಂದು ಪ್ರಶ್ನಿಸುವ ಪುಸ್ತಕವನ್ನು ಬರೆದು ಅವರಿವರ ಕೈಕಾಲು ಕಟ್ಟಿ (ಮುದ್ರಣ ಕಾಗದವನ್ನು ಪುಕ್ಕಟೆಯಾಗಿ ಒದಗಿಸಿದವರನ್ನು, ಒಂದಷ್ಟು ಹಣ ಸಹಾಯ ಮಾಡಿದ ಮತ್ತೊಬ್ಬರನ್ನು ಗ್ರಂಥಕರ್ತರು ಕೃತಜ್ಞತೆಯಿಂದ ಸ್ಮರಿಸಿದ್ದಾರೆ) ಅದನ್ನು ಅಚ್ಚು ಹಾಕಿಸಿದ ಸದಾಶಿವಯೋಗಿಗಳ ಧೈರ್ಯ ಸಾಹಸಗಳನ್ನು ಮೆಚ್ಚಲೇಬೇಕು. ಹಾಗೆಯೇ, ಗ್ರಂಥವು ಮೂರನೇ ಮುದ್ರಣ ಕಾಣುತ್ತಿರುವುದನ್ನು ಗಮನಿಸಿದಾಗ ನಮ್ಮ ದೇಶದಲ್ಲಿ ಅಪ್ರಿಯವಾದ ಸತ್ಯವನ್ನು ಕೇಳಿಸಿಕೊಳ್ಳುವವರು (ಓದುವವರು) ‘ದುರ್ಲಭ’ವಾದರೂ ‘ಅಲಭ್ಯ’ವಲ್ಲ ಎಂಬುದು ಇದ್ದುದರಲ್ಲಿ ಸಮಾಧಾನ ತರುವ ಸಂಗತಿ.

ಪುಸ್ತಕದ ಆರಂಭದಲ್ಲಿ ಎಂ. ಶಿವರಾಂ ಸಿಂಗ್ ಅವರು ಗ್ರಂಥಕರ್ತರ ಪರಿಚಯ ಮಾಡಿಕೊಟ್ಟಿದ್ದಾರೆ. ತುಮಕೂರು ಜಿಲ್ಲೆ ಗುಬ್ಬಿಯ ಶಿವಭಕ್ತ ಕುಟುಂಬವೊಂದರಲ್ಲಿ ೧೯೩೩ನೇ ವರ್ಷ ಜನಿಸಿದ ಸದಾಶಿವನಿಗೆ ಹತ್ತನೇ ವಯಸ್ಸಿನಲ್ಲೇ ಶಿವದೀಕ್ಷೆ ಕೊಡಲಾಯಿತು. ಆಗ “ನಾನೂ ಸಹ ಪುರಾಣಕತೆಯಲ್ಲಿ ಹೇಳಿರುವ ಮಾರ್ಕಂಡೇಯನಂತೆ ಭಕ್ತಾಗ್ರೇಸರನಾಗಬೇಕು” ಎಂಬ ಹಂಬಲ ಹುಡುಗನ ತಲೆಯಲ್ಲಿತ್ತಂತೆ. ಆದರೆ, ಶಾಲೆಯಲ್ಲಿ ಭೂಗೋಳದ ಉಪಾಧ್ಯಾಯರಿಗೆ, ರಾಮಾಯಣ ಪಾಠ ಮಾಡುತ್ತಿದ್ದ ಕನ್ನಡ ಪಂಡಿತರಿಗೆ ಪ್ರಶ್ನೆಗಳ ಮೇಲೆ ಪ್ರಶ್ನೆ ಹಾಕತೊಡಗಿದ್ದರಿಂದ ತಲೆಯ ಮೇಲೆ ಮಟ್ಟಿಸಿಕೊಳ್ಳಬೇಕಾಯಿತು; ಬೆಂಚಿನ ಮೇಲೆ ನಿಲ್ಲಬೇಕಾಯಿತು; ಸಹಪಾಠಿಗಳೆದುರಿಗೆ ಅವಮಾನವಾಯಿತು.

ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡಿದ್ದ ಹುಡುಗ ಇನ್ನೂ ಶಾಲೆ ಕಲಿಯುತ್ತಿರುವಾಗಲೇ ತಂದೆ ಅವನ ಮದುವೆಯ ಏರ್ಪಾಡು ಮಾಡತೊಡಗಿದರು. ‘ಮದುವೆಯಾದರೆ ಭಕ್ತ ಮಾರ್ಕಂಡೇಯನಾಗುವುದು ಸಾಧ್ಯವಿಲ್ಲ’ ಎಂದುಕೊಂಡ ಸದಾಶಿವ ಒಂದು ರಾತ್ರಿ ಯಾರಿಗೂ ಹೇಳದೆ ಕೇಳದೆ ಮನೆಬಿಟ್ಟು ಹೊರಟುಬಿಟ್ಟ. ಪುರಾಣಪ್ರಸಿದ್ಧ ಕದಳೀವನವನ್ನು ಸೇರಿ ತನಗೆ ಗೊತ್ತಿದ್ದ ‘ಪಂಚಾಕ್ಷರೀ ಮಂತ್ರ’ ಜಪಿಸುತ್ತ ತಪಸ್ಸು ಮಾಡಲು ಕುಳಿತ; ತಪಸ್ಸಿನಿಂದ ಹಸಿವು, ಬಾಯಾರಿಕೆಗಳು ಹೆಚ್ಚಾದವೇ ಹೊರತು ಸಿದ್ಧಿಯೇನೂ ಲಭಿಸಲಿಲ್ಲ. ಆಮೇಲೆ ಹಿಮಾಲಯ ಪರ್ವತ ಶ್ರೇಣಿಯಲ್ಲಿ ಅಲೆದು ಹಲವರು ಸಾಧು ಸಂನ್ಯಾಸಿಗಳನ್ನು ಆಶ್ರಯಿಸಿ ಅವರಿಂದ ಉಪದೇಶ ಪಡೆದು ಸಾಧನೆ ಮಾಡಿ ಈ ಯುವಕ ‘ಸದಾಶಿವಯೋಗಿ’ಯಾದರು. ಭೂತ ಬೇತಾಳಗಳನ್ನು ಒಲಿಸಿಕೊಳ್ಳುವ ಪ್ರಯತ್ನದಿಂದ ಏನೂ ಪ್ರಯೋಜನವಾಗಲಿಲ್ಲ. ಕಲ್ಕತ್ತೆಗೆ ಬಂದು ‘ಸಂಮೋಹನವಿದ್ಯಾ’ ಪ್ರವೀಣರಾದ ಪಿ. ಸಿ. ಸರ್ಕಾರ್ ಬಳಿ ‘ಮೆಸ್ಮರಿಸಂ’ ಅಭ್ಯಾಸ ಮಾಡಿ ಸಾಕಷ್ಟು ಅನುಭವ ಪಡೆದುಕೊಂಡರು. ಭವಿಷ್ಯದ ಬಗ್ಗೆ ನಿಜದಾರಿ ಕಾಣದೆ ಏಕಾಂಗಿಯಾಗಿ ಅಲೆಯುತ್ತಿದ್ದಾಗ ಆತ್ಮಹತ್ಯೆಗೆ ಮನಸ್ಸು ಮಾಡಿದ್ದೂ ಉಂಟು – ಆಗಲಾದರೂ ದೇವರು ಪ್ರತ್ಯಕ್ಷನಾಗಿ ತಮ್ಮ ಕೈಹಿಡಿಯಬಹುದು ಎಂಬ ಪುರಾಣ ಕತೆಗಳ ಪ್ರೇರಣೆಯಿಂದ.

ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದು ಅಕಸ್ಮಾತ್ತಾಗಿ ಬೊಂಬಾಯಿಯ ವಜ್ರೇಶ್ವರಿ ಹತ್ತಿರದ ಗಣೇಶಪುರಿಯ ಶ್ರೀ ನಿತ್ಯಾನಂದ ಸ್ವಾಮೀಜಿಯವರ ಪರಿಚಯವಾಗಿ ಅವರಿಂದ ‘ಸಿದ್ಧವಿದ್ಯಾಯೋಗ-ಪ್ರಾಣಾಯಾಮ’ ದೀಕ್ಷೆ ಪಡೆದರು. ಪುನಃ ಹೃಷೀಕೇಶಕ್ಕೆ ತೆರಳಿ ‘ಮೌನ ಯೋಗಿ’ ಎಂಬ ಹೆಸರಿನಿಂದ ಹಲವು ವರ್ಷಗಳ ಸಾಧನೆ ಮಾಡಿದರು. ಮತ್ತೆ ಏಕಾಂತ ಸ್ಥಳವನ್ನು ಅರಸುತ್ತ ಕರ್ನಾಟಕದ ಹಂಪೆಗೆ ಬಂದು ನೆಲೆನಿಂತು ಅಲ್ಲಿಯೇ ಈ ಗ್ರಂಥವನ್ನು ರಚಿಸಿರುವರಂತೆ.

ಗ್ರಂಥದ ಶೀರ್ಷಿಕೆಯಲ್ಲಿ ಕಾಣುವ ಪ್ರಶ್ನೆ ಚಿಹ್ನೆ (ಮತ್ತು ಹಲವು ಆಶ್ಚರ್ಯ ಚಿಹ್ನೆಗಳು) ಒಳಪುಟಗಳಲ್ಲಿ ಹಾಸುಹೊಕ್ಕಾಗಿ ತುಂಬಿಕೊಂಡಿವೆ. ಮೊದಲ ಪುಟದಲ್ಲಿಯೇ ಪಂಡಿತರು, ಪುರೋಹಿತರು, ಗುರುವರ್ಯರನ್ನು ಕೇಳುತ್ತಾರೆ – ದೇವರು ಒಬ್ಬನೇ ಎಂದು ಎಲ್ಲ ಮತಗಳೂ ಹೇಳುತ್ತಿರುವಾಗ ವ್ಯವಹಾರದಲ್ಲಿ ಇರುವಂತಹ ಇಷ್ಟೊಂದು ದೇವರುಗಳು ಯಾರು? ಏತಕ್ಕಾಗಿ ಅವರೆಲ್ಲ ಇದ್ದಾರೆ? ಇವರಲ್ಲಿ ಅತಿ ದೊಡ್ಡವರು ಯಾರು? ಸಣ್ಣವರು ಯಾರು? ಕಲ್ಲು ಮಣ್ಣು ಮರ ಮುಂತಾದವುಗಳಿಂದ ವಿಗ್ರಹಗಳನ್ನು ನಿರ್ಮಿಸುವವರು ನಮ್ಮ ವರ್ಣಾಶ್ರಮ ಧರ್ಮಗಳ ಪ್ರಕಾರ ಕನಿಷ್ಠ ಜಾತಿಯ ಶೂದ್ರರೇ ಆದ ಒಡ್ಡರು, ಆಚಾರಿಗಳು, ಬಡಗಿಗಳೇ ಅಲ್ಲವೆ? ಅಂದಮೇಲೆ ದೇವರುಗಳನ್ನೆಲ್ಲ ನಿರ್ಮಿಸುವ ಶೂದ್ರರು ಇತರರಿಗಿಂತ ದೊಡ್ಡವರೊ? ಚಿಕ್ಕವರೊ? ದೇವರುಗಳನ್ನು ನಿರ್ಮಿಸಿದಾತನು ದೇವರ ತಂದೆ ಇದ್ದಂತೆಯೇ ಅಲ್ಲವೆ? ಇತ್ಯಾದಿ.

ದೇವರು ‘ಸರ್ವಶಕ್ತ’ನೆಂಬ ಕಲ್ಪನೆಯು ಹಲವು ಬಗೆಯ ಪರಿಹಾಸ್ಯಕ್ಕೆ ಒಳಗಾಗಿದೆ. ದೇವರುಗಳು ವಾಸ ಮಾಡುವ ಮಂದಿರಗಳಿಗೆ ಬಾಗಿಲುಗಳು ಏಕೆ? ಬೀಗಮುದ್ರೆ ಏಕೆ? ಹಲವು ಮಂದಿರಗಳಿಗೆ ಪೊಲೀಸ್ ಕಾವಲು ಹಾಕುವುದೇಕೆ? ಇಡೀ ಹಿಂದೂಸ್ತಾನದ ಸಾವಿರಾರು ದೊಡ್ಡ ದೇವಾಲಯಗಳಲ್ಲಿ ದೇವರ ಆಭರಣಗಳನ್ನೆಲ್ಲ ಪುಂಡರು ಲೂಟಿ ಹೊಡೆದದ್ದೇ ಅಲ್ಲದೆ ಸಾಕ್ಷಾತ್ ಭಗವಂತನ ಮೂರ್ತಿಗಳನ್ನೇ ಖಂಡ ತುಂಡಾಗಿಸಿ ಬೀದಿಗೆ ಬಿಸಾಡಿದರಲ್ಲ, ಆಗ ‘ಸರ್ವಶಕ್ತ’ ಭಗವಂತರ ಶಕ್ತಿ ಸಾಮರ್ಥ್ಯಗಳೆಲ್ಲ ಎಲ್ಲಿ ಉಡುಗಿಹೋಗಿದ್ದವು? ಇಲ್ಲಿಯವರೆಗೆ ದೇವಾಲಯ-ಮಸೀದಿ-ಚರ್ಚುಗಳಲ್ಲಿ ಕಳವು ಸುಲಿಗೆ ಕೊಲೆಗಳಲ್ಲಿ




# ಸದಾಶಿವಯೋಗಿಗಳ ಭಾರತೀಯರಿಗೆ ಭಗವಂತರೆಷ್ಟು?

## ಕೆಲವು ಟಿಪ್ಪಣಿಗಳು

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ

**ಭಾರತೀಯ ಸಮಾಜದಲ್ಲಿ ಪ್ರಚಲಿತವಾಗಿರುವ ಅಸಂಬದ್ಧ ನಂಬಿಕೆಗಳು ಮತ್ತು ಅಂಥ ನಂಬಿಕೆಗಳನ್ನು ಪ್ರಚಾರ ಮಾಡಿ ಇನ್ನಷ್ಟು ಸ್ಥಿರಗೊಳಿಸುವ ಪುಸ್ತಕಗಳನ್ನು ನಿಷೇಧಿಸಲು ಮತ್ತು ಇಂತಹವುಗಳನ್ನು ಬರೆದವರನ್ನು ಶಿಕ್ಷಿಸಲು ಕ್ರಮ ಕೈಗೊಳ್ಳಬೇಕಾಗಿದೆಯೆಂದು ಸದಾಶಿವಯೋಗಿಗಳು ಸರ್ಕಾರವನ್ನು ಆಗ್ರಹಿಸುತ್ತಾರೆ. ಆದರೆ ಸ್ವತಃ ಮೂಢನಂಬಿಕೆಗಳನ್ನು, ಪವಾಡಗಳನ್ನು ಮತಧರ್ಮಗಳ ಮುಖಂಡರನ್ನು ಆಶ್ರಯಿಸಿ ನಡೆಯುತ್ತಿರುವ ಸರ್ಕಾರಗಳು ಇಂತಹ ಸ್ಥಾಪಿತ ಶಕ್ತಿಗಳ ವಿರುದ್ಧ ಕ್ರಮ ಕೈಗೊಳ್ಳುತ್ತವೆಯೆ ಎಂಬುದು ಓದುಗರ ಮನಸ್ಸಿನಲ್ಲಿ ಮೂಡುವ ಪ್ರಶ್ನೆ. ಸ್ವಬುದ್ಧಿಯುಳ್ಳ ಕೆಲವು ಓದುಗರಾದರೂ ಸದಾಶಿವಯೋಗಿಗಳ ಕಳಕಳಿಗೆ ಓಗೊಟ್ಟರೆ ಇವರು ಪುಸ್ತಕ ಬರೆದದ್ದು ಸಾರ್ಥಕವೆನ್ನಿಸುತ್ತದೆ.**

ಭಾಗಿಯಾದ ಯಾವೊಬ್ಬ ಅಪರಾಧಿಯನ್ನೂ ದೇವರು ಹಿಡಿದು ಶಿಕ್ಷಿಸಿಲ್ಲವೆಂಬುದು ಭಗವಂತನ ಸರ್ವಶಕ್ತತೆಗೆ ಅವಮಾನವಲ್ಲವೆ ?

ದೇವತೆಗಳಿಗೆ ನೈವೇದ್ಯ ಮಾಡುವುದನ್ನು ತಮಾಷೆ ಮಾಡುತ್ತ ಸದಾಶಿವಯೋಗಿ ಹೇಳುತ್ತಾರೆ – 'ಅಯ್ಯೋ ಮಂಕಪ್ಪಗಳೇ... ಆ ದೇವರುಗಳು ತಿನ್ನಲು ಕಲಿತಿದ್ದರೆ, ನಿಮಗೇನಾದರು ಉಳಿಯುತ್ತಿತ್ತೆ?' ಕವಿ ವೇಮನರು ಹೇಳಿದ ಮಾತನ್ನೂ ಉದಾಹರಿಸುತ್ತಾರೆ – 'ಕಲ್ಲುಗಳೇ ದೇವರುಗಳಾಗಿದ್ದರೆ ನಾವು ಬೆಳೆದ ಆಹಾರವನ್ನು ಅವುಗಳೇ ನುಂಗಿಬಿಡುತ್ತಿದ್ದವು' ಎಂದು. ದೇವರ ಮದುವೆ, ಮೆರವಣಿಗೆ, ವಾಹನೋತ್ಸವ, ಶಯನೋತ್ಸವ ಮೊದಲಾದವುಗಳನ್ನು ವಿಡಂಬನೆ ಮಾಡಿ ಒಟ್ಟಿನ ಮೇಲೆ 'ದೇವರ ಹೆಸರಿನಲ್ಲಿ ನಡೆಯುವ ಇಂತಹ ಆಚಾರಗಳೆಲ್ಲ ಕೇವಲ ಮಕ್ಕಳ ಗೊಂಬೆಯಾಟಕ್ಕಿಂತಲೂ ತಮಾಷೆಯಲ್ಲವೆ ?' ಎಂದೂ, 'ಇಲ್ಲದ ದೇವರುಗಳಿಗೆ ಸಲ್ಲದ ಕಾರ್ಯಕಲಾಪಗಳಿಗಾಗಿ ಲಕ್ಷಾಂತರ ರೂಪಾಯಿ ವ್ಯಯ ಮಾಡಬೇಕೆ ?' ಎಂದೂ ಕೇಳುತ್ತಾರೆ.

ಸದಾಶಿವಯೋಗಿಗಳ ಉದ್ದೇಶ ಅಸಂಖ್ಯಾತ ದೇವರುಗಳ ಕಲ್ಪನೆಯನ್ನು, ಪೂಜೆ, ಆರಾಧನೆ ಮೊದಲಾದವುಗಳನ್ನು ವಿಡಂಬನೆ ಮಾಡುವುದಷ್ಟೇ ಅಲ್ಲ. ಸಾಮಾಜಿಕರು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಾದ ಉನ್ನತ ವಿಚಾರಗಳನ್ನು ಅವರು ಸೂಚಿಸುತ್ತಾರೆ. 'ನೀವೆಲ್ಲ ಅವಶ್ಯವಾಗಿ ಆಲೋಚಿಸಬೇಕಾದ ಪ್ರಶ್ನೆಯೊಂದನ್ನು ಕೇಳಬಯಸಿದ್ದೇನೆ; ಅನ್ಯಥಾ ಭಾವಿಸಬೇಡಿ' ಎಂದು ನಮ್ರತೆಯಿಂದ ಆರಂಭಿಸಿ –

ನಿಮ್ಮ ಊರಿನಲ್ಲಿ ಮಕ್ಕಳು ಜ್ಞಾನವಂತರಾಗಿ ಬೆಳೆಯಲು ವ್ಯವಸ್ಥಿತವಾದ ಪಾಠ ಶಾಲೆ ಇದೆಯೇ ? ಅದರಲ್ಲಿ ಅಧ್ಯಾಪಕರು ಇದ್ದಾರೆಯೇ ? ಹಾಗೂ ಅಲ್ಲಿ ನಿಯಮಿತ ಪಾಠಗಳು ಸರಿಯಾಗಿ ನಡೆಯುತ್ತಿವೆಯೆ ? ನಿಮ್ಮ ಮಕ್ಕಳಿಗೆ ಪಾಠ ಹೇಳಿಕೊಡುವ ಸಲುವಾಗಿಯೇ ಪರ ಊರಿನಿಂದ ನಿಮ್ಮನ್ನಾಶ್ರಯಿಸಿ ಬಂದ ಉಪಾಧ್ಯಾಯರುಗಳಿಗೆ ನಿಮ್ಮ ಊರಲ್ಲಿ ವಸತಿ ಸೌಕರ್ಯವೇನಾದರೂ ಇದೆಯೇ ? ನಿಮ್ಮ ಮಕ್ಕಳು ಶಾಲೆಗೆ ಸರಿಯಾಗಿ ಹಾಜರಾಗುತ್ತಿರುವರೆ ? ನಿಮ್ಮ ಊರಲ್ಲಿ ಆಸ್ಪತ್ರೆ ಏನಾದರೂ ಉಂಟೆ ? ನೀವು ದೇವರು, ದೇವಾಲಯ, ಅದಕ್ಕೆ ಗರುಡಗಂಭ ಇತ್ಯಾದಿಗಳ ಬಗ್ಗೆ ಸಂಘಟಿತರಾಗಿ ಆಲೋಚಿಸುವಂತೆ ಇವುಗಳ ಬಗ್ಗೆ ಏನಾದರೂ ಯೋಚಿಸಿದ್ದೀರಾ ? ಇದು ನಿಮ್ಮೆಲ್ಲರ ಕರ್ತವ್ಯವಲ್ಲವೆ ? – ಎಂಬಂಥ ಗಂಭೀರ ಪ್ರಶ್ನೆಗಳನ್ನು ಹಾಕುತ್ತಾರೆ.

ಭಕ್ತರ ಪುರಾಣ ಕತೆಗಳನ್ನು ಕೇಳುತ್ತ, ದೇವತೆಗಳಿಗೆ ಹರಕೆ ಹೊರುವುದು – ಹರಕೆ ತೀರಿಸುವುದು ಮೊದಲಾದ ಆಚರಣೆಗಳ ವಾತಾವರಣದಲ್ಲಿ ಬೆಳೆದ ಮಕ್ಕಳು ಮುಂದೇನಾಗುತ್ತಾರೆಂದು ವಿವರಿಸುತ್ತ ಇವರೆಲ್ಲರ ತಲೆಯಲ್ಲಿ ಅಂಧವಿಶ್ವಾಸ ವೆಂಬುದು ಬೇರೂರಿ ಬಿಡುತ್ತದೆ; ಪ್ರೌಢರಾದ ಮೇಲೆಯೂ ತಮ್ಮ ಕೆಲಸಗಳಿಗಾಗಿ ಬಾಬಾಗಳು, ಸಂನ್ಯಾಸಿಗಳು, ಮಠಾಧಿಪತಿಗಳ ಮುಂದೆ ಕೈ ಜೋಡಿಸಿ ನಿಲ್ಲುತ್ತಾರೆ; ಪುರೋಹಿತರು ಹೇಳಿದ ಪೂಜೆ ಪುನಸ್ಕಾರ, ಹೋಮ, ಯಜ್ಞಗಳನ್ನು ಆಚರಿಸುತ್ತಾರೆ. ಗುರುತ್ವಾಕರ್ಷಣೆಯನ್ನು ಮೀರಿ ಮೇಲಕ್ಕೆ ಚಿಮ್ಮುವ ರಾಕೆಟ್ ನಿರ್ಮಿಸಿದ ವಿಜ್ಞಾನಿಯು ತನ್ನ ಪ್ರಯೋಗಕ್ಕೆ ಮುಂಚೆ ಪುರೋಹಿತರಿಂದ ಪೂಜೆ ಮಾಡಿಸಿ, ರಾಹುಕಾಲವನ್ನು ಗಮನಿಸಿದ ನಂತರವೇ ಪ್ರಯೋಗ ನಡೆಸುತ್ತಾನೆ; ಅಂದಮೇಲೆ ಆತ ವಿಜ್ಞಾನಕ್ಕೆ ಜಿಂದಾಬಾದ್ ಎನ್ನುತ್ತಿದ್ದಾನೆಯೋ ಮತ ಧರ್ಮಕ್ಕೆ ಜಿಂದಾಬಾದ್ ಎನ್ನುತ್ತಿದ್ದಾನೆಯೋ ! ನೀವೇ ಯೋಚಿಸಿ. – ಇದು ಲೇಖಕನು ಆಧುನಿಕ ವಿದ್ಯಾವಂತರ ಮಾನಸಿಕ ಗೊಂದಲವನ್ನು ತೆರೆದಿಡುವ ಬಗೆ.

ಹಲವು ಅಧ್ಯಾಯಗಳಲ್ಲಿ ನಮ್ಮ ಪುರಾಣ ಪುಣ್ಯ ಕಥಾ ಪ್ರಸಂಗಗಳನ್ನು ಉಲ್ಲೇಖಿಸುತ್ತಾ, ಸೂತ್ರರೂಪದ ನುಡಿಗಟ್ಟುಗಳನ್ನು ಉಪಶೀರ್ಷಿಕೆಗಳಾಗಿ ಬಳಸಿ ಇಂಥ ಪ್ರಸಂಗಗಳ ಅಸಂಬದ್ಧತೆಯನ್ನು ಗೇಲಿ ಮಾಡುವುದು ಸದಾಶಿವಯೋಗಿಗಳ ಬರವಣಿಗೆಯ ರೀತಿ. ಶ್ರೀಕೃಷ್ಣನು ಕಳ್ಳ, ಸ್ತ್ರೀಲೋಲ; ಪಾಂಚಾಲಿ ಪತಿವ್ರತೆಯೇ ? ಲಕ್ಷ್ಮೀ- ಸರಸ್ವತಿ- ಪಾರ್ವತಿಯರು ಮತ್ಸರದ ಪಿಶಾಚಿಗಳು; ಜಲಂಧರನ ವಜ್ರ ಕವಚ – ಬೃಂದಾಳ ಪಾತಿವ್ರತ್ಯ ಭಂಗ; ಗೌತಮನಿಂದ ಕೊಲೆಯೊ-ಶಾಪವೊ ? ಗುರು ದ್ರೋಹಿ ಚಂದ್ರ; ವಾಲಿಯನ್ನು ಕೊಂದ ರಾಮ ನ್ಯಾಯವಂತನೆ ? ಶೂದ್ರ ತಪಸ್ವಿಯನ್ನು ಕೊಂದ ರಾಮ ಧರ್ಮರಕ್ಷಕನೆ ? ಲಂಕಾದಹನದ ರಾಮ ಲೋಕ ಪೂಜ್ಯನೆ ? ಸೀತೆಯನ್ನು ಅರಣ್ಯಕ್ಕಟ್ಟಿದ ರಾಮ ಪುರುಷೋತ್ತಮನೆ ? ದೇವತೆಗಳು ಚಪಲ ಚೆನ್ನಿಗರಾಯರು; ಶುಕ್ಲ ತಿನ್ನಿಸಿ ಮಗು ಪಡೆಯಲು ಸಾಧ್ಯವೇ ? ಜೂಜುಕೋರ ಧರ್ಮರಾಯ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ ಪವಾಡವೊ, ಪುಂಡಾಟವೊ ? ಕುಂತಿಗೆ ಕರ್ಣಾದಿಗಳು ಜನಿಸಿದ್ದು ವರದಿಂದಲೊ ? – ಹೀಗೆ ಪ್ರಸಂಗಗಳನ್ನು ಹೆಸರಿಸಿ ಇದನ್ನೆಲ್ಲ ವಿಮರ್ಶೆ ಮಾಡಿದರೆ ಘೋರ ನರಕವೆಂದು ಹೇಳುವ ಪಂಡಿತರನ್ನು ಖಂಡಿಸುತ್ತಾರೆ. 'ಇವನ್ನೆಲ್ಲ ನೋಡಿದರೆ ಈರ್ಷ್ಯೆ ಮತ್ಸರಗಳಲ್ಲಿ ನಲಿಯುವ ಇಂಥ ದೇವತೆಗಳಿಗಿಂತ ಸಮಾಜದ ಕಟ್ಟುಪಾಡುಗಳನ್ನು ಪಾಲಿಸುವ ಮನುಷ್ಯರೆ ಉತ್ತಮ'ವೆಂಬುದು ಲೇಖಕರ ತೀರ್ಮಾನ.

ಹಗಲು ಹೊತ್ತಿನಲ್ಲಿ ಹೆಣ್ಣು-ಗಂಡುಗಳ ಮಿಲನದ ಬಗ್ಗೆ ಮಾತಾಡಲು ಕೂಡ ಹಿಂಜರಿಯುವ ಮಡಿವಂತರು ಪ್ರತಿ ಶನಿವಾರ ಬೆಳಗಾಗ ದೇವರನ್ನು ಎಬ್ಬಿಸುವ ಸಲುವಾಗಿ ರೇಡಿಯೋದಲ್ಲಿ ಪ್ರಸಾರವಾದ 'ಶ್ರೀ ವೆಂಕಟೇಶ್ವರ ಸುಪ್ರಭಾತ'ವನ್ನು ಕೇಳಿಸಿಕೊಂಡು ಆನಂದತುಂದಿಲರಾಗುತ್ತಾರಷ್ಟೆ, ಅಲ್ಲಿನ ಕೆಲವು ಸಾಲುಗಳನ್ನು ಉದ್ಧರಿಸುತ್ತಾರೆ, ಸದಾಶಿವಯೋಗಿ –

ಕಾಂತಾ ಕುಚಾಂಬುರುಹ ಕುಡ್ಮಲಲೋಲದೃಷ್ಟೇ

....................................................

ಕಮಲಾ ಕುಚಚೂಚುಕ ಕುಂಕುಮತೋ

ನಿಯತಾರುಣಿತಾತುಲನೀಲತನೋ

ಕಮಲಾಯತಲೋಚನ ಲೋಕಪತೇ

ವಿಜಯೀಭವ ವೇಂಕಟಶೈಲಪತೇ - ಇತ್ಯಾದಿ.

ಈ ಶ್ಲೋಕದ ಅರ್ಥವನ್ನು ಹೇಳಲು ನನಗೆ ನಾಚಿಕೆಯಾಗುತ್ತದೆ. ಆದಕಾರಣ ಯಾರಾದರೂ ಸಂಸ್ಕೃತ ಪಂಡಿತರಿಂದ ಇವುಗಳ ಅರ್ಥವನ್ನು ನೀವೇ ತಿಳಿದುಕೊಳ್ಳಿ ಎಂಬುದು ಲೇಖಕರ ಷರಾ. (ಆ ಸಂಸ್ಕೃತ ಪಂಡಿತನು ಧರ್ಮದ ಗೊಡ್ಡಾದರೆ ಅರ್ಥ ಕೇಳಿದವರಿಗೆ ಛೀಮಾರಿ ಹಾಕಿಯಾನು ! ಅಥವಾ ರಸಿಕನಾದರೆ ಹರಿಕಥೆ ದಾಸರ ಹಾಗೆ ಶ್ಲೋಕದ ಅರ್ಥಕ್ಕೆ ಇನ್ನಷ್ಟು ಉಪ್ಪು ಖಾರ ಹಚ್ಚಿ ವರ್ಣಿಸಿಯಾನು).

ಭಗವಂತರುಗಳು ಮತ್ತು ಆಯಾ ಭಗವಂತರ ಅನುಯಾಯಿಗಳಿಗೆ ಸಂಬಂಧಿ ಸಿದಂತೆ ಬೆಳೆದುಬಂದಿರುವ ನೂರಾರು ಜಾತಿ ಮತಗಳ ಕಲ್ಪನೆಯು ಸಹ ಸದಾಶಿವಯೋಗಿಗಳ ಖಂಡನೆಗೆ ಗುರಿಯಾಗಿದೆ. ವಿವಿಧ ಜಾತಿಯ ಸಾವಿರಾರು ಮಂದಿ ಕೂಡಿರುವ ಗುಂಪೊಂದರ ಮುಂದೆ ನಿಂತು ನಿಮ್ಮ ವರ್ಣಾಶ್ರಮ ಧರ್ಮದ ಪ್ರಕಾರ ಅಲ್ಲಿರುವವರ ಜಾತಿಯನ್ನು ಗುರ್ತಿಸಿ ಅವರನ್ನು ಬೇರ್ಪಡಿಸುವಂತಹ ಸಾಮರ್ಥ್ಯ ಹೊಂದಿದ ಉದ್ದಾಮ ಪಂಡಿತರೇ ಆಗಲಿ ಧರ್ಮಗುರುಗಳೇ ಆಗಲಿ ಯಾರಾದರೂ ಇರುವರೆ ? ಎಂದು ಪ್ರಶ್ನಿಸುತ್ತಾರೆ. ಕೀಟಲೆಯ ಧರ್ಮಗಳು (ನಿಮ್ಮ ದೇವರಿಗಿಂತ) ನಮ್ಮ ದೇವರೆ ದೊಡ್ಡವನೆಂಬ ವಾದ, ಧರ್ಮದ ಹೆಸರಿನ ಭವ್ಯ ಬಂಗಲೆ, ವಿಷ ಬೀಜದಂತಿರುವ ಜಾತಿಗಳು, ಜಾತಿಗಳನ್ನು ದೇವರು ವಿಂಗಡಿಸಿದ್ದಾನೆಯೆ ? ಕಾವಿ ತೊಟ್ಟವ ಸ್ವಾಮಿಯೆ ? ಕರ್ನಾಟಕದ ಗಡಿಯೇ ದಾಟಿಲ್ಲ ಆದರೂ ಜಗದ್ಗುರು ! ಶ್ರೀ ಶ್ರೀ ಶ್ರೀ ೧೦೮...೧೦೦೮ ಜಗದ್ಗುರುಗಳು ! ಕಿರೀಟ ಧರಿಸುವ ಫ್ಯಾಷನ್ ಗುರು ! ಅವತಾರಪುರುಷರ ಅವಾಂತರ... ಇತ್ಯಾದಿ, ಇತ್ಯಾದಿ ನುಡಿಗಟ್ಟುಗಳಲ್ಲಿ ಸದಾಶಿವಯೋಗಿಗಳಿಗೆ ಜಾತಿ ಮತಗಳು, ಧರ್ಮ ಗುರುಗಳ ಬಗೆಗೆ ಇರುವ ತಿರಸ್ಕಾರವೂ ವ್ಯಕ್ತವಾಗಿದೆ.

ಮಂತ್ರ ತಂತ್ರಾದಿಗಳ ಮಹಿಮೆ ಮತ್ತು ಅಂಥ ಮಂತ್ರ ತಂತ್ರಗಳನ್ನು ವಶಪಡಿಸಿ ಕೊಳ್ಳುವ ಮೂಲಕ ಸಮಾಜವನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಬಯಸುವ ಬ್ರಾಹ್ಮಣರ ಉದ್ಧಟತನವು ಈ ಕೆಳಗಿನ ಉದ್ಧರಣದಲ್ಲಿ ಎದ್ದುಕಾಣುತ್ತದೆ.

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂ ಚ ದೈವತಾ

ತತ್ ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋ ಮಮ (ಪ್ರತ್ಯಕ್ಷ) ದೇವತಾ ! –

ಅಂದರೆ ಈ ಜಗತ್ತೆಲ್ಲವೂ ಆ ದೇವರ ಅಧೀನದಲ್ಲಿದೆ. ಅಂತಹ ದೇವರುಗಳೆಲ್ಲ ಮಂತ್ರದ ಅಧೀನರಾಗಿಯೇ ಇರುತ್ತಾರೆ. ಈ ಎಲ್ಲಾ ಮಂತ್ರಗಳೂ ಬ್ರಾಹ್ಮಣರ ಅಧೀನದಲ್ಲೇ ಇರುವುದರಿಂದ ಆ ಬ್ರಾಹ್ಮಣನೇ ನಮಗೆ (ಪ್ರತ್ಯಕ್ಷ) ದೈವಸ್ವರೂಪಿ !

'ಭಾರತಕ್ಕೆ ಆರ್ಯರ ಆಗಮನ' ಎಂಬ ಅಧ್ಯಾಯದಲ್ಲಿ ಮಧ್ಯ ಏಷ್ಯಾ ಕಡೆಯಿಂದ ಆರ್ಯರು ಭಾರತವನ್ನು ಪ್ರವೇಶಿಸಿದುದು; ದ್ರಾವಿಡರು ಮತ್ತು ಆರ್ಯರ ಸಂಘರ್ಷ, ಬೇರೆ ಬೇರೆ ಗುಂಪುಗಳವರು ನಿರ್ವಹಿಸುತ್ತಿದ್ದ ವೃತ್ತಿಗಳಿಗೆ ಅನುಗುಣವಾಗಿ ಜಾತಿ ವಿಂಗಡಣೆ ಇತ್ಯಾದಿಗಳನ್ನು ಚರ್ಚಿಸಲಾಗಿದೆ. ಜಾತಿ ವಿಂಗಡಣೆಯು ಭಾರತಕ್ಕೆ ಆರ್ಯರು ಪ್ರವೇಶಿಸಿದ ನಂತರವೇ ಮೊದಲಿಟ್ಟಿತೇ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಆದರೆ 'ವರ್ಣಾಶ್ರಮ ಧರ್ಮ ವ್ಯವಸ್ಥೆ' ಎಂಬ ಕಲ್ಪನೆ ಮತ್ತು 'ವರ್ಣ'ಗಳಿಗೆ ಅನುಗುಣವಾಗಿ ಸಮಾಜದಲ್ಲಿ ಮೇಲು ಕೀಳುಗಳ ವಿಂಗಡಣೆ ಹಾಗೂ ಜಾತೀಯ ಕಟ್ಟುಪಾಡುಗಳಿಗೆ ಒಂದು ಸೈದ್ಧಾಂತಿಕ ರೂಪವು

ಪ್ರಾಪ್ತವಾದುದು ಆರ್ಯರು ಭಾರತದಲ್ಲಿ ನೆಲೆಸಿ 'ವೈದಿಕ ಸಂಸ್ಕೃತಿ'ಯನ್ನು ಪ್ರಚಾರಕ್ಕೆ ತಂದ ಅನಂತರವೇ ಎಂದು ತಿಳಿಯಲಡ್ಡಿಯಿಲ್ಲ. ಜಾತಿ ಮತ ವಿಂಗಡಣೆಯ ಮೂಲ ಕಲ್ಪನೆ ಹೇಗೇ ಇರಲಿ; ಇಂದಿಗೂ ಸಹ ಜಾತಿ ವಿಂಗಡಣೆಯು ಒಂದು 'ಜ್ವಾಲಾಮುಖಿ'ಯಾಗಿದೆ ಎಂಬುದು ಸದಾಶಿವಯೋಗಿಗಳ ಖಚಿತ ಅಭಿಪ್ರಾಯ. ಆದ್ದರಿಂದಲೇ ಅವರು 'ಜಾತಿಯ ವಿಷಜ್ವಾಲೆ-ಮನುಕುಲದ ನಾಶ' ಎಂಬ ನುಡಿಗಟ್ಟನ್ನು ಈ ಅಧ್ಯಾಯದ ಕಡೆಯ ಮಾತಾಗಿ ಸೇರಿಸಿದ್ದಾರೆ.




'ಭಾವನೆಯ ಸಂಕೇತವೇ ಭಾಷೆ' ಎಂಬ ಅಧ್ಯಾಯದಲ್ಲಿ ಭಾಷೆ ಹಾಗೂ ಭಾವನೆಗಳ ಸಂಬಂಧ, ಸಾಂಘಿಕ ಜೀವನಕ್ಕೆ ಭಾಷೆಯ ಅಗತ್ಯ, ಮಾತೃಭಾಷೆಯ ಸ್ಥಾನ ಇವುಗಳನ್ನು ಸ್ಥೂಲವಾಗಿ ಚರ್ಚಿಸಲಾಗಿದೆ. ಇದೇ ಸಂದರ್ಭದಲ್ಲಿ ಹೇಳಲಾಗಿರುವ – ''ಈ ಭಾಷೆ (ಸಂಸ್ಕೃತ)ಯಲ್ಲಿ ಅಂತರಾತ್ಮ ತತ್ವ ವಿಚಾರಾನುಭವ, ಬೋಧನೆಗಳು ಮಾತ್ರ ಇರುವುದರಿಂದ ಇದಕ್ಕೆ ಸಮಾಜದಲ್ಲಿ ಎಲ್ಲ ವ್ಯಾವಹಾರಿಕ ಬೇರೆ ಭಾಷೆಗಳಿಗಿಂತಲೂ ಹೆಚ್ಚು ಪುರಸ್ಕರಿಸಲ್ಪಟ್ಟಿದೆ. ಏಕೆಂದರೆ ಬೇರೆಲ್ಲ ಭಾಷೆಗಳು ಕೇವಲ ಸಂಘ ವ್ಯವಹಾರಾರ್ಥವಾಗಿ ಆಯಾ ಸಂಘದವರೇ ರಚಿಸಿಕೊಂಡ ಲೌಕಿಕ ವ್ಯಾವಹಾರಿಕ ಭಾಷೆಗಳು. ಆದರೆ ಇದು (ಸಂಸ್ಕೃತ) ಸಂಘ ವ್ಯಾವಹಾರಿಕ ಭಾಷೆಯಾಗಿರದೆ ಇಡೀ ಮಾನವಕುಲಕ್ಕೇ ಅತ್ಯಾವಶ್ಯಕವಾದ ಸುಖ ಶಾಂತಿ ತತ್ವ ನಿರೂಪಣೆಯ ಭಾವನಾ ಸಂಕೇತ. ಆದ್ದರಿಂದಲೇ ಸಂಸ್ಕೃತ ಭಾಷೆಯು ದೇವಮಾನವ ಭಾಷೆ ಎನಿಸಿಕೊಂಡು ಪೂಜನೀಯವಾಗಿದೆ...'' ಇತ್ಯಾದಿ ಮಾತುಗಳನ್ನು ಎಲ್ಲರೂ ಒಪ್ಪಬೇಕೆಂದಿಲ್ಲ. ಏನಿದ್ದರೂ ಇವು ಪ್ರಾಸಂಗಿಕವಾಗಿ ಬರುವ ವಿಚಾರಗಳಾದ್ದರಿಂದ ಅಲಕ್ಷಿಸಬಹುದು.

ವೇದಗಳು, ಪುರಾಣಗಳು ಹಾಗೂ ರಾಮಾಯಣ-ಮಹಾಭಾರತಗಳನ್ನು ಕುರಿತ ಅಧ್ಯಾಯಗಳಲ್ಲಿ ದೇವತೆಗಳು, ಅವತಾರಪುರುಷರು, ಋಷಿಮುನಿಗಳು ಮೊದಲಾದವರ ಚಿತ್ರ ವಿಚಿತ್ರ ರೂಪ, ಅತಿರೇಕದ ನಡವಳಿಕೆ, ಅಸಹಜ-ಅವೈಚಾರಿಕ ಘಟನೆಗಳು ಮೊದಲಾದವನ್ನು ಲೇಖಕರು ತಮ್ಮದೇ ಆದ ವಿನೋದ ಶೈಲಿಯಲ್ಲಿ ಖಂಡಿಸಿದ್ದಾರೆ. ದೇವರ ಕೈಯಲ್ಲಿ ಮಾರಕಾಸ್ತ್ರಗಳು, ಪುರೋಹಿತರು-ಜಗದ್ಗುರುಗಳೆಂಬ ಮಧ್ಯವರ್ತಿಗಳು, ಸ್ವರ್ಗಕ್ಕೆ ಹೋಗಲು, ದೇವರ ದರ್ಶನ ಮಾಡಲು ಹಣ ಪಾವತಿ, ಹಣ ಕೊಡಲಾರದ ಪಾಪಿಗಳು ಯಮಲೋಕಕ್ಕೆ; ಪುತ್ರಕಾಮೇಷ್ಟಿಯಿಂದ ಮಾನವನಿಗೆ ಸಂತಾನ ಪ್ರಾಪ್ತಿ ಸಾಧ್ಯವೇ? ರಾಮ ರಾವಣರಿಗೆ ವೈಷಮ್ಯವೇಕೆ? ಸೀತಾಪಹರಣವೆಂಬ ಸುಳ್ಳು ನಾಟಕ; ರಾಮರಸದ ಗುಂಗಿನಲ್ಲಿ 'ರಾಮದಾಸರು' ಹೇಳುವುದೇನು? ದ್ರೋಣನಿಗೆ (ಏಕಲವ್ಯನ) ಗುರುದಕ್ಷಿಣೆ! ವಂಚನೆಗೊಳಗಾದ ಕಲಿಕರ್ಣ, ಅರಗಿನ ಮನೆಯಲ್ಲಿ ಬಡ ಶೂದ್ರಕುಟುಂಬದ ದಹನ ಇತ್ಯಾದಿ. ರಾಮಾಯಣ ಮಹಾಭಾರತಗಳನ್ನು ಪವಿತ್ರ ಗ್ರಂಥಗಳೆಂದು ಪಾರಾಯಣ ಮಾಡುವ ಭಕ್ತರಿಗೆ ಲೇಖಕರ ಮಾತುಗಳಿಂದ ಕೋಪ ನೆತ್ತಿಗೇರಿದರೆ ಆಶ್ಚರ್ಯವಿಲ್ಲ.

'ಭಾರತೀಯ ಧರ್ಮಶಾಸ್ತ್ರದಲ್ಲಿ ಸ್ತ್ರೀಗೆ ಕೊಟ್ಟಿರುವ ಸ್ಥಾನ' – ಎಂಬ ಅಧ್ಯಾಯದ ಸಾರಾಂಶವನ್ನು ಲೇಖಕರ ಮಾತುಗಳಲ್ಲಿಯೇ ಸಂಗ್ರಹಿಸಬಹುದು: ''ಧರ್ಮಶಾಸ್ತ್ರದಲ್ಲಿ ಸ್ತ್ರೀಯರಿಗೆ ಅತ್ಯಂತ ಗೌರವದ ಸ್ಥಾನ ಕೊಟ್ಟು ಅವರನ್ನು ಪೂಜನೀಯರಾಗಿ ಗೌರವಿಸಿದೆ ಎಂದು ಹೇಳಿಕೊಳ್ಳುವುದಕ್ಕಿಂತ ಅವರನ್ನು ಈ ರೀತಿ ಹೊಗಳಿಕೆಯ ಮೋಡಿಯ ವಶೀಕರಣದಿಂದ ದಡ್ಡರನ್ನಾಗಿಸಿಕೊಂಡಿದೆಯೇ ಹೊರತು ಪುಸ್ತಕಗಳಲ್ಲಿ ಹಾಡಿ ಹೊಗಳಿರುವಂತೆ ಅವರಿಗೆ ಅಷ್ಟೇನೂ ಗೌರವ ದೊರೆತೇ ಇಲ್ಲ...'' ಇತ್ಯಾದಿ. ಇದರ ಜೊತೆ 'ಸ್ತ್ರೀ ಬುದ್ಧಿಃ ಪ್ರಳಯಾಂತಕಃ, ಹೆಂಡತಿ ಸತ್ತರೆ ಪುನರ್ವಿವಾಹ, ಗಂಡ ಸತ್ತರೆ ವಿಧವೆ ಪಟ್ಟ, ಸ್ತ್ರೀಯರ ಮಾರಾಟ ಮತ್ತು ಕನ್ಯಾದಾನವೆಂಬ ನಾಟಕ' ಮೊದಲಾದ ನುಡಿಗಟ್ಟುಗಳನ್ನೂ ನೋಡಬಹುದು. 'ಮನುಸ್ಮೃತಿ'ಯ ಬಗ್ಗೆ ಬರೆಯುತ್ತಾ ''ಅವನು (ಶಾಸ್ತ್ರಕಾರನಾದ ಮನು) ಒಬ್ಬ ಸ್ತ್ರೀ ದ್ವೇಷಿಯಾದ ಮನೋರೋಗಿಯಾಗಿರುತ್ತಾನೆ... ಆತನಿಗೆ ತನ್ನನ್ನು ಹಾಗೂ ತನ್ನ ತಂದೆಯನ್ನು ಹೆತ್ತವಳು ಸಹ ಒಬ್ಬ ಸ್ತ್ರೀಯೇ ಆಗಿದ್ದಳೆಂಬ ಅರಿವು ಇದ್ದಿದ್ದರೆ ತನ್ನನ್ನೂ ಹೆತ್ತ ಮಾತೆಯ ವಿಚಾರವಾಗಿ ಹೀಗೆ ಬರೆಯುತ್ತಿರಲಿಲ್ಲ. ಇಂಥವನನ್ನು ಒಬ್ಬ ಅವಧೂತ, ಜ್ಞಾನಿ ಎನ್ನಬಹುದೆ?'' ಇತ್ಯಾದಿ. ಭಾರತೀಯ ಸ್ತ್ರೀಯರ ವಿಚಾರವಾಗಿ ಇಷ್ಟು ಲಘುವಾಗಿ ಬರೆದಿರುವುದನ್ನು ನೋಡಿ ಕುಪಿತಳಾದ ಒಬ್ಬ ವಿದೇಶಿ ಮಹಿಳೆಯು ''ಭಾರತದಲ್ಲಿ ಮನು ವೆಂಬುವವನು ಈಗ ಬದುಕಿದ್ದೇ ಆದರೆ ನಾನೇ ಹೋಗಿ ಅವನನ್ನು ಶೂಟ್ ಮಾಡಿಬಿಡುತ್ತಿದ್ದೆ'' ಎಂದು ಉದ್ಗರಿಸಿದಳಂತೆ ಎಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿ 'ಸತಿ' ಎಂಬ ಕ್ರೂರ ರಾಕ್ಷಸೀ ಪದ್ಧತಿಯನ್ನು ನಿರ್ಮೂಲ ಮಾಡಲು ತನ್ನ ತನು ಮನ ಧನಗಳನ್ನು ಮುಡುಪಾಗಿಟ್ಟ ರಾಜಾರಾಮ ಮೋಹನ ರಾಯನನ್ನು ನೆನೆಸಿಕೊಂಡು ''ಈ ಸತ್ಪುರುಷನ ವಿಚಾರವಾಗಿ ಅದೆಷ್ಟು ಸ್ತ್ರೀಯರಿಗೆ ಗೊತ್ತಿದೆಯೊ!'' ಎಂದು ಭಾರತೀಯ ಸ್ತ್ರೀಯರಲ್ಲಿ ನೆಲೆಸಿರುವ ಅಜ್ಞಾನದ ಬಗೆಗೆ ವಿಷಾದಿಸಿದ್ದಾರೆ, ಲೇಖಕರು.

ಒಂದು ಅಧ್ಯಾಯವನ್ನು 'ಮನುವಿನ ಮಹತ್ವ' ಎಂದು ಹೆಸರಿಸಿರುವುದಂತೂ ಕಟು ವ್ಯಂಗ್ಯವಾಗಿದೆ. ಈ ಧರ್ಮಶಾಸ್ತ್ರಕಾರನು ಶೂದ್ರರ ಬಗೆಗೆ ತಾಳಿದ್ದ ಅಮಾನವೀಯ ಧೋರಣೆಗಳನ್ನು ಬಗೆ ಬಗೆಯಾಗಿ ಖಂಡಿಸಲಾಗಿದೆ –

ಏಕಮೇವ ತು ಶೂದ್ರಸ್ಯ ಪ್ರಭುಃ ಕರ್ಮ ಸಮಾದಿಶತ್
ಏತೇಷಾಮೇವ ವರ್ಣಾನಾಂ ಶುಶ್ರೂಷಾಮನಸೂಯಯಾ ॥

(ಶೂದ್ರನು-ಮಾನಮರ್ಯಾದೆ ಬಿಟ್ಟು – ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಸೇವೆ ಮಾಡಿಕೊಂಡು ಅವನ ಜೀವನ ಸಾಗಿಸಬೇಕು.)

ಪತಿತೋಪಿ ದ್ವಿಜಃ ಶ್ರೇಷ್ಠೋ ನ ಚ ಶೂದ್ರೋ ಜಿತೇಂದ್ರಿಯಃ...

(ಪತಿತನಾದರೂ ಬ್ರಾಹ್ಮಣ ಶ್ರೇಷ್ಠನೇ; ಶೂದ್ರನು ಜಿತೇಂದ್ರಿಯನಾದರೂ ಶ್ರೇಷ್ಠನಲ್ಲ...)

ಬ್ರಾಹ್ಮಣನನ್ನು ಹೊಡೆಯಲು ದೊಣ್ಣೆ ಎತ್ತಿದರೆ ನೂರು ವರ್ಷ ನರಕ! ಹೊಡೆದರೆ ಸಾವಿರ ವರ್ಷ ನರಕ! ಹೊಡೆದು ಆತನಿಂದ ರಕ್ತ ಸೋರಿದರೆ ಆ ರಕ್ತದ ಹನಿಗಳಷ್ಟು ಸಂಖ್ಯೆಯ ವರ್ಷಗಳು ನರಕಪ್ರಾಪ್ತಿ... ತಪ್ಪು ಮಾಡಿದ ಮೇಲ್ಜಾತಿಯವರಿಗೆ ಪ್ರಾಯಶ್ಚಿತ್ತ; ಶೂದ್ರರಿಗೆ ಘೋರಶಿಕ್ಷೆ... ಇವೇ ಮೊದಲಾದ ಮಾತುಗಳನ್ನು ಉದಾಹರಿಸಿ ಹೇಗಿದೆ ಈ ನ್ಯಾಯ ತೀರ್ಮಾನ ವ್ಯವಸ್ಥೆ! ಎಂದು ಕೇಳುತ್ತಾರೆ.

ಹರಿಜನರಾರು? ಗಿರಿಜನರಾರು? – ಎಂಬ ಶೀರ್ಷಿಕೆಯಲ್ಲಿ ಹೇಳುವಂತೆ – ''ಪ್ರಕೃತಿಸಹಜವಾಗಿ ಒಂದೇ ಆದ ಮಾನವರಲ್ಲಿ ವರ್ಣ, ಜಾತಿ, ಪಂಗಡ ಮೊದಲಾದವುಗಳು ಮಾನವ ನಿರ್ಮಿತವಾದವು'' ಎಂಬ ಮಾತನ್ನು ಎಲ್ಲರೂ ಒಪ್ಪಬಹುದು. ಆದರೆ, ಗಿರಿಜನರ ಬಗ್ಗೆ ಬರೆಯುತ್ತ ''ಹಿಂದೂ ಸಂಪ್ರದಾಯ ಶಾಸ್ತ್ರದ ಪ್ರಕಾರ ಮದುವೆಯಾಗುವ ಮುಂಚೆ ರಜಸ್ವಲೆಯರಾದ ಹುಡುಗಿಯರನ್ನು ಕಾಡಿಗೆ ಬಿಡುತ್ತಿದ್ದರು; ಹೀಗೆ ಕಾಡು ಸೇರಿದ ಕುವರಿಯರೊಂದಿಗೆ ಸಮಾಜದ ಪುರುಷರು ಕೂಡುತ್ತಿದ್ದುದರಿಂದ ಹುಟ್ಟಿ, ಕಾಡಿನಲ್ಲಿಯೇ ಬೆಳೆದು ಅನಾಗರಿಕರಾದವರು 'ಗಿರಿಜನ' ಆದರು'' ಇತ್ಯಾದಿಯಾಗಿ ಹೇಳುವುದು ವಿಚಾರ ಸಮ್ಮತವೆನಿಸುವುದಿಲ್ಲ.

'ಸತ್ಯ ಶೋಧಕರಿಗೆ ಪ್ರಶಸ್ತಿಗಳು' ಎಂಬ ಶೀರ್ಷಿಕೆಯು ವಿಡಂಬನಾತ್ಮಕವಾದುದು. ಪ್ರಾಚೀನ ಸಮಾಜಗಳಲ್ಲಿ ಪರಂಪರಾಗತ, ಆಧಾರರಹಿತ ನಂಬಿಕೆ... ಪ್ರಶ್ನಿಸಿದವರಿಗೆ, ಹೊಸ ಸಂಶೋಧನೆಗಳನ್ನು ಮಾಡಿದವರಿಗೆ ಸಂಪ್ರದಾಯನಿಷ್ಠ ಪಂಡಿತರಿಂದ ದೊರೆಯುತ್ತಿದ್ದ ಪ್ರಶಸ್ತಿಗಳೆಂದರೆ, ಮರಣದಂಡನೆ, ಜೈಲುವಾಸ, ಪ್ರಾಣಾಪಾಯದ ಬೆದರಿಕೆ ಇಂಥವುಗಳೇ ಎಂದು ಲೇಖಕರು ಕಟಕಿಯಾಡಿದ್ದಾರೆ. ಮತ ಧರ್ಮಾಂಧರು ನಡೆಸಿದ ದಬ್ಬಾಳಿಕೆ ಭಾರತಕ್ಕೆ ಮಾತ್ರ ಸೀಮಿತವಾದುದಲ್ಲ ಎಂಬುದನ್ನು ಸ್ಪಷ್ಟಪಡಿಸುವ ಸಲುವಾಗಿ, ದೂರದರ್ಶಕದ ಸಹಾಯದಿಂದ ಭೂಮಿಯ ಆಕಾರವನ್ನೂ ಸುತ್ತುವಿಕೆಯನ್ನೂ ಪ್ರತಿಪಾದಿಸಿದ ಗೆಲಿಲಿಯೊಗೆ ಪ್ರಾಣ

ಬೆದರಿಕೆಯೊಡ್ಡಿದುದು; ತತ್ವಜ್ಞಾನಿ ಸಾಕ್ರಟೀಸನನ್ನು ವಿಷ ಉಣಿಸಿಕೊಂದದ್ದು; ಸಿಡಿಮದ್ದನ್ನು ಕಂಡುಹಿಡಿದ ವಿಜ್ಞಾನಿಯನ್ನು ಸುಟ್ಟು ಹಾಕಿದ್ದು ಮೊದಲಾದ ಪ್ರಸಂಗಗಳನ್ನೂ ಉದಾಹರಿಸಿದ್ದಾರೆ. ಈ ಅಧ್ಯಾಯದ ಕಡೆಯಲ್ಲಿ ಪ್ರೊ॥ ಹಕ್ಲೇ ಎಂಬ ವಿದೇಶಿ ವಿದ್ವಾಂಸನು ಭಾರತಕ್ಕೆ ಬಂದಾಗ ನಡೆದ ಘಟನೆಯೊಂದನ್ನು ಪ್ರಸ್ತಾಪಿಸಿರುವುದು ಸ್ವಾರಸ್ಯಕರವಾಗಿದೆ. ಈತ ಬನಾರಸ್ (ಕಾಶಿ) ಕ್ಷೇತ್ರದಲ್ಲಿದ್ದಾಗ ಒಂದು ಸೂರ್ಯ ಗ್ರಹಣ ಸಂಭವಿಸಿತು. ಆಗ ಗಂಗಾನದಿ ತೀರದಲ್ಲಿ ಮತ ಧರ್ಮನಿಷ್ಠರಾದ ಹಲವು ಜನ ಸೇರಿ ಮತೀಯ ಆಚರಣೆಗಳಲ್ಲಿ ತೊಡಗಿದ್ದರು; ನೀವೇನು ಮಾಡುತ್ತಿದ್ದೀರಿ ಎಂದು ಆತ ಕೇಳಿದುದಕ್ಕೆ ಅವರು 'ಈ ದಿನ ಸರ್ಪವೊಂದು ಸೂರ್ಯ ದೇವನನ್ನು ನುಂಗುತ್ತದೆ; ಆದ್ದರಿಂದ ನಾವೆಲ್ಲ ಮಡಿಯುಟ್ಟು ಭಕ್ತಿಯಿಂದ ಸೂರ್ಯನ ಬಿಡುಗಡೆಗಾಗಿ ಭಗವಂತನನ್ನು ಪ್ರಾರ್ಥಿಸುತ್ತಿದ್ದೇವೆ' ಎಂದು ಹೇಳಿದರು. ಅವರ ಮಾತನ್ನು ಕೇಳಿದ ವಿದೇಶೀಯನು ಮನಸ್ಸಿನಲ್ಲಿಯೇ ನಕ್ಕು 'ಇವರು ಇದೇ ಶ್ರದ್ಧೆ ಮತ್ತು ಒಗ್ಗಟ್ಟಿನಿಂದ ತಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ಕೆಲಸ ಮಾಡಿದ್ದರೆ ಎಂದೋ ದೇಶಕ್ಕೆ ಸ್ವಾತಂತ್ರ್ಯವು ದೊರೆಯುತ್ತಿತ್ತು' ಎಂದು ಕೊಂಡನಂತೆ. ಈ ಮಾತುಗಳನ್ನು ಪ್ರೊ॥ ಹಕ್ಲೇ ತಾನು ಬರೆದ 'ಬನಾರಸ್' ಎಂಬ ಪ್ರಬಂಧದಲ್ಲಿ ಹೇಳಿದ್ದಾನೆ ಎನ್ನುತ್ತಾರೆ.

ಸದಾಶಿವಯೋಗಿಗಳು 'ಭರತಖಂಡ'ವೆಂಬ ಹೆಸರಿನ ಮೂಲವನ್ನು ಶೋಧಿಸುತ್ತ ಹೋಗುವ ರೀತಿಯು, ಆ ಹೆಸರಿನ ಬಗೆಗೆ ಅತಿ ಹೆಮ್ಮೆ ಪಡುವ ಜನರ ಮನಸ್ಸಿಗೆ ಆಘಾತ ಉಂಟುಮಾಡಬಹುದು. ಆದರೇನು, ತಮಗೆ ಅನಿಸಿದ ಸತ್ಯವನ್ನು ಹೇಳಲೇಬೇಕೆಂಬುದು ಲೇಖಕರ ಹಟ –

– ದೇವಲೋಕದ ವೇಶ್ಯೆಯಾದ ಮೇನಕೆ ಎಂಬುವಳು ಆ ದೇವೇಂದ್ರನ ಪುಸಲಾವಣೆಯಿಂದ ಭೂಲೋಕಕ್ಕೆ ಬಂದು ಇಲ್ಲಿನ ವಿಶ್ವಾಮಿತ್ರನೆಂಬ ತಪಸ್ವಿಯೊಡನೆ ಅನೈತಿಕ ಸಂಬಂಧ ಬೆಳೆಸಿ ಶಕುಂತಳೆಯನ್ನು ಹೆತ್ತದ್ದು, ಹುಟ್ಟಿದ ಮಗುವನ್ನು ಕಾಡುಪಾಲು ಮಾಡಿ ಅಪ್ಪ ಅಮ್ಮಂದಿರು ತಮ್ಮಷ್ಟಕ್ಕೆ ಹೊರಟುಹೋದದ್ದು, ಅನಾಥ ಶಿಶುವನ್ನು ಕಣ್ವರೆಂಬ ಋಷಿಯು ಸಾಕಿ ಸಲಹಿದ್ದು; ದೊಡ್ಡವಳಾದ ಮೇಲೆ ಶಕುಂತಳೆ ಮತ್ತು ದುಷ್ಯಂತನೆಂಬ ರಾಜ ಪರಸ್ಪರ ಮೋಹಿಸಿ ಯಾರಿಗೂ ತಿಳಿಸದೆ 'ಗಾಂಧರ್ವ ವಿವಾಹ'ವಾದದ್ದು, ಗರ್ಭಿಣಿಯಾದ ಶಕುಂತಲೆಯನ್ನು ದುಷ್ಯಂತನು ತಿರಸ್ಕರಿಸಿದ್ದು, ಅವಳಿಗೆ ಹುಟ್ಟಿದ ಮಗುವು ಮತ್ತೊಬ್ಬ ಋಷಿಯ ಆಶ್ರಮದಲ್ಲಿ ಬೆಳೆದು, ಮುಂದೆ ಮತ್ತೆ ದುಷ್ಯಂತನನ್ನು ಸೇರಿ ಭರತನೆಂಬ ಹೆಸರಿನ ಚಕ್ರವರ್ತಿಯಾದದ್ದು, ಆತನ ಹೆಸರಿನಿಂದಲೇ ಈ ಭೂಭಾಗಕ್ಕೆ 'ಭರತ ಖಂಡ'ವೆಂಬ ಹೆಸರು ಬಂದದ್ದು – ಈ ಎಲ್ಲ

## ಸಾದರ ಸ್ವೀಕಾರ

**ಇಂಗ್ಲಿಷ್ ಪದಸಂಪತ್ತು** (ಸ್ಪರ್ಧಾತ್ಮಕ ಪರೀಕ್ಷೆಗಳ ಸಂಗಾತಿ)
*ಬೇದ್ರೆ ಎನ್. ಮಂಜುನಾಥ*
**ಪುಟ : ೯೬** **ಬೆಲೆ : ರೂ. ೪೫**

**ಆಡಿ ಕಲಿಯೋಣ ಕನ್ನಡ** (ಭಾಷಾ ಆಟಗಳು)
*ಬೇದ್ರೆ ಎನ್. ಮಂಜುನಾಥ*
**ಪುಟ : ೮೦** **ಬೆಲೆ : ರೂ. ೩೫**

**ವಿದ್ಯುಚ್ಛಕ್ತಿ ಮತ್ತು ಬಳಕೆದಾರರು** (ಗ್ರಾಹಕ ಜಾಗೃತಿ)
*ವೈ. ಜಿ. ಮುರಳೀಧರ*
**ಪುಟ : ೫೬** **ಬೆಲೆ : ರೂ. ೨೦**

**ಕಬ್ಬಿಣದ ಕಾಚಾಗಳು**
*(ತಾಪೀ ಧರ್ಮಾರಾವು, ಅನು : ಸ. ರಘುನಾಥ)*
**ಪುಟ : ೭೨** **ಬೆಲೆ : ರೂ. ೩೦**

**ಈ ಭೂಮಿ ಈ ಸಸ್ಯ**
*(ಡಾ॥ ಎಲ್. ನಾರಾಯಣ ರೆಡ್ಡಿ, ಕೃಷಿ ವಿಚಾರಗಳು, ನಿರೂಪಣೆ: ಬಂದಗದ್ದೆ ರಾಧಾಕೃಷ್ಣ)*
**ಪುಟ : ೬೪** **ಬೆಲೆ : ರೂ. ೨೫**

**ಮಕ್ಕಳಿಗೆ ಮೌಲ್ಯ ಶಿಕ್ಷಣ** *ಅರವಿಂದ ಚೊಕ್ಕಾಡಿ*
**ಪುಟ : ೧೨೮** **ಬೆಲೆ : ರೂ. ೪೦**

**ಜೀವನ ಕೌಶಲಗಳು** *ಅರವಿಂದ ಚೊಕ್ಕಾಡಿ*
**ಪುಟ : ೧೨೮** **ಬೆಲೆ : ರೂ. ೪೦**

**ಚಮತ್ಕಾರದ ಗಣಿತ** (೧೦೦ ಸಮಸ್ಯೆಗಳು – ಉತ್ತರಗಳು)
*ಡಾ॥ ಆನಂದ ದೇಶಪಾಂಡೆ*
**ಪುಟ : ೭೨** **ಬೆಲೆ : ರೂ. ೨೫**

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಬಹುರೂಪಿ** (ಕಥಾ ಸಂಕಲನ) *ಅದೀಬ್ ಅಖ್ತರ್*
**ಪುಟ : ೧೬೦** **ಬೆಲೆ : ರೂ. ೧೩೦**

**ಯಾರೇ ಕೂಗಾಡಲಿ** (ಹಾಸ್ಯ ಲೇಖನ ಸಂಕಲನ)
*ಅದೀಬ್ ಅಖ್ತರ್*
**ಪುಟ : ೧೪೮** **ಬೆಲೆ : ರೂ. ೧೨೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರೂಪ ಪ್ರಕಾಶನ**, ನಂ. ೨೦, ಮೊದಲನೇ ಮಹಡಿ, ಲ್ಯಾನ್ಸ್ ಡೌನ್ ಬಿಲ್ಡಿಂಗ್, ಮೈಸೂರು - ೨೪

**ಮಾನವತೆಯ ಮಂದಾರ** (ಸ್ಮರಣ ಗ್ರಂಥ)
*ಟಿ. ಆರ್. ಮಹದೇವಯ್ಯ*
**ಪುಟ : ೫೮** **ಬೆಲೆ : ರೂ. ೫೦**

**ದೇಶಮುದ್ರೆ** (ಸ್ಮರಣ ಗ್ರಂಥ) *ಸಂ. ಗೊ. ರು. ಚನ್ನಬಸಪ್ಪ*
**ಪುಟ : ೩೨೨+೨೮** **ಬೆಲೆ : ರೂ. ೨೦೦**

In Defence of Democracy
*ಸಂ : ಕೋ. ಚೆನ್ನಬಸಪ್ಪ*
**ಪುಟ : ೩೩೨** **ಬೆಲೆ : ರೂ. ೨೫೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನ್ಯಾಯಮೂರ್ತಿ ಡಿ. ಎಂ. ಚಂದ್ರಶೇಖರ್ ಸ್ಮರಣ ಗ್ರಂಥ ಸಮಿತಿ, ಬೆಂಗಳೂರು**

**ಬಿ.ಎ. ಸನದಿ** (ಬದುಕು ಬರಹ) *ಡಾ॥ ಜೆ. ಎನ್. ಉಪಾಧ್ಯ*
**ಪುಟ : ೧೩೦** **ಬೆಲೆ : ರೂ. ೬೦**
**ಕರ್ನಾಟಕ ಸಂಘ**, ಡಾ॥ ಎಂ. ವಿಶ್ವೇಶ್ವರಯ್ಯ ಸ್ಮಾರಕ ಮಂದಿರ, ಸಿ. ಎಸ್. ಎಂ. ಮಾರ್ಗ, ಮಾತುಂಗ (ಪ. ರೈಲ್ವೆ), ಮುಂಬಯಿ - ೪೦೦ ೦೧೬

**ಎಲೆಯುದುರೂ ಕಾಲ** (ಕವಿತೆಗಳು) *ಮಹೆಜಬೀನ್, ಅನು : ಚಿದಾನಂದ ಸಾಲಿ*
**ಪುಟ : ೬೪** **ಬೆಲೆ : ರೂ. ೫೦**
**ಭಾವನಾ ಪ್ರಕಾಶನ**, ೮೦ ಅಡಿ ರಸ್ತೆ, ಕದಿರೇನಹಳ್ಳಿ, ಪೆಟ್ರೋಲ್ ಬಂಕ್ ಹತ್ತಿರ, ಪದ್ಮನಾಭನಗರ, ಬೆಂಗಳೂರು - ೭೦

**ಹಸಿರುತೋರಣ** (ಕಥಾ ಸಂಕಲನ) *ಶ್ರೀಧರ ರಾಯಸಂ*
**ಪುಟ : ೧೨೦** **ಬೆಲೆ : ರೂ. ೮೦**
**ಕನ್ನಡ ಕಲಾ ಸಂಘ**, ತುಂಗಭದ್ರಾ ಡ್ಯಾಂ - ೫೮೩೨೨೫, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ

**ಕಂಪ್ಯೂಟರ್ ಕುಟ್ಟಿ** (ಲಲಿತ ಪ್ರಬಂಧಗಳು)
*ಸುಕನ್ಯಾ, ಕಳಸ*
**ಪುಟ : ೧೧೬** **ಬೆಲೆ : ರೂ. ೬೦**
**ಸುಮಂತ ಪ್ರಕಾಶನ**, ಗಾಳದ ಕಟ್ಟೆ ರಸ್ತೆ, ಉಪ್ಪಿನಕೋಟೆ, ಬ್ರಹ್ಮಾವರ - ೫೭೬೨೧೩ (ಉಡುಪಿ ಜಿಲ್ಲೆ)

**ಊಟಕ್ಕೊಂದು ಆಯುರ್ವೇದ ಕೈಪಿಡಿ**
*ಡಾ॥ ಪತಂಜಲಿ ಕೆ. ವಿ.*
**ಪುಟ : ೭೬** **ಬೆಲೆ : ರೂ. ೩೫**

**ಯಾವ ರೋಗಕ್ಕೆ ಏನು ಪಥ್ಯ ? ಯಾವುದು ಅಪಥ್ಯ ?**
*ಡಾ॥ ಪತಂಜಲಿ ಕೆ. ವಿ.*
**ಪುಟ : ೪೪** **ಬೆಲೆ : ರೂ. ೨೦**

**ಲಕ್ಷ್ಮೀಶ ಕವಿಯ ಜೈಮಿನಿ ಭಾರತ**
*ಸು. ರುದ್ರಮೂರ್ತಿ ಶಾಸ್ತ್ರಿ*
**ಪುಟ : ೧೬೦** **ಬೆಲೆ : ರೂ. ೮೦**

ಮೇಲಿನ ಮೂರು ಪ್ರಸ್ತಕಗಳ ಪ್ರಕಾಶಕರು
**ಭಾಗ್ಯಲಕ್ಷ್ಮೀ ಪ್ರಕಾಶನ**, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೨ನೇ ಫೇಸ್, ಬೆಂಗಳೂರು - ೫೬೦ ೦೮೫

**ಮೃತ್ಯು-ಬೋಧೆ : ಜೀವನ ಬೋಧೆ** (ಕವಿತೆಗಳು)
*ಡಾ॥ ಮಹೇಂದ್ರ ಭಟ್ನಾಗರ್, ಅನು : ಶಶಿಕಲಾ ಸುಬ್ಬಣ್ಣ*
**ಶಶಿಕಲಾ ಸುಬ್ಬಣ್ಣ**, ೮೧೮, ೪ನೇ ಹಂತ, ೧೩ನೇ ಮುಖ್ಯ ರಸ್ತೆ, ಟಿ. ಕೆ. ಬಡಾವಣೆ, ಮೈಸೂರು - ೫೭೦ ೦೦೯

**ಮಡಿಚಿಟ್ಟ ಕೌದಿ** (ಕವನ ಸಂಕಲನ) *ಡಿ. ಬಿ. ರಜಿಯಾ*
**ಪುಟ : ೯೪** **ಬೆಲೆ : ರೂ. ೮೦**
**ಸಿವಿಜಿ ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೪೫

**ಕ್ರೀಡಾಲೋಕ ಕಾವ್ಯಲೋಕ** (ಕವನಗಳು)
*ಜೆ. ಪಳನಿಸ್ವಾಮಿ, ಜಾಗೇರಿ*
**ಪುಟ : ೯೬** **ಬೆಲೆ : ರೂ. ೪೦**
**ಉಷಾ ಪ್ರಕಾಶನ**, ಜಾಗೇರಿ, ಆರ್. ಬಿ. ತಾಂಡ, ಕೊಳ್ಳೇಗಾಲ ತಾ., ಚಾಮರಾಜನಗರ ಜಿಲ್ಲೆ

**ನನ್ನ ನಲ್ಲ** (ಕವಿತೆಗಳು) *ಮಧುರ ಚೆನ್ನ*
*ಇಂಗ್ಲಿಷ್‌ಗೆ ಅನು : ಡಾ॥ 'ಜೀವಿ' ಕುಲಕರ್ಣಿ*
**ಪುಟ : ೧೭೦** **ಬೆಲೆ : ರೂ. ೭೫**
**ಹರ್ಷವರ್ಧನ ಪ್ರಕಾಶನ**, ೮-A/೧೫, ಜವಹರ ಸೊಸೈಟಿ, ಗೋವಿಂದ ನಗರ, ಬೋರಿವಿಲಿ (ಪ), ಮುಂಬಯಿ - ೪೦೦ ೦೯೨

ಪ್ರಸಂಗಗಳನ್ನು ಪ್ರಸ್ತಾಪಿಸಿ 'ಈ ಅಸಹ್ಯಕರ ಪುರಾಣ ಕಥೆಯನ್ನು ಆಧಾರವಾಗಿಟ್ಟು ಕೊಂಡು ನಾವು 'ಭರತಖಂಡ'ವೆಂಬ ಹೆಸರನ್ನು ಗೌರವಿಸಬಹುದೆ? ಪ್ರತಿಯೊಬ್ಬ ಭಾರತೀಯನೂ ನಾಚಿ ತಲೆತಗ್ಗಿಸುವಂತೆ ಹೇಗೆ ಕಥೆ ಹೆಣೆಯಲಾಗಿದೆ ನೋಡಿ?' ಎಂದು ಛೇಡಿಸುತ್ತಾರೆ.

'ಕರ್ಮಕಾಂಡ' ಎಂಬ ಅಧ್ಯಾಯವು ಪೂಜಾವಿಧಿಗಳು, ಸಾಂಪ್ರದಾಯಿಕ ಆಚರಣೆಗಳು, ಪವಾಡಗಳಂಥ ಕಣ್ಕಟ್ಟುಗಳು ಮೊದಲಾದವನ್ನು ಪ್ರಶ್ನಿಸುತ್ತದೆ. ಕಲ್ಲು ಮಣ್ಣಿನ ವಿಗ್ರಹಗಳಿಗೆ ಪ್ರಾಣ ಪ್ರತಿಷ್ಠೆ ಮಾಡುವ ಪುರೋಹಿತರು ಸತ್ತ ಹೆಣವನ್ನೇಕೆ ಬದುಕಿಸಬಾರದು? ಯಜ್ಞದಿಂದ ವಿಶ್ವಶಾಂತಿಯೊ? ಲೋಕ ಕಲ್ಯಾಣವೋ? ಉದರ ಪೋಷಣಾರ್ಥ ಚಂದಾ ವಸೂಲಿಯೊ? ಏಕಾದಶಿ ಉಪವಾಸ-ಕಂಠಪೂರ್ತಿ ಉಪಾಹಾರ! ಮಡಿಮಡಿ ಎಂಬ ಸೋಗಿನಲ್ಲಿ ಸಮಾಜಕ್ಕೆ ವಂಚನೆ; ಗಂಟಲು ಹರಿಯುವಂತೆ ಭಜನೆ ಮಾಡಿದರೆ ರೋಗವೇ ಗತಿ. ಮಂತ್ರವಾದಿಯ ಬದುಕು ಕೈಚಳಕದಿಂದ - ಎನ್ನುವುದಲ್ಲದೆ ಮೋಡಿ ಆಟದ ಮಂತ್ರವಾದಿಗಳನ್ನು ಭಾರತದ ಗಡಿಯಲ್ಲಿ ನಿಲ್ಲಿಸಿ, ಇವರಿಂದ ಮಂತ್ರಗಳೆಂಬ ಗೆರೆಗಳನ್ನು ಹಾಕಿಸಿ ಶತ್ರು ಸೈನಿಕರು ದೇಶದೊಳಗೆ ನುಗ್ಗಿ ಬರದಂತೆ ಮಾಡಿ; ಅಂಜನ ಹಾಕುವವರನ್ನು ಪತ್ತೇದಾರಿ ಕೆಲಸಕ್ಕೆ ನೇಮಿಸಿ ಎಂದು ಸರ್ಕಾರಗಳಿಗೆ ಕರೆಕೊಡುತ್ತಾರೆ. ಅಗ್ನಿಕುಂಡದ ಪವಾಡ ಮಾಡುವವರು ಬೆಂಕಿಯ ಮೇಲೆ ಹಾಕಿದ ಜಿಂಕ್‌ಶೀಟ್ ಮೇಲೆ ನಡೆದು ತೋರಿಸ ಬಲ್ಲರೆ? ಎಂದು ಪ್ರಶ್ನಿಸುವುದಲ್ಲದೆ ತಿಂಗಳುಗಟ್ಟಲೆ ಅನ್ನ ನೀರು ಬಿಟ್ಟು 'ಪವಾಡ' ಮಾಡುವ ಸಾಧಕರು; ಪೆಟ್ರೋಲ್ ಹಾಕದೆ ಕಾರು ಓಡಿಸುವವರು; ಪಾಪಿಗಳನ್ನು 'ಕ್ಷಮಿಸುವ' ಚರ್ಚಿನ ಪಾದ್ರಿ; ಹರಿಜನ ಬೀದಿಗಳಲ್ಲಿ ಮೆರವಣಿಗೆ ಹೋಗುವ ಮಠಾಧಿಪತಿಗಳ ನಾಟಕ ಮೊದಲಾದವುಗಳನ್ನು ಪರಿಹಾಸ್ಯ ಮಾಡಲಾಗಿದೆ.

ಅದ್ವೈತ ಸಿದ್ಧಾಂತ ಪ್ರತಿಪಾದಕರಾದ ಶಂಕರಾಚಾರ್ಯರ 'ಮಹಿಮೆ'ಯನ್ನು ಸಾರುವ ಹಲವು ಕಥೆಗಳುಂಟಷ್ಟೆ. ಆ ಪೈಕಿ ಶಂಕರಾಚಾರ್ಯರ 'ಪರಕಾಯ ಪ್ರವೇಶ'ದ ಕಥೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಬ್ರಹ್ಮಚಾರಿ ಎನಿಸಿದ ಶಂಕರಾ ಚಾರ್ಯರಿಗೆ ತಾನೂ ಗೃಹಸ್ಥ ಧರ್ಮದ ಬಗ್ಗೆ ತಿಳಿದುಕೊಳ್ಳಬೇಕೆಂಬ ಇಚ್ಛೆಯುಂಟಾಗಿ, ಅದರ ಅನುಭವ ಹೊಂದುವ ಸಲುವಾಗಿ ತನ್ನ ಸ್ಥೂಲ ದೇಹವನ್ನು ಒಂದು ಕಡೆ ಬಚ್ಚಿಟ್ಟು, ಅದೇ ಸತ್ತು ಶವವಾಗಿದ್ದ ಕಾಶೀರಾಜನ ದೇಹದೊಳಗೆ ಹೊಕ್ಕು, ತಾನೇ ಸತ್ತ ರಾಜನಂತೆ ನಟಿಸಿ ಆ ರಾಜನ ವಿಧವಾ ಪತ್ನಿಯೊಡನೆ ದೈಹಿಕ ಸಂಬಂಧವನ್ನು ಅನುಭವಿಸಿ ಪುನಃ ತನ್ನ ಮೂಲ ಶರೀರವನ್ನು ಧರಿಸಿದನೆಂಬುದು ಆ ಪವಾಡ ಸದೃಶ ಕಥೆ. ಈ ಕುರಿತು ಸ್ವತಃ ಬ್ರಹ್ಮಚಾರಿಯಾಗಿಯೇ ಉಳಿದ ಸದಾಶಿವಯೋಗಿಗಳ ಟೀಕೆಯನ್ನು ಗಮನಿಸಿ : ''ಹಾಗೊಂದು ವೇಳೆ ಶಂಕರಾಚಾರ್ಯರು ಕಾಶೀರಾಜನ ವಿಧವಾ ಪತ್ನಿಯೊಡನೆ ಕೂಡಿ ಕೆಲವು ಕಾಲ ನಿಜವಾಗಿಯೂ ಸಹಬಾಳ್ವೆ ನಡೆಸಿದ್ದರು ಎಂದರೂ ತಪ್ಪೇನಿಲ್ಲ... ಆದ್ದರಿಂದ ನಾನು ಬ್ರಹ್ಮಚಾರಿ ಎಂದು ಜಂಬಕೊಚ್ಚಿಕೊಳ್ಳು ವವರೆಲ್ಲ ಕೇವಲ ಭ್ರಮಾಚಾರಿಗಳು; ಇಚ್ಛೆ ಇದ್ದರೆ ಮದುವೆಯಾಗಬಹುದು; ತನಗೆ ಇಚ್ಛೆ ಇಲ್ಲದಿದ್ದರೆ ಹಾಗೆಯೇ ಇರಬಹುದು; ಇದರಲ್ಲಿ ನಾನು ಮದುವೆಯಾಗಿಲ್ಲ ; ನಾನು ಬ್ರಹ್ಮಚಾರಿ ಎಂದು ಇಲ್ಲದ ಶ್ರೇಷ್ಠತೆಯನ್ನು ತೋರಿಸಿಕೊಳ್ಳುವುದು ಆತ್ಮದ್ರೋಹ ವಾಗುತ್ತದೆ.'' ಹೀಗೆಯೇ, ವಿಜಯನಗರದಲ್ಲಿ ವಿದ್ಯಾರಣ್ಯರಿಂದ ಸುವರ್ಣವೃಷ್ಟಿ ಯಾಯಿತೆಂಬ ಪವಾಡವನ್ನು ಹೀಗಳೆಯುತ್ತಾರೆ. ಸತ್ಯನಾರಾಯಣ ಪೂಜೆಯ ಪ್ರಾಫಿಟ್ ಯಾರಿಗೆ? ಎಂದು ಪ್ರಶ್ನಿಸುತ್ತಾರೆ.

ಹಿಂದೂಗಳು ತಮ್ಮ ಪವಿತ್ರ ಗ್ರಂಥವೆಂದು ಪರಿಗಣಿಸುವ ಭಗವದ್ಗೀತೆಯಲ್ಲಿನ ಉಪದೇಶಗಳ ಬಗೆಗೆ ಲೇಖಕರಿಗೆ ಕೆಲವು ಸಂದೇಹಗಳಿವೆ. ಅವುಗಳಲ್ಲಿ ಒಂದನ್ನು ಅವರು ಓದುಗರ ಮುಂದಿಡುವುದು ಹೀಗೆ – ಕುರುಕ್ಷೇತ್ರ ಮಹಾಯುದ್ಧದಲ್ಲಿ ಕರ್ಣನನ್ನು ಕೊಲ್ಲಬೇಕೆಂದು ಶ್ರೀಕೃಷ್ಣನು ಅರ್ಜುನನನ್ನು ಪ್ರೇರೇಪಿಸಿದನೆನ್ನುವಾಗ ನನಗೆ ಒಂದು ಜಟಿಲವಾದ ಸಮಸ್ಯೆ ಹುಟ್ಟುತ್ತದೆ. ಅದೇನೆಂದರೆ, ''ಎಲ್ಲವೂ ನಾನೇ ಎಂದು ಹೇಳಿದ ಮೇಲೆ ಆ ಶ್ರೀಕೃಷ್ಣನಿಗೆ ಕರ್ಣನಲ್ಲಿಯೂ ತನ್ನ ಅಂಶವಿದೆಯೆನಿಸ ಲಿಲ್ಲವೆ?'' ಎಂಬುದೇ ನನ್ನ ಸಂಶಯ ಎನ್ನುತ್ತಾರೆ.

ಪುರಾಣಕತೆಗಳು, ಮೂಢಸಂಪ್ರದಾಯಗಳು, ಮಂತ್ರತಂತ್ರ ಪವಾಡಾದಿಗಳನ್ನೆಲ್ಲ ಸಂಶಯದಿಂದ ನೋಡಿ ಪ್ರಶ್ನಿಸುವ ಸದಾಶಿವಯೋಗಿಗಳಿಗೆ ಮನುಷ್ಯನ ವಿಚಾರಶಕ್ತಿ ಮತ್ತು ತಾರ್ಕಿಕ ತೀರ್ಮಾನಗಳಲ್ಲಿ ಮಾತ್ರ ಅಪಾರ ವಿಶ್ವಾಸವಿದೆ. ಆದ್ದರಿಂದಲೇ ಅವರು ''...ತರ್ಕ ಮಾಡಿ... ಸತ್ಯ ತೇಲುವವರೆಗೂ ತರ್ಕ ಮಾಡಿ; ಬರಿ ಪುಸ್ತಕ ಜ್ಞಾನದಿಂದ ವಾದಿಸಬೇಡಿ...'' ಎಂದು ಜನರಿಗೆ ಬುದ್ಧಿಯ ಮಾತು ಹೇಳುತ್ತಾರೆ.

ವಿಜ್ಞಾನ ಮತ್ತು ಪವಾಡಗಳನ್ನು ಕುರಿತು ಬರೆಯುತ್ತ ಜ್ಞಾನ ವಿಕಾಸವೇ ವಿಜ್ಞಾನ; ಸ್ಪಷ್ಟತೆ ಮತ್ತು ನಿಖರತೆಗಳೆ ಇದರ ಗುಣಗಳು ಎಂದು ವಿಜ್ಞಾನದ ಲಕ್ಷಣಗಳನ್ನು ನಿರೂಪಿಸುವ ಲೇಖಕರು ಜ್ಞಾನಾರ್ಜನೆಯಲ್ಲಿ ಪರೀಕ್ಷೆ ಮತ್ತು ಪ್ರಯೋಗಗಳ ಮಹತ್ವವನ್ನು ವಿವರಿಸುತ್ತಾರೆ.

ಜ್ಯೋತಿಷ ಮತ್ತು ಭವಿಷ್ಯ ನುಡಿಯುವವರ ಬಗೆಗೆ ಸದಾಶಿವಯೋಗಿಗಳಿಗೆ ಮೊದಲಿನಿಂದಲೂ ಸಂದೇಹವಿದೆ; ಹಲವು ಪ್ರಶ್ನೆಗಳು ಅವರ ಮನಸ್ಸನ್ನು ಕಾಡುತ್ತವೆ. ತಮ್ಮ ಸಂದೇಹಗಳಿಗೆ ಉತ್ತರ ಕಂಡುಕೊಳ್ಳುವ ಸಲುವಾಗಿ ಶ್ರದ್ಧೆಯಿಂದ ಸ್ವತಃ ಜ್ಯೋತಿಷ್ಯಶಾಸ್ತ್ರವನ್ನು ಕಲಿಯುವ ಪ್ರಯತ್ನ ಮಾಡಿದುದೂ ಉಂಟು. 'ಜ್ಯೋತಿಷ್ಯಾಲಯದಲ್ಲಿ ಕೈದಿಯಂತೆ ಕಂಡರು' ಎಂಬ ಅಧ್ಯಾಯದಲ್ಲಿ ತಾವು ಪಡೆದ ಅನುಭವವನ್ನು ನಿರೂಪಿಸಿದ್ದಾರೆ. ಸದಾಶಿವಯೋಗಿ ಕಾಶಿಯ ಜಂಗಮವಾಡಿಯನ್ನು ಸೇರಿ ಅಲ್ಲಿನ ಪ್ರಸಿದ್ಧ ಜ್ಯೋತಿಷ ವಿದ್ವಾಂಸರಾದ ಆಸ್ಥಾನ ವಿದ್ವಾನ್ ವೇದಮೂರ್ತಿ ಕರಿಬಸವಶಾಸ್ತ್ರಿಗಳ ಶಿಷ್ಯರಾಗುತ್ತಾರೆ. ಮೊದಲಿನಿಂದಲೂ ತಮ್ಮ ಮನಸ್ಸನ್ನು ಕಾಡುತ್ತಿದ್ದ ಸಮಸ್ಯೆಗಳನ್ನು ಶಾಸ್ತ್ರಿಗಳ ಮುಂದಿಡತೊಡಗಿದಾಗ ಅವರು ನೇರ ಉತ್ತರ ಕೊಡದೆ ಯಾವ ಯಾವುದೋ ಸಿದ್ಧಾಂತಗಳನ್ನು ಹೆಸರಿಸಿ ನುಣುಚಿಕೊಂಡರು. ಗುರುಗಳ ಮಾತು ಸಮಂಜಸವಾಗಿ ತೋರದ್ದರಿಂದ ಇವರು ಪ್ರಶ್ನೆ ಮಾಡುವುದನ್ನು ಮುಂದು ವರಿಸಿದರು. ಇದರಿಂದ ಗುರುಗಳು ಮತ್ತು ಇತರ ಶಿಷ್ಯರು (ಅಲ್ಲಿದ್ದವರು ಒಟ್ಟು ಎಂಟು ಜನ) ಇವರನ್ನು 'ಆಗ ತಾನೆ ಜೈಲಿನಿಂದ ತಪ್ಪಿಸಿಕೊಂಡು ಬಂದ ಕೈದಿಯಂತೆ' ಕಾಣತೊಡಗಿದರು. ಆ ಎಲ್ಲರ ವರ್ತನೆಯಿಂದ ಕಸಿವಿಸಿಗೊಂಡ ಲೇಖಕರು ಗುರುಗಳಿಗೂ ಅವರ ಶಿಷ್ಯರಿಗೂ ಜ್ಯೋತಿಷಾಲಯಕ್ಕೂ ಕಡೆಯ ನಮಸ್ಕಾರ ಹೇಳಿ ಅಲ್ಲಿಂದ ಹೊರಡುತ್ತಾರೆ. ಹೊರಡುವ ಮುಂಚೆ ತಮ್ಮ ನಿರ್ಧಾರವನ್ನು ಪ್ರಕಟಿಸುತ್ತಾರೆ – ''...ಯಾವಾಗ ನನ್ನ ತಾರ್ಕಿಕ ಪ್ರಶ್ನೆಗಳಿಗೆ ಸಮಂಜಸ ಉತ್ತರ ದೊರೆಯುತ್ತದೆಯೊ ಆ ದಿನ ಜ್ಯೋತಿಷಶಾಸ್ತ್ರವನ್ನು ಕಲಿಯಲು ಇಷ್ಟಪಡುತ್ತೇನೆ. ಅಲ್ಲಿಯವರೆಗೂ ಅರ್ಥವಿಲ್ಲದ ಇಂಥ ವಿದ್ಯೆಗಳನ್ನು ಕಲಿತು ನನ್ನನ್ನೇ ನಂಬಿದ ಜನರಿಗೆ ಸುಳ್ಳು ಹೇಳಿ ಆತ್ಮವಂಚನೆ ಮಾಡಲಾರೆ'' ಎಂದು.

ಜ್ಯೋತಿಷದ ಮೂಲಕ ಭವಿಷ್ಯ ಕಾಲದ ಆಗು-ಹೋಗುಗಳನ್ನು ತಿಳಿಯುವುದು ಅಸಾಧ್ಯ ಎಂಬುದನ್ನು ಸ್ಪಷ್ಟಪಡಿಸುವ ಸಲುವಾಗಿ 'ಜ್ಯೋತಿಷಿಯ ಶಿರಚ್ಛೇದನ'ವೆಂಬ ಪ್ರಸಂಗವನ್ನೂ ನಿರೂಪಿಸಲಾಗಿದೆ. ಒಟ್ಟಿನ ಮೇಲೆ ಸದಾಶಿವಯೋಗಿಗಳ ಅಭಿಪ್ರಾಯದಲ್ಲಿ – ಜ್ಯೋತಿಷಶಾಸ್ತ್ರವೆಂಬುದು ಒಂದು ಊಹೆಯ ಕುದುರೆ ಜೂಜು. ಗೆದ್ದರೆ ಅದೃಷ್ಟ... ಸೋತರೆ ಕುಜ ರಾಹುಗಳು ಅಡ್ಡ ಬಂದರು ಎಂದು ಹೇಳಿ ನುಣುಚಿಕೊಳ್ಳುವ ಕುತಂತ್ರವಿದ್ಯೆ.

ನಿರಂತರ ಪ್ರವಾಸಿ ಹಾಗೂ ಪ್ರಯೋಗಪಟುವಾದ ಸದಾಶಿವಯೋಗಿಗಳು ಉತ್ತರ ಭಾರತದಲ್ಲಿ ಪ್ರವಾಸ ಮಾಡುತ್ತಿದ್ದಾಗ ಯೋಗಾನಂದರೆಂಬುವರು ರಚಿಸಿದ 'ಹಿಮಾಲಯದಲ್ಲಿ ಯೋಗಿ' ಎಂಬ ಪುಸ್ತಕವು ದೊರೆಯಿತು. ಅದರಲ್ಲಿ ಉಲ್ಲೇಖಿಸಿದ್ದ ಪವಾಡಗಳಿಂದ ಪ್ರೇರಿತರಾಗಿ ಅದರಂತೆ ಸಾಧನೆ, ಶೋಧನೆಗಳನ್ನು ಮಾಡಿ, ನಿರಾಶರಾಗಿ ಯೋಗದಿಂದ ಪವಾಡಗಳನ್ನು ಮಾಡಬಹುದೆಂದು ನಿರೂಪಿಸುವ 'ಹಿಮಾಲಯದಲ್ಲಿ ಯೋಗಿ' ಪುಸ್ತಕವು ಒಂದು ಸುಳ್ಳಿನ ಕಂತೆ ಎಂಬ ತೀರ್ಮಾನಕ್ಕೆ ಬಂದರು.

ಮತ್ತೊಮ್ಮೆ ಮಧ್ಯಪ್ರದೇಶದ ಉಜ್ಜಯಿನಿಯಲ್ಲಿ ತಿರುಗುತ್ತಿದ್ದಾಗ ಒಬ್ಬ ಸಾಧು ಮಹಾರಾಜರ ಹತ್ತಿರ 'ಅದೃಶ್ಯವಾಗುವ ಮಂತ್ರ' ವೊಂದನ್ನು ನಿರೂಪಿಸುವ ಪುಸ್ತಕ ದೊರೆಯಿತು. ಹಿಂದಿ ಭಾಷೆಯಲ್ಲಿದ್ದ ಆ ಪುಸ್ತಕದಲ್ಲಿ ಹೇಳಿದಂತೆ – ಹತ್ತು ವಿಧದ ಮೂಲಿಕೆಗಳನ್ನು ಸಂಗ್ರಹಿಸಿ ಅವುಗಳನ್ನು ಕುಟ್ಟಿ ಪುಡಿ ಮಾಡಿ, ಆ ಚೂರ್ಣವನ್ನು ಗೋಮೂತ್ರದಲ್ಲಿ ಬೆರೆಸಿ ಅಮಾವಾದಸಿ ರಾತ್ರಿ ನಿರ್ಜನ ಪ್ರದೇಶದಲ್ಲಿ ಬೆತ್ತಲೆಯಾಗಿ ಪೂರ್ವಾಭಿಮುಖವಾಗಿ ನಿಂತು – 'ಓಂ-ಐಂ-ಕ್ರೀಂ-ಕ್ಲೀಂ' 'ಚಾಮುಂಡಾಯೈವಿಚ್ಛೇಃ ನಮಃ' ಎಂದು ಉಚ್ಚರಿಸುತ್ತ ಮೈಗೆಲ್ಲ ಬಳಿದುಕೊಂಡರೆ ಆ ವ್ಯಕ್ತಿ ಅದೃಶ್ಯನಾಗಬೇಕಿತ್ತು. ಲೇಖಕರು ಪ್ರಯೋಗ ಮಾಡಿ ನೋಡಲು ಬಯಸಿ ಮೂಲಿಕೆಗಳನ್ನು ಹುಡುಕುತ್ತ ಹೊರಟಾಗ ಒಂಬತ್ತು ಮೂಲಿಕೆಗಳು ಸುಲಭವಾಗಿ ದೊರೆತವು; ಹತ್ತನೆಯದು ಮಾತ್ರ ಎಷ್ಟು ಹುಡುಕಿದರೂ ದೊರೆಯಲೇ ಇಲ್ಲ. ಏಕೆಂದರೆ ಅಂತಹ ಯಾವ ಮೂಲಿಕೆಯೂ ಇರಲೇ ಇಲ್ಲ. ಆಮೇಲೆ ತಮ್ಮಲ್ಲೇ ಯೋಚಿಸಿ – 'ಇಂತಹ ಅದೃಶ್ಯವಾಗುವ ಮಂತ್ರ ಗೊತ್ತಿದ್ದವನು ಕೇವಲ ಎಂಟು ಆಣೆಗೆ ಪುಸ್ತಕವನ್ನು ಬರೆದು ಮಾರುತ್ತಿದ್ದನೇಕೆ?' ಎಂಬ ಪ್ರಶ್ನೆ ಹಾಕಿಕೊಂಡು ಅದೃಶ್ಯ ಮಂತ್ರದ ಭ್ರಮೆಯಿಂದ

೪೫ನೇ ಪುಟಕ್ಕೆ

# ಅರವತ್ತು ತುಂಬಿದ ವಿಶ್ವಸಂಸ್ಥೆ ಹಿಂದೆ ಸರಿದ ಸುಧಾರಣೆ



**ಕಳೆದ ಒಂದು ದಶಕದಿಂದ ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಸಂಸ್ಥೆಯ ನಿಯಮಾವಳಿಗಳನ್ನು ಬದಲಿಸಿ, ಸುಧಾರಣೆಗಳನ್ನು ತರುವ ಪ್ರಸ್ತಾಪ ಚರ್ಚೆಯಾಗಿದೆ. ಆದರೆ ಭದ್ರತಾ ಮಂಡಲಿಯ ಪ್ರಬಲ ರಾಷ್ಟ್ರಗಳು ಅದನ್ನು ತಡೆಹಿಡಿದಿವೆ. ತಮ್ಮ ವಿಶೇಷ ಹಕ್ಕುಗಳನ್ನು ಬಿಟ್ಟುಕೊಡಲು ಅವು ತಯಾರಾಗಿಲ್ಲ. ೧೯೬೫ರಲ್ಲಿ ಹನ್ನೊಂದು ಸದಸ್ಯರನ್ನು ಹೊಂದಿದ್ದ ಭದ್ರತಾ ಮಂಡಲಿಗೆ ನಾಲ್ಕು ಹೊಸ ಚುನಾಯಿತ ಸದಸ್ಯರನ್ನು ಸೇರಿಸಿ ಸಂಖ್ಯೆಯನ್ನು ಹದಿನೈದಕ್ಕೇರಿಸಲಾಯಿತು. ಇದರಿಂದ ಮೂಲ ಬದಲಾವಣೆಗಳೇನಾಗಲಿಲ್ಲ. ಏಶಿಯ, ಆಫ್ರಿಕಾ, ಲ್ಯಾಟಿನ್ ಅಮೆರಿಕಾದ ಪ್ರಪಂಚದ ಬಹ್ವಂಶ ಜನರನ್ನು ಪ್ರತಿನಿಧಿಸುವ ಸದಸ್ಯ ರಾಷ್ಟ್ರಗಳ ಅಭಿಪ್ರಾಯಗಳಿಗೆ ಮನ್ನಣೆಯೇ ದೊರಕದಾಗಿದೆ.**

ಅರವತ್ತು ತುಂಬಿದ ವಿಶ್ವಸಂಸ್ಥೆ ಅಗತ್ಯವಾದ ಕಾಯಕಲ್ಪ ಪಡೆಯಲಿಲ್ಲ. ಬಹುನಿರೀಕ್ಷಿತ ಸಂಘಟನಾ ಸುಧಾರಣೆಗಳು ನೆಲಕಚ್ಚಿದವು. ವಜ್ರಮಹೋತ್ಸವದ ಸಂದರ್ಭದಲ್ಲಿ ಸೇರಿದ್ದ ನೂರಐವತ್ತು ದೇಶಗಳ ವರಿಷ್ಠ ನಾಯಕರ ಬಹುದೊಡ್ಡ ಶೃಂಗಸಮೂಹ ಸಾಧಿಸಿದ್ದು ಸೊನ್ನೆ. ಬಡತನ ನಿರ್ಮೂಲನ, ಭಯೋತ್ಪಾದನೆ ತೊಡೆದುಹಾಕುವ ಬಗೆಗೆ ಆರ್ಭಟ, ಒಣ ಭರವಸೆಗಳು ಬೇಕಾದಷ್ಟು. ಸಂಸ್ಥೆಯ ಯಥಾಸ್ಥಿತಿಯನ್ನು ಮುಂದುವರಿಸಿಕೊಂಡುಹೋಗುವ ಅಮೆರಿಕಾದ ಪ್ರಯತ್ನ ಸಫಲ. 'ಮೂಲಭೂತ ಸುಧಾರಣೆಗಳನ್ನು ತರುವುದರಲ್ಲಿ ವಿಶ್ವಸಂಸ್ಥೆ ಸಂಪೂರ್ಣವಾಗಿ ವಿಫಲಗೊಂಡಿದೆ' ಎಂದು ಹೇಳಿರುವ ಪ್ರಧಾನ ಕಾರ್ಯದರ್ಶಿ ಕೋಫಿ ಅನ್ನಾನ್ ಹೊಣೆ ಇದರಲ್ಲಿ ಕಮ್ಮಿ ಏನಿಲ್ಲ. ಅಧಿಕಾರಸ್ಥಾನದಲ್ಲಿ ಮುಂದುವರಿಯಲು ಅಮೆರಿಕಾದ ತಾಳಕ್ಕೆ ಸರಿಯಾಗಿ ಹೆಜ್ಜೆ ಹಾಕುತ್ತಿರುವ ಈ ಮಹಾಶಯ ಅತ್ಯಂತ ದುರ್ಬಲ ಎಂಬ ಹೆಸರಿಗೆ ಪಾತ್ರನಾಗಿದ್ದಾನೆ. ಪೋಷಕರ ಒತ್ತಡಕ್ಕೆ ಮಣಿದ ಈತ ಸಂಸ್ಥೆಯ ಮಹಾಸಭೆಯಲ್ಲಿ ಮಂಡಿಸಿದ ಸೂಚನೆಗಳೂ ನೀರಸ. ಮಹಾಸಭೆಯ ಮೊದಲ ದಿನ ಈತ ಹಾಗೂ ಈತನ ಗುರು ಜಾರ್ಜ್ ಬುಷ್ ಮಾಡಿದ ಭಾಷಣಗಳಲ್ಲಿ ಹೆಚ್ಚು ವ್ಯತ್ಯಾಸವೇನಿಲ್ಲ. ಸುಧಾರಣೆಗಳು ಮತ್ತು ಇತರ ಎಲ್ಲ ವಿಷಯಗಳನ್ನು ಹಿಂದೆ ಸರಿಸಿ ಭಯೋತ್ಪಾದನೆಯ ವಿರುದ್ಧ ಸಮರವನ್ನೇ ಪ್ರಧಾನ ಅಂಶವಾಗಿಸಿದ ಅಪಕೀರ್ತಿ ಈ ಇಬ್ಬರಿಗೂ ಸೇರುತ್ತದೆ. ಇಷ್ಟಾದರೂ ಮಹಾಸಭೆ ಅನುಮೋದಿಸಿದ ಅಂತಿಮ ಪ್ರಸ್ತಾವನೆಯಲ್ಲಿ 'ಭಯೋತ್ಪಾದನೆ' ಕುರಿತು ಒಮ್ಮತದ ನಿರೂಪಣೆ ಸಾಧ್ಯವಾಗಲಿಲ್ಲ. 'ದುರಾಕ್ರಮಣ' ಕುರಿತ ವಿವರಣೆಯಂತೆಯೇ ಇದೂ ಕೂಡ.

ಎರಡನೇ ಮಹಾಯುದ್ಧದ ನಂತರ ಅಸ್ತಿತ್ವಕ್ಕೆ ಬಂದ ಈ ಸಂಸ್ಥೆಯ ಅಂಗರಚನೆ ಅಂದಿನ ವಿಶಿಷ್ಟ ಸಂದರ್ಭಕ್ಕನುಗುಣವಾಗಿ ರೂಪಗೊಂಡದ್ದು. ಮುಖ್ಯವಾಗಿ ಮಹಾಸಭೆಯ ಬಹುಮತದ ತೀರ್ಮಾನಗಳ ಅನಾದರಣೆ, ಭದ್ರತಾ ಮಂಡಲಿಯ ಪರಮಾಧಿಕಾರ, ಐದು ಖಾಯಂ ಬಲಾಢ್ಯ ಸದಸ್ಯ ರಾಷ್ಟ್ರಗಳಿಗೆ ವೀಟೋ ಹಕ್ಕು – ಇವೆಲ್ಲ ಒಂದು ಪ್ರಬಲ ರಾಷ್ಟ್ರದ ಅಥವಾ ರಾಷ್ಟ್ರಗಳ ಗುಂಪಿನ ಏಕಸ್ವಾಮ್ಯವನ್ನು ತಡೆಯಲು ಅಂಗೀಕರಿಸಿದ್ದ ಸೂತ್ರಗಳು. ಇದಕ್ಕೆ ಕಾರಣ ಅಂದು ಸೋವಿಯತ್ ಒಕ್ಕೂಟ ಭದ್ರತಾ ಮಂಡಲಿಯಲ್ಲಿ ಏಕಾಂಗಿ. ಸದಸ್ಯರಾಷ್ಟ್ರಗಳ ಸಂಖ್ಯೆಯೂ ಇಂದಿನ ಸದಸ್ಯತ್ವದ ಕಾಲು ಭಾಗದಷ್ಟು ಅಷ್ಟೆ. ಆದರೆ ಈಗ ಪರಿಸ್ಥಿತಿಯೇ ಬೇರೆ. ಯಾವ ಏಕಸ್ವಾಮ್ಯವನ್ನು ತಪ್ಪಿಸುವ ಉದ್ದೇಶದಿಂದ ಅಂಥ ನಿಯಮಗಳನ್ನು ರೂಪಿಸಲಾಯಿತೋ ಅವು ಇಂದು ನಿರರ್ಥಕವಾಗಿವೆ. ಸಂಸ್ಥೆಯ ಮೇಲೆ ಪ್ರಧಾನವಾಗಿ ಅಮೆರಿಕಾದ ಹಾಗೂ ಇತರ ಪಶ್ಚಿಮ ರಾಷ್ಟ್ರಗಳ ಹಿಡಿತ ಬಲವಾಗಿ ಬೇರುಬಿಟ್ಟಿದೆ.

ಕಳೆದ ಒಂದು ದಶಕದಿಂದ ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಸಂಸ್ಥೆಯ ನಿಯಮಾವಳಿಗಳನ್ನು ಬದಲಿಸಿ, ಸುಧಾರಣೆಗಳನ್ನು ತರುವ ಪ್ರಸ್ತಾಪ ಚರ್ಚೆಯಾಗಿದೆ. ಆದರೆ ಭದ್ರತಾ ಮಂಡಲಿಯ ಪ್ರಬಲ ರಾಷ್ಟ್ರಗಳು ಅದನ್ನು ತಡೆಹಿಡಿದಿವೆ. ತಮ್ಮ ವಿಶೇಷ ಹಕ್ಕುಗಳನ್ನು ಬಿಟ್ಟುಕೊಡಲು ಅವು ತಯಾರಾಗಿಲ್ಲ. ೧೯೬೫ರಲ್ಲಿ ಹನ್ನೊಂದು ಸದಸ್ಯರನ್ನು ಹೊಂದಿದ್ದ ಭದ್ರತಾ ಮಂಡಲಿಗೆ ನಾಲ್ಕು ಹೊಸ ಚುನಾಯಿತ ಸದಸ್ಯರನ್ನು ಸೇರಿಸಿ ಸಂಖ್ಯೆಯನ್ನು ಹದಿನೈದಕ್ಕೇರಿಸಲಾಯಿತು. ಇದರಿಂದ ಮೂಲ ಬದಲಾವಣೆಗಳೇನಾಗಲಿಲ್ಲ. ಏಶಿಯ, ಆಫ್ರಿಕಾ, ಲ್ಯಾಟಿನ್ ಅಮೆರಿಕಾದ ಪ್ರಪಂಚದ ಬಹ್ವಂಶ ಜನರನ್ನು ಪ್ರತಿನಿಧಿಸುವ ಸದಸ್ಯ ರಾಷ್ಟ್ರಗಳ ಅಭಿಪ್ರಾಯಗಳಿಗೆ ಮನ್ನಣೆಯೇ ದೊರಕದಾಗಿದೆ. ಹಿಂದೆ ದಕ್ಷಿಣ ಆಫ್ರಿಕಾದ ಕುಲವಾದಿ ಸರಕಾರದ ನೀತಿಗಳಿಗೆ ವಿರೋಧವಾಗಿ ಆರ್ಥಿಕ ಪ್ರತಿಬಂಧ ವಿಧಿಸಲು ಮಹಾಸಭೆಯ ನಿರ್ಣಯಗಳಿಗೆ ತಿರಸ್ಕಾರ. ಈಗ ಕ್ಯೂಬಾದ ಮೇಲೆ ವಿಶ್ವಸಂಸ್ಥೆಯ ಮೂಲಕ ಅಮೆರಿಕಾ ವಿಧಿಸಿರುವ ದಿಗ್ಬಂಧನವನ್ನು ತೆರವುಗೊಳಿಸಲು ನಕಾರ ಇದಕ್ಕೆ ಉದಾಹರಣೆ. ಬಹುಮತದ ಅಭಿಪ್ರಾಯಕ್ಕೆ ಮನ್ನಣೆ ನೀಡದ ಯಾವುದೇ ಸುಧಾರಣೆಗಳು ಅರ್ಥಹೀನವಾಗುತ್ತವೆ. ಭದ್ರತಾ ಮಂಡಲಿಯ ಖಾಯಂ ಸದಸ್ಯರಾಷ್ಟ್ರಗಳ ಸಂಖ್ಯೆಯನ್ನು ಹೆಚ್ಚಿಸುವ, ಈ ಹೊಸ ಸದಸ್ಯರಾಷ್ಟ್ರಗಳಿಗೆ ವೀಟೋ ಹಕ್ಕು ಕೊಡುವ ಅಥವಾ ಕೊಡದಿರುವ ಸೂಚನೆಗಳು ಕೆಲವು ರಾಷ್ಟ್ರಗಳ ಪ್ರತಿಷ್ಠೆಯನ್ನು ತೃಪ್ತಿಗೊಳಿಸೀತು. ಆದರೆ ಇದರಿಂದ ಪ್ರಯೋಜನವೇನಾಗದು. ಮೂಲಭೂತ ಸುಧಾರಣೆಗಳಾಗದೆ, ಭದ್ರತಾ ಮಂಡಲಿಯ ಖಾಯಂ ಸದಸ್ಯ ರಾಷ್ಟ್ರಗಳ ವೀಟೋ ಹಕ್ಕನ್ನು ತೊಡೆದುಹಾಕದೆ ಮಾರ್ಪಾಟುಗಳು ತೋರಿಕೆಯದಾಗಿರುವುವೇ ಹೊರತು, ಪರಿಣಾಮಕಾರಿಯಾಗಿರುವುದಿಲ್ಲ. ವಜ್ರಮಹೋತ್ಸವದ ಮಹಾಸಭೆಯಲ್ಲಿ ವಿಶ್ವಸಂಸ್ಥೆಯಲ್ಲಿ ಗಾಢವಾದ ಪರಿವರ್ತನೆಗಳಿಗಾಗಿ ಮೇಲಿನ ಅಂಶವನ್ನು ಒತ್ತಿ ಹೇಳಿದ್ದು ವೆನೆಜುವೇಲಾದ ಅಧ್ಯಕ್ಷ ಹ್ಯೂಗೋ ಚಾವೆಜ್ ಒಬ್ಬರೆ. ವಿಶ್ವಸಂಸ್ಥೆಯ ಕಚೇರಿ ಅಮೆರಿಕಾದ ಕೃಪಾಶ್ರಯದಲ್ಲಿ ನ್ಯೂಯಾರ್ಕ್‌ನಲ್ಲಿರುವುದು ಸಮಂಜಸವಲ್ಲ, ಅದನ್ನು ಬೇರೆಡೆಗೆ ವರ್ಗಾಯಿಸಬೇಕು ಎಂದೂ ಚಾವೇಜ್ ಹೇಳಿದ್ದು ಗಮನಿಸಬೇಕಾದ ಅಂಶ. ಈ ಹಿಂದೆಯೂ ಇದೇ ಪ್ರಸ್ತಾಪ ಬಂದಿತ್ತು. ಅವರು ಮಂಡಿಸಿದ ಅಭಿಪ್ರಾಯಗಳಿಗೆ ಬಹುತೇಕ ರಾಷ್ಟ್ರಗಳ ಬೆಂಬಲವಿದ್ದುದು ಸ್ಪಷ್ಟವಾಗಿತ್ತು. ಸ್ವಪ್ರತಿಷ್ಠೆ ಹೆಚ್ಚಿಸುವ ಭದ್ರತಾ ಮಂಡಲಿಯ ಖಾಯಂ ಸದಸ್ಯತ್ವ ಪಡೆಯುವ ಮಹದಾಕಾಂಕ್ಷೆಯನ್ನು ಬದಿಗಿರಿಸಿ, ಭಾರತದಂತಹ ಪ್ರಮುಖ ರಾಷ್ಟ್ರಗಳು ಬಹ್ವಂಶ ರಾಷ್ಟ್ರಗಳ ಅಭಿಪ್ರಾಯಗಳಿಗೆ ಮನ್ನಣೆ ದೊರಕುವಂಥ ಮೂಲ ಸುಧಾರಣೆಗಳಿಗಾಗಿ ಪ್ರಯತ್ನಿಸಬೇಕಾಗಿದೆ. ಹಾಗಾದಾಗ ಮಾತ್ರವೇ ವಿಶ್ವಸಂಸ್ಥೆ ನಿಜವಾದ ಪ್ರಾತಿನಿಧಿಕ ಸಂಸ್ಥೆಯಾಗಲು ಸಾಧ್ಯ.

**ಸೀಯಾರ್ಕೆ**

## ವಿಶ್ವಾಸ ಕಳೆದುಕೊಂಡಿರುವ ಬ್ರಿಟಿಷ್ ಲೇಬರ್ ಪಾರ್ಟಿ

ಸಮಾಜವಾದಿ ಪರಿಕಲ್ಪನೆಗಳನ್ನು ಅಂಗೀಕರಿಸಿ, ಕಾರ್ಮಿಕವರ್ಗವನ್ನು ಪ್ರತಿನಿಧಿಸುವ ಪಕ್ಷವಾಗಿ ಬ್ರಿಟನ್ನಿನಲ್ಲಿ ಹುಟ್ಟಿಕೊಂಡದ್ದು ಬ್ರಿಟಿಷ್ ಲೇಬರ್ ಪಾರ್ಟಿ. ಆದರೆ ಕಾಲಕ್ರಮೇಣ ಬೆಳೆದದ್ದು ಯೂರೋಪಿನ ಇತರ ಕಡೆಗಳಲ್ಲಿನಂತೆ ಸೋಷ್ಯಲ್ ಡೆಮಾಕ್ರಟಿಕ್ ಪಕ್ಷವಾಗಿ. ಸಂಪ್ರದಾಯವಾದಿ ಕನ್ಸರ್‌ವೇಟಿವ್ ಪಕ್ಷಕ್ಕೆ ವಿರೋಧವಾಗಿ ಪುರೋಗಾಮಿ ಸುಧಾರಣೆಗಳನ್ನು ಪ್ರತಿಪಾದಿಸುವುದು ಲೇಬರ್ ಪಾರ್ಟಿಯ ಘನ ಉದ್ದೇಶ. ಬಹುತೇಕ ಬ್ರಿಟನ್ನಿನ ಕಾರ್ಮಿಕ ವರ್ಗದ ಬೆಂಬಲದಿಂದಲೇ ಬೆಳೆದ ಈ ಪಕ್ಷ ಕೆಲವೊಂದು ಸುಧಾರಣೆಗಳನ್ನು ಕಂಡರೂ, ಮೂಲತಃ ಬ್ರಿಟನ್ನಿನ ಬಂಡವಾಳಗಾರರ, ಅವರ ಸಾಮ್ರಾಜ್ಯಶಾಹಿ ಆಕಾಂಕ್ಷೆಗಳಿಗೆ ಪೂರಕವಾಗಿಯೇ ಇತ್ತು. ಹಾಗಾಗಿ ಮೂಲಭೂತವಾಗಿ ಬ್ರಿಟನ್ನಿನ ರಾಜಕೀಯ ವ್ಯವಸ್ಥೆಯಲ್ಲಿ ಆಡಳಿತ ನಡೆಸುತ್ತ ಬಂದಿರುವ ಕನ್ಸರ್‌ವೇಟಿವ್ ಪಕ್ಷಕ್ಕೂ, ಲೇಬರ್ ಪಕ್ಷಕ್ಕೂ ಮಧ್ಯೆ ಇರುವ ವ್ಯತ್ಯಾಸ ಗಮನಾರ್ಹವಾದ್ದೇನಲ್ಲ. ಆದರೂ ಬ್ರಿಟಿಷ್ ಲೇಬರ್ ಪಾರ್ಟಿಯಲ್ಲಿ ಸಮಾಜವಾದದ ಬಗ್ಗೆ ಒಲವುಳ್ಳ ಪ್ರಬಲ ಗುಂಪು ಇದ್ದುದನ್ನು ಮರೆಯುವಂತಿಲ್ಲ. ಈಗಲೂ ಕೆಲಮಂದಿ ಇದ್ದಾಗ್ಯೂ ಪೂರ್ಣವಾಗಿ ಮೂಲೆಗೊತ್ತಲ್ಪಟ್ಟಿದ್ದಾರೆ.

ಎರಡನೇ ಮಹಾಯುದ್ಧಾನಂತರದಲ್ಲಿ ಅಧಿಕಾರಕ್ಕೆ ಬಂದ ಅಟ್ಲಿ ನೇತೃತ್ವದ ಲೇಬರ್ ಪಾರ್ಟಿ ಸರಕಾರ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಉದ್ದೇಶದಿಂದ ಕೆಲವೊಂದು ಉದ್ಯಮಗಳನ್ನು ರಾಷ್ಟ್ರೀಕರಿಸಿತು. ಅಧಿಕಾರಕ್ಕೆ ಬರಲು ಟ್ರೇಡ್ ಯೂನಿಯನ್‌ಗಳ ಬೆಂಬಲದ ಮೇಲೇ ಅಧಿಕವಾಗಿ ಅವಲಂಬಿತವಾಗಿರುವ ಈ ಪಕ್ಷ ಅಲ್ಲಲ್ಲಿ ಸುಧಾರಣೆಗಳನ್ನು ತಂದಿತಾದರೂ ಬಂಡವಾಳಶಾಹಿ ಮಾರುಕಟ್ಟೆ ವ್ಯವಸ್ಥೆಯ ಪ್ರತಿಪಾದಕನಾಗಿಯೇ ಇತ್ತು. ವಿದೇಶಾಂಗ ನೀತಿಯ ವಿಷಯದಲ್ಲಿ ಅಮೆರಿಕಾದ ಹಿಂಬಾಲಕನಾಗಿ ಬ್ರಿಟನ್ ನಿಂತದ್ದು ಎರಡನೇ ಮಹಾಯುದ್ಧದ ನಂತರ. ಸಾಮ್ರಾಜ್ಯ ಕಳೆದುಕೊಂಡು, ಆರ್ಥಿಕವಾಗಿ ದುರ್ಬಲಗೊಂಡಿದ್ದ ಬ್ರಿಟನ್ ಅಮೆರಿಕಾದ ಮೇಲೆ ಹೆಚ್ಚು ಅವಲಂಬನೆಗೊಂಡಿತು. ಇದಕ್ಕನುಸಾರವಾಗಿ ಲೇಬರ್ ಪಾರ್ಟಿಯ ನೀತಿಗಳೂ ಬದಲಾಗತೊಡಗಿದುವು.

ಹತ್ತು ವರ್ಷಗಳ ಹಿಂದೆ ಅಧಿಕೃತವಾಗಿ ಸೋಷ್ಯಲ್ ಡೆಮಾಕ್ರಟಿಕ್ ಪಾರ್ಟಿ ಎಂದು ಘೋಷಿಸಿಕೊಂಡು ಟೋನಿ ಬ್ಲೇರ್ ನೇತೃತ್ವದಲ್ಲಿ ಅಧಿಕಾರಕ್ಕೆ ಬಂದ ಲೇಬರ್ ಪಕ್ಷ ಸಮಾಜವಾದದ ಎಲ್ಲ ಸೋಗನ್ನೂ ಕಿತ್ತೊಗೆಯಿತು. ಬ್ರಿಟನ್ನಿನಲ್ಲಿ ದೀರ್ಘಕಾಲದ ಕನ್ಸರ್‌ವೇಟಿವ್ ಆಳ್ವಿಕೆಯನ್ನು ಅಂತ್ಯಗೊಳಿಸಿ ಅಧಿಕಾರಕ್ಕೇರಿದ ಪ್ರಧಾನಿ ಟೋನಿ ಬ್ಲೇರ್ ಕನ್ಸರ್‌ವೇಟಿವ್ ಧುರೀಣರುಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. ಬ್ರಿಟನ್ ಅನ್ನು ಸಂಪೂರ್ಣವಾಗಿ ಅಮೆರಿಕಾದ ಐವತ್ತೊಂದನೇ ರಾಜ್ಯವಾಗಿ ಪರಿವರ್ತಿಸಿದಂತೆ ನಡೆದುಕೊಳ್ಳುತ್ತಿದ್ದಾನೆ. ಬ್ಲೇರ್ ಬೆಂಬಲಿಗರು ಲೇಬರ್ ಪಾರ್ಟಿಯಲ್ಲಿನ ಹಳಬರನ್ನು ಮೂಲೆಗೊತ್ತಿದ್ದಾರಷ್ಟೇ ಅಲ್ಲದೆ, ತಮ್ಮ ಜನವಿರೋಧಿ ನೀತಿಗಳನ್ನು ವಿರೋಧಿಸಿದವರ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದಾರೆ. ಪಕ್ಷದೊಳಗಿನ ಎದುರಾಳಿಗಳನ್ನು ಹತ್ತಿಕ್ಕುತ್ತಿದ್ದಾರೆ. ಇತ್ತೀಚೆಗೆ ಬ್ರಿಟನ್‌ನಲ್ಲಿ ಜರುಗಿದ ಲೇಬರ್ ಪಾರ್ಟಿ ಸಮ್ಮೇಳನ ಅದನ್ನು ಎತ್ತಿ ತೋರಿಸಿತು.

ಇರಾಕ್ ಮೇಲೆ ಅಮೆರಿಕಾ ನಡೆಸಿದ ದುರಾಕ್ರಮಣದಲ್ಲಿ ಬ್ರಿಟನ್ ಅನ್ನು ಪಾಲುದಾರನಾಗಿ ಮಾಡಿದ ಕೀರ್ತಿ(!) ಟೋನಿ ಬ್ಲೇರ್‌ಗೆ ಸಲ್ಲುತ್ತದೆ. ಈ ನೀಚ ಪ್ರಕರಣದಲ್ಲಿ ಅದು ನಡೆದುಕೊಂಡ ರೀತಿ ಬ್ರಿಟನ್ನಿನ ಮುಖಕ್ಕೆ ಮಸಿಬಳಿದಂತಾಗಿದೆ. ದೇಶದ ಜನತೆಯ ಆ ಪಕ್ಷದ ಪ್ರಮುಖರ ಅಭಿಮತವನ್ನು ಅಲಕ್ಷಿಸಿ ಬ್ರಿಟನ್ ಅನ್ನು ಯುದ್ಧದಲ್ಲಿ ತೊಡಗಿಸಿದ್ದ ಟೋನಿ ಬ್ಲೇರ್. ಸಮರ್ಥಿಸಿಕೊಳ್ಳಲಾಗದ ಈ ದುರಾಕ್ರಮಣದಿಂದಾಗಿ ಬ್ಲೇರ್‌ಗೆ ಮುಖಭಂಗವಾಗಿದ್ದರೂ, ಬುಷ್ ಅನುಯಾಯಿಯಾಗಿ ಮುಂದುವರಿಯುತ್ತಿರುವುದು ಶೋಚನೀಯ. ಮೂರನೆಯ ಅವಧಿಗೆ ಬಹುಮತದಿಂದ ಆಯ್ಕೆಗೊಂಡು ಅಧಿಕಾರಕ್ಕೇರಿದ ಟೋನಿ ಬ್ಲೇರ್ ಈಗ ಟ್ರೇಡ್ ಯೂನಿಯನ್‌ಗಳ ಮೇಲೆ ಪಾರ್ಟಿಯ ಅವಲಂಬನೆಯನ್ನು ತೊಡೆದುಹಾಕಿ, ಅವುಗಳ ಪ್ರಾಧಾನ್ಯತೆಯನ್ನು ಕಡಿಮೆಮಾಡಲು ಹೊರಟಿದ್ದಾನೆ. ಬ್ರೈಟನ್ ಸಮ್ಮೇಳನದಲ್ಲಿ ಅದು ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ಭಯೋತ್ಪಾದನೆಯನ್ನು ಹತ್ತಿಕ್ಕುವ ಹೆಸರಿನಲ್ಲಿ ಈಚೆಗೆ ಟೋನಿ ಬ್ಲೇರ್ ಸರಕಾರ ಜಾರಿಗೆ ತಂದಿರುವ ದಬ್ಬಾಳಿಕೆಯ ಕಾನೂನುಗಳನ್ನು ಪಕ್ಷದಲ್ಲಿನ ವಿರೋಧವನ್ನೂ ಹತ್ತಿಕ್ಕಲು ಬಳಸಲಾಗುತ್ತಿದೆ. ಬ್ರಿಟನ್‌ನಲ್ಲಿ ಜರುಗಿದ ಲೇಬರ್ ಪಕ್ಷದ ವಾರ್ಷಿಕ ಸಮ್ಮೇಳನದಲ್ಲಿ ಅದು ಸ್ಪಷ್ಟವಾಗಿ ಕಂಡುಬಂದಿತು. ಪಕ್ಷದ ಹಿರಿಯ ಸದಸ್ಯರುಗಳನ್ನು ಹೀನಾಯವಾಗಿ ನಡೆಸಿಕೊಳ್ಳಲಾಯಿತು. ಹಿಂದಿನ ಎಲ್ಲ ಪುರೋಗಾಮಿ ವಿಚಾರಗಳನ್ನು ಗಾಳಿಗೆ ತೂರಿರುವ ಲೇಬರ್ ಪಕ್ಷವನ್ನು ನಿಷ್ಠಾವಂತ ಕಾರ್ಯಕರ್ತರು, ಹಿರಿಯ ಸದಸ್ಯರು ತ್ಯಜಿಸುತ್ತಿದ್ದಾರೆ. ಹೊಸ ವಿಚಾರಗಳ ಕೊರತೆಯಿಂದಾಗಿ ಲೇಬರ್ ಪಕ್ಷ ದಿನೇ ದಿನೇ ದುಃಸ್ಥಿತಿಯನ್ನು ತಲುಪುತ್ತಿರುವುದು ಸ್ಪಷ್ಟವಾಗುತ್ತಿದೆ.

**ಸೀಯಾರ್ಕೆ**
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ, ಕತ್ತರಿಗುಪ್ಪೆ, ಬೆಂಗಳೂರು - ೫೬೦ ೦೮೫

---

*೪೩ನೇ ಪುಟದಿಂದ ಭಾರತೀಯರಿಗೆ....*

ಪಾರಾಗುತ್ತಾರೆ. 'ಇಂತಹ ಪುಸ್ತಕಗಳಿಂದ ಮೋಸ ಹೋಗಬೇಡಿ' ಎಂದು ಕೂಗಿ ಹೇಳಿ ಜನರನ್ನು ಎಚ್ಚರಿಸುತ್ತಾರೆ.

ಈಚಿನ ದಿನಗಳಲ್ಲಿ ಶ್ರೀಮಂತರು, ಮೇಲುಮಧ್ಯಮ ವರ್ಗದವರು, ರಾಜಕಾರಣಿಗಳು ಮೊದಲಾದವರ ಭ್ರಮೆಯನ್ನು ಕೆರಳಿಸುವ 'ವಾಸ್ತುಶಿಲ್ಪ'ವನ್ನು ಕುರಿತು ಬರೆಯುತ್ತ ''...ಖೋಟಾ ವಾಸ್ತುಶಿಲ್ಪಿಗಳು ನಿರ್ಮಿಸಿಕೊಂಡ ಈ ವಿಧ ಖೋಟಾ ಶಾಸ್ತ್ರವು ಮಂಕು ಜನರನ್ನು ವಂಚಿಸಿ, ಹೊಟ್ಟೆ ತುಂಬಿಸಿಕೊಳ್ಳುವ ಸಲುವಾಗಿಯೇ ರಚಿಸಿಕೊಂಡ ಇದೊಂದು ಪೌರಾಣಿಕ ನಾಟಕವೇ ಆಗಿದೆ'' ಎಂದು ತೀರ್ಮಾನಿಸಲಾಗಿದೆ.

ಒಟ್ಟಿನ ಮೇಲೆ ದೇವರು ದಿಂಡರು, ಮತಧರ್ಮಗಳು, ಮಂತ್ರ ತಂತ್ರ ಪವಾಡಗಳು, ಜ್ಯೋತಿಷಜ್ಞಾನ, ವಾಸ್ತುಶಿಲ್ಪ ಮೊದಲಾದವನ್ನು ಬಗೆಬಗೆಯಾಗಿ ಪ್ರಶ್ನಿಸಿ, ಅವುಗಳ ಹಿಂದಿನ ಗುಟ್ಟನ್ನು ಬಯಲಿಗೆಳೆಯುವ ಸದಾಶಿವಯೋಗಿಗಳು –

''ಅಜ್ಞಾನಮಯ ಲೋಕಾಂಧಕಾರದಲ್ಲಿ ಚಲಿಸುತ್ತಿರುವ ಬಹಿರ್ಮುಖಿ ಮನಸ್ಸನ್ನು ಅಂತರ್ಮುಖಿಗೊಳಿಸಿ, ಅಂತರಂಗದ ಸುಜ್ಞಾನದತ್ತ ಸಾಗಿಸುವ ಪ್ರಕಾಶವು ಬೆಳಗಲಿ'' ಎಂದು ಹಾರೈಸುತ್ತಾರೆ.

ಭಾರತೀಯ ಸಮಾಜದಲ್ಲಿ ಪ್ರಚಲಿತವಾಗಿರುವ ಅಸಂಬದ್ಧ ನಂಬಿಕೆಗಳು ಮತ್ತು ಅಂಧ ನಂಬಿಕೆಗಳನ್ನು ಪ್ರಚಾರ ಮಾಡಿ ಇನ್ನಷ್ಟು ಸ್ಥಿರಗೊಳಿಸುವ ಪುಸ್ತಕಗಳನ್ನು ನಿಷೇಧಿಸಲು ಮತ್ತು ಇಂತಹವುಗಳನ್ನು ಬರೆದವರನ್ನು ಶಿಕ್ಷಿಸಲು ಕ್ರಮ ಕೈಗೊಳ್ಳಬೇಕಾಗಿದೆಯೆಂದು ಸದಾಶಿವಯೋಗಿಗಳು ಸರ್ಕಾರವನ್ನು ಆಗ್ರಹಿಸುತ್ತಾರೆ. ಆದರೆ ಸ್ವತಃ ಮೂಢನಂಬಿಕೆಗಳನ್ನು, ಪವಾಡಗಳನ್ನು, ಮತಧರ್ಮಗಳ ಮುಖಂಡರನ್ನು ಆಶ್ರಯಿಸಿ ನಡೆಯುತ್ತಿರುವ ಸರ್ಕಾರಗಳು ಇಂತಹ ಸ್ಥಾಪಿತ ಶಕ್ತಿಗಳ ವಿರುದ್ಧ ಕ್ರಮ ಕೈಗೊಳ್ಳುತ್ತವೆಯೆ ಎಂಬುದು ಓದುಗರ ಮನಸ್ಸಿನಲ್ಲಿ ಮೂಡುವ ಪ್ರಶ್ನೆ. ಸ್ವಬುದ್ಧಿಯುಳ್ಳ ಕೆಲವು ಓದುಗರಾದರೂ ಸದಾಶಿವಯೋಗಿಗಳ ಕಳಕಳಿಗೆ ಓಗೊಟ್ಟರೆ ಇವರು ಪುಸ್ತಕ ಬರೆದದ್ದು ಸಾರ್ಥಕವೆನ್ನಿಸುತ್ತದೆ.

ಇಪ್ಪತ್ತು ಅಧ್ಯಾಯಗಳಲ್ಲಿ (ಎಲ್ಲ ಅಧ್ಯಾಯಗಳಿಗೆ ಸಮಾನ ಗಾತ್ರವಾಗಲಿ, ಸಮಪ್ರಾಮುಖ್ಯವಾಗಲಿ ಇಲ್ಲ) ಹಂಚಿಹೋಗಿರುವ ಸದಾಶಿವಯೋಗಿಗಳ ಬರವಣಿಗೆಯು ಚೆಲ್ಲಾಪಿಲ್ಲಿಯಾಗಿದೆ. ಎಷ್ಟೋ ಸಂದರ್ಭಗಳಲ್ಲಿ ಲೇಖಕರು ಪ್ರತಿಪಾದಿಸಬೇಕಾಗಿರುವ ಪ್ರಮುಖ ವಿಷಯವು ಬದಿಗೆ ಸರಿದು, ಆಯಾ ಕ್ಷಣದಲ್ಲಿ ಸುಳಿದ ಲಹರಿಯ ಬೆನ್ನು ಹತ್ತಿ ಒಂದಷ್ಟು ದೂರ ಹೋಗುವುದು ಮತ್ತೆ ಹಿಂದಕ್ಕೆ ಬರುವುದು ಉಂಟು. ಹೀಗಾಗಿ ಸಾಹಿತ್ಯ ಕೃತಿಯೊಂದರ ಶಿಲ್ಪದೃಷ್ಟಿಯಿಂದ ಅಥವಾ ಶಾಸ್ತ್ರದ ನಿಖರ ನಿರೂಪಣೆಯ ದೃಷ್ಟಿಯಿಂದ ವಿಮರ್ಶಿಸುವವರಿಗೆ ಹಲವು ನ್ಯೂನತೆಗಳು ಎದ್ದು ತೋರಬಹುದು. ಉದ್ಧರಣಗಳನ್ನು ತಮಗೆ ತೋಚಿದಂತೆ ಬಳಸಲಾಗಿದೆ, ಭಾಷಾಂತರಿಸಲಾಗಿದೆ. ಪ್ರಾಯಶಃ ಪ್ರೌಢ ಶೈಲಿಯ ಗ್ರಂಥರಚನೆಗೆ ಬೇಕಾದ ಕ್ರಮಬದ್ಧ ಶಿಕ್ಷಣ, ವ್ಯಾಸಂಗ, ಶಿಸ್ತುಗಳು ಗ್ರಂಥಕರ್ತರಿಗೆ ದೊರೆಯಲಿಲ್ಲವೆಂಬುದು ಇದಕ್ಕೆ ಕಾರಣವಾಗಿರಬಹುದು. ಲೇಖಕರ ಪ್ರಮುಖ ಉದ್ದೇಶವನ್ನು ಗಮನಿಸಿದಾಗ ಇವೆಲ್ಲ ಗೌಣವಾಗುವ ಸಂಗತಿಗಳು; ಜನಸಾಮಾನ್ಯರಿಗೆ ಅರ್ಥವಾಗುವಂತೆ ತಾವು ಹೇಳಲೇಬೇಕಾದ ಸತ್ಯವನ್ನು ತಮಗೆ ಅನಿಸಿದಂತೆ ಹೇಳುವ ಸದಾಶಿವಯೋಗಿಗಳ ಪ್ರಾಮಾಣಿಕತೆ ಮೆಚ್ಚಬೇಕಾದುದು. ಪರಂಪರಾಗತ, ಪೂರ್ವಸ್ಥಾಪಿತ ಆಗ್ರಹಗಳಿಂದ ಬಿಡಿಸಿಕೊಂಡು ಮುಕ್ತ ಮನಸ್ಸಿನಿಂದ, ತಾಳ್ಮೆಯಿಂದ ಓದುವವರಿಗೆ 'ಅಪ್ರಿಯ ಸತ್ಯ'ದ ಕೆಲವು ಹೊಳಹುಗಳಾದರೂ ಇಲ್ಲಿ ದೊರೆತಾವು.

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ,
ಬನಶಂಕರಿ ಎರಡನೇ ಹಂತ, ಬೆಂಗಳೂರು - ೫೬೦ ೦೭೦

ದಿನಾಂಕ ೨೭-೧೨-೨೦೦೩ರಂದು ಮಲ್ಲಿಗೆಯ ಕವಿ ಇಹದ ಪರಿಮಳದ ಹಾದಿಯಿಂದ ಹಿಂದಿರುಗುವ ಹಾದಿಗಳಿಲ್ಲದ ಆ ಕೊನೆಯ ಮನೆಗೆ ಹೊರಟುಹೋದರು. ಕಾಲದ ನಿರಂತರತೆಯಾದರೂ ಅದೆಷ್ಟು ಯಾಂತ್ರಿಕ? ಎರಡು ವರುಷ ಕಳೆದೇಹೋಯಿತು. ಇಂದಿಗೂ ಮಲ್ಲಿಗೆಯ ಕವಿಯ ಮಕರಂದ ಕಾಡುತ್ತಲೇ ಇದೆ. ಹಾಗೆ ಕಾಡುತ್ತಲೇ ಇರುತ್ತದೆ, ಬಹುಶಃ ಕನ್ನಡ ಕಾವ್ಯ ಪರಂಪರೆಯ ಪರಿಧಿಯವರೆಗೂ...

ಕೆ. ಎಸ್. ನರಸಿಂಹಸ್ವಾಮಿಯವರ ವಿಶೇಷವಿರುವುದೇ ಇಲ್ಲಿ. ಎಲ್ಲ ಪಾರಿಭಾಷೆಗಳಾಚೆಗೂ ತನ್ನತನವನ್ನು ವಿಶಿಷ್ಟವಾದ ಸುಕುಮಾರತ್ವದ ಅನನ್ಯತೆಯಲ್ಲಿ ಅವರು ದಾಖಲಿಸಿಕೊಂಡಿದ್ದರು. ಆಧುನಿಕ ಕನ್ನಡ ಕಾವ್ಯದ ಸುಪ್ರಭಾತದ ಸಂದರ್ಭದಲ್ಲಿ ಮೈಸೂರ ಮಲ್ಲಿಗೆ ಯೊಂದಿಗೆ ಸಾಹಿತ್ಯ ಪರಂಪರೆಗೆ ಪ್ರವೇಶಿಸಿದ ಕವಿಯನ್ನು ಅಂದಿನ ಸಹೃದಯ ವರ್ಗ ಅದೆಷ್ಟು ವಿಶಿಷ್ಟವಾಗಿ ಸ್ವಾಗತಿಸಿ ತೆಂದರೆ, ಸಂಕಲನ ಪ್ರಕಟವಾದ ಎರಡು ತಿಂಗಳಲ್ಲಿ ಪ್ರತಿಗಳು ಖಾಲಿಯಾಗುವಷ್ಟು, ಕೆ.ಎಸ್.ನ.ರ ಕವಿತೆ ಗಳನ್ನು ಜಾನಪದ ಗೀತೆಗಳೆಂದು ಹಾಡಿಕೊಳ್ಳುವಷ್ಟು. ಇಂದಿಗೂ ಮರುಮುದ್ರಣಗೊಂಡ ದಾಖಲೆ ಮೈಸೂರ ಮಲ್ಲಿಗೆ ಕಾವ್ಯಕ್ಕೆ ಉಳಿದಿರುವುದು ಒಬ್ಬ ಕವಿ ಮತ್ತೆ ಮತ್ತೆ ಪ್ರಸ್ತುತವಾಗುವ, ನಿರಂತರವಾಗುವ, ಜನ-ಮನದ ಕವಿಯಾಗುವ ಸಾಧ್ಯತೆಗಳಿಗೆ ದೊಡ್ಡ ಸಾಕ್ಷಿ.

ಮನುಷ್ಯ ಸಂಬಂಧಗಳೇ ಶ್ರೇಷ್ಠವೆನ್ನುವ ಅಪರಿಮಿತ ವಾದ ನಂಬಿಕೆಗಳೊಂದಿಗೆ ಕಾವ್ಯಸೃಷ್ಟಿಗೆ ತೊಡಗಿಸಿಕೊಂಡ ಕೆ.ಎಸ್.ನ. ಈ ನೆಲದ ಕೌಟುಂಬಿಕ ಬೇರುಗಳನ್ನು ಭದ್ರ ಗೊಳಿಸುವ, ತನ್ಮೂಲಕ ಒಂದು ಆರೋಗ್ಯಕರ ಪರಿಸರ ಸೃಷ್ಟಿಯಾಗುವ ಸಾಧ್ಯತೆಗಳನ್ನು ಕುರಿತು, ಆಲೋಚಿಸಿ ದವರು. ಎಲ್ಲ ಬಗೆಯ ಸಂಕೋಚ-ಸಹಜತೆಗಳೊಂದಿಗೆ ಕನ್ನಡ ಕಾವ್ಯಲೋಕ ಪ್ರವೇಶಿಸಿದ ಕವಿಯನ್ನು ಅವರ ಕಾವ್ಯದ ಸತ್ವವನ್ನು ಸಹೃದಯರೂ, ವಿಮರ್ಶಕರೂ ಅಲ್ಲದೆ ಕವಿಗಳೇ ಮೆಚ್ಚಿದ್ದು ಕವಿಯ ನಾಳೆಗಳ ಎಚ್ಚರವೂ ಆಯಿತು. ಡಿ.ಎಲ್.ಎನ್. ಅವರು 'ಕಸ್ತೂರಿ ನೆಲದಲ್ಲಿ ಕಾಮನಬಿಲ್ಲನ್ನು ಬಿತ್ತಿ ಬೆಳೆಯಿಸಿರುವ ಹೂದೋಟ' ಎಂದೇ ಮೈಸೂರು ಮಲ್ಲಿಗೆ ಸಂಕಲನದ ಬಗೆಗೆ ಉದ್ಗಾರವೆತ್ತುತ್ತಾರೆ.

– ಹೀಗೆ ವಿಶಿಷ್ಟವಾಗಿ ಮೊದಲ ಹೆಜ್ಜೆ ಮೂಡಿಸಿದ ಕವಿ ನಂತರ ಬದುಕಿನ ಕೊನೆಯವರೆವಿಗೂ, ಸುಮಾರು ಆರು ದಶಕಗಳ ಕಾಲ ಕನ್ನಡ ಕಾವ್ಯಪರಂಪರೆಯೊಂದಿಗೆ ನಿಕಟವಾಗಿದ್ದರು. ಕಾವ್ಯ ಪ್ರೀತಿ ಅವರ ವ್ಯಕ್ತಿತ್ವದ ಮುಖ್ಯ ಭಾಗವೇ ಆಗಿತ್ತೆನ್ನಬಹುದು. ಇಹಲೋಕ ತ್ಯಜಿಸುವ ಎರಡು ತಿಂಗಳ ಮೊದಲು ಸಹ ಅವರ ಕಾವ್ಯ ಕಾಳಜಿ 'ದೀಪ ಸಾಲಿನ ನಡುವೆ' ಸಂಕಲನವಾಗಿ ಪ್ರಕಟಗೊಂಡಿತ್ತು ಎಂಬುದು ಇಲ್ಲಿ ಉಲ್ಲೇಖಾರ್ಹ. ಅದಕ್ಕಿಂತ ಮುಖ್ಯವಾಗಿ ಗಮನಿಸಬಹುದಾದ ಸಂಗತಿ ಯೆಂದರೆ, ಇಳಿವಯಸ್ಸಿನ ಎಲ್ಲ ದೈಹಿಕ ತೊಂದರೆಗಳನ್ನು ಮೀರಿ ಕವಿ ಆಲೋಚಿಸುತ್ತಿದ್ದುದು ಮತ್ತು ಅದನ್ನು ಯುವ ಗೆಳೆಯನ ಬರಹದ ಸಹಾಯದಲ್ಲಿ ದಾಖಲಿಸುತ್ತಿದ್ದುದು.

ಬಹುಪಾಲು ಆಧುನಿಕ ಕನ್ನಡ ಕಾವ್ಯದ ಎಲ್ಲ ಚಳುವಳಿಗಳ ಸಂದರ್ಭದಲ್ಲಿ ಬರೆಯುತ್ತಿದ್ದ ಕೆ.ಎಸ್.ನ. ನವೋದಯ ಕಾಲಕ್ಕೆ ಸಲ್ಲುವಂತೆ ಪ್ರಾರಂಭಿಸಿದರೂ ನವ್ಯಕಾವ್ಯಕ್ಕೆ ಸವಾಲಿನೋಪಾದಿಯಲ್ಲಿ ಪ್ರತಿಕ್ರಿಯಿಸಿದರು. ಅಲ್ಲಿಯೂ ಯಶಸ್ವಿ ಯಾದರು. ಆದರೆ ಅದು ಇಡಿಯಾಗಿ ಅವರನ್ನು ಕಾಡಿದ ವಿಶೇಷವಾಗಲಿಲ್ಲ. ಚಳುವಳಿಗಳ ಬಗೆಗೂ ಅವರದು ತಣ್ಣನೆಯ ಪ್ರತಿಕ್ರಿಯೆ. ಅವರ ಆಲೋಚನೆಗಳು ನಿರಂತರವಾಗಿ ಸಾಮಾನ್ಯ ಓದುಗನ ಪರವಾದದ್ದೇ ಆಗಿದ್ದವು. ಸಾಮಾನ್ಯ ಓದುಗ ಹೆಚ್ಚು ಸಂವೇದನಾಶೀಲನಾಗಿರುತ್ತಾನೆ ಎನ್ನುವುದು ಅವರು ಕಂಡುಕೊಂಡ ಸತ್ಯವೂ ಆಗಿತ್ತು. ಆದ್ದರಿಂದಲೂ ಕಾವ್ಯ, ವಸ್ತು, ಭಾಷೆ ಸಂಕೀರ್ಣಗೊಳ್ಳುವುದರ ಬಗೆಗೂ ಅವರಿಗೆ ವಿರೋಧವಿತ್ತು.

ಒಲವಿನ ಕವಿ ಎಂದೇ ಸಂಬೋಧಿಸಿ ಅವರನ್ನು ಸ್ವೀಕರಿಸಿದ ಕನ್ನಡ ವಿದ್ವಾಂಸಲೋಕ ಕೆಲವೊಮ್ಮೆ ಆ ಮಿತಿಯಲ್ಲೇ ಅವರನ್ನು ಗ್ರಹಿಸಿ ನಿಂತುಬಿಟ್ಟಿತೇನೋ ಎನಿಸುತ್ತದೆ. ಇದು ವಿಪರ್ಯಾಸವಾಗಿ ಅಷ್ಟೇ ಅಲ್ಲ, ಕೆಲವೊಮ್ಮೆ ಅಪಾಯ ವಾಗಿಯೂ ಕಾಣುವುದುಂಟು. ಭೂಮಿ ಮತ್ತು ದೇವರ ಬಗೆಗೆ ಕೆ.ಎಸ್.ನ. ನಡೆಸಿದ ಮುಖಾಮುಖಿ ಅಪರೂಪದ್ದಾಗಿತ್ತು, ಅನನ್ಯವಾಗಿತ್ತು ಮತ್ತು ಬಹುಶಃ ನವೋದಯ ಕಾವ್ಯ ಮತ್ತು ಕಾಲದ ಸಂದರ್ಭದಲ್ಲಿಯೇ ದೇವರನ್ನು ಕುರಿತ ಅವರ ಚಿಂತನೆ ವಾಸ್ತವವಾದಿ ನೆಲೆಯಿಂದ ದೇವರ ನಂಬಿಕೆಯ ನೆಲೆಗಳನ್ನೆ ವಿಶಿಷ್ಟವಾಗಿ ಪ್ರಶ್ನಿಸಿದ್ದು ಸಹ ಆಗಿತ್ತು. ಶ್ರೇಷ್ಠವೆನಿಸುವ ಅವರ ಹಲವು ಚಿಂತನೆಗಳು ಈ ನೆಲೆಯಲ್ಲಿ ದಾಖಲಾದವು. ಆದರೆ ಕೆಲವು ವಿಮರ್ಶೆಗಳು ಅವರ ಭೂಮಿಗೀತಗಳನ್ನು ಕೆಲವು ಕವಿಗಳ ಕಾವ್ಯದ ವಾಗ್ವಾದದ ನೆಲೆಗೆ ಮಿತಿಗೊಳಿಸಿ ಚಿಂತಿಸಿದ್ದು ಸಹ ಮತ್ತೆ ಮಿತಿಯೇ ಆಗಿತ್ತು.

ಕೆ.ಎಸ್.ನ. ಎಂದಕೂಡಲೇ ಮಲ್ಲಿಗೆ ಮಾಧುರ್ಯ ಸುಕುಮಾರತೆ ಎಂದೆಲ್ಲ ಆಲೋಚಿಸಿದ ವಿಮರ್ಶೆ ಅವರ ವಿಭಿನ್ನ ನೆಲೆ ಗಳನ್ನು ಗಂಭೀರವಾಗಿ ಪರಿಗಣಿಸದಿದ್ದದ್ದೇ ಒಂದು ದುರಂತ. ಮಾನವನ ಪರಿಪೂರ್ಣತೆ ಕುರಿತು ಗಂಭೀರ ಹುಡುಕಾಟಕ್ಕೆ ಪ್ರಯತ್ನಿಸಿದ ಕೆ.ಎಸ್.ನ. ಕಾವ್ಯ ದೇವರು ಮತ್ತು ಭೂಮಿಯನ್ನು ಕೇಂದ್ರ ಪ್ರಜ್ಞೆಯಲ್ಲಿಟ್ಟು ನೋಡುವುದು. ವಾಸ್ತವದ ಭೂಮಿಯನ್ನು ಮತ್ತು ವಸುಂಧರೆಯ ಮಗನಾದ ಮಾನವನ ಅನನ್ಯತೆಯ ಅರ್ಥವನ್ನು ಎಚ್ಚರಿಸುವುದು, ದೇವರು ಆದರ್ಶವಾಗಬೇಕಾದ ಮತ್ತು ಅದಕ್ಕಿಂತಲೂ ಮುಖ್ಯವಾಗಿ 'ಕಾಡುವ ತಂದೆಯಾಗಬೇಕಾದ' ಅವಶ್ಯಕತೆಯನ್ನು ಕುರಿತು ಹೇಳುವುದು ಆಧುನಿಕ ಕನ್ನಡ ಕಾವ್ಯ ಸಂದರ್ಭದಲ್ಲಿಯೇ ಮಹತ್ವದ ಚಿಂತನೆಯಾಗಿದೆ.

ಬದುಕನ್ನು ಅನುಭವಿಸುತ್ತಲೇ ಕಾವ್ಯ ಮಾಡಿದ ಬದುಕಿನ ಪ್ರೀತಿಯ ಕೆ.ಎಸ್.ನ. ಅವರ ಅಂತಹ ಮಾನವ ಕಾಳಜಿಯ

—— ಡಾ|| ಜಿ. ಪ್ರಶಾಂತ ನಾಯಕ ——

ಬದುಕನ್ನು ಅನುಭವಿಸುತ್ತಲೇ ಕಾವ್ಯ ಮಾಡಿದ ಬದುಕಿನ ಪ್ರೀತಿಯ ಕೆ.ಎಸ್.ನ. ಅವರ ಅಂತಹ ಮಾನವ ಕಾಳಜಿಯ ಬದ್ಧನೆಲೆಗಳಿಂದಲೂ ಮಹತ್ವದ ಮಾನವೀಯ ಕವಿಯಾಗುತ್ತಾರೆ. ಆ ಕಾರಣಕ್ಕೆ ತಮ್ಮ ವ್ಯಾಪ್ತಿಯ ಆಚೆಗಿನವು ಎನಿಸಬಹುದಾದ ಯಾವುದೇ ದಟ್ಟ ಕಾಡುವಿಕೆಗಳು ಅವರ ಕಾವ್ಯದ ವ್ಯಾಪ್ತಿಯ ಮುಖ್ಯ ಲಕ್ಷಣವೂ ಆದದ್ದಿದೆ. ಬದುಕು ಮತ್ತು ಕಾವ್ಯ ಎರಡನ್ನು ಹೀಗೆ ಸಮತೂಕದಲ್ಲಿ ನೋಡಬಹುದಾದ ಸಾಧ್ಯತೆ ಕೆ.ಎಸ್.ನ. ಅವರಿಗೆ ಇದ್ದುದ್ದರಿಂದಲೇ ಜೀವಿತದ ಕೊನೆಯ ಕಾಲದವರೆವಿಗೂ ಕಾವ್ಯಪ್ರೀತಿಯನ್ನು ಕೃಷಿಯನ್ನು ಉಳಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು.



# ಕಾಡುವ ಕವಿ
# ಕೆ. ಎಸ್. ನರಸಿಂಹಸ್ವಾಮಿ

ಬದ್ಧನೆಲೆಗಳಿಂದಲೂ ಮಹತ್ವದ ಮಾನವೀಯ ಕವಿಯಾಗುತ್ತಾರೆ. ಆ ಕಾರಣಕ್ಕೆ ತಮ್ಮ ವ್ಯಾಪ್ತಿಯ ಆಚೆಗಿನವು ಎನಿಸಬಹುದಾದ ಯಾವುದೇ ದಟ್ಟ ಕಾಡುವಿಕೆಗಳು ಅವರ ಕಾವ್ಯದ ವ್ಯಾಪ್ತಿಯ ಮುಖ್ಯ ಲಕ್ಷಣವೂ ಆದದ್ದಿದೆ. ಬದುಕು ಮತ್ತು ಕಾವ್ಯ ಎರಡನ್ನು ಹೀಗೆ ಸಮ ತೂಕದಲ್ಲಿ ನೋಡಬಹುದಾದ ಸಾಧ್ಯತೆ ಕೆ.ಎಸ್.ನ. ಅವರಿಗೆ ಇದ್ದುದ್ದರಿಂದಲೇ ಜೀವಿತದ ಕೊನೆಯ ಕಾಲದ ವರೆವಿಗೂ ಕಾವ್ಯಪ್ರೀತಿಯನ್ನು ಕೃಷಿಯನ್ನು ಉಳಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು.

ನರಸಿಂಹಸ್ವಾಮಿಯವರಿಗಿದ್ದ ಕಾವ್ಯಶ್ರದ್ಧೆಯ ನೆಲೆಗಳೂ ವಿಶಿಷ್ಟವಾದವು. ಅವು ಅವರ ಕಾವ್ಯ ಪ್ರಾರಂಭದ ಪೂರ್ವಸಿದ್ಧತೆಯ ಕಾಲದಿಂದಲೂ ಖಚಿತವಾದವುಗಳೇ. ಆದ್ದರಿಂದಲೇ ಮಧ್ಯೆ ಒಂದಷ್ಟು ಕಾಲ ಸಂಕೀರ್ಣತೆಯ ಕೆಲವು ಪ್ರಯೋಗಕ್ಕೆ ತೊಡಗಿಸಿಕೊಂಡ ಕವಿ ಅಲ್ಲಿ ಯಶಸ್ವಿಯಾದರೂ ಮತ್ತೆ ತಮ್ಮ ಕಾವ್ಯದ ಮೂಲನೆಲೆಗೇ ಹಿಂದಿರುಗಲು ಬಯಸುತ್ತಾರೆ. ಬದುಕಿನ ಹುಡುಕಾಟದ ಮಾಧುರ್ಯದ ಪ್ರೀತಿಯ ಮಾಧ್ಯಮವೇ ಮತ್ತೆ ವಸ್ತುಗಳಾಗುತ್ತವೆ. ಅವರಿಗೆ ಬದುಕಿನ ಬಗೆಗಿದ್ದ ಭರವಸೆಗಳೇ ಓದುಗನಿಗೆ ನಿರಂತರ ಅಚ್ಚರಿಯೂ ಆಗಬಹುದಾದದ್ದು.

ಈಚಿನ ಸಂಕಲನ 'ನವಿಲು ದನಿಯಲ್ಲಿ' ಅವರೇ ಹೇಳುವಂತೆ –

*ಎಲ್ಲರೊಡನೊಂದಾಗಿ ಬದುಕಬಯಸಿದ್ದೇನೆ,*
*ಚೆಲುವನ್ನು ಮುಟ್ಟದೆಯೆ ಆರಾಧಿಸಿದ್ದೇನೆ,*
*ನುಡಿದಂತೆ ನಡೆಯಲೆಳ್ಳಿಸಲು ಶ್ರಮಿಸಿದ್ದೇನೆ,*
*ಎಲ್ಲರಿಗೂ ಕೈಕುಲುಕಿ ಶುಭವ ಕೋರಿದ್ದೇನೆ.*

ಇವಿಷ್ಟೇ ಬದುಕಿನ ಕಾಳಜಿಯ ಸಹಜಮಾರ್ಗ. ಕಾವ್ಯದಂತೆಯೇ ಬದುಕಬಹುದಾದ ಸಾಧ್ಯತೆಯನ್ನು ಅವರು ತಮ್ಮ ನೆಲೆಯಿಂದಲೇ ಮಾದರಿಯಾಗಿಸಿದ್ದರು. ಅವರ ಕಾವ್ಯವನ್ನು ಓದುತ್ತಲೇ ಸಹೃದಯ ಆಪ್ತ ಕಾಡುವಿಕೆಯಾಗಿಸಿಕೊಳ್ಳಬಹುದಾದದ್ದು ಸಹ ಈ ಬಗೆಯ ಕಾರಣಗಳಿಂದಲೇ ಎನ್ನಬಹುದು.

ಈಚಿನ ಸಂಕಲನಗಳಲ್ಲಿ ಕೆ.ಎಸ್.ನ. ಕಾವ್ಯದ ಬದುಕಿನ ನಿರೀಕ್ಷಣೆ ಬಹಳ ಗಂಭೀರ ವಾಯಿತೆನ್ನುವುದು ಗಮನಾರ್ಹ. 'ಕೈ ಮರದ ನೆಳಲಲ್ಲಿ' ಸಂಕಲನ ಅವರ ಅಂತಹ ಪ್ರಯತ್ನದ ಉತ್ತಮ ಉದಾಹರಣೆ. ಕಾವ್ಯದ ಸಂದರ್ಭಕ್ಕೆ ಅದು ಹೊಸ ಪ್ರಯೋಗವೂ ಹೌದು. ಮುಂಚಿನಿಂದಲೂ ಕಾವ್ಯದ ಅನುಭವ ವೈಯಕ್ತಿಕ ನೆಲೆಯಿಂದ ಸಾರ್ವತ್ರಿಕಗೊಳ್ಳುವ ಸಾರ್ಥಕತೆಗೆ ಚಾಚಬೇಕು ಎನ್ನುವ ನಂಬಿಕೆಯನ್ನೇ ಪೋಷಿಸುವ ಕೆ.ಎಸ್.ನ. ಅದನ್ನು ಈ ಸಂಕಲನದಲ್ಲಿ ಉತ್ಕರ್ಷಕ್ಕೆ ಒಯ್ದಿದ್ದಾರೆ. ಎಲ್ಲರ ನೋವು ತನ್ನದಾಗುವ ಅಪರೂಪದ, ಆದರೆ ಸತ್ಯದ ದರ್ಶನ ಇಲ್ಲಿ ಸಾಧ್ಯವಾಗಿದೆ. ಆಧುನಿಕ ಜಗತ್ತಿನ ಬದುಕಿನೊತ್ತಡಗಳಲ್ಲಿ ಯಾಂತ್ರಿಕವಾಗುವ ಅಪಾಯದಲ್ಲಿರುವ ಮನುಷ್ಯನ ಬದುಕಿಗೊಂದು ಆಸರೆಯ ಮುನ್ನುಡಿಯಂತೆ, ಹುಡುಕಾಟದಂತೆ ಕೆ.ಎಸ್.ನ. ಅವರ ಕಾವ್ಯ ನಮಗೆ ಕಾಣಿಸುತ್ತದೆ. ಈ ಬಗೆಯ ಅರಿವನ್ನು ಕೆ.ಎಸ್.ನ. ತಮ್ಮ ಕಾವ್ಯದಲ್ಲಿ ಸಾಧಿಸಿದ ಸಾರ್ವಕಾಲಿಕತೆಯ ಅಂಶವೆಂದರೆ ಮಾನವ ಸಂಬಂಧಗಳನ್ನು ಜತನದಿಂದ ಕಾಪಾಡುವುದು ಮತ್ತು ಮನುಷ್ಯನ ಮಾನಸಿಕ ಎತ್ತರವೇ ಬದುಕಿನ ಎತ್ತರವಾಗುವ ಅದರೊಂದಿಗೆ ಸಾರ್ಥಕತೆಗೆ ಅರ್ಥಕಟ್ಟಿಕೊಳ್ಳುವ ಪ್ರಯತ್ನಗಳಿಗೆ ಮುಖಾಮುಖಿಯಾಗುವುದು. ಅದು ಪ್ರೇಮದ ಭಾವುಕ ಭಾವಗಳಿಂದ ಸಾವಿನ ಮುಕ್ತಾಯದವರೆಗೂ ವ್ಯಾಪಿಸಿದ್ದಾಗಿದೆ. ಕೆ.ಎಸ್.ನ. ಅವರ ಕಾವ್ಯ ನಿರಂತರವಾಗುವುದು ಇಂಥ ಕಾರಣಗಳಿಗಾಗಿ.

*ತುಂಬಿದಿರುಳಿನ ನಡುವೆ ನಾನು ಕಿರುದೋಣಿಯಲಿ*
*ಈಗಲೇ ಹೊರಟಿರುವೆ ಆಚೆ ದಡಕೆ;*
*ಬದುಕಿ ಬಾಳುವ ಮಂದಿಗರ್ಥವಾಯಿತು ಕವಿತೆ;*
*ಅನುಭವಗಳಾಚೆಗಿದೆ ನನ್ನ ಬದುಕೆ*

ತಮ್ಮ ಕೊನೆಯ ಸಂಕಲನ 'ದೀಪಸಾಲಿನ ನಡುವೆ' ಸಂಕಲನದಲ್ಲಿರುವ ಕೆ.ಎಸ್.ನ. ಅವರ ಮಾತುಗಳು ಎಷ್ಟು ಕಾಕತಾಳೀಯ !

ಕಾಡುವ ನೆನಪುಗಳ ನಡುವೆ ಗಮನಿಸಬಹುದಾದ ಮಾತು, ಡಿ. ಆರ್. ನಾಗರಾಜ್ ಅವರು ಹೇಳುವ ''ಆಧುನಿಕ ಕನ್ನಡ ಕಾವ್ಯದಲ್ಲಿ ಮಾನವತಾ ಉದಾರವಾದದ ಅತ್ಯುತ್ತಮ ಪ್ರತಿನಿಧಿ ಎಂದರೆ ಕೆ. ಎಸ್. ನರಸಿಂಹಸ್ವಾಮಿ.''

**ಡಾ|| ಜಿ. ಪ್ರಶಾಂತ ನಾಯಕ**
ಹಿರಿಯ ಶ್ರೇಣಿ ಉಪನ್ಯಾಸಕರು, ಕನ್ನಡ ಭಾರತಿ
ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ - ೫೭೭ ೪೫೧



## ಹಳೆಪಿಚ್ಚರು – ಹೊಸಾ ಆಲ್ಬಮ್ಮು

ಮೆಹಮೂದನ ಮಗ ಲಕಿ ಆಲಿ
ಚಪ್ಪಲೀ ಅಂಗಡಿ ಇಟ್ಟಿದ್ದನಂತೆ
ಇದ್ದಕಿದ್ದಂತೆ ಅಲ್ಲೇ ಜ್ಞಾನೋದಯವಾದಂತೆ
ಒಂದಿನ ಹಾಡಿದ, ಎಂಥಾ ರಾಗ, ಎಂಥಾ ರಾಗ
ಆಮೇಲೆ ಪಿರಮಿಡ್ಡಿನ ಮುಂದೆ, ಪೀಸಾಗೋಪುರದ ಪಕ್ಕ
ಗಿಟಾರ್ ಮಿಡಿತಾ ಕಲ್ಲೂ ಕರಗೋ ಹಾಗೆ ಆಲಾಪಿಸ್ತಾ , ಆಲಾಪಿಸ್ತಾ
ತಿಳಿಜೇನ ಕಣ್ಣಿನ ಇವನೀಗ 'ಐಕಾನ್'

ಇವನಪ್ಪ ಮೆಹಮೂದ
ಬೀದಿ ಬೀದಿ ಅಲೆದು, ಸ್ಟುಡಿಯೋ ಕಸ ಹೊಡೆದು
ಆಮೇಲೆ ನೂರು ನೂರು ಸಿನಿಮಾ
ತಾನೇ ತೆಗೆದು, ತಾನೇ ಆಡಿಸಿ, ತಾನೇ ಆಡಿ...
ಕೋಡಂಗಿ ಹೆಂಡ ಕುಡಿದು
ಲುಂಗೀ ಉಟ್ಟು , ಜುಟ್ಟು ಬಿಟ್ಟು , ನಾಮ ಇಟ್ಟು , ಸೀರೆ ಉಟ್ಟು
ಆಡದ ಅವತಾರವಿಲ್ಲ

ಬರುಬರುತ್ತ ಯಾರಿಗೂ ನಗು ಬರದೆ
ಇವನ ಮುಖ ಕಂಡರೆ ಅಳು ಬರುವ ಹಾಗಾಗಿ
ಮ್ಯಾನರಿಸಮ್ಮೆಲ್ಲ, ಮೈಮೇಲೆ ದೆವ್ವ ಬಂದೋರ ಥರವಾಗಿ
ಕೊನೆಗೆ ನಮ್ಮ ಬೆಂಗಳೂರಿನ ಪಕ್ಕದ ಬಳ್ಳಾಪುರದಲ್ಲಿ ಮಣ್ಣಾದ
ಅವನೇ ಕಟ್ಟಿಸಿದ್ದ ಮಸೀದಿ
ರಿಪೇರಿ ಮಾಡಿಸಿದ್ದ ರುದ್ರಭೂಮಿ

ನಮ್ಮ ಹುಡುಗ ಹುಡುಗಿಯರೆಲ್ಲ
ಮೆಹಮೂದನ ಹಳೇ ಪಿಚ್ಚರ್ರು
ಲಕಿ ಆಲಿಯ ಹೊಸಾ ಆಲ್ಬಮ್ಮೆಂದರೆ ಜೀವ ಬಿಡ್ತಾರೆ
ಮುಲಾಜಿಲ್ಲದೆ
ಎಂಜಾಯ್ ಮಾಡ್ತಾರೆ

**ಲಲಿತಾ ಸಿದ್ಧಬಸವಯ್ಯ**
ಚಿನ್ಮಯ ಪ್ರಕಾಶನ
ನಂ. ೫೨೧೭, ೨ನೇ ಕ್ರಾಸ್,
ಅಶೋಕನಗರ, ತುಮಕೂರು - ೫೭೨ ೧೦೩

# ಝಕಾತ್ ಭಿಕ್ಷಾಟನೆಯಾಗುತ್ತಿದೆಯೆ ?

ಪಿ. ಎ. ಖಾದರ್ ಕುಕ್ಕಾಡಿ

**'ಝಕಾತ್'** ಎಂದರೆ ಪ್ರತಿಯೊಬ್ಬ ಸ್ಥಿತಿವಂತನು ಬಡವರಿಗೋಸ್ಕರ ಕಡ್ಡಾಯವಾಗಿ ಕೊಡಬೇಕಾದ ದಾನ. ಒಂದು ನಿರ್ದಿಷ್ಟ ಮಟ್ಟಕ್ಕಿಂತ ಹೆಚ್ಚು ಸಂಪತ್ತನ್ನು ಗಳಿಸಿದವನು ಅದರ ಒಂದು ನಿಗದಿತ ಅಂಶವನ್ನು ಝಕಾತಾಗಿ ನೀಡತಕ್ಕದ್ದು. ಇದರ ಪ್ರಮಾಣ ಸಾಮಾನ್ಯವಾಗಿ ಸಂಪತ್ತಿನ ಶೇ. ೨.೫ ಆಗಿರುತ್ತದೆ. ಆದರೆ ಆದಾಯವನ್ನು ಗಳಿಸಲು ಪಡಬೇಕಾದ ಪರಿಶ್ರಮದ ಮೇಲೆ ಹೊಂದಿಕೊಂಡು ಈ ಪ್ರಮಾಣ ಶೇ. ೨೦ರವರೆಗೆ ಏರಬಹುದು. ಶ್ರಮ ಕಡಿಮೆಯಾದಷ್ಟು ದರ ಹೆಚ್ಚುತ್ತದೆ. ಉದಾಹರಣೆಗೆ, ಕಮಿಷನ್ ವ್ಯವಹಾರದ ಲಾಭಕ್ಕೆ ಝಕಾತ್ ದರ ಶೇ. ೨೦ ಆಗಬಹುದು. ಈ ದಾನವನ್ನು ಉದ್ದಿಮೆಯ ಲೆಕ್ಕಾಚಾರ ಮಾಡಿದ ಮೇಲೆ ಯಾವಾಗ ಬೇಕಾದರೂ ವಿತರಿಸಬಹುದು. ಆದರೆ ಪವಿತ್ರ ರಮಝಾನ್ ಮಾಸದಲ್ಲೇ ಝಕಾತ್‌ನ್ನು ಕೊಡುವುದು ವಾಡಿಕೆ.

ಝಕಾತ್ ಎಂಬ ಪದಕ್ಕೆ 'ಶುಚೀಕರಣ' ಹಾಗೂ 'ಅಭಿವೃದ್ಧಿ' ಎಂಬ ಎರಡು ಅರ್ಥಗಳಿವೆಯಂತೆ. ತಾತ್ಪರ್ಯವೇನೆಂದರೆ ಝಕಾತ್ ನೀಡುವ ಮೂಲಕ ತನ್ನ ಸಂಪತ್ತನ್ನು ಪರಿಶುದ್ಧಗೊಳಿಸಿ, ಸಮೃದ್ಧಿಗೊಳಿಸಬಹುದು ಎಂದಾಗಿದೆ. ಇಸ್ಲಾಂ ಸಿದ್ಧಾಂತದಂತೆ ಧನವೆಂಬುದು ಸೃಷ್ಟಿಕರ್ತನು ಕೊಟ್ಟ 'ಅಮಾನತ್' ಅಥವಾ ವಿಶ್ವಸ್ಥ ನಿಧಿಯಾಗಿದೆ. ಆದುದರಿಂದ ಅದನ್ನು ಧಾರ್ಮಿಕ ನೀತಿ ನಿಯಮಗಳ ಪ್ರಕಾರ ವಿನಿಯೋಗಿಸತಕ್ಕದ್ದು.

ಆದರೆ ಝಕಾತ್ ಎಂಬ ಈ ಉದಾತ್ತ ಯೋಜನೆಯು ಸದ್ಯ ಭಿಕ್ಷಾಟನೆಯಾಗಿ ರೂಪಾಂತರಗೊಳ್ಳುತ್ತಿರುವುದು ದುರದೃಷ್ಟ. ಉಪವಾಸ ಮಾಸ ರಮಝಾನ್ ಬಂತೆಂದರೆ ಬಡ ಮುಸ್ಲಿಂ ಮಂದಿ ಶ್ರೀಮಂತರೆಂದೆನಿಸಿಕೊಂಡವರ ಮನೆ ಬಾಗಿಲಿಗೆ ಅಲೆಯತೊಡಗುತ್ತಾರೆ. ಇಂತಹ ದೃಶ್ಯವು ಹೃದ್ರಾವಕ ಹಾಗೂ ಅವಮಾನಕಾರಿ. ಗಂಡಸರು-ಹೆಂಗಸರು ಮಾತ್ರವಲ್ಲ, ಮಕ್ಕಳು-ಮುದುಕರು ಸಹ ಕೈ ಸೇರುವ ಚಿಕ್ಕಾಸಿಗಾಗಿ ಅಥವಾ ಒಂದಿಷ್ಟು ಅಕ್ಕಿಗಾಗಿ ಕಾಲೆಳೆಯುತ್ತಾ ತಿರುಗಾಡುತ್ತಾರೆ. ಕೆಲವರು ಸಂಗ್ರಹಿಸಿದ ಅಕ್ಕಿಯನ್ನು ಚೀಲದಲ್ಲಿ ಹೊತ್ತುಕೊಂಡು ಬಸವಳಿಯುತ್ತಾರೆ. ಮಳೆಬಿಸಿಲೆನ್ನದೆ ಮೈಲುಗಟ್ಟಲೆ ನಡೆಯುತ್ತಾರೆ.

ಇತ್ತೀಚೆಗೆ ಇನ್ನೊಂದು ಆತಂಕಕಾರಿ ಬೆಳವಣಿಗೆ ತಲೆದೋರಿದೆ. ದೂರದ ಹುಬ್ಬಳ್ಳಿ, ಶಿವಮೊಗ್ಗ, ಚಿಕ್ಕಮಗಳೂರು ಮುಂತಾದ ಜಿಲ್ಲೆಗಳಿಂದ ಮಂಗಳೂರಿನಂತಹ 'ಶ್ರೀಮಂತ' ನಗರಗಳಿಗೆ ಝಕಾತಾರ್ಥಿಗಳು ಹಿಂಡು ಹಿಂಡಾಗಿ ನುಗ್ಗುತ್ತಿದ್ದಾರೆ. ಈ ಬಡಪಾಯಿಗಳನ್ನು ಒಗ್ಗೂಡಿಸಿ ಊರಿಂದೂರಿಗೆ ಕರೆದೊಯ್ಯುವ ದಲ್ಲಾಳಿಗಳು ಸಾಕಷ್ಟು ಕಮಿಷನ್ ಪಡೆಯುತ್ತಾರಂತೆ !

ಇನ್ನೊಂದು ವಿಪರ್ಯಾಸವೆಂದರೆ, ಸ್ವಾಭಿಮಾನವುಳ್ಳ ಮಂದಿ ಕಡು ಬಡವರಾಗಿದ್ದರೂ ಝಕಾತ್ ಬೇಡಲು ಮುಂದಾಗುವುದಿಲ್ಲ. ಇಂತಹ ಸಾವಿರಾರು ಕುಟುಂಬಗಳು ತಮ್ಮ ಕಷ್ಟ ಕಾರ್ಪಣ್ಯಗಳನ್ನು ತೆರಮರೆಯಲ್ಲೇ ಸಹಿಸುತ್ತ ನರಳುತ್ತವೆ. ಇನ್ನು ಕೆಲವರಿಗೆ ಝಕಾತ್ ಸಂಗ್ರಹ ಒಂದು ಕುಲವೃತ್ತಿಯಾಗಿಬಿಟ್ಟಿದೆ. ಇವರಲ್ಲಿ ಧಾರ್ಮಿಕ ವೇಷವನ್ನು ಧರಿಸಿದವರೂ ಇದ್ದಾರೆ.

ಝಕಾತ್‌ನ್ನು ಯಾವ ರೀತಿ ಹಂಚತಕ್ಕದ್ದೆಂಬ ಬಗ್ಗೆಯೂ ಕೆಲವು ನಿಯಮಗಳನ್ನು ಇಸ್ಲಾಂ ಸೂಚಿಸುತ್ತದೆ: ಝಕಾತ್ ನೀಡಬಯಸುವವನು ತನ್ನ ನೆರೆಹೊರೆಯಲ್ಲಿ ಹಾಗೂ ಬಂಧು ಬಾಂಧವರಲ್ಲಿರುವ ಬಡ ಕುಟುಂಬಗಳನ್ನು ಗುರುತಿಸಿ, ಖುದ್ದು ಅವರ ಮನೆಗೆ ಭೇಟಿಕೊಟ್ಟು, ಶುಭಾಶಯಗಳೊಂದಿಗೆ ವಿನಮ್ರವಾಗಿ ದಾನವನ್ನು ಅರ್ಪಿಸಬೇಕು. ಆದರೆ ಈ ಉದಾತ್ತ ಆದರ್ಶವು ಕಾರ್ಯತಃ ಅಪರೂಪವಾಗಿ ಹೋಗಿದೆ. ಹೆಚ್ಚುತ್ತಿರುವ ಜನಸಂಖ್ಯೆಯೇ ಇದಕ್ಕೆ ಪ್ರಮುಖ ಅಡ್ಡಿಯಾಗಿದೆ. ಇನ್ನೊಂದು ಕಾರಣ, ಹಲವು ಶ್ರೀಮಂತರಿಗೆ ಬಡವರು ಮನೆ ಬಾಗಿಲಿಗೆ ಬರುವುದೇ ಒಂದು ಆತ್ಮ ಪ್ರತಿಷ್ಠೆಯ ಸಂಕೇತವಾಗಿರುವುದು.



ಝಕಾತ್ ಪ್ರಕ್ರಿಯೆಯು ಈ ರೀತಿ ಭಿಕ್ಷಾಟನೆಯಾಗಿ ಪರಿವರ್ತನೆಗೊಂಡಿರುವುದಕ್ಕೆ ಎರಡು ಆಯಾಮಗಳಿವೆ. ಒಂದೆಡೆ ಅದು ಮಾನವೀಯ ಅಭಿಮಾನಕ್ಕೆ, ಬಡವರ ಆತ್ಮಗೌರವಕ್ಕೆ ಮಾರಕವಾಗಿದೆ. ಇನ್ನೊಂದೆಡೆಗೆ ದುರುಪಯೋಗಕ್ಕೆ ದುಷ್ಪರಿಣಾಮಕ್ಕೆ ಅದು ಎಡೆ ಮಾಡಿಕೊಡುತ್ತಿದೆ. ವೃತ್ತಿಪರ ಭಿಕ್ಷಾಟನೆ, ದಲ್ಲಾಳಿಗಳಿಂದ ಅಮಾಯಕರ ಶೋಷಣೆ, ನಿಶ್ಶಕ್ತರಿಗೆ ದೈಹಿಕ ಯಾತನೆ, ಯುವ ಪೀಳಿಗೆಯಲ್ಲಿ ಪರಾವಲಂಬನೆಯ ಪ್ರವೃತ್ತಿ ಇತ್ಯಾದಿ ಇದಕ್ಕೆ ದೃಷ್ಟಾಂತಗಳು.

ಈ ಜ್ವಲಂತ ಸಮಸ್ಯೆಯನ್ನು ಅನೇಕ ಮುಸ್ಲಿಂ ಮುಖಂಡರು ಈಗಾಗಲೇ ಮನಗಂಡಿದ್ದಾರೆ. ಆದರೆ ಅದಕ್ಕೆ ಪರಿಪೂರ್ಣ ಪರಿಹಾರ ಕಂಡುಕೊಂಡಂತಿಲ್ಲ. ಹಲವೆಡೆ ಝಕಾತ್ ಹಂಚಿಕೆಯನ್ನು ಮಸೀದಿಗಳ ಅಥವಾ ಸಮಿತಿಗಳ ಮೂಲಕ ಸ್ವಲ್ಪಮಟ್ಟಿಗೆ ಸಂಘಟಿಸಲಾಗಿದೆ: ಜಮಾತಿನ ಮುಖಂಡರು ಸಿರಿವಂತರಿಂದ ವಸ್ತು ರೂಪದಲ್ಲೋ, ಹಣದ ರೂಪದಲ್ಲೋ ಝಕಾತ್‌ನ್ನು ಸಂಗ್ರಹಿಸುತ್ತಾರೆ. ಜಮಾತಿನಲ್ಲಿ ನೆಲೆಸಿರುವ ಬಡ ಕುಟುಂಬಗಳನ್ನು ಗುರುತಿಸಿ ಅರ್ಹತೆಗನುಗುಣವಾಗಿ ಅದನ್ನು ಮನೆ ಮನೆಗೆ ಕಳುಹಿಸುವ ಏರ್ಪಾಡು ಮಾಡುತ್ತಾರೆ. ಕೆಲವು ಸಂಘಟನಾತ್ಮಕ ತೊಂದರೆಗಳಿದ್ದರೂ, ಇದೊಂದು ಉತ್ತಮ ವ್ಯವಸ್ಥೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇದಕ್ಕೊಂದು ದೊಡ್ಡ 'ಮನೋವೈಜ್ಞಾನಿಕ' ಅಡಚಣೆಯೂ ಇದೆ. ಪ್ರತಿಯೊಬ್ಬ ದಾನಿಯೂ ತನ್ನ ಕೊಡುಗೆಯ ಪ್ರಮಾಣವನ್ನು ಸಮಾಜವು ಗುರುತಿಸಬೇಕೆಂದು ಸ್ವಾಭಾವಿಕವಾಗಿ ಹಂಬಲಿಸುತ್ತಾನೆ. ತನ್ನ ಕೊಡುಗೆಯನ್ನು ಅನಾಮಿಕವಾಗಿ ಮಸೀದಿ ಸಂಗ್ರಹಿಸುವ ರಾಶಿಗೆ ಸೇರಿಸಿಬಿಟ್ಟರೆ ತಾನು ಎಷ್ಟು ಕೊಟ್ಟಿದ್ದೇನೆಂಬುದು ಯಾರಿಗೂ ತಿಳಿಯುವುದಿಲ್ಲವಲ್ಲ! ಆದುದರಿಂದ ಝಕಾತ್ ಭಂಡಾರಕ್ಕೆ ದೇಣಿಗೆ ನೀಡಿದವರ ಹೆಸರು, ವಿಳಾಸಗಳನ್ನು ಅವರ ಕೊಡುಗೆಯ ಮೊಬಲಗುಗಳೊಂದಿಗೆ ವ್ಯಾಪಕವಾಗಿ ಪ್ರಕಟಿಸಬೇಕು. ರಶೀದಿ ನೀಡಬೇಕು. ಇದರಿಂದ ದಾನಿಗಳಿಗೆ ಹೆಚ್ಚಿನ ಉತ್ತೇಜನ ದೊರೆಯುತ್ತದೆ. ಮಾತ್ರವಲ್ಲದೆ ಸಾಮೂಹಿಕ ಸಂಗ್ರಹ ವ್ಯವಸ್ಥೆಯ ಮೇಲಿನ ವಿಶ್ವಾಸಾರ್ಹತೆಯೂ ಹೆಚ್ಚುತ್ತದೆ. ಸಾಮೂಹಿಕ ಸಂಗ್ರಹದ ಮೂಲಕ ಝಕಾತ್ ವಿತರಿಸುವ ಅಭಿಯಾನವು ಸದ್ಯ ಕ್ಷೀಣವಾಗಿದೆ. ಇದನ್ನು ಇನ್ನಷ್ಟು ವ್ಯವಸ್ಥಿತಗೊಳಿಸಬೇಕು; ವ್ಯಾಪಕಗೊಳಿಸಬೇಕು; ಪರಿಪೂರ್ಣಗೊಳಿಸಬೇಕು. ಮನೆ ಬಾಗಿಲಿನ ಭಿಕ್ಷಾಟನೆಯು ಸಂಪೂರ್ಣ ನಿಲ್ಲುವಷ್ಟರಮಟ್ಟಿಗೆ ಈ ವ್ಯವಸ್ಥೆ ಬೆಳೆದುನಿಲ್ಲಬೇಕು.

ಝಕಾತ್ ಸಮಿತಿಗಳು ಅಥವಾ ಮಸೀದಿ ಕೇಂದ್ರಗಳು ಸಂಗ್ರಹಿಸುವ ಮೊತ್ತ ತೀರ ಕಡಿಮೆಯಾಗಿದ್ದು ಅದು ಬಡತನ ಪರಿಹಾರಕ್ಕೇನೇ ಖರ್ಚಾಗಿಬಿಡುತ್ತದೆ. ಆದರೆ ಕರಾರುವಾಕ್ಕಾಗಿ ಸಂಗ್ರಹಿಸಿದರೆ

ಇದರ ಪ್ರಮಾಣ ಹತ್ತು ಪಾಲು ಹೆಚ್ಚುವುದು ಖಂಡಿತ. ಆಗ, ನೇರ ಪರಿಹಾರ ನೀಡುವುದರೊಂದಿಗೆ ಇತರ ಕೆಲವು ಅವಶ್ಯಕ ಯೋಜನೆಗಳನ್ನು ಕೈಗೊಳ್ಳಬಹುದು: ಉದಾಹರಣೆಗೆ, ಮುಸ್ಲಿಂ ಸಮುದಾಯದಲ್ಲಿ ಸಾಕಷ್ಟು ಯತೀಮ್‌ಖಾನಗಳಿವೆ. ಆದರೆ ಇವು ತಬ್ಬಲಿ ಗಂಡು ಮಕ್ಕಳಿಗೆ ಮಾತ್ರ ಮೀಸಲಾಗಿವೆ. ಹಾಗಾಗಿ ಹೆಣ್ಣು ಮಕ್ಕಳ ಬಗ್ಗೆ ಅಸಡ್ಡೆ ವಹಿಸಲಾಗಿದೆ ಮಾತ್ರವಲ್ಲದೆ, ವೃದ್ಧರು, ನಿರ್ಗತಿಕ ಹೆಂಗಸರು ಮತ್ತು ಅಂಗವಿಕಲರ ಬಗ್ಗೆ ಯಾರೂ ಮಾತಾಡುತ್ತಿಲ್ಲ. ಇದಕ್ಕೆ ಕೆಲವರು ಕೊಡುವ ಸಮಜಾಯಿಷಿಯೇನೆಂದರೆ, ಇಸ್ಲಾಂ ಧರ್ಮವು ಇಂತಹ ದುರ್ಬಲರನ್ನು ಕಾಪಾಡುವ ಹೊಣೆಯನ್ನು ಸಂಬಂಧಪಟ್ಟ ಕುಟುಂಬದ ಮೇಲೆ ಹೇರಿದೆ ಎಂದು. ಹೌದು, ಮುಸ್ಲಿಮರಲ್ಲಿ ಕುಟುಂಬ ಸಂಬಂಧವು ಗಾಢವಾಗಿದೆಯೆಂಬುದು ನಿಜವೇ. ಆದರೆ, ಈ ಪ್ರೇಮವು ಸರ್ವತ್ರವೂ ಅಲ್ಲ, ಸಾರ್ವಕಾಲಿಕವೂ ಅಲ್ಲ. ಎರಡನೆಯದಾಗಿ, ಕಾಳಜಿಯಿದ್ದರೂ ಹೆಚ್ಚಿನ ಕುಟುಂಬಗಳಿಗೆ ತಮ್ಮ ಕರ್ತವ್ಯವನ್ನು ನಿಭಾಯಿಸುವಷ್ಟು ಆರ್ಥಿಕ ಶಕ್ತಿಯಿರುವುದಿಲ್ಲ. "ಕೌಟುಂಬಿಕ ಜವಾಬ್ದಾರಿ" ಎಂಬ ಆದರ್ಶವಾದವು ವಾಸ್ತವಿಕ ಸಮಸ್ಯೆಗಳನ್ನು ಮರೆಸುವ ಹೊಗೆತೆರೆಯಾಗಬಾರದಷ್ಟೆ?




ಪರಿಣಾಮವಾಗಿ ಲೆಕ್ಕವಿಲ್ಲದಷ್ಟು ವೃದ್ಧರು, ವಿಧವೆಯರು, ವಿಚ್ಛೇದಿತ ಮಹಿಳೆಯರು, ತಬ್ಬಲಿ ಹೆಣ್ಣುಮಕ್ಕಳು ಹಾಗೂ ಅಂಗವಿಕಲರು ದಾರುಣವಾಗಿ ನರಳುತ್ತಿದ್ದಾರೆ. ಅವರ ಮೂಕರೋದನ ನಮಗೆ ಕೇಳಿಸುತ್ತಿಲ್ಲ. ಮೂಲೆ ಸೇರಿರುವ ಅವರ ಅಸ್ತಿತ್ವ ನಮಗೆ ಕಾಣಿಸುತ್ತಿಲ್ಲ. ಈ ವಿಷಯದಲ್ಲಿ ನಾವು ನಮ್ಮ ಕ್ರೈಸ್ತ ಬಾಂಧವರಿಂದ ಕಲಿಯಬೇಕಾದುದು ತುಂಬ ಇದೆ. ಮಂಗಳೂರು ನಗರ ಪ್ರದೇಶದಲ್ಲೇ ಏಳೆಂಟು ಸೇವಾಶ್ರಮಗಳು ಕ್ರೈಸ್ತರ ಸುಪರ್ದಿಯಲ್ಲಿ ನಡೆಯುತ್ತಿವೆ. ಅದರ ಪ್ರಯೋಜನ ಬೇರೆ ಕೋಮಿನವರಿಗೂ ದೊರೆಯುತ್ತಿದೆ. ಝಕಾತಿನ ಹಣವನ್ನು ಇಂತಹ ಸೇವಾಶ್ರಮಗಳನ್ನು ಸ್ಥಾಪಿಸಲು ಉಪಯೋಗಿಸಬಹುದಾಗಿದೆ. ಇದಕ್ಕಾಗಿ ಬೇಕಾದರೆ ಸರಕಾರದ ಸಹಾಯವೂ ದೊರೆಯುತ್ತದೆ.

ಕೊನೆಗೊಂದು ಮಾತು: ಒಟ್ಟಿನಲ್ಲಿ ಇಸ್ಲಾಂ ಮತವು ಒಂದು ಮಹಾಕ್ರಾಂತಿಕಾರಿ ಮಾನವೀಯ ಆಂದೋಲನವಾಗಿತ್ತು. ಏಕದೇವತ್ವ (ತೌಹೀದ್) ವೆಂಬ ಸಿದ್ಧಾಂತವನ್ನು ಎತ್ತಿಹಿಡಿದು ಇಡೀ ಮಾನವ ಕುಲವನ್ನು ಒಂದಾಗಿಸಲು ಹವಣಿಸಿತ್ತು. ಮಾನವರೆಲ್ಲರಿಗೂ ಒಂದೇ ದೇವರು ಎಂದ ಮೇಲೆ ಅವರೊಳಗೆ ಭೇದ ಭಾವನೆಗಳಿಗೆ ಎಡೆಯಿಲ್ಲ ಅಲ್ಲವೆ? ಆದರೆ ಚಾರಿತ್ರಿಕ ಕಾರಣಗಳಿಂದ ಹಾಗೂ ಮಾನವನ ಸ್ವಾರ್ಥದಿಂದ ಈಗ ಮತ ಧರ್ಮಗಳು ಮನುಕುಲವನ್ನು ವಿಂಗಡಿಸುವ ಕೆಲಸವನ್ನು ಮಾಡುತ್ತಿವೆ. ಆದರೂ, ವಿಚಾರಶೀಲರೆಲ್ಲರೂ ವಿಶ್ವಧರ್ಮದ ಮೂಲತತ್ವಕ್ಕೆ ಹಿಂದಿರುಗಲು ಪ್ರಯತ್ನಿಸಬೇಕು. ಈ ಸೈದ್ಧಾಂತಿಕ ನೆಲೆಯಿಂದ ನೋಡಿದರೆ, ಝಕಾತನ್ನು ಅಥವಾ ಅದರ ಪ್ರಯೋಜನವನ್ನು ಜಾತಿ ಮತ ಭೇದವಿಲ್ಲದೆ ಎಲ್ಲಾ ಬಡವರಿಗೆ ಹಂಚತಕ್ಕದ್ದು; ತನ್ಮೂಲಕ ಮಾನವ ಧರ್ಮದ ಹಿರಿಮೆಯನ್ನು ಮೆರೆಸತಕ್ಕದ್ದು.

ಪಿ. ಎ. ಖಾದರ್ ಕುಕ್ಕಾಡಿ
ಕುಕ್ಕಾಡಿ ಹೌಸ್, ಬೈಕಂಪಾಡಿ, ಮಂಗಳೂರು - ೫೭೫ ೦೧೧

# ಚರಮಗೀತೆ



ಹಾಡೆವು ನಾವೀಗ
ಏನನ್ನು
ಗಂಟಲು ಬತ್ತಿದೆ
ಕ್ಷಮಿಸಿ.

ಈ ನೆಲಜಲ ಗಾಳಿಯೊಲುಮೆ
ಬೆಸೆದಿತ್ತು ಮನದ ಮಾತು
ಯಾರೋ ಬಂದರು, ಇದು
'ನಮ್ಮದು ನಮ್ಮದು' ಎಂದರು
ಉಳಿಯಿತು ಹಾಡು ಎದೆಯೊಳಗೆ
ಇಳಿಯಿತು ನೀರು ಕಣ್ಣೊಳಗೆ

ಎದೆಹುಣ್ಣಿಗೆ
ಬೆಳದಿಂಗಳ ಹಾಡಿತ್ತು
ಕನಸು ಬೆಚ್ಚಗೆ ಕೂತು
ನುಡಿಸಿತ್ತು , ನವರಾಗ
ಈ ನಡುವೆ ಯಾಕೋ
ಹಾಡ ಹಾದಿಯೆ ತಪ್ಪಿತು

ಇದ್ದ ನಾಡಿಗೆ
ಹಿಡಿ ಮಣ್ಣು ತೂರಿ
ಶಾಪ ಹೊತ್ತು ನಡೆವ ಜನ
ಬರಿಗಾಲ ಹೊರೆಯಲ್ಲಿ
ಅಸ್ಥಿಪಂಜರಗಳ ಮರೆಯಲ್ಲಿ
ಕಂಡುಕೊಂಡ ಬದುಕು

ನಾಡನಾಡಿಯು ತಪ್ಪಿ
ಹಾಡಿನ ನಂಟು ಕಡಿದು
ಪಸೆ ಆರಿದೆ.

ಕ್ಷಮಿಸಿ,
ನಾವೀಗ ಮೌನಿಗಳು
ಹಾಡಿನ ಗುಂಗ ಮರೆತವರು.

ಆರ್. ತಾರಿಣಿ ಶುಭದಾಯಿನಿ
ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು
ಚಿತ್ರದುರ್ಗ - ೫೭೭ ೫೦೧



## ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು

*ಡಾ|| ಭೂಮಿ ಗೌಡ*

**ಪುಟ : ೪೪೦+xviii** **ಬೆಲೆ : ರೂ. ೩೫೦**

**ಚೇತನ ಬುಕ್ ಹೌಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು-೫೭೦೦೦೨

ಭೂಮಿಗೌಡ ಅವರು ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಈ ನಿಬಂಧ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಸುಮಾರು ನೂರು ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕನ್ನಡ ಕಾದಂಬರಿಗಳಲ್ಲಿ ದಲಿತ ಜಗತ್ತು ಯಾವ ರೀತಿ ಪ್ರತಿಪಾದಿತವಾಗಿದೆ ಎಂಬ ಸಂಗತಿಯನ್ನು ಈ ಕೃತಿ ವಿವರವಾಗಿ ಚರ್ಚಿಸುತ್ತದೆ. ನವೋದಯ, ಪ್ರಗತಿಶೀಲ, ನವ್ಯ ಮತ್ತು ಬಂಡಾಯ ಸಾಹಿತ್ಯದ ಕಾದಂಬರಿಗಳಲ್ಲಿ ಕಂಡುಬರುವ ದಲಿತರ ಜೀವನದ ಚಿತ್ರಣವನ್ನು ಈ ಕೃತಿ ಪರಿಶೀಲಿಸುತ್ತದೆ. ಅದಕ್ಕೆ ಹಿನ್ನೆಲೆಯಾಗಿ ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ ಮುಂತಾದ ವಿಚಾರಗಳ ವಿವರಣೆಯನ್ನು ಕಾಣಬಹುದು. ಪ್ರಬಂಧದ ವ್ಯಾಪ್ತಿ ಹೆಚ್ಚಾಗಿರುವುದರಿಂದ ಕೆಲವು ಕಡೆ ಪುನರಾವೃತ್ತಿ ಆಗಿವೆ; ಮತ್ತೆ ಕೆಲವು ಕಡೆ ಪ್ರಾಥಮಿಕ ಸಂಗತಿಗಳ ಚಿತ್ರ ಇದೆ. ದಲಿತರ ಸಮಸ್ಯೆಗಳ ಮತ್ತು ಬದುಕಿನ ಎಲ್ಲಾ ಸಂಗತಿಗಳನ್ನು ವಿವರಿಸಬೇಕೆಂಬ ತವಕದಲ್ಲಿ ಒಳನೋಟಗಳಿಗಿಂತ ಹೆಚ್ಚಾಗಿ ವಿವರಗಳು ಪ್ರಾಧಾನ್ಯತೆ ಪಡೆದುಕೊಂಡಿವೆ. ಸಮಾಜಶಾಸ್ತ್ರ - ಸಂಸ್ಕೃತಿಯ ಆಳವಾದ ತಿಳುವಳಿಕೆ ಬರಹದ ಹಿನ್ನೆಲೆಯಲ್ಲಿ ಇಲ್ಲ. ಆದರೂ ಆಧುನಿಕ ಸಾಹಿತ್ಯದಲ್ಲಿ ಕಾದಂಬರಿಗಳ ಮೂಲಕ ಅನಾವರಣಗೊಂಡಿರುವ ದಲಿತ ಜಗತ್ತಿನ ಇತಿಹಾಸ ತಿಳಿಯಲು ಈ ಗ್ರಂಥ ಉತ್ತಮ ಆಕರವಾಗಿದೆ.

## ಕಾರಂತರೊಂದಿಗೆ ಕೆಲವು ವರ್ಷಗಳು

*ನಾರಾಯಣ ಮಂಜೇಶ್ವರ*

**ಪುಟ : ೧೧೨** **ಬೆಲೆ : ರೂ. ೪೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.** ಬೆಂಗಳೂರು - ೧

ಈ ಪುಸ್ತಕವನ್ನು ಬರೆದ ನಾರಾಯಣ ಮಂಜೇಶ್ವರ ಅವರು ಶಿವರಾಮ ಕಾರಂತರ 'ಬಾಲವನ'ದಲ್ಲಿ ಹತ್ತು ವರ್ಷಗಳ ಕಾಲ ಕೆಲಸ ಮಾಡಿದ್ದು ಕಾರಂತ ಮತ್ತು ಅವರ ಮನೆಯವರ ಬಗ್ಗೆ ಹತ್ತಿರದಿಂದ ತಿಳಿದವರು. ಕಾರಂತರು ಈ ಪುಸ್ತಕದ ಕೇಂದ್ರ ವ್ಯಕ್ತಿಯಾಗಿದ್ದರೂ ಅವರ ಸಂಪರ್ಕಕ್ಕೆ ಬಂದ ಹಲವಾರು ವ್ಯಕ್ತಿಗಳ ಸಂಕ್ಷಿಪ್ತ ಪರಿಚಯವನ್ನು ಲೇಖಕರು ಸಹಜವಾಗಿ ಚಿತ್ರಿಸಿದ್ದಾರೆ. ಕಾರಂತರ ಬಗ್ಗೆ ಲೇಖಕರಿಗೆ ಒಂದು ರೀತಿಯ ಭಯ ಮಿಶ್ರಿತ ಗೌರವ. ಹೀಗಾಗಿ ಅವರ ಬಗ್ಗೆ ಬರೆಯುವಲ್ಲಿ ಸ್ವಲ್ಪ ಹಿಂಜರಿಕೆ ಕಾಣುತ್ತದೆ. ಆದರೆ ಬೇರೆಯವರ ಬಗ್ಗೆ ಅದರಲ್ಲೂ ಲೀಲಾ ಕಾರಂತರ ಬಗ್ಗೆ ಸಾಕಷ್ಟು ಉಪಯುಕ್ತವಾದ, ಸ್ವಾರಸ್ಯಕರವಾದ ಸಂಗತಿಗಳನ್ನು ಈ ಪುಸ್ತಕ ದಾಖಲಿಸುತ್ತದೆ. ಚಿಕ್ಕ ಚಿಕ್ಕ ಘಟನೆಗಳ ಹಿನ್ನೆಲೆಯಲ್ಲಿ ಕಾರಂತರ ವಿಶಿಷ್ಟ ವ್ಯಕ್ತಿತ್ವ ಇಲ್ಲಿ ಅರಿವಿಗೆ ಬರುತ್ತದೆ. ಈ ಪುಸ್ತಕದ ಬಗ್ಗೆ ಕಾರಂತರ ಮಕ್ಕಳು ವ್ಯಕ್ತಪಡಿಸಿರುವ ಪ್ರತಿಕ್ರಿಯೆಗಳು ಕೃತಿಗೆ ಅಧಿಕೃತತೆಯನ್ನು ತಂದಿದೆ.

## ಭಾರತೀಯ ಬಹುಮುಖೀ ಸಂಸ್ಕೃತಿ

*ಭಗವತ್ ಶರಣ ಉಪಾಧ್ಯಾಯ*

*ಅನು : ಡಾ|| ಎಚ್. ಎಸ್. ಗೋಪಾಲರಾವ್*

**ಪುಟ : ೧೧೨** **ಬೆಲೆ : ರೂ. ೫೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಬೆಂಗಳೂರು - ೧

ಭಗವತ್ ಶರಣ ಉಪಾಧ್ಯಾಯ ಅವರು ಭಾರತದ ಇತಿಹಾಸವನ್ನು ಕುರಿತು ಸಾಕಷ್ಟು ಚಿಂತನೆ ನಡೆಸಿದವರು. ಅವರು ೧೯೭೧-೭೨ರ ಅವಧಿಯಲ್ಲಿ ಭಾರತೀಯ ಸಂಸ್ಕೃತಿಯನ್ನು ಕುರಿತು ಹಲವಾರು ಲೇಖನಗಳನ್ನು 'ನ್ಯೂ ಏಜ್' ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಆ ಲೇಖನಗಳ ಪುಸ್ತಕ ರೂಪವನ್ನು ಎಚ್. ಎಸ್. ಗೋಪಾಲರಾವ್ ಅವರು ಸಮರ್ಥವಾಗಿ ಕನ್ನಡಕ್ಕೆ ತಂದಿದ್ದಾರೆ. ಈ ಪುಸ್ತಕದಲ್ಲಿ ಹದಿಮೂರು ಲೇಖನಗಳಿದ್ದು ಇತಿಹಾಸವನ್ನು ಸಾಕಷ್ಟು ವಸ್ತುನಿಷ್ಠವಾಗಿ ಅಭ್ಯಾಸ ಮಾಡಿರುವುದು ಗೊತ್ತಾಗುತ್ತದೆ. ಮೊದಲ ಲೇಖನ ಲೇಖಕರ ವಿಚಾರಗಳಿಗೆ ಹಿನ್ನೆಲೆಯನ್ನು ಒದಗಿಸಿದೆ. ಭಾರತೀಯ ಸಂಸ್ಕೃತಿ ಎಷ್ಟರಮಟ್ಟಿಗೆ ಬಹುಮುಖೀ ಸಂಸ್ಕೃತಿಯಾಗಿದೆ ಎಂಬ ಸಂಗತಿಯನ್ನು ಆರ್ಯರು, ಕುಶಾನರು, ಮುಸ್ಲಿಮರು ಮುಂತಾದವರ ಪ್ರಭಾವಗಳ ಮೂಲಕ ಗುರುತಿಸಲಾಗಿದೆ. ವಿಜ್ಞಾನ, ಭಾಷಾಶಾಸ್ತ್ರ, ಮಾನವಶಾಸ್ತ್ರ ಮುಂತಾದ ಅನ್ಯ ಶಿಸ್ತುಗಳ ಅಪಾರವಾದ ಮಾಹಿತಿಯನ್ನು ಪುಸ್ತಕ ಉಪಯೋಗಿಸಿಕೊಂಡಿದೆ. ಇಲ್ಲಿನ ವಿಚಾರಗಳ ಬಗ್ಗೆ ವಿದ್ವಾಂಸರಿಂದ ಹೆಚ್ಚಿನ ಚರ್ಚೆಯಾದರೆ ಲೇಖಕರ ಶ್ರಮ ಹೆಚ್ಚು ಸಾರ್ಥಕ.






## ಪ್ರಾಚೀನ ಭಾರತದಲ್ಲಿ ಚಿಕಿತ್ಸಾ ವಿಜ್ಞಾನ

*ದೇವಿಪ್ರಸಾದ್ ಚಟ್ಟೋಪಾಧ್ಯಾಯ*

*ಅನು : ಜಿ. ಕುಮಾರಪ್ಪ*

**ಪುಟ : ೧೦೪** **ಬೆಲೆ : ರೂ. ೪೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಸಾಮಾಜಿಕ ತತ್ವಜ್ಞಾನಿಗಳಲ್ಲಿ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಬಹಳ ದೊಡ್ಡ ಹೆಸರು. ಪ್ರಾಚೀನ ಶಾಸ್ತ್ರ ಗ್ರಂಥಗಳ ಪ್ರಾಮುಖ್ಯತೆ ಮತ್ತು ಮಿತಿಗಳನ್ನು ಅವರ ಹಲವಾರು ಕೃತಿಗಳು ಗಂಭೀರವಾಗಿ ವಿಶ್ಲೇಷಿಸುತ್ತವೆ. ಈ ಪುಸ್ತಕದಲ್ಲಿಯೂ ಪ್ರಾಚೀನ ಭಾರತದ ಚಿಕಿತ್ಸಾ ವಿಧಾನಗಳ ಬಗ್ಗೆ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ. ಭಾರತೀಯ ಸಂಸ್ಕೃತಿಯು ಸಂಪೂರ್ಣವಾಗಿ ಆಧ್ಯಾತ್ಮಿಕ ಸಾಧನೆಯಿಂದ ಪ್ರೇರಿತವಾದದ್ದು, ನಮ್ಮ ಪ್ರಾಚೀನರಿಗೆ ವಿಜ್ಞಾನ ಮತ್ತು ವೈಜ್ಞಾನಿಕ ಸತ್ಯಗಳನ್ನು ತಿಳಿಯುವ ಆಸಕ್ತಿ ಇರಲಿಲ್ಲ ಎಂಬ ನಂಬಿಕೆ ಸಾಕಷ್ಟು ಜನರಲ್ಲಿದೆ. ಆದರೆ ಆ ಕೃತಿಯನ್ನು ಓದಿದಾಗ ಪ್ರಾಚೀನರು ಹೊಂದಿದ್ದ ವೈಜ್ಞಾನಿಕ ಮನೋಭಾವ ಸ್ಪಷ್ಟವಾಗುತ್ತದೆ. ಈ ಪುಸ್ತಕದಲ್ಲಿ ಹಲವಾರು ಲೇಖನಗಳಿದ್ದು ಚರಕ ಸಂಹಿತೆ ಮತ್ತು ಸುಶ್ರುತ ಸಂಹಿತೆ ಗ್ರಂಥಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ. ಲೇಖಕರು ವಿಜ್ಞಾನದ ಮಾಹಿತಿಗಳನ್ನು ಕೊಡುವುದರ ಜೊತೆಯಲ್ಲಿಯೇ ಸನ್ನಿವೇಶದ ಸಾಮಾಜಿಕ ಸಂದರ್ಭಗಳನ್ನು ವೈಜ್ಞಾನಿಕವಾಗಿ ಪರಿಶೀಲಿಸಿದ್ದಾರೆ. ಪ್ರಾಚೀನ ಭಾರತದಲ್ಲಿ ವಿಜ್ಞಾನದ ಅವನತಿ ಎಂಬ ಪ್ರಫುಲ್ಲಚಂದ್ರ ರಾಯ್ ಅವರ ಲೇಖನವನ್ನು ಅನುಬಂಧವಾಗಿ ಕೊಟ್ಟಿರುವುದು ಪುಸ್ತಕದ ಮಹತ್ವವನ್ನು ಹೆಚ್ಚಿಸಿದೆ. ಸುಶ್ರುತ ಸಂಹಿತೆಯಲ್ಲಿ ವಿವರಿಸಿರುವ ಶಸ್ತ್ರ ಚಿಕಿತ್ಸೆಯ ವಿವರಗಳ ಮತ್ತು ಅಲ್ಲಿನ ಉಪಕರಣಗಳ ಚಿತ್ರಗಳನ್ನು ಕೊಟ್ಟಿರುವುದು ಸಹ ಉಪಯುಕ್ತವಾಗಿದೆ. ಮೂಲ ಬಂಗಾಳಿ ಭಾಷೆಯ ಕೃತಿಯನ್ನು ಜಿ. ಕುಮಾರಪ್ಪ ಅವರು ಸಮರ್ಥವಾಗಿ ಅನುವಾದಿಸಿದ್ದಾರೆ.



## ಕೋಮುವಾದದ ಕರಾಳ ಮುಖಗಳು

*ಎಸ್. ಆರ್. ಭಟ್, ಜಿ. ರಾಜಶೇಖರ್, ಕೆ. ಫಣಿರಾಜ್*

**ಪುಟ : ೨೦೮** **ಬೆಲೆ : ರೂ. ೭೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ದಿವಂಗತ ಎಸ್. ಆರ್. ಭಟ್ ಅವರು 'ಹಿಂದು-ಮುಸ್ಲಿಮ್ ಘರ್ಷಣೆಗಳ ಸಮಸ್ಯೆ' ಎಂಬ ಪುಸ್ತಕವನ್ನು ೧೯೮೬ರಲ್ಲಿ ಪ್ರಕಟಿಸಿದ್ದು ಆ ಕೃತಿಯಲ್ಲಿ ಮತಾಂಧತೆಯು ಸಮಾಜದ ಮೇಲೆ ಬೀರಿರುವ ಕೆಟ್ಟ ಪರಿಣಾಮವನ್ನು ಹಲವಾರು ಉದಾಹರಣೆಗಳ ಮೂಲಕ ಚಿತ್ರಿಸಿದ್ದಾರೆ. ಇತಿಹಾಸ ಹಾಗೂ ಸಮಾಜಶಾಸ್ತ್ರದ ತಿಳುವಳಿಕೆ ಪುಸ್ತಕ ರಚನೆಯ ಹಿನ್ನೆಲೆಯಲ್ಲಿ ಇದೆ. ಆರ್.ಎಸ್.ಎಸ್. ಮತ್ತು ಜಮಾತೆ ಇಸ್ಲಾಮ್ ಸಂಸ್ಥೆಗಳ ಮೂಲಭೂತವಾದವನ್ನು ಲೇಖಕರು ವಿಶ್ಲೇಷಿಸಿದ್ದಾರೆ. 'ಹಿಂದೂ ಧರ್ಮದಲ್ಲಿ ಗೋವು : ಸತ್ಯ ಮತ್ತು ಮಿಥ್ಯ' ಎಂಬ ಲೇಖನ ಅನುಬಂಧದ ರೂಪದಲ್ಲಿದೆ. ಎಸ್. ಆರ್. ಭಟ್ ಅವರ ಕೃತಿ ಪ್ರಕಟವಾದ ನಂತರದ ವರ್ಷಗಳಲ್ಲಿ ಕೋಮುವಾದ ಮತ್ತಷ್ಟು ಉಗ್ರವಾಗಿ ಹಿಂದೂ ಮತಾಂಧತೆ ವಿಶೇಷವಾಗಿ ಕಂಡುಬಂದಿದೆ. ಈ ಸಮಕಾಲೀನ ಇತಿಹಾಸವನ್ನು ಜಿ. ರಾಜಶೇಖರ್ ಮತ್ತು ಕೆ. ಫಣಿರಾಜ್ ಅವರು ಪುಸ್ತಕದ ಎರಡನೆಯ ಭಾಗದಲ್ಲಿ ಬರೆದಿದ್ದಾರೆ. ೧೯೮೪ರ ದೆಹಲಿಯ ಸಿಖ್ ನರಮೇಧ, ೧೯೯೨-೯೩ರ ಮುಂಬೈ ಕೋಮುಗಲಭೆ, ಗೋದ್ರಾ ಹಿನ್ನೆಲೆಯ ಗುಜರಾತ್ ಚಳುವಳಿಗಳ ವಿಶ್ಲೇಷಣೆಗಳನ್ನು ಇಲ್ಲಿ ಕಾಣಬಹುದು. ಬಿ.ಜೆ.ಪಿ. ಪ್ರೇರೇಪಿತ ಕೋಮುಗಲಭೆಗಳು ಕರ್ನಾಟಕದ ಕುಂದಾಪುರ, ಉಡುಪಿ ಮುಂತಾದ ಕಡೆ ನಡೆದಿದ್ದು ಅವುಗಳ ವಿವರಣೆಯನ್ನು ಸಹ ಪುಸ್ತಕ ದಾಖಲಿಸಿದೆ. ಬಾಬಾಬುಡನ್‌ಗಿರಿಯ ಗಲಭೆಗಳ ವಿವರಣೆ ಅಷ್ಟಾಗಿ ಕೃತಿಯಲ್ಲಿ ಕಂಡುಬಂದಿಲ್ಲ. ಕೆ. ವಿ. ಸುಬ್ಬಣ್ಣನವರ ವಿಚಾರಗಳ ಹಿನ್ನೆಲೆಯಲ್ಲಿ ಬರೆದಿರುವ 'ಹಿಂಸೆಯ ಅಭಿಜ್ಞಾನ' ಲೇಖನ ಸಾಕಷ್ಟು ಚಿಂತನೆಗೆ ಅವಕಾಶ ಮಾಡಿಕೊಡುತ್ತದೆ. ಜಿ. ರಾಮಕೃಷ್ಣ ಅವರು ಉಪಯುಕ್ತ ಮುನ್ನುಡಿ ಬರೆದಿದ್ದಾರೆ. ಕೋಮುವಾದದ ಕರಾಳಮುಖವನ್ನು ಚಿತ್ರಿಸುವ ಈ ಕೃತಿಯನ್ನು ನವಕರ್ನಾಟಕ ಪ್ರಕಾಶನ ಇಷ್ಟು ಅಂದವಾಗಿ ಪ್ರಕಟಿಸಿರುವುದು ವಿಪರ್ಯಾಸವಾಗಿದೆ !

**– ಎಚ್ಚೆಸ್ವೆಮ್**

**ಭೋ**ಪಾಲದಲ್ಲಿ ಈ ಹಿಂದೆ ಮಥುರಾಬಾಬು ಎಂಬ ವ್ಯಕ್ತಿಯಿದ್ದರು. ಅವರು ಒಬ್ಬ ಆದರ್ಶ ಕಮ್ಯುನಿಸ್ಟರಾಗಿದ್ದರು. ಮುಕ್ತಿಬೋಧ, ಹರಿಶಂಕರ ಪರಸಾಯಿ, ಮುಕುಟ ಬಿಹಾರಿ 'ಸರೋಜ'ರಂಥ ಧೀಮಂತ ಲೇಖಕರು ಭೋಪಾಲಕ್ಕೆ ಬಂದಾಗೆಲ್ಲ ಇವರಲ್ಲಿಯೇ ಉಳಿದುಕೊಳ್ಳುತ್ತಿದ್ದರು. ಇವರ ಸಹೃದಯತೆಯಿಂದ ಉರ್ದುವಿನ ತಾಜ ಭೋಪಾಲಿ, ಕೈಫಿ ಭೋಪಾಲಿ, ಫಜಲ ತಾಬೀಶ್ ಮುಂತಾದವರು ಇವರೊಡನೆ ಯಾವಾಗಲೂ ಇರುತ್ತಿದ್ದರು. ಮಥುರಾಬಾಬು ಭೋಪಾಲದ ಕೀರ್ತಿಯ ಸಂಕೇತವಾಗಿದ್ದರು, ಇಲ್ಲಿಯ ನೆನಪುಗಳ ಭಂಡಾರವಾಗಿದ್ದರು. ಇವರು ಯಾವಾಗಲೂ ದೇಶವನ್ನು ಬಿಟ್ಟು, ಭೋಪಾಲನ್ನು ಬಿಟ್ಟು ಪಾಕಿಸ್ತಾನಕ್ಕೆ ಹೋಗಿ, ನೆಲೆಸಿದವರನ್ನು ನೆನೆಸಿಕೊಂಡು ಮರುಗುತ್ತಿದ್ದರು. ಅವರು ನನಗೆ ''ಕಮಲಾಬಾಬು, ಒಮ್ಮೆ ಪಾಕಿಸ್ತಾನಕ್ಕೆ ಹೋಗಿ, ಅಲ್ಲಿ ಎಲ್ಲ ಗೆಳೆಯರನ್ನೂ ಭೆಟ್ಟಿಯಾಗಿ ಬರೋಣ, ಬನ್ನಿರಿ. ಇಂದು ಲಾಹೋರ, ಕರಾಚಿಗಳು ಹೇಗಿವೆಯೋ ಏನೋ'' ಎಂದು ನನ್ನನ್ನು ಆಹ್ವಾನಿಸಿದರು. ನಾನು ''ಹೇಗೆ ಹೋಗುವುದು? ವೀಸಾ ಕೊಡುವವರು ಯಾರು?'' ಎಂದು ಕೇಳಿದ್ದೆ. ಆಗ ಅವರು ನಿರಾಸೆಯಿಂದ ತಲೆ ಅಲ್ಲಾಡಿಸುತ್ತ, ಸಿಗರೇಟು ಹೊತ್ತಿಸಿ, ದೀರ್ಘವಾದ ದಮ್ ಎಳೆದಿದ್ದರು. ಅಹಸನ ಅಲಿ ಎಂಬವರು ಪಾಕಿಸ್ತಾನದಲ್ಲಿ ನೆಲೆಸಿದ್ದರು. ಅವರು ಆಗಾಗ ಇಲ್ಲಿಗೆ ಬರುತ್ತಿದ್ದರು. ಇವರು ಅವರೊಡನೆ ಮಾತನಾಡುತ್ತ ತಮ್ಮನ್ನು ಮರೆಯುತ್ತಿದ್ದರು.

ಈ ಮಥುರಾಬಾಬುರ ಪ್ರೇರಣೆಯಿಂದ ಭೋಪಾಲದಲ್ಲಿ ಪ್ರಗತಿಶೀಲ ಪ್ರಾಹಿತಕ ಸಂಘವು 'ಫೈಜ್ ಸ್ಮೃತಿ ದಿನ' ಆಚರಿಸಿತು. ಈ ಸ್ಮೃತಿ ದಿನದ ಉದ್ಘಾಟಕರಾಗಿದ್ದ ಕವಿವರ್ಯ ಶಿವಮಂಗಲ ಸಿಂಹ 'ಸುಮನ'ರು ಮಾತನಾಡುತ್ತ 'ಫೈಜ್ ಕೋ ಬಾಂಟೋ ತೋ ಜಾನೆ' ಎಂಬ ಮಾತನ್ನು ಆಡಿದ್ದರು. ಅವರ ಈ ಮಾತು ಪತ್ರಿಕೆಗಳ ಮುಖ್ಯ ಶೀರ್ಷಿಕೆಗಳಾಗಿ ಪ್ರಕಟಗೊಂಡು ಎಲ್ಲೆಡೆಯೂ ಹರಡಿತ್ತು. ಈ ಸ್ಮೃತಿದಿನದ ಸಭೆಯಲ್ಲಿ ಮಾತನಾಡಿದ್ದ ಇನ್ನೊಬ್ಬ ಪ್ರಮುಖ ಬರಹಗಾರ ಆಖ್ತರ ಸಯೀದಖಾನರು ಕವಿವರ್ಯರ ಉಕ್ತಿಗೆ ಇನ್ನಷ್ಟು ಜೋಡಿಸಿ ''ಪ್ರೇಮಚಂದ ಕೋ ಬಾಂಟೆ ತೋ ಜಾನೆ'' ಸನ್ನಿವೇಶದ ಅರ್ಥಪೂರ್ಣತೆಯನ್ನು ಹೆಚ್ಚಿಸಿದ್ದರು.

ಭಾರತ-ಪಾಕಿಸ್ತಾನಗಳ ನಡುವೆ ಎಷ್ಟೇ ದ್ವೇಷವಿದ್ದರೂ ಸಹ, ಪ್ರೇಮಚಂದ-ಫೈಜ ಅಹಮ್ಮದ ಫೈಜರು ಉಭಯ ಸಾಹಿತ್ಯಲೋಕದಲ್ಲಿ ಎರಡೂ ಕಡೆಗಳಲ್ಲಿ ಈಗಲೂ ಬೇಕಾದವರಾಗಿದ್ದಾರೆ. ಇವರನ್ನು ಜನರಿಂದ ಯಾರೂ ಕಸಿದುಕೊಳ್ಳಲಾರರು.

*ಈ ಲೇಖನದ ಕರ್ತೃ ಶ್ರೀ ಕಮಲಾಪ್ರಸಾದರು ಈಗ ಅಖಿಲ ಭಾರತ ಪ್ರಗತಿಶೀಲ ಸಾಹಿತ್ಯ ಸಂಘಟನೆಯ ಪ್ರಧಾನ ಕಾರ್ಯದರ್ಶಿಗಳಾಗಿದ್ದಾರೆ. ಇವರು ಮಧ್ಯಪ್ರದೇಶದವರು, ಹಿಂದಿ ಲೇಖಕರು, ನ್ಯಾಷನಲ್ ಬುಕ್ ಟ್ರಸ್ಟ್ ಪರವಾಗಿ, ಪಾಕಿಸ್ತಾನದಲ್ಲಿ ಮೂರು ದಿನ ಸಾಹಿತ್ಯ ಯಾತ್ರೆಯನ್ನು ಮಾಡಿದ್ದರು. ತಮ್ಮ ಪ್ರವಾಸದಲ್ಲಿಯ ಅನುಭವದ ಒಂದು ಕಿರುನೋಟವನ್ನು ಇಲ್ಲಿ ಕಾಣಿಸಿದ್ದಾರೆ. ಪಾಕಿಸ್ತಾನದಲ್ಲಿ ಒಂದಿಷ್ಟು ಬದಲಾದ ಪರಿಸ್ಥಿತಿಯನ್ನು ಇಲ್ಲಿ ಚಿತ್ರಿಸಿದ್ದಾರೆ. ಭಾರತ-ಪಾಕಿಸ್ತಾನಗಳು ಯಾವಾಗಲೂ ವೈರಿ ರಾಷ್ಟ್ರಗಳೇ ಆಗಿರಬೇಕೆಂಬುವವರನ್ನು ಬಿಟ್ಟರೆ, ಇನ್ನುಳಿದ ಜನಕೋಟಿಯು ಎರಡೂ ಕಡೆಗಳಲ್ಲಿ ಸಾಮರಸ್ಯವನ್ನು ಬಯಸುತ್ತದೆ. ಇಂಥವರಿಗೆ ಆಸೆಯ ಗುರುತುಗಳು ಇಲ್ಲಿ ಕಾಣಿಸುತ್ತವೆ.*



# ಭಾರತದ ಲೇಖಕರೊಬ್ಬರ ಪಾಕಿಸ್ತಾನದ ಸಾಂಸ್ಕೃತಿಕ ಪ್ರವಾಸ

**ಕಮಲಾ ಪ್ರಸಾದ್**

ನನಗೆ ಪಾಕಿಸ್ತಾನಕ್ಕೆ ಹೋಗಿ-ಬರುವ ಅವಕಾಶವು ಸಿಗುತ್ತದೆಂಬ ಯೋಚನೆಯೂ ಈ ಮೊದಲು ನನ್ನ ಮನಸ್ಸಿನಲ್ಲಿ ಎಂದೂ ಬಂದಿರಲಿಲ್ಲ. ಮಾನವ ಸಂಪನ್ಮೂಲ ಇಲಾಖೆಯ ಕಾರ್ಯಕ್ರಮದ ಭಾಗವಾಗಿ, ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆಯು, ಸಾರ್ಕ್ ದೇಶಗಳ ಸಾಂಸ್ಕೃತಿಕ ಸಹಕಾರ ಸಂವರ್ಧನೆಯ ಭಾಗವಾಗಿ ಕೆಲವು ಲೇಖಕರನ್ನು ತನ್ನ ಪ್ರತಿನಿಧಿಯಾಗಿ ಪಾಕಿಸ್ತಾನಕ್ಕೆ ಕಳಿಸಲು ಮುಂದಾಯಿತು. ಏಕೆಂದರೆ ಪಾಕಿಸ್ತಾನದಲ್ಲಿ ಗ್ರಂಥ ಪ್ರಕಾಶಕರ – ಮಾರಾಟಗಾರರ ಸಂಘಟನೆಗಳ ವತಿಯಿಂದ ಒಂದು 'ಪುಸ್ತಕ ಮೇಳ'ವು ನಡೆಯಲಿತ್ತು.

ನನಗೆ ಈ ಪುಸ್ತಕ ಮೇಳಕ್ಕೆ ಹೋಗಲು ಆಮಂತ್ರಣವು ಬಂದಿತು. ಈ ಅವಕಾಶದ ಖುಷಿಯಿಂದ, ನನ್ನ ಎಲ್ಲ ಕೆಲಸಗಳನ್ನು ಬದಿಗಿರಿಸಿ, ಹೋಗಲು ಸಿದ್ಧನಾದೆ. ಇದೇ ವರ್ಷದ ಮಾರ್ಚ್-೪ರಂದು ನಾನು ಲಾಹೋರ್ ವಿಮಾನ ನಿಲ್ದಾಣದಲ್ಲಿದ್ದೆನು. ವಿಮಾನದ ಮೂಲಕ ದಿಲ್ಲಿಯಿಂದ ಲಾಹೋರಿಗೆ ಹೋಗಲಿಕ್ಕೆ ಹತ್ತಿದ ಸಮಯ ಕೇವಲ ೪೫ ನಿಮಿಷಗಳು. ಹವಾಮಾನವೂ ದಿಲ್ಲಿಯಲ್ಲಿಯಂಥದ್ದೇ. ನಾನು ವಿಮಾನವನ್ನೇರಿದಾಗ ಫೈಜ್‌ರ ಕವಿತೆಯ ತುಣುಕು ''ಯೇ ದಾಗ ದಾಗ ಉಜಾಲಾ, ಯೆಶಬ್ ಗಜೀದಾ ಸಹರ'' ನೆನಪಿಗೆ ಬಂದಿತು.

ಲಾಹೋರ್ ಏರ್‌ಪೋರ್ಟಿನಲ್ಲಿ ಇಳಿದೊಡನೆಯೇ, ಅಲ್ಲಿಯ ಅಧಿಕಾರಿಗಳಿಂದ ನೆಪಮಾತ್ರದ ತಪಾಸಣೆ ಯಾಯಿತು. ಇಲ್ಲಿಯ ಪೊಲೀಸರ ವ್ಯವಹಾರವೂ ಕೂಡ ಹಾರ್ದಿಕವಾಗಿದೆ ಎನಿಸಿತು. ಹೆಚ್ಚಾಗಿ ಏನೂ ವಿಚಾರಿಸಲಿಲ್ಲ. ಹೆಜ್ಜೆಹೆಜ್ಜೆಗೂ ಸಹಾಯ ನೀಡುವ ಮನೋಭಾವವಿತ್ತು. ವಿಮಾನ ನಿಲ್ದಾಣದಿಂದ ಹೊರಟ ನಾವು ''ಹಾಲಿಡೇ ಇನ್'' ಹೋಟೇಲಿನಲ್ಲಿ ತಂಗಿದೆವು. ಈ ಹೋಟೇಲಿನ ಶಾಖೆಗಳು ನಮ್ಮ ದೇಶದಲ್ಲಿಯೂ ಇರುವುದರಿಂದ ಈ ಹೆಸರು ಮೊದಲೇ ಗೊತ್ತಿತ್ತು. ಮುಂದೆ ಹತ್ತು ನಿಮಿಷಗಳಲ್ಲಿ ಊಟಕ್ಕೆ ಸಿದ್ಧರಾಗಬೇಕೆಂದು ಸೂಚನೆ ನೀಡಲಾಯಿತು.

ಪಾಕಿಸ್ತಾನದಲ್ಲಿ ಅಂದಿನ ರಾತ್ರಿಯು ಉತ್ಸುಕತೆ, ಜಿಜ್ಞಾಸೆ, ಉತ್ಸಾಹಗಳಿಂದ ತುಂಬಿತ್ತು. ಹಿಂದುಸ್ತಾನಿ ಸಂಗೀತದ ಹಿನ್ನೆಲೆಯಲ್ಲಿ ೨೦೦-೩೦೦ ಜನರೊಂದಿಗೆ ಭೆಟ್ಟಿಯಾಗುವುದು, ಕೈಜೋಡಿಸುವುದು, ಅಪ್ಪಿಕೊಳ್ಳುವುದೆಲ್ಲವೂ ನಡೆದವು.

ಸಾಹಿತ್ಯ ಅಕಾಡೆಮಿಯಿಂದ ಈ ಮೊದಲೇ ಒಂದು ತಂಡವು ಬಂದು ತಂಗಿತ್ತು. ಈ ತಂಡದಲ್ಲಿ ಕಮರ ರಯೀಸ್ ಹಾಗೂ ಗಿರಿರಾಜ ಕಿಶೋರರನ್ನು ಕಂಡು ನನ್ನ ಏಕಾಕಿತನದ ಒಳದುಗುಡವೂ ಇಲ್ಲವಾಯಿತು. ಇದೇ ಸಂದರ್ಭದಲ್ಲಿ ಕೆಲವು ಲೇಖಕರನ್ನು ಕಮರ ರಯೀಸ್‌ರು ನನಗೆ ಪರಿಚಯಿಸಿದರು. ಇವರಲ್ಲಿ ನಜರ್ ಸೇಠಿ ಹಾಗೂ ಇಮ್ತಿಯಾಜ್ ಆಲಮ್‌ರೂ ಸೇರಿದ್ದರು. ಈ ಇಬ್ಬರೂ ನಡೆಯುತ್ತಿದ್ದ ಪುಸ್ತಕ ಮೇಳದ ಸಂಯೋಜಕರಾಗಿದ್ದರು. ಮುಂದೆ ನಜರ್ ಸೇಠಿ ಯವರು ನನ್ನನ್ನು ಬೇರೆಯವರಿಗೆ ಪರಿಚಯಿಸುವಾಗ ''ಇವರು ಈಗ ಪ್ರಗತಿಶೀಲ ಲೇಖಕರ ಸಂಘಟನೆಯ ಪ್ರಧಾನ ಕಾರ್ಯದರ್ಶಿಯಾಗಿದ್ದಾರೆ. ಬನ್ನೆ ಭಾಯಿ (ಸಜ್ಜಾದ್ ಜಹೀರ್)ಯವರ ಹುದ್ದೆಯಲ್ಲಿದ್ದಾರೆ'' ಎಂದು ಹೇಳುತ್ತಿದ್ದರು.

ಭಾರತ ಕಮ್ಯುನಿಸ್ಟ್ ಪಕ್ಷವು ಸಜ್ಜಾದ್ ಜಹೀರರನ್ನು ಪಾರ್ಟಿ ಹಾಗೂ ''ತರಕ್ಕಿ ಪಸಂದ ಮುಸನ್ನಫೀನ''ದ (ಪ್ರಗತಿಶೀಲ ಲೇಖಕರ ಸಂಘಟನೆ) ಕಾರ್ಯಗಳನ್ನು ನಡೆಸಲೆಂದು ಇನ್ನಿತರರೊಡನೆ ಪಾಕಿಸ್ತಾನಕ್ಕೆ ಕಳಿಸಿ ತ್ತೆಂಬುದು ಹಲವಾರು ಜನರಿಗೆ ಗೊತ್ತಿರಬಹುದು. ಸ್ವಲ್ಪ ದಿನಗಳಲ್ಲಿ ಸಜ್ಜಾದ್ ಜಹೀರ್‌ರ ಪ್ರಭಾವವು ಪಾಕಿಸ್ತಾನದ ಸಾಹಿತಿಗಳ ಮೇಲಾಗಿತ್ತು. ಪಾಕಿಸ್ತಾನ ದಲ್ಲಿ ಈಗಿನ ರಾಜಕೀಯ, ಸಾಮಾಜಿಕ ಆಗು-

ಹೋಗುಗಳು ಏನೇ ಆಗಿರಲಿ, ಆದರೆ ಅಲ್ಲಿಯ ಬರೆಹಗಾರರ ಸಮುದಾಯದಲ್ಲಿ ಬನ್ನೆ ಭಾಯಿಯವರ ನೆನಪು-ಪ್ರಭಾವಗಳು ಇನ್ನೂ ಇವೆ. ಅವರೆಲ್ಲ ಸಜ್ಜಾದ್‌ರ ಬಗ್ಗೆ ಗೌರವವನ್ನು ವ್ಯಕ್ತಪಡಿಸುತ್ತಾರೆ. ಇದನ್ನು ಸ್ಪಷ್ಟವಾಗಿ ಕಂಡೆನು. ಒಬ್ಬರನ್ನೊಬ್ಬರು ಭೆಟ್ಟಿಯಾಗುವುದು, ಪರಿಚಯಿಸಿಕೊಳ್ಳುವುದು, ಬಹಳ ಹೊತ್ತಿನವರೆಗೆ ನಡೆಯಿತು. ಇನ್ನು ಊಟ. ಅದೂ ಪಾಕಿಸ್ತಾನದ್ದು, ಏನು ಹೇಳಬೇಕು? ಅದು ನಿಜಕ್ಕೂ ಖಾನ್‌ದಾನಿ ರಿವಾಜಿನ ಭೂರಿಭೋಜನವಾಗಿತ್ತು. ನಾನ್‌ವೆಜ್‌ನಲ್ಲಿ ತರತರದ ಪದಾರ್ಥಗಳು. ಶಾಕಾಹಾರಿಗಳಿಗಾಗಿ ಬೇರೆ ವ್ಯವಸ್ಥೆಯಿದ್ದರೂ ಕೂಡ, ಅದು ಅಷ್ಟೇನೂ ಜನಪ್ರಿಯವಾಗಿರಲಿಲ್ಲ. ನಾನು ಭೋಪಾಲನ್ನು ಬಿಡುವಾಗ ಮಂಜರ್ ಏಹತೆಶಾಮ್‌ರು ''ಲಾಹೋರ್ ಮಾಂಸದ ಊರಾಗಿದೆ'' ಎಂದು ಹೇಳಿದ್ದು ಸರಿಯಾಗೇ ಇತ್ತು. ಹೀಗೆ ಅಂದಿನ ಶುಭರಾತ್ರಿ ಕಳೆದಿತ್ತು.

ಮಾರನೇಯ ದಿನ ಎದ್ದು ಪತ್ರಿಕೆ ನೋಡಿದಾಗ: ಬಲೂಚಿಸ್ತಾನದಲ್ಲಿ ಭಯೋತ್ಪಾದಕರು ೧೩೦ ಜನರನ್ನು ಕೊಂದಿದ್ದರು. ಶ್ರೀನಗರ-ಮುಜಫರ್‌ಬಾದ್ ಬಸ್ ಸಂಚಾರಕ್ಕೆ ಸ್ವಾಗತ ಸಿಕ್ಕಿತ್ತು. ಕಾಂ. ಎ. ಬಿ. ಬರ್ಧನ್ ಹಾಗೂ ಕಾಂ. ಸುರ್‌ಜಿತರ ಪಾಕಿಸ್ತಾನದ ಯಾತ್ರೆಯ ಟಿಪ್ಪಣಿ ಹಾಗೂ ರಾಷ್ಟ್ರಪತಿ ಮುಶ್ರಫ್‌ರೊಂದಿಗಿನ ಅವರ ಫೋಟೋಗಳು, ವಾರ್ತಾವಿವರಣೆಗಳೊಂದಿಗೆ ಕಂಡುಬಂದುವು. ಇಲ್ಲಿ ಸರಕಾರವನ್ನು ವಿಮರ್ಶಿಸಿ ಬರೆದ ಭಾಗಗಳು ಕಡಿಮೆ ಎನಿಸಿತು.

ನಾವಿಂದು ಲಾಹೋರ್ ಸುತ್ತಾಡಬೇಕಿದೆ. ಪುಸ್ತಕಮೇಳ ನೋಡಬೇಕಿದೆ ಹಾಗೂ ಲೇಖಕರನ್ನು ಭೆಟ್ಟಿಯಾಗಬೇಕಾಗಿದೆ. ಲಾಹೋರನ್ನು ಮೊದಲನೇ ದಿನ ನೋಡಿದಾಗಲೇ, ಈ ನಗರವನ್ನು ದಿಲ್ಲಿ, ಆಗ್ರಾ, ಚೆನ್ನೈ, ಕೊಲ್ಕೋತಾಗಳ ಮಾದರಿಯಲ್ಲೇ ಸ್ಥಾಪಿಸಿ, ಬೆಳೆಸಲಾಗಿದೆ ಎಂದೆನಿಸಿತು. ಇಲ್ಲಿ ಇತಿಹಾಸದ ಗುರುತುಗಳೂ ಬೇಕಾದಷ್ಟಿವೆ. ಲಾಹೋರ, ದಿಲ್ಲಿ, ಆಗ್ರಾ ಕೋಟೆಗಳು ಹಿಂದು-ಮುಸ್ಲಿಮರ ಸಮಷ್ಟಿ ಸಂಸ್ಕೃತಿಯ ಕುರುಹಾಗಿವೆ. ಇವುಗಳ ಸ್ಥಾಪನೆಯು ಒಂದೇ ಪರಂಪರೆಯದ್ದಾಗಿದೆ. ಮಧ್ಯಯುಗದ ಸ್ಥಾಪತ್ಯ, ಶಿಲ್ಪ, ಸಂಗೀತ, ಚಿತ್ರಕಲೆಗಳು ಸಮಷ್ಟಿ ಸಂಸ್ಕೃತಿಯ ಸಮುದ್ಭವಗಳಾಗಿದ್ದಂತೆ, ಇತ್ತೀಚಿನ ಫೈಜ್ ಅಹಮ್ಮದ ಫೈಜ್, ಕಾಜಿ ನಜರುಲ್, ರವೀಂದ್ರನಾಥ ಠಾಕೂರರ ಸ್ವಾತಂತ್ರ್ಯದ ಕನಸುಗಳೂ ಸಮಾನವಾಗಿದ್ದವು. ಇವೆರಡೂ ಬೇರೆ ಬೇರೆ ದೇಶಗಳೆಂದು ಇತ್ತೀಚಿಗೆ ನಾವು ಮಾಡಿಕೊಂಡಿದ್ದೇವೆ, ಅಷ್ಟೇ. ನಮ್ಮ ಅಪಕೃತಿಗಳಿಗೆ ಸ್ವಪ್ನದ್ರಷ್ಟಾರರ ಸಹಮತಿಯಿಲ್ಲ. ತಕ್ಷಶಿಲಾ, ನಾಲಂದಾ, ಮೋಹಂಜೊದಾರೊಗಳು ನಮ್ಮಿಬ್ಬರಿಗೂ ಸೇರಿವೆ.

ಹಾಗೆಯೇ, ''ಹಿಂದುಸ್ತಾನ್ ಸೋಶಲಿಷ್ಟ್ ರಿಪಬ್ಲಿಕನ್ ಅಸೋಸಿಯೇಶನ್''ದ ಕ್ರಾಂತಿಕಾರಿ ಚಟುವಟಿಕೆಗಳ ಮೇಲೆ ಎರಡೂ ದೇಶಗಳಿಗೂ ಅಷ್ಟೇ ಹಕ್ಕಿದೆ. ಇದೇ ಲಾಹೋರಿನಲ್ಲಿ ಕಾಂಗ್ರೆಸ್ ಮಹಾಧಿವೇಶನವು ಜರುಗಿದಾಗ, ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯುವ ಘೋಷಣೆಯನ್ನು ಇಲ್ಲಿಂದಲೇ ಕೊಡಲಾಗಿತ್ತು. ಇದೆಲ್ಲವೂ ನಮ್ಮಿಬ್ಬರಿಗೂ ಇತಿಹಾಸದ ಬಳುವಳಿಯಾಗಿದೆ. ನಾನು ನಿನ್ನೆ ಲಾಹೋರ ನಗರ ಪ್ರವೇಶಿಸುವ ಮೊದಲು ಹೀಗೆ ಚಿಂತಿಸುತ್ತ ಬಂದ ಬಗೆಯಾಗಿತ್ತು. ಹಾಗೂ ಮೂರುದಿನಗಳ ಪಾಕಿಸ್ತಾನದ ಪ್ರವಾಸಕಾಲದಲ್ಲಿ ಈ ಚಿಂತನೆಯೇ ನನಗೆ ಮಾರ್ಗದರ್ಶಕ ಸೂತ್ರವಾಗಿತ್ತು.

## ಪುಸ್ತಕ ಮೇಳದಲ್ಲಿ

ಪುಸ್ತಕ ಪ್ರದರ್ಶನಗಳ ಮಳಿಗೆಗಳಲ್ಲಿ ಲೇಖಕರು-ಓದುಗರುಗಳ ನಡುವೆ ನಡೆಯುತ್ತಿದ್ದ ಸಂವಾದಗಳು ಕುತೂಹಲಕಾರಿಯಾಗಿದ್ದವು. ಪಾಕಿಸ್ತಾನದ ಪುಸ್ತಕಗಳ ಬೆಲೆ ದುಬಾರಿಯಾಗಿದ್ದದ್ದರಿಂದ, ಭಾರತೀಯ ಪ್ರಕಾಶಕರ ಕೃತಿಗಳು ಬಲುಬೇಗನೆ ಮಾರಾಟವಾಗಿ ಮಳಿಗೆಗಳು ಖಾಲಿಯಾದದ್ದು ನಮಗೊಂದು ವಿಶಿಷ್ಟ ಅನುಭವವಾಗಿತ್ತು. ಪುಸ್ತಕ ಪ್ರದರ್ಶನದ ಪ್ರಾಯೋಜಕರು ಹೇಳಿದ್ದು: ನಜರುಲ್, ಫೈಜ್, ಇಕ್‌ಬಾಲ್, ಹಸರತ್ ಮೋಹಾನಿಯವರ ಕೃತಿಗಳು, ಪಾಕಿಸ್ತಾನಿಯರಿಗೆ ಅಗ್ಗವೆಂದು ತೋರಿ, ಅವು ಬೇಗನೆ ಮಾರಾಟವಾದವಂತೆ. ಈ ಮೇಳದ ಮಳಿಗೆಗಳಲ್ಲಿ ಮಕ್ಕಳ ನೆರವಿಯು ಎದ್ದು ಕಾಣುತ್ತಿತ್ತು. ಈಗ ಜರುಗಿದ ಪುಸ್ತಕ ಮೇಳವು ಪಾಕಿಸ್ತಾನದಲ್ಲಿ ನಡೆಯುತ್ತಿದ್ದುದು ಮೊದಲ ಸಲವಾಗಿತ್ತು. ಇದಕ್ಕಾಗೇನೊ ಇಷ್ಟೊಂದು ಆಕರ್ಷಣೆ.

ಪುಸ್ತಕಗಳು ಮನಸ್ಸಿನ ಕೊಳೆಯನ್ನು ತೊಳೆಯುತ್ತವೆ. ಒಬ್ಬಂಟಿಯಾಗಿದ್ದಾಗ ಗ್ರಂಥಗಳು ಗೆಳೆಯನಾಗುತ್ತವೆ. ಪುಸ್ತಕಗಳು ಎಂದೂ ದ್ರೋಹಮಾಡುವುದಿಲ್ಲ. ಈ ಪುಸ್ತಕ ಪ್ರದರ್ಶನ ಮೇಳದ ಉದ್ಘಾಟನೆಯನ್ನು ಪಂಜಾಬ ಪ್ರಾಂತದ ಗವರ್ನರ್ ಶ್ರೀ ಖಾಲಿದ್ ಮೊಹಮ್ಮದರು ಜರುಗಿಸಿದರು. ಈ ಸಂದರ್ಭದಲ್ಲಿ ಅವರು ''ಪುಸ್ತಕಗಳನ್ನು ದೇಶದ ತುಂಬೆಲ್ಲ ಹರಡಿರಿ. ನೆಟ್‌ವರ್ಕ್‌ಗಳನ್ನು ನಡೆಸಿರಿ. ಸಾಹಿತ್ಯ, ಸಂಸ್ಕೃತಿ, ವಿಜ್ಞಾನ, ಮಾಹಿತಿ-ತಂತ್ರಜ್ಞಾನಗಳಲ್ಲಿಯ ಹೊಸ ಹೊಸ ತಿಳಿವನ್ನು ಪಡೆಯಿರಿ. ವಿದೇಶೀ ಪುಸ್ತಕಗಳನ್ನು, ಅನುಮತಿ ಪಡೆದು, ಪುನರ್ಮುದ್ರಣ ಮಾಡಿರಿ. ಅಗ್ಗದರದಲ್ಲಿ ಮಾರಾಟಮಾಡಿರಿ. ದೇಶದ ಐಕ್ಯಭಂಜಕರ ಚಟುವಟಿಕೆಗಳ ಬಗ್ಗೆ ಜಾಗೃತರಾಗಿರಿ. ಹೊಸಬೆಳಕಿಗಾಗಿ ಎಲ್ಲ ದಿಕ್ಕಿನ ಬಾಗಿಲುಗಳನ್ನು ತೆಗೆಯಿರಿ. ಪಾಕಿಸ್ತಾನ-ಹಿಂದೂಸ್ತಾನಗಳ ಸಮ್ಮಿಶ್ರ ಸಂಸ್ಕೃತಿಯ ವಾರಸುದಾರಿಕೆಯನ್ನು ಮತ್ತೆ ನೆನಪು ಮಾಡಿಕೊಳ್ಳಿರಿ'' ಎಂದು ಮಾತನಾಡಿದ್ದರು. ಇದು ಹೃದಯಸ್ಪರ್ಶಿಯಾಗಿತ್ತು, ಪರಿಣಾಮಕಾರಿಯಾಗಿತ್ತು.

## ಸಾಹಿತ್ಯಕ ಸನ್ನಿವೇಶದಲ್ಲಿ

ಮಾರ್ಚ್-೫ರಿಂದ ೭ರವರೆಗೆ ನಾನು ಪ್ರಕಾಶಕರು ಹಾಗೂ ಪುಸ್ತಕ ಮಾರಾಟಗಾರರ ಸಭೆ, ಉರ್ದು ವಿಜ್ಞಾನ ಬೋರ್ಡ್, ವಿಶ್ವ ಪಂಜಾಬಿ ಸಂಘಟನೆ, ಹಾಗೂ ಪತ್ರಿಕಾಕರ್ತರ ಮತ್ತು ಕೆಲವೊಂದು ಬುದ್ಧಿಜೀವಿಗಳ ಗೋಷ್ಠಿ-ಸಭೆಗಳಲ್ಲಿ ಭಾಗವಹಿಸಿದೆನು. ಇವೆಲ್ಲವೂ ವ್ಯವಸ್ಥಿತವಾಗಿ ನಡೆದವು. ಈ ಕಾರ್ಯಕ್ರಮಗಳಲ್ಲಿ ಮಾತುಗಾರರು ಎರಡೂ ದೇಶಗಳ ಲೇಖಕರಾಗಿದ್ದರು ಮತ್ತು ರಾಜಕೀಯದೊಂದಿಗೆ ಸಂಬಂಧಗಳನ್ನು ಹೊಂದಿದವರಾಗಿದ್ದರು. ಪಂಜಾಬ ಪ್ರಾಂತದ ಶಿಕ್ಷಣ ಮಂತ್ರಿಗಳು, ತಮ್ಮ ದೇಶದ ಭಾಷಾ ಸಮಸ್ಯೆಯ ಬಗ್ಗೆ ಮಾತಾಡಿದ್ದು ವಿಚಾರಣೀಯವೆನ್ನಿಸಿತು. ಅವರು ಮಾತನಾಡುತ್ತ ''ಉರ್ದುವನ್ನು ಪಂಜಾಬಿ, ಸಿಂಧಿ, ಪುಷ್ತುಗಳ ಮೇಲೆ ಹೇರುವುದಿಲ್ಲೆಂದು'' ಹೇಳಿದರು. ''ಏಕೆಂದರೆ ಈ ಭಾಷೆಗಳ ಪರಂಪರೆಯು ಸಮೃದ್ಧವಾಗಿದ್ದು, ಅದನ್ನು ಉಳಿಸಿಕೊಂಡು ಬರಬೇಕಾಗಿದೆ'' ಎಂದರು. ಅಲ್ಲದೆ, ಅವರು ಭಾರತದ ಭಾಷಾನೀತಿಯನ್ನು ಸಮರ್ಥಿಸಿದರು. ಹಾಗೂ ರಾಜಕೀಯವನ್ನೂ ಕೂಡ ಸೆಕ್ಯೂಲರ್ ದೃಷ್ಟಿಕೋನದಿಂದ ಪ್ರತಿಪಾದಿಸಿದರು. ಈ ಶಿಕ್ಷಣಮಂತ್ರಿಗಳ ಭಾಷಣವು ಓದು-ಬರಹಗಳಲ್ಲಿ ನಿಷ್ಣಾತನಾದ ವ್ಯಕ್ತಿಯ ಅಭಿಪ್ರಾಯಗಳಂತೆನಿಸಿದವು. ಅಲ್ಲದೆ ಪರಿವರ್ತನಕಾರಿ ವಿಚಾರಗಳಿಂದ ತುಂಬಿತ್ತು. ಇಲ್ಲಿ ವಿಶೇಷವಾಗಿ ಹೇಳಬೇಕೆಂದರೆ: ಪಾಕಿಸ್ತಾನದಲ್ಲಿ ಪಂಜಾಬಿ ಭಾಷೆ ಹಾಗೂ ಸಾಹಿತ್ಯಗಳನ್ನು ಉರ್ದು ಮಾಧ್ಯಮದಲ್ಲಿ ಕಲಿಸಲಾಗುತ್ತದೆ. ಇತರ ಕ್ಷೇತ್ರಗಳಲ್ಲಿ ಆಯಾ ಭಾಷಾ ಮಾಧ್ಯಮಗಳೇ ಇವೆ. ಸಿಂಧಿ ಹಾಗೂ ಪುಷ್ತು ಭಾಷೆಗಳ ಸಾಹಿತ್ಯ ಸಮೃದ್ಧವಾಗಿದ್ದು, ವ್ಯವಸ್ಥೆಯ ವಿರೋಧಿಗಳೂ ಆಗಿವೆ.

ಸಿಂಧಿ ಲೇಖಕರೊಂದಿಗೆ ಬಹಳಷ್ಟು ಒಳ್ಳೆಯ ರೀತಿಯ ಚರ್ಚೆಗಳಾದವು. ಲಾಹೋರಿನಲ್ಲಿ ನಡೆದ ಈ ಎಲ್ಲ ಗೋಷ್ಠಿಗಳ ಒಟ್ಟು ಅನುಭವವು, ನನ್ನ ಮಟ್ಟಿಗೆ ಸಕಾರಾತ್ಮಕವೆನ್ನಿಸಿತು. ಮುಖಂಡರು, ಅಧಿಕಾರಿಗಳು, ಲೇಖಕರು ಈ ಎಲ್ಲರಲ್ಲಿಯೂ ಸಹಕಾರ-ಸಮ್ಮತಿ-ಸಮಾನತೆಯ ಭಾವವು ಕಂಡುಬಂದಿತು. ಇದನ್ನು ಕ್ರೋಢೀಕರಿಸಿ ಹೇಳಬೇಕೆಂದರೆ: ಪಾಕಿಸ್ತಾನಿ ಜನರು ತಮ್ಮ ದೇಶವನ್ನು ವಿಷದ ಕುಂಡದಿಂದ ಈಗ ಮೇಲೆತ್ತಿ ತಂದಿದ್ದಾರೆ. ಈಗಲೂ ಸಹ ಮುಲ್ಲಾಗಳಿಂದ, ಆಡಳಿತಾಧಿಕಾರಿಗಳಿಂದ, ಅಧಿಕಾರವನ್ನು ನಡೆಸುತ್ತೇವೆನ್ನುವವರಿಂದ ಭಯವು ಇದೆ. ಇಲ್ಲಿಯವರೆಗೆ ಪ್ರಜಾಪ್ರಭುತ್ವವು ಬರುತ್ತಿತ್ತು-ಹೋಗುತ್ತಿತ್ತು. ಆದರೆ ಪಾಕಿಸ್ತಾನದ ಕಲೆ, ಸಾಹಿತ್ಯಗಳು ಮಾತ್ರ ಎಂದಿಗೂ ಸೆಕ್ಯುಲರ್ ಆಗಿಯೇ ಇದ್ದವು. ಭಾರತೀಯ ಭಾಷೆಗಳನ್ನು ಹೇಗೆ, ಸಂಸ್ಕೃತ ಭೂಯಿಷ್ಠಗೊಳಿಸುವ ರೋಗವಿತ್ತೊ, ಹಾಗೆಯೇ, ಅಂಥದೇ ರೋಗವು ಉರ್ದುವನ್ನು ಅರಬ್ಬಿ-ಫಾರ್ಸಿಗಳಿಂದ ಭೂಯಿಷ್ಠಗೊಳಿಸುವುದು ನಡೆಯಿತು. ಉರ್ದು ಎಂಬುದು ಸಮ್ಮಿಶ್ರ ಸಂಸ್ಕೃತಿಯ ಹುಟ್ಟಿನಿಂದಾದ ಭಾಷೆ ಎಂಬುದನ್ನು ಮರೆಯಲಾಯಿತು. ಈ ಸಾಂಪ್ರದಾಯಿಕತೆ ರೋಗವು ಎರಡೂ ಕಡೆಗಳಲಿಂದಲೂ ಬೆಳೆದುಬಂದಿತು. ಎರಡೂ ಕಡೆಗಳಲ್ಲಿಯೂ ಪುಸ್ತಕಗಳನ್ನು ತರಿಸಿಕೊಳ್ಳುವುದು ನಿಂತುಬಿಟ್ಟಿತು.

ಪಾಕಿಸ್ತಾನದಲ್ಲಿ ಕಾಗದವು ಕಳ್ಳಪೇಟೆಯ ಸರಕಾಗಿದೆ. ಇದರಿಂದ ಪುಸ್ತಕಗಳ ಬೆಲೆಯು ಜಾಸ್ತಿ. ಮೇಲಾಗಿ ನೌಕರಶಾಹಿಯು ಸಾಹಿತ್ಯಕ-ಸಾಂಸ್ಕೃತಿಕ ಸ್ವಾತಂತ್ರ್ಯವನ್ನು ತಡೆಯುತ್ತಾ ಬಂದಿದೆ. ಒಂದು ಗೋಷ್ಠಿಯ ಅಧ್ಯಕ್ಷರಾಗಿದ್ದ ಶ್ರೀ ಫಕೆ-ಜಮಾ ಅವರು– ''ಭಾರತ-ಪಾಕಿಸ್ತಾನಗಳಲ್ಲಿ ರಚಿಸಲಾಗುವ ಪಠ್ಯಪುಸ್ತಕಗಳನ್ನು ಪರಿಶೀಲಿಸಲು ಒಂದು ಕಮಿಟಿಯನ್ನು ಸ್ಥಾಪಿಸಬೇಕು. ಇದು ಎರಡೂ ಕಡೆಗಳಲ್ಲಿಯ ಪಠ್ಯಗಳಲ್ಲಿ ಬರುವ ಮತಾಂಧತೆಯ, ಸಾಂಪ್ರದಾಯಿಕತೆಯ ಅಂಶಗಳನ್ನು ತೆಗೆದುಹಾಕುವ ಅಧಿಕಾರವನ್ನು ಪಡೆದಿರಬೇಕು,'' ಎಂಬ ಸಲಹೆಯನ್ನು ನೀಡಿದರು. ಇದೇ ರೀತಿ ನಡೆದಂಥ ಇನ್ನಿತರ ಗೋಷ್ಠಿಗಳಲ್ಲಿ ಮಾತಾಡಿದ ಹೆಚ್ಚುಜನರ ಅಭಿಪ್ರಾಯಗಳೂ ಕೂಡ ಈ ಹಿಂದಿನ ೫೦ ವರ್ಷಗಳಲ್ಲಿ ಆದ ಕೆಡಕುಗಳ ಬಗ್ಗೆ ನಮ್ಮನ್ನು ಆಳುತ್ತ ಬಂದವರು ಕ್ಷಮೆ ಕೇಳಬೇಕು.

ಎರಡೂ ದೇಶಗಳ ನಡುವಿನ ವೀಸಾ ಪದ್ಧತಿಯನ್ನು ರದ್ದುಪಡಿಸಬೇಕು. ಇಲ್ಲ, ಸಾರ್ಕ್ ದೇಶಗಳ ನಡುವೆ ಒಂದೇ ಒಂದು ವೀಸಾ ಪದ್ಧತಿಯು ಇದ್ದರೆ ಸಾಕು ಎಂಬಂತಿದ್ದವು. ''ಇಸ್ಲಾಮ್ ಇನ್ ಸವುಥ್ ಏಶಿಯಾ'' ಗ್ರಂಥದ ಸಂಪಾದಕರಾದ ಶ್ರೀ ರಶೀದ್ ಅಹಮ್ಮದ್ ಜಾಲಂಧರಿಯವರು ಕವಿ ಇಕಬಾಲ್‌ರೆ ''ಮುಸ್ಲಿಮರು ಏಶಿಯಾದ ಪ್ರಗತಿಪರ ರಾಜಕೀಯಕ್ಕಾಗಿ, ವೈಯಕ್ತಿಕ ಸ್ವಾತಂತ್ರ್ಯಕ್ಕಾಗಿ ಏನನ್ನೂ ಮಾಡಿಯೇ ಇಲ್ಲ'' ಎಂಬ ವಿಚಾರವನ್ನು ಅಲ್ಲಗಳೆದರು.




ನಾವು ಲಾಹೋರನ್ನು ಸುತ್ತಾಡುವುದಕ್ಕೆ, ಹಾಗೂ ಅಲ್ಲಿಯ ಲೇಖಕರನ್ನು ಭೆಟ್ಟಿಯಾಗುವುದಕ್ಕೆ ಶ್ರೀ ಮಹಮ್ಮೂದ್ ಮಿರ್ಜಾರಂಥ ಸಹೃದಯಿ, ಪ್ರಬುದ್ಧ ವ್ಯಕ್ತಿಗಳು ದೊರಕಿದ್ದರು. ಇವರು ಅಲಿ ಜಾವೇದರ ಮೂಲಕ ಭಾರತದಲ್ಲಿಯೇ ಪರಿಚಿತರಾಗಿದ್ದರು. ಈ ಮಿರ್ಜಾ ಸಾಹೇಬರು ವೃತ್ತಿಯಿಂದ ವಕೀಲರಾಗಿದ್ದು, ಇತ್ತೀಚೆಗೆ ಪೂರ್ಣಾವಧಿ ಲೇಖಕರಾಗಿದ್ದಾರೆ. ರಾಜಕೀಯ, ಆರ್ಥಿಕ ವಿಷಯಗಳ ಬಗ್ಗೆ ಅಂಕಣ ಬರಹಗಾರರಾಗಿದ್ದಾರೆ. ಇವರ ಕೆಲವು ಕೃತಿಗಳು ಪ್ರಕಟವಾಗಿವೆ. ಇವರು ಸದ್ಯದ ಜಗತ್ತಿನ ವಿಚಾರಗಳನ್ನು ಚೆನ್ನಾಗಿ ತಿಳಿದಿದ್ದಾರೆ. ಇವರೊಂದಿಗೆ ಬಹಳಷ್ಟು ಮಾತು-ಕತೆಗಳಾದವು. ಇವರು ನಮಗೆ ಊಟಹಾಕಿ, ಕೆಲವು ಗಣ್ಯರನ್ನು ಭೆಟ್ಟಿ ಮಾಡಿಸಿದರು. ಇವರು ನೀಡಿದ್ದ 'ದಾವತ್' (ಭೋಜನ ಸಮಾರಂಭ)ನಲ್ಲಿಯೇ, ರಶೀದ ಅಹಮ್ಮದ ಜಾಲಂಧರಿಯವರ ಪರಿಚಯ ಆಯಿತು. ಇವರು ಪ್ರಾಜ್ಞರಾಗಿದ್ದು, ರೂಢಿಭಂಜಕರೂ ಆಗಿದ್ದಾರೆ. ಎಲ್ಲ ಬಗೆಯ ಭ್ರಮೆಗಳಿಂದ ಹೊರಬರುವ ಚಿಂತನಶೀಲರೂ ಆಗಿದ್ದಾರೆ. ಅದರಂತೆ ಇಸ್ಲಾಮಿನ ಪುನರ್‌ಜಾಗರಣೆಯ ಕೈವಾರಿ. ಇವರನ್ನು ನ್ಯಾಯಾಧೀಶ ಪದವಿಯೂ ಕೂಡ ಹುಡುಕುತ್ತ ಬಂದಿತ್ತು.

### ''ನಾವು ಗಾಂಧೀಜಿಯನ್ನು ತಿಳಿದುಕೊಳ್ಳಲಿಲ್ಲ''

ಈ ಜಾಲಂಧರಿಯವರು, ಚರ್ಚೆಯ ಭರಾಟೆಯಲ್ಲಿ, ತಮಗರಿಯದಂತೆಯೇ, ಒಮ್ಮೆ ''ನಾವು ಜಗತ್ತಿನ ಬಲುದೊಡ್ಡ ಮನುಷ್ಯರಾಗಿದ್ದ ಗಾಂಧೀಜಿಯವರನ್ನು ಕಳೆದುಕೊಂಡೆವು. ಪಾಕಿಸ್ತಾನವು ಗಾಂಧೀಜಿಯನ್ನು ತಿಳಿದುಕೊಳ್ಳಲಿಲ್ಲ, ಆ ಬಗ್ಗೆ ಪ್ರಯತ್ನಿಸಲಿಲ್ಲ, ನಾವು ಜಿನ್ನಾ ಸಾಹೇಬರಿಗೆ ಪುಕ್ಕಟೆಯಾಗಿ, ಬಲುದೊಡ್ಡ ಸ್ಥಾನವನ್ನು ಕೊಟ್ಟುಬಿಟ್ಟೆವು. ಇದರ ಕೆಟ್ಟ ಫಲಗಳನ್ನು ಈ ದೇಶವು ಈಗ ಅನುಭವಿಸುತ್ತಲಿದೆ.'' ಎಂದು ಒಳತೋಟಿಯ ಭಾವವನ್ನು ಹೊರಹಾಕಿಬಿಟ್ಟರು.

### ಮಾನವ ಹಕ್ಕುಗಳ ಜನರೊಂದಿಗೆ

ಇದೇ ಸಂದರ್ಭದಲ್ಲಿ ಇನ್ನೊಬ್ಬ ಮಹನೀಯರ ಭೆಟ್ಟಿಯಾಯಿತು. ಅವರೆಂದರೆ ಪಾಕಿಸ್ತಾನದ ಮಾನವ ಹಕ್ಕುಗಳ ಆಯೋಗದ ಡೈರೆಕ್ಟರ್ ಶ್ರೀ ಎ. ರಹಮಾನ್. ಇವರು ಅದ್ಭುತ ಸಾಹಸಿ ಎಂದೆನಿಸಿತು. ಇವರು ಮಾನವ ಹಕ್ಕುಗಳ ಆಯೋಗದ ಕಾರ್ಯಗಳಿಗೆ ಹೇಳಿಮಾಡಿಸಿದ ವ್ಯಕ್ತಿ. ತಮ್ಮೊಂದಿಗೆ ಸಹಕರಿಸಿ, ಕೆಲಸ ಮಾಡುವುದಕ್ಕಾಗಿ ಸುಯೋಗ್ಯ ವ್ಯಕ್ತಿಗಳಿಂದ ಕೂಡಿದ ಕಾರ್ಯಪಡೆಯೊಂದನ್ನು ರಚಿಸಿಕೊಂಡಿದ್ದಾರೆ. ಇದಕ್ಕೆ ಸದಸ್ಯತ್ವದ ವ್ಯವಸ್ಥೆಯೂ ಇದೆ.

ಶ್ರೀ ರಹಮಾನ್ ಹಾಗೂ ಸಂಗಡಿಗರು ಮಾನವ ಹಕ್ಕುಗಳ ಸಂರಕ್ಷಣೆಗಾಗಿ ಗಂಡಾಂತರಕಾರಿ ಪರಿಸ್ಥಿತಿಗಳನ್ನೂ ಎದುರಿಸುತ್ತಿರುತ್ತಾರೆ. ಮಹಿಳೆಯರ ಹಾಗೂ ಅಲ್ಪ ಸಂಖ್ಯಾಕರ ಮೇಲಿನ ದೌರ್ಜನ್ಯಗಳ ಮಧ್ಯ ಪ್ರವೇಶಿಸುತ್ತಾರೆ. ಅವರಿಗೆಲ್ಲ ನ್ಯಾಯ ದೊರಕಿಸುತ್ತಾರೆ. ಮರ್ದಿತ ಪೀಡಿತ ಜನರು ಇವರನ್ನು ಯಾವತ್ತೂ ಮುತ್ತಿರುತ್ತಾರೆ, ಶ್ರೀ ರಹಮಾನ್ ಸಾಹೇಬರು ೨೦೦೪ರ ತಮ್ಮ ಆಯೋಗದ ರಿಪೋರ್ಟನ್ನು ನಮಗೆ ನೀಡಿದರು. ಈ ವರದಿಯು ಸರಕಾರದ ಪೊಳ್ಳು ಭರವಸೆಗಳನ್ನೂ, ಆಶ್ವಾಸನೆಗಳನ್ನೂ ಬಯಲುಮಾಡುತ್ತದೆ. ಈ ಆಯೋಗವು ಸ್ವಾಯತ್ತ, ಸ್ವತಂತ್ರ ಮಾಧ್ಯಮಗಳು ಹೊರಹಾಕಿದ ಭೀಕರ ಘಟನೆಗಳನ್ನು ಪರಿಶೀಲಿಸಿದೆ. ಪಾಕಿಸ್ತಾನದಲ್ಲಿ ಎಷ್ಟೊಂದು ಪತ್ರಕರ್ತರ ಕೊಲೆಯಾಗಿದೆ, ಎಷ್ಟು ಜನ ಪತ್ರಿಕಾವರದಿಗಾರರು ಜೈಲಿನಲ್ಲಿದ್ದಾರೆ ಹಾಗೂ ಎಷ್ಟು ಪತ್ರಿಕಾ ಕಾರ್ಯಾಲಯಗಳನ್ನು ಸುಟ್ಟುಹಾಕಲಾಗಿದೆ ಎಂಬುದರ ಬಗ್ಗೆ ಉಲ್ಲೇಖವಿದೆ. ಅಸಂಖ್ಯ ಅಪಹರಣ, ಬಲಾತ್ಕಾರ, ಹತ್ಯೆಗಳ ವಿವರಣೆಗಳಿವೆ. ಬಲೂಚಿಸ್ತಾನ, ಸಿಂಧಗಳಲ್ಲಿಯ ಜನರ ಪ್ರತಿಭಟನೆ, ಬಂಡಾಯಗಳನ್ನು ಹತ್ತಿಕ್ಕಿದ ಸಮಾಚಾರಗಳಿವೆ. ಚುನಾವಣೆಗಳಲ್ಲಿ ಒಂದೊಂದೂ ಮತ-ಕ್ಷೇತ್ರಗಳಲ್ಲಾದ ದೊಂಬಿಗಳ ವಿವರಣೆಯಿದೆ. ಪಾಕ್ ಪ್ರಧಾನಿಯ ಚುನಾವಣೆಯ ಕಾಲದ ಅವ್ಯವಹಾರಗಳ ಪರಿಶೀಲನೆಯ ಅಂಶಗಳು ಉಲ್ಲೇಖಿತವಾಗಿವೆ. ಶ್ರೀ ರಹಮಾನ್ ಅವರು ಪಾಕಿಸ್ತಾನದಲ್ಲಿ ಪ್ರಜಾತಂತ್ರದ ಮರುಸ್ಥಾಪನೆಯ ಹೋರಾಟದಲ್ಲಿ ಭಾಗಿಯಾಗಿದ್ದಾರೆ. ರಹಮಾನರ ಜೊತೆಗೆ ಸಹಕಾರಿಯಾಗಿರುವ ಶ್ರೀ ಹಸನ್ ನಕವಿಯವರಲ್ಲಿ ವಿಲಕ್ಷಣವಾದ ಆತ್ಮಶಕ್ತಿಯಿದೆ. ನಕವಿಯವರ ಕುಟುಂಬದ ಅರ್ಧದಷ್ಟು ಜನರು ಲಖನೌದಲ್ಲಿ ಇರುತ್ತಾರಂತೆ. ಆದ್ದರಿಂದ ಇವರು ಆಗಾಗ ಭಾರತಕ್ಕೆ ಹೋಗಿ-ಬರುವುದನ್ನು ಮಾಡುತ್ತಿರುತ್ತಾರೆ. ಇವರ ಮುಖದಲ್ಲಿ ಔದಾಸ್ಯಭಾವವು ಎದ್ದುಕಾಣುತ್ತಿತ್ತು. ಭಾರತ-ಪಾಕಿಸ್ತಾನಗಳ ನಡುವೆ ಸಾಂಸ್ಕೃತಿಕ ಚಟುವಟಿಕೆಗಳ ಸಂವರ್ಧನೆಗಾಗಿ, ಸರಕಾರೇತರ ಸಂಬಂಧಗಳನ್ನು ಬಲಪಡಿಸುವುದಕ್ಕಾಗಿ ಇವರೊಂದಿಗೆ ಚರ್ಚೆ ಮಾಡಲಾಯಿತು. ಇದರಿಂದ ಏನಾದರೂ ಒಂದು ಪರಿಣಾಮವಾಗಲಿದೆಯೆಂಬ ಆಸೆ ಮೂಡಿದೆ.

### ಪೇಟೆಗಳಲ್ಲಿಯ ಅನುಭವ

ಪಾಕಿಸ್ತಾನದಲ್ಲಿ ಹೊಸಗಾಳಿಯ ಅಲೆಗಳು ಸುಳಿದಾಡುತ್ತಿವೆ. ಜನರು, ನೌಕರಶಾಹಿ ಮತ್ತು ಆಳುವವರು ಇವರೆಲ್ಲರ ನಡುವೆ ಆಳವಾದ ಅಂತರಗಳಿವೆ. ಜನಸಾಮಾನ್ಯರಲ್ಲಿ ಪ್ರಜಾತಂತ್ರದ ಬಯಕೆಗಳು ಅಂತಃಸ್ಫೂರ್ತವಾಗಿ ಬರುತ್ತಿವೆ. ಇವು ಈ ೫೦ ವರ್ಷಗಳ ಹತ್ತಿಕ್ಕಲ್ಪಟ್ಟ ವ್ಯವಸ್ಥೆಯ ಪ್ರತಿಕ್ರಿಯೆಯಾಗಿ ಸ್ಫುರಿಸಿವೆ. ಆಳುವವರಿಂದ ಘೋರ ತಿರಸ್ಕಾರವನ್ನು ಜನರು ಅನುಭವಿಸಿದ್ದಾರೆ. ಜನರಿಗೆ ಮುಲ್ಲಾಗಳನ್ನು, ಕಟ್ಟರ ಪಂಥಿಗಳನ್ನು ಪ್ರಭಾವಹೀನರನ್ನಾಗಿಸಬೇಕೆಂಬ ಬಗ್ಗೆ ಬಲವಾದ ತುಡಿತವಿದೆ. ಮತಾಂಧ ಕುಟುಂಬಗಳಲ್ಲಿಯ ಹೊಸ ಹುಡುಗರು, ತಮ್ಮ ಹಿರಿಯರ ದುರ್ಬೋಧನೆಗಳನ್ನು ನಿರ್ಲಕ್ಷಿಸುತ್ತಿದ್ದಾರೆ.

ನಾನು ಬೇರೆ ಬೇರೆ ಪೇಟೆಗಳಲ್ಲಿ ಒಬ್ಬನೇ ಸುತ್ತಾಡಿದೆನು. ಈ ಮಾರುಕಟ್ಟೆಗಳಲ್ಲಿ ಚೀನಿಯರು ತಯಾರಿಸಿದ ವಸ್ತುಗಳು ಲಗ್ಗೆಯಿಟ್ಟಿವೆ. ಕೆಲವು ಕಡೆಗಳಲ್ಲಿ ಭಾರತೀಯ ವಸ್ತುಗಳೂ ಇವೆ. ಚೀನದ ನಂತರ ಜಪಾನಿ ಸಾಮಾನುಗಳು ಹೇರಳವಾಗಿವೆ. ಪಾಕಿಸ್ತಾನಿ ಕೈಗಾರಿಕೆಗಳಲ್ಲಿಯೂ ಸುಧಾರಣೆಗಳಾಗಿವೆ. ಆದರೆ ಈ ಸ್ವದೇಶಿ ಸರಕು ಬಲು ದುಬಾರಿ. ಆಶ್ಚರ್ಯಕರ ವಿಷಯವೆಂದರೆ: ಪಾಕಿಸ್ತಾನಿ ವಸ್ತುಗಳನ್ನು ಒಬ್ಬ ಹಿಂದುಸ್ತಾನಿ ಖರೀದಿಸುತ್ತಾನೆಂದರೆ, ಅದು ಆ ವ್ಯಾಪಾರಿಗೆ ತಿಳಿದುಬಂದರೆ ಆತ ಬೆಲೆ ಕಡಿಮೆ ಮಾಡಿ ವ್ಯವಹಾರ ಕುದುರಿಸಲು ಪ್ರಯತ್ನಿಸುತ್ತಾನೆ. ನಾನು ಒಂದು ಆಟೋದಲ್ಲಿ ಕುಳಿತಿದ್ದೆ. ನಮ್ಮ ಮಾತುಗಳಿಂದ, ಒಳಗೆ ಕುಳಿತ ನಾನು 'ಹಿಂದುಸ್ತಾನಿ' ಎಂದು ಆಟೋದವನಿಗೆ ತಿಳಿಯಿತು. ನಾನು ಇಳಿಯಬೇಕಾದಲ್ಲಿ ಇಳಿದು, ಹಣ ಕೊಡಲು ಹೋದಾಗ, ಆ ಆಟೋದವನು ಹಣ ಪಡೆಯಲು ನಿರಾಕರಿಸಿದನು ಹಾಗೂ ''ಆಪ್ ಹಮಾರೆ ಮುಲ್ಕ್‌ಸೆ ಆಯೆ ಹೈ'' ಎಂದು ಭಾವಾವಿಷ್ಟನಾದನು. ಆತನ ಕಣ್ಣುಗಳು ಆಗ ಒದ್ದೆಯಾಗಿದ್ದವು. ನಾನು ಆತನಿಗೆ ಬಹಳಷ್ಟು ತಿಳಿಹೇಳಿದಾಗ ತನ್ನ ಮೆಹನತ್ತಿನ ನಿಜ ಬೆಲೆಯನ್ನು ಮಾತ್ರ ಪಡೆದನು. ಭೆಟ್ಟಿಯಾದ ಹಲವಾರು ಪಾಕಿಸ್ತಾನಿಗಳಲ್ಲಿ ಒಳಗೆ ಹುದುಗಿರುವ ''ಏಕ ಬಾರ್ ಹಿಂದುಸ್ತಾನ್ ಕೋ ದೇಖನಾ ಹೈ'' ವಿಚಾರಗಳು ತಂತಾನೆ ಹೊರಬೀಳುತ್ತಿದ್ದವು. ಇದು ಎಲ್ಲೋ ಹತ್ತೆಂಟು ಜನರ ಭಾವನೆಗಳಾಗಿರದೆ, ಪಾಕಿಸ್ತಾನದ ಒಟ್ಟಾರೆ ಸಮಾಜದ ಒಳ ತುಡಿತವಾಗಿತ್ತು. ಇಂಥವರಿಗೆಲ್ಲ ಇತ್ತೀಚೆಗೆ ಕೆಲವು ರೀತಿಯಿಂದ ದಾರಿಗಳು ಮುಕ್ತವಾಗುತ್ತಿದ್ದು. ಸಾಮರಸ್ಯಕ್ಕೆ ವಾತಾವರಣವು ಸುಗಮವಾಗುತ್ತಿದೆ, ಹೊಸ ಆಸೆಗಳನ್ನು ಚಿಗುರಿಸಿದೆ.

ಸ್ವಭಾವ ದರ್ಶನ

ಎಂದರೆ, ಪಾಕಿಸ್ತಾನದಲ್ಲಿಯ ಭಯ, ಸಂಶಯ, ಸಂಕಟಗಳು ಲುಪ್ತವಾಗಿವೆ ಎನ್ನುವಂತೇನಿಲ್ಲ. ಜನಸಾಮಾನ್ಯರಿಗೆ ಸೇನೆಯ ಬಗ್ಗೆ ಘೋರ ತಿರಸ್ಕಾರವಿದೆ. ಪಾಕಿಸ್ತಾನಿ ಸಮಾಜದ ತಳಹದಿಯಲ್ಲಿ ಸಾಮಂತವಾದಿ ಪ್ರವೃತ್ತಿಯು ಬಲವಾಗಿದೆ. ಸೈನ್ಯದ ಮುಖ್ಯ ಹುದ್ದೆಗಳಲ್ಲಿ ಇವರೇ ತುಂಬಿದ್ದಾರೆ. ಸೈನ್ಯದ ನಿವೃತ್ತ ಅಧಿಕಾರಿಗಳ ಭವ್ಯ ಕಾಲೋನಿಗಳು ವಿಶೇಷವಾಗಿ ಕಂಡುಬರುತ್ತವೆ. ಇವರ ಕೊಳ್ಳಬಾಕತನ - ಕೂಳುಬಾಕತನಗಳು ಕೆಲವರಿಗೆ 'ಮಾದರಿ'ಗಳಾಗಿವೆ. ಜಮೀನುದಾರರ ದೊಡ್ಡ ಭೂಹಿಡುವಳಿಗಳು, ಅವರ ಮಹಲ್‌ಗಳು ಎದ್ದುಕಾಣುತ್ತವೆ. ಅವರ ಇರುವಿಕೆಯ ಠೀವಿಗಳೆಲ್ಲವೂ ನವಾಬಿ ಜಮಾನಾದ ನೆನಪುಗಳನ್ನು ತರುತ್ತವೆ. ಆದರೆ ಶ್ರೀಸಾಮಾನ್ಯರ ಇರುವಿಕೆಯ ಪರಿಯೇ ಬೇರೊಂದು ಬಗೆಯಲ್ಲಿದೆ. ಹರಕು, ಹೊಲಸು ಬಟ್ಟೆಗಳವರದು, ಭಿಕ್ಷುಕರಂತೆಯೂ ಕೂಡ ಇದೆ. ದಾರ ಹರಿದ ಗಾಳಿಪಟದಂತೆ ಇವರು ಎಲ್ಲೆಲ್ಲೋ ಸುತ್ತಾಡುತ್ತಿರುತ್ತಾರೆ. ಭೆಟ್ಟಿಯಾದ ಭಾರತೀಯರಿಗೆ ಆಗಾಗ ಇವರು ಕೇಳುತ್ತಿರುತ್ತಾರಂತೆ ''ವಹಾಂಕೆ ಖಬರ್...?'' ಅವರಿಗೆ ಏನೆಂದು ಹೇಳಬೇಕು, ಯಾರು ಹೇಳಬೇಕು? ಈ ಸಾಧನಹೀನನ ಹತ್ತಿರ ಪತ್ರಿಕೆ, ಟಿ.ವಿ.ಗಳಿಲ್ಲ, ಪುಸ್ತಕಗಳ ಪ್ರಪಂಚದ ಹತ್ತಿರ ಇವರು ಸುಳಿಯುವಂತಿಲ್ಲ. ಇಲ್ಲಿಯ ಬಹುತೇಕ ಜನರಿಗೆ 'ಹಿಂದೋಸ್ತಾನಿ ಮುಸ್ಲಿಮ'ರ ಬಗ್ಗೆ ಕಾಳಜಿ, ಒಳಚಿಂತೆಗಳಿವೆ. ಇವರು ಬಾಬರಿ ಮಸೀದಿ - ಗೋಧ್ರಾ ಘಟನೆಗಳಿಂದ ಬಹಳ ದುಃಖಿತರಾಗಿದ್ದಾರೆ. ನಾನಂತೂ ವಾಸ್ತವಿಕ ಪರಿಸ್ಥಿತಿಯನ್ನು ಹೇಳಿ, ತಿಳಿಸಲೆತ್ನಿಸಿದೆನು. ಸುದ್ದಿ-ಸಮಾಚಾರಗಳ ಮೂಲಕ, ವ್ಯಾಪಾರ-ವ್ಯವಹಾರಗಳ ಮೂಲಕ, ವಿಚಾರಗಳ ಕೊಡ-ತೆಗೆದುಕೊಳ್ಳುವುದರಿಂದ ಸುಳ್ಳಿನ ಜಾಲವು ಹರಿಯುವುದು. ನಾನೊಬ್ಬ ಬುದ್ಧಿಜೀವಿಗೆ ''ಈಗಿನ ಆಡಳಿತದ ಬಗ್ಗೆ ನಿಮ್ಮ ಅಭಿಪ್ರಾಯವೇನು?'' ಎಂದು ಕೇಳಿದೆ. ಆತ ಹೇಳಿದ ''ಪ್ರಜಾಪ್ರಭುತ್ವವು ಬರುತ್ತದೆ; ಜನರಲ್ ಮುಶ್ರಫ್ ಓಡಿಹೋಗುತ್ತಾನೆ!'' ಎಂದು. ಆತ ಬೆನಿಜಿರ್ ಭುಟ್ಟೋ, ನವಾಜ ಶರೀಫರ ಕಾಲದ ಭ್ರಷ್ಟಾಚಾರದ ಕತೆ ಹೇಳಿದನು. ಕೊನೆಗೆ 'ಇಂಥವರಿಂದ ಏನೂ ಆಗದು. ನಮ್ಮ ಜಮ್ಹೂರಿಯತ್ (ಪ್ರಜಾತಂತ್ರ) ಯೋಗ್ಯರ ಕೈಗೆ ಹೋಗಲಿಲ್ಲ. ಬುದ್ಧಿಜೀವಿಗಳು ಪ್ರಜಾಪ್ರಭುತ್ವದ ಬಗ್ಗೆ ಕಾಳಜಿಯುಳ್ಳವರಾಗಿದ್ದಾರೆ. ಮಧ್ಯಮ ವರ್ಗದವರು ಈಗೀಗ ಸ್ವತಂತ್ರವಾಗಿ ಆಲೋಚಿಸುತ್ತಿದ್ದಾರೆ. ಆದರೆ ಇವರು ಮಧ್ಯೆ ಪ್ರವೇಶ ಮಾಡುವಂಥ ಪರಿಸ್ಥಿತಿಯು ಪಕ್ವವಾಗಿಲ್ಲ, ಅಂಥ ಧಾಡಸಿತನವೂ ಇವರಿಗಿಲ್ಲ' ಎಂದು ನುಡಿದನು.

ಲಾಹೋರ ಕೂಡ ಉದ್ಯಾನ ನಗರಿ ಎನ್ನಬಹುದಾಗಿದೆ. ಆದ್ದರಿಂದ ಇದು ಸುಂದರವಾಗಿದೆ. ಸ್ವಾತಂತ್ರ್ಯಕ್ಕೆ ಮೊದಲಿದ್ದ ಈ ಊರಿನ ಹೆಸರನ್ನು ಆಮೇಲೆ ಇವರು ಬದಲಿಸಿಲ್ಲ. ಈ ನಗರವನ್ನು ರಾಮನ ಮಗ ಲವನು ಸ್ಥಾಪಿಸಿದನೆಂದು ಜನರು ಹೇಳುತ್ತ-ಕೇಳುತ್ತ ಬಂದಿದ್ದಾರೆ. ಮೊಗಲರ ಕಾಲದ ಭವ್ಯ ಮಹಲುಗಳಿಲ್ಲಿವೆ. ಇಲ್ಲಿಯ ಕೋಟೆಯು ಅದ್ಭುತವಾಗಿದೆ. ಜಹಾಂಗೀರ, ಶಹಾಜಹಾನರೂ ತಮ್ಮ ಅಭೀಪ್ಸೆಗಳಿಗೆ ತಕ್ಕಂತೆ ನಗರದ ವಿಕಾಸಕ್ಕೆ ಕಾರಣರಾಗಿದ್ದಾರೆ. ಹಾಗೆಯೇ ಪಂಜಾಬಿಗಳ ಗೌರವ ಪುರುಷ ರಣಜಿತ ಸಿಂಗ ಕೂಡ ಲಾಹೋರಿನ ಬೆಳವಣಿಗೆಗೆ ಕಾರಣನಾದನು.

ನಾವು ಲಾಹೋರಿನ ಮುಖ್ಯ ಕೋಟೆಯನ್ನು ನೋಡಲು ಹೋದಾಗ, ಟರ್ಕಿ ದೇಶದ ಪ್ರತಿನಿಧಿ ಮಂಡಲವೊಂದು ಅಲ್ಲಿಗೆ ಬರಲಿತ್ತು. ಅವರಿಗಾಗಿ ಪೊಲೀಸ್ ಬಂದೋಬಸ್ತಿಯನ್ನು ವಿಶೇಷವಾಗಿ ಮಾಡಲಾಗಿತ್ತು. ಪೊಲೀಸ್ ಬಂದೋಬಸ್ತಿ ಎಂದರೆ ತಿಳಿದದ್ದೇ. ವಿಶೇಷಜ್ಞರನ್ನು ಬಿಟ್ಟು ಬೇರಾರೂ ಅಲ್ಲಿ ಸುಳಿದಾಡಕೂಡದು. ಈಗಲೂ ಹಾಗೇ ಇತ್ತು. ನಮ್ಮೊಂದಿಗೆ ಇದ್ದ ಶ್ರೀ ಮಹಮ್ಮದ್ ಮಿರ್ಜಾರವರು, ಪೊಲೀಸ ಅಧಿಕಾರಿಗೆ ''ಯೇ ಹಿಂದೋಸ್ತಾನ್ ಸೆ ಆಯೆ ಹೈ'' ಎಂದು ಹೇಳಿದಾಗ, ಪೊಲೀಸ ಇನ್‌ಸ್ಪೆಕ್ಟರರು ನಮ್ಮನ್ನು ಗೌರವಿಸಿ, ಅವಸರ ಅವಸರವಾಗಿ ಬಾರಾದರಿ, ಇಕ್‌ಬಾಲ್ ಮಕಬರಾ ಹಾಗೂ ಮಸೀದೆಗಳನ್ನು ತೋರಿಸಿದರು. ಲಾಹೋರಿನ ಈ ಮಸೀದೆಯು ಜಗತ್ತಿನಲ್ಲಿಯೇ ದೊಡ್ಡ ಮಸೀದೆಯೆಂದು ಹೇಳಲಾಗುತ್ತಿದೆ. ಗಡಿಬಿಡಿಯಲ್ಲಿ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದ್ದಕ್ಕಾಗಿ ಪೊಲೀಸ್ ಅಧಿಕಾರಿಗಳು ಕ್ಷಮೆ ಕೇಳಿದರು. ನಾವು ಬೇರೊಂದು ರಸ್ತೆಯಿಂದ ಹೋಗಿ ಸೀಸಮಹಲ್, ದರಬಾರೆ ಆಮ್, ದರಬಾರೆ ಖಾಸ್, ಮೊಗಲ ವಸ್ತುಸಂಗ್ರಹಾಲಯ, ಸೀಖ ಸಂಪ್ರದಾಯ ಸಂಗ್ರಹಾಲಯಗಳನ್ನು ನೋಡಿದೆವು. ಕೆಲವು ಕಟ್ಟಡಗಳ ಕುಸುರುಗೆಲಸವು ಮೆಚ್ಚುವಂಥದ್ದಿತ್ತು. ಸೀಸ್ ಮಹಲದ ವಾತಾನುಕೂಲಿತ ವ್ಯವಸ್ಥೆಯ ವಿಧಿ ವಿಧಾನಗಳನ್ನು ಪರಿಶೀಲಿಸಿದೆವು. ಇಂದು ಇದರ ಪುನರುದ್ಧಾರ ಕಾರ್ಯವು ನಡೆದಿದೆ. ಈ ಕೋಟೆಯ ಪರಿಸರದಲ್ಲಿಯೇ ಒಂದು ಗುರುದ್ವಾರವಿದೆ. ಇದರಿಂದಾಗಿ ಶೀಖ್‌ರ ಧಾರ್ಮಿಕ ಭಾವನೆಗಳನ್ನು ಗೌರವಿಸಿದಂತಾಗಿದೆ ಹಾಗೂ ಸಂರಕ್ಷಣೆಯು ದೊರೆತಿದೆ. ಇವುಗಳೊಂದಿಗೆ ನಾವು ಲಾಹೋರ್ ಸಂಗ್ರಹಾಲಯ, ಶಾಲಿಮಾರ್ ತೋಟಗಳನ್ನು ನೋಡಿದೆವು. ಅದರಲ್ಲೂ ಹಳೆ ಲಾಹೋರನ್ನು ಹೆಚ್ಚು ಆಸಕ್ತಿಯಿಂದ ನೋಡಿದೆವು. 'ಅನಾರಕಲಿ ಬಾಜಾರ' ನೋಡಲು ಯೋಗ್ಯವಾಗಿದೆ. ಮಧ್ಯಾಹ್ನ ಊಟದ ಅನುಭವದಿಂದ, ಮೀನು ತಿನ್ನಬೇಕಾದರೆ ಲಾಹೋರಿಗೆ ಬರುವುದು ಲೇಸೆಂದು ಪ್ರತೀತಿಯಿದೆ.

ಹಬೀಬ ತನ್ವೀರರು ನಿರ್ದೇಶಿಸಿದ ಹಾಗೂ ಅಸಗರ್ ವಸಾಹತ್ ಬರೆದ ಪ್ರಸಿದ್ಧ ರಂಗಭೂಮಿ ನಾಟಕ – ''ಜಿನ ಲಾಹೋರ್ ವೇಖ್ಯಾ ವೊ ಜನ್ಮಾ ಇನ ಇದ''ದ ನಾಯಿಕೆಯು, ಮುಪ್ಪಿನ ಕಾಲದಲ್ಲಿ ಇರುತ್ತಿದ್ದ ಮನೆಯನ್ನೂ ನೋಡಿದೆವು. ಆ ನಟಿ ದೇಶ ವಿಭಜನೆಯಾದಾಗ ಭಾರತಕ್ಕೆ ಬರಲು ನಿರಾಕರಿಸಿದ್ದಳು. ಆದರೆ ಅವಳ ಮಕ್ಕಳು ಮಾತ್ರ ಭಾರತಕ್ಕೆ ಬಂದರಂತೆ. ಆ ಕಲಾವಿದೆಯು ಈಗ ಇಲ್ಲ.

**ಪ್ರಗತಿಶೀಲ ಲೇಖಕ ಸಂಘಟನೆಯ ಪುನರ್‌ಸ್ಥಾಪನೆ**

ನಮ್ಮ ಪ್ರವಾಸವು ಮುಗಿಯುವ ಕಡೆಹೊತ್ತಿನಲ್ಲಿ ನನಗೆ ಹಾಗೂ ಅಲಿ ಜಾವೇದರಿಗೆ ಮುದನೀಡುವ ಘಟನೆಯೊಂದು ಜರುಗಿತು. ಲಾಹೋರಿನಲ್ಲಿ ಮತ್ತೊಮ್ಮೆ ''ಅಂಜುಮನೆ ತರಕ್ಕಿ ಪಸಂದ ಮುಸನ್ನಫೀನ್''ದ ಸ್ಥಾಪನೆಯನ್ನು ಮಾಡಲಾಯಿತು. ಈ ಸಂಘಟನೆಯ ಮುಖ್ಯ ಸಂಯೋಜಕರಾಗಿ ಡಾ|| ಮುಬಾರಕ್ ಅಲಿಯವರು ಆಯ್ಕೆ ಆದರು. ಡಾ|| ಮುಬಾರಕ್ ಅಲಿಯವರು ಇತಿಹಾಸದ ವಿದ್ವಾಂಸರು., ಭಾರತದಲ್ಲಿ ಪ್ರಸಿದ್ಧರು, ಹಾಗೂ ಮಾರ್ಕ್ಸ್‌ವಾದಿಯಾಗಿದ್ದಾರೆ. ಈ ಸಭೆಯಲ್ಲಿ ೨೦-೨೫ ಜನ ಯುವ ಲೇಖಕರು, ಕಲಾವಿದರು ಹಾಜರಿದ್ದರು. ಪರಸ್ಪರ ವಿಚಾರ ಮಂಥನ ನಡೆಯಿತು. ತೈಮೂರ್ ರಹಮಾನ್, ಜಾಹೀರ್ ಜೈದಿಯವರು ಲಾಹೋರ್ ವಿಶ್ವವಿದ್ಯಾಲಯದಲ್ಲಿ ಕಲಿಸುತ್ತಿದ್ದಾರೆ. ಇವರ ಪ್ರಭಾವದಲ್ಲಿಯ ಯುವಕರು ಇನ್ನುಳಿದ ಉಪಸ್ಥಿತರಾಗಿದ್ದರು. ಯುವಕ ಕವಿ ಶಾಹರಾಮ ಅಜಹರರ ಕವಿತೆಗಳು ಪ್ರಗತಿಪರ ಪತ್ರಿಕೆ ''ವಸುಧಾ''ದಲ್ಲಿ ಈ ತಿಂಗಳು (ಮಾರ್ಚ್) ಪ್ರಕಟವಾಗಲಿವೆಯಂತೆ. ನೆರೆದವರ ಮಾತುಗಳನ್ನು, ಬರವಣಿಗೆಗಳ ಓದುವಿಕೆಯನ್ನು ಕೇಳಿದೆವು. ಹಿತ ವೆನ್ನಿಸಿತು. ಇವರಲ್ಲಿದ್ದ ಒಬ್ಬ ತರುಣಿಯು ಬಹಳಷ್ಟು ತೀಕ್ಷ್ಣಮತಿ ಎನಿಸಿದಳು. ನಾಲ್ಕೈದು ತಾಸುಗಳವರೆಗೆ ಚರ್ಚೆ ಆದಮೇಲೆ 'ಪ್ರಗತಿಶೀಲ ಲೇಖಕರ ಸಂಘಟನೆ'ಯನ್ನು ಮತ್ತೊಮ್ಮೆ ಬಲವಾಗಿ ಕಟ್ಟಿ ಬೆಳೆಸಬೇಕೆಂದೂ, ಇದರ ಪ್ರಚಾರ ಮಾಡಬೇಕೆಂದೂ, ಸದಸ್ಯತ್ವದ ಕ್ರಮವನ್ನು ವ್ಯವಸ್ಥಿತಗೊಳಿಸಬೇಕೆಂದೂ ನಿರ್ಣಯಿಸಲಾಯಿತು. ಈ ಸಂಘಟನೆಯ ಬುನಾದಿ ಕೆಲಸವನ್ನು ಎರಡು ತಿಂಗಳಲ್ಲಿ ಪೂರ್ತಿಗೊಳಿಸಬೇಕೆಂದೂ ಸಮ್ಮತಿಸಲಾಯಿತು. ಫೈಜ ಅಹಮ್ಮದ ಫೈಜರ ಸ್ಮೃತಿದಿನ ನಡೆಸುವ ಮೂಲಕ ಕಾರ್ಯಕ್ರಮವನ್ನು ಪ್ರಾರಂಭಿಸಬೇಕೆಂದು ಹಾಗೂ ಸಜ್ಜಾದ್ ಜಹೀರರ ಶತಮಾನೋತ್ಸವವನ್ನು ಪಾಕಿಸ್ತಾನದಲ್ಲಿಯೂ ಆಚರಿಸಬೇಕೆಂದು ಠರಾಯಿಸಲಾಯಿತು. ನಾವು ಕುಳಿತಲ್ಲಿಯೇ ಮೋಬಾಯಿಲ್‌ಗಳ ಮೂಲಕ ಕರಾಚಿ, ಇಸ್ಲಾಮಾಬಾದಗಳಲ್ಲಿಯ ಕೆಲವು ಸಾಹಿತ್ಯಕ ಸಂಬಂಧಿಗಳೊಂದಿಗೆ ಮಾತಾಡಿ ಚಟುವಟಿಕೆಗಳನ್ನು ನಿರ್ಧರಿಸಿಕೊಳ್ಳಲಾಯಿತು. ನೆರೆದವರೆಲ್ಲರೂ, ಒಂದು ವರುಷದೊಳಗೆ, ''ಅಂಜುಮನೆ ತರಕ್ಕಿ ಪಸಂದ ಮುಸನ್ನಫೀನ್''ದ ರಾಷ್ಟ್ರೀಯ ಸಮ್ಮೇಲನವನ್ನು ನಡೆಸಬೇಕೆಂದು ಒಪ್ಪಿಕೊಂಡರು. ಇಷ್ಟೆಲ್ಲ ಆಗುವಾಗ ರಾತ್ರಿ ಒಂದು ಗಂಟೆಯಾಗಿತ್ತು. ಡಾ|| ಮುಬಾರಕ ಅಲಿಯವರಿಗೆ ಹೃತ್ಪೂರ್ವಕ ಧನ್ಯವಾದಗಳನ್ನು ಹೇಳಿ ನಾವು ತಂಗಿದ್ದ ಹೊಟೇಲಿಗೆ ಮರಳಿದೆವು. ಮತ್ತೆ ನಾಳೆ ಸ್ವದೇಶದತ್ತ ನಾವು.

– ಕೃಪೆ : ಮುಕ್ತಿ ಸಂಘರ್ಷ

ಕನ್ನಡಕ್ಕೆ : ಪ್ರಕಾಶ ಹಿಟ್ಟಿನಹಳ್ಳಿ
ಹಿಟ್ಟಿನಹಳ್ಳಿ ಅಂಚೆ, ಬಿಜಾಪುರ – ೫೮೬೧೨೨.

# ವಚನಗಳಿಗೆ ಹೊಸ ದಿಕ್ಸೂಚಿ

**ಮಹೇಶ ತಿಪ್ಪಶೆಟ್ಟಿ**




**ಲೇಖಕರು : ಡಾ|| ಟಿ. ಆರ್. ಚಂದ್ರಶೇಖರ**
**ಪುಟ : ೧೪೬ ಬೆಲೆ : ರೂ. ೧೦೦**
**ಸಿ. ವಿ. ಜಿ. ಪ್ರಕಾಶನ, ವೈಯಾಲಿಕಾವಲ್**
**ಬೆಂಗಳೂರು - ೫೬೦ ೦೦೩**

**ಕ**ರ್ನಾಟಕದ ಹನ್ನೆರಡನೇ ಶತಮಾನದ ಬಗ್ಗೆ ವಿಪುಲ ಹಾಗೂ ವಿಫಲ ಸಾಹಿತ್ಯ ಅಪಾರವಾಗಿ ಸೃಷ್ಟಿಯಾಗಿದೆ. ವೀರಶೈವ ವರ್ಸಸ್ ಲಿಂಗಾಯತದ ಗೊಂದಲ, ಸಿದ್ಧಾಂತ ಶಿಖಾಮಣಿಯಂತಹ ಪುಸ್ತಕಗಳ ಬಗ್ಗೆ ನ್ಯಾಯಾಲಯದ ಮೊರೆ ಹೋಗುವ ಯತ್ನಗಳು ಭಕ್ತಾದಿಗಳಲ್ಲಿದ್ದಾಗಲೂ ವಚನ ಸಾಹಿತ್ಯದ ವಿಶ್ಲೇಷಣೆ ತನ್ನದೇ ಆದ ತಣ್ಣನೆಯ ಮಾರ್ಗದಲ್ಲಿ ಮುಂದುವರಿಯುವ ಗುಣ ಹೊಂದಿದೆ. ಇದನ್ನು 'ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು' ಎಂಬ ಪುಸ್ತಕ ಸಾಕ್ಷೀಕರಿಸುತ್ತದೆ. ಇದರ ಲೇಖಕರಾದ ಬಹುರೂಪಿ ವಿದ್ವತ್ ಹೊಂದಿದ ಶ್ರೀ ಟಿ. ಆರ್. ಚಂದ್ರಶೇಖರ ವಿಶಿಷ್ಟಶೈಲಿಯ ಬರಹಗಾರರಲ್ಲಿ ಒಬ್ಬರು.

ವಿವಿಧ ಸಂದರ್ಭಕ್ಕಾಗಿ ಲೇಖಕರು ಬರೆದ ಪ್ರಬಂಧಗಳ ಸಂಕಲನ 'ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು' ಎಂಬ ಪುಸ್ತಕ. ಕುವೆಂಪು ಶತಮಾನೋತ್ಸವ ಸಂದರ್ಭದಲ್ಲಿ ಸಿ.ವಿ.ಜಿ. ಪ್ರಕಾಶನ ಈ ಪುಸ್ತಕ ಪ್ರಕಟಿಸಿದೆ. ಇಲ್ಲಿ ವಚನ ಸಾಹಿತ್ಯ ಎಲ್ಲ ಲೇಖನಗಳ ಕೇಂದ್ರಬಿಂದು. ವಿಷಯಗಳ ಪುನರಾವರ್ತನೆ ಆಗಬಹುದೆಂಬ ಆತಂಕ ಲೇಖಕರನ್ನು ಕಾಡಿದೆ. ವಚನಗಳಿಗೆ ಇದ್ದ ಸಾಹಿತ್ಯದ ಕವಚವನ್ನು ಕಳಚಿ ಸಮಾಜ ಶಾಸ್ತ್ರೀಯ, ಆರ್ಥಿಕ, ರಾಜಕೀಯ ಆಯಾಮಗಳ ದೃಷ್ಟಿಯಿಂದ ವಚನಗಳು ಇಲ್ಲಿ ವಿಶ್ಲೇಷಣೆಗೆ ಒಳಪಟ್ಟಿವೆ. ಈ ಪುಸ್ತಕದಲ್ಲಿ ಒಟ್ಟು ಎಂಟು ಪ್ರಬಂಧಗಳಿವೆ. ಹೆಚ್ಚು ಬರಹಗಳು ಕೇಂದ್ರೀಕೃತ ವಾಗಿರುವುದು ಜಾತಿ ವಿನಾಶ, ಲಿಂಗ ಸಂಬಂಧಿ ವಿಷಯಗಳ ಬಗ್ಗೆ.

ವಚನ ಸಂಸ್ಕೃತಿಯ ಪ್ರಾಥಮಿಕ ಪರಿಚಯವೂ ಇಲ್ಲದವರು ಕರ್ನಾಟಕ ಸಂಸ್ಕೃತಿಯನ್ನು ಅಧ್ಯಯನ ಮಾಡುವುದು ಸಾಧ್ಯವಿಲ್ಲ. ವಚನಗಳಿಗೆ ಸಮಾಜೀಕರಣ ಗುಣ ಇದೆ. ಆದ್ದರಿಂದ ಎಲ್ಲ ಚಳುವಳಿಗಾರರು ಇದನ್ನು ತಬ್ಬಿಕೊಂಡಿದ್ದಾರೆ. ದೇವರನ್ನು ಜನರಾಡುವ ಭಾಷೆಯಲ್ಲಿ ಮಾತನಾಡಿಸಿದವರು ವಚನಕಾರರು. ಕಾಲಾಂತರದಲ್ಲಿ ವೈದಿಕದ ಚಾಳೀಸಿನಿಂದ ವಚನ ಸಂಸ್ಕೃತಿಯನ್ನು ನೋಡುವ ಪರಂಪರೆ ಬೆಳೆಯಿತು. ಅಕ್ಷರ ಸಂಸ್ಕೃತಿಯ ಗುತ್ತಿಗೆ ಪಡೆದ ವರಿಂದ ಮುಕ್ತಿ ಪಡೆಯಲು ಶೂದ್ರರು ಬ್ರಾಹ್ಮಣೀಕರಣದ ತಂತ್ರ ಬಳಸಿರಬಹುದು. ವಚನಗಳಿಗೆ ಹಾಗೂ ಶರಣರ ಮುಕ್ತ ವಿಚಾರಧಾರೆಗಳಿಗೆ ತತ್ವಗಳ ಕಬ್ಬಿಣದ ಕಟ್ಟು ಹಾಕುವ ಯತ್ನ ಜರುಗಿತು. ಲಿಂಗಾಯತರು ತಮ್ಮ ಸಾಮಾಜಿಕ ಅಂತಸ್ತು ಹೆಚ್ಚಿಸಿಕೊಳ್ಳಲು ಸಂಸ್ಕೃತ ಪಾಠಶಾಲೆ ತೆರೆದಾಗಲೇ ವಚನಗಳ ಆಂತರಿಕ ಗುಣ ಮಸುಕಾಯಿತು. ಬಹುಶಃ ವೀರಶೈವದ ಗೆರೆ ದಾಟಿ ಲಿಂಗಾಯತ ರೂಪ ಗೊಳ್ಳುತ್ತಿರುವ ಇಂದಿನ ವರ್ತಮಾನದಲ್ಲಿ ವಚನಗಳ ಒಳಸುಳಿಯನ್ನು ಅರ್ಥಮಾಡಿಕೊಳ್ಳಲು ಈ ಪುಸ್ತಕ ಸಹಕಾರಿಯಾಗಿದೆ.

ವಚನ ಸಂಸ್ಕೃತಿಗೆ ಅನ್ಯಾಯವಾದುದು 'ಮಂಡೂಕ ವಾದಿ'ಗಳಾದ ವೀರಶೈವ ಅನುಯಾಯಿಗಳಿಂದ. ವಚನ ಗಳನ್ನು 'ಪಾರಮಾರ್ಥಿಕ' ನೆಲೆಯಿಂದ ನೋಡಿದವರಿಗೆ ಇಂದಿನ ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಅವುಗಳು ಅರ್ಥರಹಿತ ಆಲಾಪಗಳಾಗಿ ಕಾಣಬಹುದು. ಆದರೆ ವಚನಗಳ ಬೇರು ಇರುವುದು ಪಾರಮಾರ್ಥ ಚಿಂತನೆಯಲ್ಲಿ ಅಲ್ಲ. ಲೇಖಕರು ಹೇಳುವಂತೆ ವಚನಗಳ ಮೂಲ ಸೆಲೆ 'ಪದಾರ್ಥವಾದಿ' ಚಿಂತನೆಯಲ್ಲಿದೆ. ವಚನಗಳು ಪಾರಮಾರ್ಥಕ್ಕಿಂತ ಪ್ರಾಪಂಚಿಕತೆಯನ್ನು ಬೋಧಿಸಿವೆ.

ಹಿಂದೂ ಸಮಾಜದಲ್ಲಿ ಮೇಲ್ಮುಖ ಚಲನೆಗೆ ಅವಕಾಶವಿಲ್ಲ. ಬಹುಶಃ ಶೂದ್ರರ ಕಾಲಿಗೆ ಕಟ್ಟಿದ ಕರ್ಮ ಸಿದ್ಧಾಂತದ ಕಬ್ಬಿಣದ ಗುಂಡು ಇದಕ್ಕೆ ಕಾರಣ ವಿರಬಹುದು. ಮಾನವ ಪ್ರಪಂಚದಲ್ಲಿ ಸಾವು ಇಂದಿಗೂ ನಿಗೂಢವಾಗಿದೆ. ಸಾಯುವ ಮುನ್ನ ಸಾಧನೆ ಮಾಡಬೇಕು. ಮಾನವ 'ದೇವಮಾನವನಾಗಬೇಕು'. ವಚನಕಾರರು ಕರ್ಮಸಿದ್ಧಾಂತ ನಿರಾಕರಿಸಿ 'ನಿಮ್ಮನ್ನು ಪೂಜಿಸಿದ ಫಲ ಕೈಮೇಲೆ' ಎಂದು ಹೇಳುತ್ತ ಪ್ರತಿಫಲದಿಂದ ಕೂಡಿದ ಶ್ರಮದ ಬಗ್ಗೆ ಹೇಳಿದ್ದಾರೆ. ವಚನ ಸಂಸ್ಕೃತಿ ಬೂಟಾಟಿಕೆಯ ಪರಂಪರೆಯನ್ನು ತೊರೆದು ಸ್ವಾವಲಂಬಿ, ಸಮೃದ್ಧ ಸಮಾಜದ ಕನಸು ಕಂಡಿದೆ. ತನ್ನಾಶ್ರಯದ ರತಿಸುಖ, ತಾನುಂಬ ಊಟವನ್ನು ಬೇರೊಬ್ಬರು ಮಾಡಬಹುದೇ? ಎಂದು ಪ್ರಶ್ನಿಸುತ್ತ ಪರಾವಲಂಬಿ ಜೀವನವನ್ನು ಶರಣರು ನಿರಾಕರಿಸಿದ್ದಾರೆ. ಕೈಲಾಸ ಕೇವಲ ಭ್ರಮೆಯಾಗಿ ಶರಣರಿಗೆ ಕಂಡಿದೆ. ವಚನ ಸಂಸ್ಕೃತಿ 'ದೇವಭಾಷೆ', 'ಆಲಯ ಸಂಸ್ಕೃತಿ' ಹಾಗೂ 'ಧಾರ್ಮಿಕ ದಲ್ಲಾಳಿ'ಗಳನ್ನು ತಿರಸ್ಕರಿಸಿದ ಪರಿಯನ್ನು ಲೇಖಕರು ಮನಮುಟ್ಟುವಂತೆ 'ವಚನಗಳ ಪದಾರ್ಥವಾದ' ಲೇಖನದಲ್ಲಿ ವರ್ಣಿಸಿದ್ದಾರೆ. ವಚನಗಳು 'ಹುಟ್ಟಿದ' ಸಂಸ್ಕೃತಿಯ ಬಗ್ಗೆ ಅಲ್ಲ; ಅದು ಕಟ್ಟಿದ ಸಂಸ್ಕೃತಿಯ ಬಗ್ಗೆ ಎಂದು ವಚನಕಾರರ ಅಂತರ್ಯವನ್ನು ಲೇಖಕರು ಬಿಚ್ಚಿಟ್ಟಿದ್ದಾರೆ.

'ವಚನ ಸಂಸ್ಕೃತಿಯಲ್ಲಿ ಮಹಿಳೆ' ಎಂಬ ಲೇಖನದಲ್ಲಿ ಟಿ.ಆರ್.ಸಿ. ಅವರು ಇಲ್ಲಿಯವರೆಗಿನ 'ಗಾಣದ ಎತ್ತಿನ' ವಿವರಣೆಗಳನ್ನು ದಾಟಿ ನಿಲ್ಲುತ್ತಾರೆ. ಮೈತ್ರಿ, ಗಾರ್ಗಿ ಮುಂತಾದವರ ವರ್ಣನೆ ಮಾಡಿ ಸನಾತನ ಸಂಸ್ಕೃತಿ ತನ್ನ ಹುಸಿ ಸಾಚಾತನವನ್ನು ಸಾಬೀತುಮಾಡಿಕೊಂಡ ಪರಿಯ ಒಳಸುಳಿಯನ್ನು ಲೇಖಕರು ಇಲ್ಲಿ ಭಿನ್ನ ರೀತಿಯಲ್ಲಿ ವಿವರಿಸಿದ್ದಾರೆ. ಇದು ಸ್ತ್ರೀವಾದಿ ನೆಲೆಯ ವಿಶಿಷ್ಟ ಲೇಖನ ವಾಗಿದೆ. ಸನಾತನ ಸಂಸ್ಕೃತಿಯಲ್ಲಿ ಸಂತಾನ ಹಾಗೂ ವಂಶದ ಕುರುಹು ಬೆಳೆಯುವುದರ ಬಗ್ಗೆ ಇರುವ ಭ್ರಮೆಗಳನ್ನು ಮೀರಿ ಶರಣೆಯರು ನಿಲ್ಲುತ್ತಾರೆ ಎಂದು ಲೇಖಕರು ಹೇಳುತ್ತಾ ಇದೊಂದು ವಿಲಕ್ಷಣ ಸಂಗತಿ ಎಂದು ಅಭಿಪ್ರಾಯಪಟ್ಟಿದ್ದಾರೆ. ಸನಾತನ ಪರಂಪರೆಯಲ್ಲಿ ಮಹಿಳೆ ಮೈಲಿಗೆಯ ಸಂಕೇತ. ಬಹುಶಃ ಶಿಕ್ಷಣ, ಆರ್ಥಿಕ ಪರಾವಲಂಬಿತನ, ಸ್ವಾತಂತ್ರ್ಯದ ಕೊರತೆ ಇದಕ್ಕೆ ಕಾರಣ ವಾಗಿರಬಹುದು. ಹನ್ನೆರಡನೆ ಶತಮಾನದಲ್ಲಿ ಈ ಉಕ್ಕಿನ ಕಟ್ಟನ್ನು ಮಹಿಳೆ ಮುರಿದಳು. ಮಹಿಳೆ ಕುಟುಂಬದ ಆರ್ಥಿಕ ಚಟುವಟಿಕೆಯಲ್ಲಿ ಪಾಲುದಾರಳಾದಳು. ವಚನಕಾರ್ತಿಯರ ಬಗ್ಗೆ ಅಂಕೆಸಂಖ್ಯೆಗಳ ನಿರೂಪಣೆ ಈ ಲೇಖನದಲ್ಲಿ ಹೇರಳವಾಗಿವೆ. ಕಾಯಕದಲ್ಲಿ ತಪ್ಪಿದಾಗ ಆಯ್ದಕ್ಕಿ ಲಕ್ಕಮ್ಮ, ಕಾಳವ್ವೆ ಮುಂತಾದವರು ಪುರುಷರನ್ನು ಎಚ್ಚರಿಸಿದ್ದಾರೆ. ಪುರುಷ ಸಾಹಿತ್ಯವನ್ನು ಮೀರುವ ಗುಣ ವಚನಕಾರ್ತಿಯರಲ್ಲಿದೆ. ಜನನ ಹಾಗೂ ರಜದ ಸೂತಕದಿಂದ ಮಹಿಳೆ ಇಲ್ಲಿ ಮುಕ್ತವಾಗಿದ್ದಾಳೆ. 'ಎಲ್ಲ ಗಂಡಂದಿರು ಮೇಲೆ, ಎನ್ನ ಗಂಡ ಕೆಳಗೆ, ನಾ ಮೇಲೆ' ಎಂಬ ಕದಿರೆ ರಮ್ಮವ್ವೆಯ ವಚನ ತಲೆಚಿಟ್ಟು ಹಿಡಿಯುವಷ್ಟು ಪುನರಾವರ್ತನೆಯಾಗಿದೆ. ವಚನಕಾರ್ತಿಯರು ಗಂಡಿನ ಶೀಲದ ಬಗ್ಗೆಯೂ ಮಾತನಾಡುವ ಧೈರ್ಯ ಮಾಡಿದ್ದಾರೆ. ಹೆಣ್ಣಿಗೆ ಹಾಕಿದ ಕೃತ್ರಿಮ ಶೀಲದ ಗೋಡೆಯನ್ನು ಕೆಡವುವ ಯತ್ನ ಇಲ್ಲಿದೆ. ಪಾತಿವ್ರತ್ಯಕ್ಕಿಂತ ಆತ್ಮಸಾಕ್ಷಾತ್ಕಾರದ ಅರಿವಿನ ಶೀಲ ಇಲ್ಲಿ ಮುಖ್ಯವಾಗಿದೆ. ಲೇಖಕರು ಸ್ತ್ರೀವಾದಿ ನೆಲೆಗೆ ಹೊಸ ಮಾರ್ಗವನ್ನು ಇಲ್ಲಿ ನೀಡಿದ್ದಾರೆ.

ಜಾತಿ ವಿನಾಶದ ಬಗ್ಗೆ ವೀರಶೈವ ಸಮಾಜ ಎಷ್ಟೇ ಹೇಳಿದರೂ ಭಕ್ತ ಭವಿ ಎಂಬ ಕಂಪಾರ್ಟಮೆಂಟ್ ಇಲ್ಲಿ ರೂಪಗೊಂಡಿತು. ಆದರೂ ವಚನಕಾರರು ಹುಟ್ಟಿ ನಿಂದಲೇ ಪ್ರಾಪ್ತವಾಗುವ 'ಗುಣಕರ್ಮ' ಸಿದ್ಧಾಂತಕ್ಕೆ ಬಾಂಬ್ ಇಟ್ಟರು. ಸಾಧನೆಯ ಸೋಪಾನವನ್ನು ವ್ಯಕ್ತಿಗೆ ನೀಡಿದರು. ಇದರಿಂದ ಲಿಂಗಾಯತ ಒಂದು 'ಅರಾಜಕ' ಸ್ಥಿತಿಯನ್ನು ಸೃಷ್ಟಿಮಾಡಿತು ಎಂಬ ಭ್ರಮೆ ಲೇಖಕರನ್ನು ಕಾಡಿದಂತಿದೆ. ಅನುಲೋಮಕ್ಕೆ ಅವಕಾಶ ನೀಡಿದ

೫೮ನೇ ಪುಟಕ್ಕೆ

# ಸಂಜೆಯಾಗುವುದೆಂದಿಗೆ ?

೧

ಹಗಲ ಹೊಲದ ತೆನೆಗಳು
ಹಕ್ಕಿ ಕೊರಳಿಗೆ ತೊನೆಯುತ್ತ
ನಲಿವ ಪುಟ್ಟ ಬಾಲಕಿ
ತೊಟ್ಟ ಉಸಿರುಸಿರು ಬಿಸಿ
ಕಾಮಿ ಬೆಕ್ಕಿನ ನವಿರು ಸ್ಪರ್ಶ
ಸಾಗರ ಬಿಟ್ಟ ನಿಲ್ಲುತ್ತದೆ ಮೆಲ್ಲಗೆ
ಚಲಿಸುತ್ತದೆ ನಯವಾಗಿ ಬೆರಳು ಹಸ್ತ ರಟ್ಟೆ
ಆಳ ತಳದ ಆಗರ, ಸೋಂಬೇರಿ ಬೇಸರಕ್ಕೆ ಗರ ಬಡಿದು
ಮಿದುಗೊಂಡು ಆಸರೆಯ ಹಾಡು ಹರಿಯುತ್ತದೆ
ಕುಲು ಕುಲುಕಿ ವಸಂತಕ್ಕೆ ಒದ್ದೆಗೊಂಡ ಮರ
ಹುಲ್ಲು ಬೆಟ್ಟ ಧರೆ ಹಳ್ಳ
ನಿಸ್ಸೂರ ನೀರವ ನೀಲ ಜಲ ಜಲ
ಕಣ್ಣೋಡಿದಷ್ಟು ತೆರೆ ಧಾವಿಸುತ್ತಿವೆ
ಸಂಜೆ ಸುದ್ದಿ ಹೊತ್ತು ; ಕಾತರ
ಸಂಜೆಯಾಗುವುದೆಂದಿಗೆ ?

೨

ಆಗ ಸಂಜೆ ಏನೆಲ್ಲ
ಮನದ ಕನ್ನಡಿಯಲ್ಲಿ ಮೂಡಿಸುತ್ತದೆ ಚಿತ್ರ
ಕಾರ್ಮಿಕ ಅಲೆಮಾರಿ
ಹಸಿಯಲಾರದ ಹೊಟ್ಟೆ
ದ್ವಾರಗಳ ಮೌನ
ಬಿತ್ತರಿಸುತ್ತದೆ ಬಿಡುಗಡೆಯ ಕಪ್ಪು ಹಾಡ
ಪ್ರೇಮ ಕಾಮದ ಸಖ್ಯೆ
ಹಗಲಿಗೆ ದಕ್ಕದ
ಕಣ್ಣು ನೋಡಲಾರದ
ನಾನು ಅರಿಯಲಾರದ
ಕಾಲ ಮೆಟ್ಟಲಾರದ
ಅವಳ ತೆಕ್ಕೆ
ಸಂಜೆಯಾಗುವುದೆಂದಿಗೆ ?

೩

ಸಮುದ್ರ ತಡಿಯ
ಮರಳು ಮರಳಾಗಿಸುತ್ತದೆ
ನನ್ನ ಮಿಡಿಯುವ ತಂತುಗಳೆಲ್ಲ
ಛಿದ್ರಗೊಂಡ ಚೂರು ಚೂರು ಗಾಜು
ಮುಗಿಲ ಮಂದಿರದ ಸೈನಿಕರ ಈಟಿ ಭರ್ಜಿ
ಮೈಯೆಲ್ಲ ಮುತ್ತಿಕ್ಕಿ ಮೃದುವಾಗಿ
ರಕ್ತ ತೊಟ್ಟಿಕ್ಕಿ ಹೆಪ್ಪಿಟ್ಟ ಕಪ್ಪು
ಕವಿದ ಕಲ್ಬುರ್ಗಿ ಬೀದಿ ಬೀದಿ ಧೂಳು
ಕೊಡವಿ ದಿಟ್ಟಿಸಿದಾಗಲೂ
ನಚ್ಚಗೆ ಉರಿಯುವ ಸೂರ್ಯ
ಕುಕ್ಕುತ್ತಿದ್ದಾನೆ ಕಪ್ಪು ತಲೆ
ನೋವು ಕೇಳಿತು ಭವಿಸಿ
ಸಂಜೆಯಾಗುವುದೆಂದಿಗೆ ?

೪

ಸಂಜೆ
ಪೂರ್ಣ ಬದುಕು
ಹಕ್ಕಿ ಪಕ್ಷಿಗಳು ಗುಡ್ಡ ತೊರೆ ಧರೆ ಸಾಗರ
ಕುಶಲದ ಹಾಡು ಗುನುಗುತ್ತ
ಗೂಡಿನ ಜೀವಗಳಿಗೆ ಗುಟುಕಿಡುವ ಹೊತ್ತು
ದಿನದ ಕೊನೆ ಕಾಫಿ ಹೀರುತ್ತ ರೈತಾಪಿ
ಕಾರ್ಮಿಕರು ಮತ್ತು ಇತರ ಶ್ರಮಿಕರು
ಈ ದಿನ ಸುರಿಸಿದ ಬೆವರ ಕುರಿತು
ಸಂತೃಪ್ತಿಯ ನೆನಪ ಹೊತ್ತು
ಬೀದಿ ಬೀದಿಯಲಿ ನಿಂತ ದೀಪದ ಕಂಬ
ಇನ್ನು ಬೆಳಗುವ ಸಮಯ
ಪ್ರೇಮಿಗಳು ಭಿಕ್ಷುಕರು ದರ್ವೇಸಿಗಳು
ಮನುಷ್ಯರು ಇಲ್ಲದವರು ಇರುವವರ
ಕನಸಿದ ತೊಟ್ಟಿಲು ತೂಗುವ ಗಳಿಗೆ
ಜಾತ್ರೆಯಲಿ ಕಳೆದ ಬಾಲಕ
ಪ್ರಶ್ನಿಸಿದ್ದಾನೆ ಪೊಲೀಸರನ್ನ
ಸಂಜೆಯಾಗುವುದೆಂದಿಗೆ ?

ನಾಗಣ್ಣ ಕಿಲಾರಿ
ನಾಗವರ್ಮ ಕಟ್ಟಡ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

# ಮಂಗಳದ ದರ್ಬಾರು

ಡಾ॥ ಬಿ. ಎಸ್. ಶೈಲಜಾ

**ಕ**ಳೆದ ತಿಂಗಳ ಕೊನೆಗೆ ಭೂಮಿಯನ್ನು ಸಮೀಪಿಸಿದ ಮಂಗಳ ಗರಿಷ್ಠ ಪ್ರಕಾಶ ಪಡೆಯಿತಷ್ಟೇ. ಈಗಲೂ ರಾತ್ರಿ ಇಡೀ ಅದರದ್ದೇ ದರ್ಬಾರು. ರಾತ್ರಿ ಎಂಟರ ಹೊತ್ತಿಗೆ ಪೂರ್ವದಲ್ಲಿ ತೆಳ್ಳನೆಯ ಮೋಡಗಳ ಮುಸುಕಿನಲ್ಲೂ ಸ್ಪಷ್ಟವಾಗಿ ಕಾಣುವ ಈ ಪ್ರಕಾಶಮಾನ ಚುಕ್ಕೆಗೆ ಪ್ರತಿಸ್ಪರ್ಧಿ ಶುಕ್ರ ಮಾತ್ರ. ಶುಕ್ರ ಪಶ್ಚಿಮದಂಚಿಗೆ ಸರಿಯುತ್ತಿದ್ದಂತೆ ಮಂಗಳ ಮೇಲೇರುವುದು. ಅದರ ಆಸುಪಾಸಿನಲ್ಲಿ ಪ್ರಕಾಶಮಾನವಾದ ನಕ್ಷತ್ರಗಳು ಹೆಚ್ಚಿಲ್ಲ. ಪೆಗಸಸ್ (ನಕುಲ) ಚೌಕವನ್ನು ಗುರುತಿಸಲು ಇದರ ಸಹಾಯ ಪಡೆಯಬಹುದು.

ವಾಸ್ತವವಾಗಿ ಮಂಗಳ-ಭೂಮಿ ಅಂತರ ಕನಿಷ್ಠವಾಗಿದ್ದು ಅಕ್ಟೋಬರ್ ೨೯ರಂದೇ ಆದರೂ, ವಿಯುತಿ ಅಂದರೆ ಸೂರ್ಯನಿಗೆ ನೇರವಾಗಿ ಎದುರಾಗುವುದು ನವೆಂಬರ್ ೭ರಂದು. ಆ ದಿನ ಸೂರ್ಯಾಸ್ತವಾಗುತ್ತಿದ್ದ ಹಾಗೇ ಮಂಗಳ ಉದಯಿಸುತ್ತದೆ. ಆ ಬಳಿಕ ಕ್ರಮೇಣ ಬೇಗ ಬೇಗ ಉದಯಿಸಿ, ತಿಂಗಳ ಕೊನೆಗೆ ಸೂರ್ಯಾಸ್ತಕ್ಕೆ ಮೊದಲೇ ಉದಯಿಸಿಬಿಟ್ಟಿರುತ್ತದೆ. ಈ ಒಂದು ತಿಂಗಳಲ್ಲಿ ಅದರ ಪ್ರಕಾಶದಲ್ಲಿ ತುಸುವೇ ಬದಲಾವಣೆ ಕಾಣಬಹುದು. ಹಾಗಾಗಿ ತಿಂಗಳಲ್ಲಿ ಆಕಾಶ ಶುಭ್ರವಾಗಿರುವ ಅವಕಾಶ ದೊರಕಿದಾಗಲೆಲ್ಲಾ ಮಂಗಳದ ದರ್ಶನ ಪಡೆಯಬಹುದು. ಹವ್ಯಾಸಿಗಳಿಗೆ, ದೂರದರ್ಶಕ ಇರುವವರಿಗೆ ಇದು ಒಳ್ಳೆಯ ಅವಕಾಶ.




ಸಂಜೆಯಲ್ಲಿ ಮಂಗಳ, ಶುಕ್ರ ಅಲ್ಲದೆ ಬುಧ ಗ್ರಹವನ್ನು ನೋಡುವ ಅವಕಾಶ ಇದೆ. ತಿಂಗಳ ಮೊದಲ ಪೂರ್ವಾರ್ಧದಲ್ಲಿ ಬುಧ ಪಶ್ಚಿಮದ ಅಂಚಿನಲ್ಲಿ ಕಾಣುವುದು. ಮೂರರಂದು ಬಾಲಚಂದ್ರ, ಬುಧ ಇವುಗಳ ಜೊತೆಗೆ ಜ್ಯೇಷ್ಠಾ ಎಂಬ ಕೆಂಪು ನಕ್ಷತ್ರವೂ ಸೇರಿ ಛಾಯಾಗ್ರಹಣಕ್ಕೆ ಅಥವಾ ಬರಿಗಣ್ಣಿನ ನೋಟಕ್ಕೂ ಒಳ್ಳೆಯ ಅವಕಾಶ ಒದಗಿಸುವುದು. ಚಂದ್ರ ಇನ್ನೆರಡು ದಿನಗಳ ನಂತರ ಶುಕ್ರದ ಜೊತೆಗೂಡುವುದು. ೧೫ರಂದು ಮಂಗಳದ ಜೊತೆಗೂಡುವುದು.

ಸಂಜೆಯ ಆಕಾಶದಲ್ಲಿ ಕಾಣುವ ಇತರ ಪ್ರಕಾಶಮಾನ ಪುಂಜಗಳನ್ನು ಗುರುತಿಸಿ. ಶುಕ್ರ ಸಾಗುತ್ತಿರುವುದು ಧನುರಾಶಿಯಲ್ಲಿ, ಅದರ ಆಸುಪಾಸಿನಲ್ಲಿ ಆಕಾಶಗಂಗೆಯ ಹರಿವು. ನೆಬ್ಯುಲಗಳು, ಗುಚ್ಛಗಳು ಇವೆ. ದೂರದರ್ಶಕದ ಮೂಲಕ ಅವನ್ನು ಕಾಣಬಹುದು. ಅಲ್ಲಿಂದ ಉತ್ತರಕ್ಕೆ ಆಕಾಶಗಂಗೆಯ ಜಾಡಿನಲ್ಲೇ ಮುಂದುವರೆದರೆ, ಅಕ್ವಿಲಾ (ಗರುಡ) ಪುಂಜದ ಮೂರು ಪ್ರಕಾಶಮಾನ ನಕ್ಷತ್ರಗಳು ಕಾಣುತ್ತವೆ. ಇವುಗಳಲ್ಲಿ ಅತಿ ಪ್ರಕಾಶಮಾನವಾದದ್ದೇ ಆಲ್ಟೇರ್ ಅಥವಾ ಶ್ರವಣ. ಇನ್ನೂ ಮುಂದಕ್ಕೆ ಕಾಣುವ ಪುಂಜಗಳು ಲೈರಾ (ವೀಣಾ) ಮತ್ತು ಸಿಗ್ನಸ್ (ರಾಜಹಂಸ). ಮುಂದೆ ಆಕಾಶಗಂಗೆ ಈಶಾನ್ಯಕ್ಕೆ ತಿರುಗುತ್ತದೆ. ಅಲ್ಲಿರುವ ಪ್ರಕಾಶಮಾನ ಪುಂಜ ಕಾಸಿಯೋಪಿಯಾ (ಕುಂತಿ). ಇದಕ್ಕೂ ಧ್ರುವನಕ್ಷತ್ರಕ್ಕೂ ನಡುವಿನದೇ ಸಿಫಿಯುಸ್ (ಯುಧಿಷ್ಠಿರ).

ಪೂರ್ವದಲ್ಲಿ ಮಂಗಳದ ಸನಿಹದಲ್ಲಿರುವ ಪುಟ್ಟ ತ್ರಿಕೋಣವೇ ಮೇಷ. ಪೆಗಸಸ್ ಚೌಕದ ಆಚೀಚೆ ಇರುವ ಎರಡು ಪಂಚಕೋಣಾಕೃತಿಗಳೇ ಮೀನರಾಶಿಯ ಮೀನುಗಳು. ಮಕರ, ಕುಂಭ ಇವುಗಳಲ್ಲಿ ಪ್ರಕಾಶಮಾನವಾದ ನಕ್ಷತ್ರಗಳಿಲ್ಲ. ದಕ್ಷಿಣದಲ್ಲಿ ಗ್ರುಸ್ (ಬಕ) ಪುಂಜದ ಎರಡು ನಕ್ಷತ್ರಗಳು ಸ್ಫುಟವಾಗಿ ಕಾಣುವುವು.

ಇನ್ನೊಂದು ಗ್ರಹ ಶನಿ ಮಧ್ಯರಾತ್ರಿಗೆ ಉದಯಿಸುತ್ತದೆ. ಇನ್ನು ಮೂರು ತಿಂಗಳಲ್ಲಿ ಭೂಮಿ ಇದನ್ನು ಹಿಂದೆ ಹಾಕಿ ಓಡಲಿದೆ. ಇದರ ಸೂಚನೆಯಂತೆ ಅದು ೨೨ರಂದು ತಟಸ್ಥವಾಗಿರುವಂತೆ ಕಾಣುವುದು. ಆಮೇಲೆ ಹಿಮ್ಮುಖ ಚಲನೆ ಆರಂಭ. ೨೧ರಂದು ಚಂದ್ರನ ಪಕ್ಕದಲ್ಲಿ ಈ ಗ್ರಹವನ್ನು ಬೆಳಗಿನ ಜಾವ ಸುಮಾರು ನೆತ್ತಿಯ ಮೇಲೆ ಕಾಣಬಹುದು.

ಪ ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಗುರು ಈ ತಿಂಗಳೂ ನೋಡಲು ಸಿಗುವುದಿಲ್ಲ. ತಿಂಗಳ ಕೊನೆಗೆ ಸೂರ್ಯೋದಯಕ್ಕೆ ಮೊದಲು ಪೂರ್ವದ ಹೊಂಬಣ್ಣದಲ್ಲಿ ಕಾಣಬಹುದಷ್ಟೇ.

ನವೆಂಬರ್ ಎಂದರೆ ಉಲ್ಕಾವೃಷ್ಟಿ ಎಂದೇ ಪ್ರಸಿದ್ಧಿ. ಇದಕ್ಕೆ ಕಾರಣಕರ್ತೃವಾದ ಲಿಯೋನಿಡ್ಸ್ ಉಲ್ಕೆಗಳು ಪ್ರತಿವರ್ಷದಂತೆ ೧೭ರಂದು ಗರಿಷ್ಠ ಸಂಖ್ಯೆಯಲ್ಲಿ ಕಾಣುತ್ತವೆ. ತಿಂಗಳ ಮೊದಲ ವಾರದಲ್ಲಿ ಇನ್ನೊಂದು ಉಲ್ಕಾವೃಷ್ಟಿಯೂ ಇದೆ. ಟಾರಿಡ್ಸ್ ಎಂಬ ಹೆಸರಿನವು. ವೃಷಭರಾಶಿಯ ದಿಕ್ಕಿನಿಂದ ಹೊರಟಂತೆ ಕಾಣುತ್ತವೆ. ಅಮಾವಾಸ್ಯೆಯ ಆಸುಪಾಸಿನಲ್ಲಿ ಚಂದ್ರನ ಬೆಳಕು ಕ್ಷೀಣವಾದದ್ದರಿಂದ ಈ ಉಲ್ಕೆಗಳನ್ನು ಕಾಣುವ ಸಾಧ್ಯತೆ ಇದೆ. ಇದರ ರೇಡಿಯಂಟ್ ಅಂದರೆ ಕೇಂದ್ರಬಿಂದು ಮಂಗಳದ ದಿಕ್ಕಿನಲ್ಲಿರುವುದರಿಂದ ಉಲ್ಕೆಗಳೆಲ್ಲಾ ಮಂಗಳದಿಂದ ಹೊರಟಿವೆಯೇನೋ ಎಂಬ ಭ್ರಮೆ ಉಂಟಾಗುತ್ತದೆ. ಲಿಯೋನಿಡ್ಸ್ ವೃಷ್ಟಿಯ ವೀಕ್ಷಣೆಗೆ ಚಂದ್ರನ ಬೆಳಕೇ ತೊಡಕಾಗುವುದು.

ಮಂಗಳಗ್ರಹವನ್ನು ತಿಂಗಳ ಆರಂಭದಿಂದಲೂ ದುರ್ಬೀನಿನಲ್ಲಿ ಗುರುತಿಸಿ, ಅದರ ಆಸುಪಾಸಿನ ಚುಕ್ಕೆಗಳನ್ನು ಗುರುತುಹಾಕಿಕೊಳ್ಳುತ್ತಾ ಬಂದರೆ


೪ರ ನವೆಂಬರ್ ಸಂಜೆ ಪಶ್ಚಿಮದಲ್ಲಿ ನೋಡಿದಾಗ ಬಾಲಚಂದ್ರ, ಶುಕ್ರ, ಬುಧ ಮತ್ತು ಜ್ಯೇಷ್ಠಾ ಕಾಣುವುದು



೧೪ರ ಸಂಜೆ ಪೂರ್ವದಿಕ್ಕಿನಲ್ಲಿ ನೋಡಿದಾಗ ಚಂದ್ರ ಮತ್ತು ಮಂಗಳ ಕಾಣುವುವು

ಕ್ಷೀಣವಾದ ಚುಕ್ಕೆಯೊಂದು ದಿನದಿನಕ್ಕೆ ಜಾಗ ಬದಲಿಸುತ್ತಿದೆ ಎಂಬ ಅನುಮಾನ ಬರುವುದು. ಇದು ನಿಜವೇ. ಬರಿಗಣ್ಣಿಗೆ ಕಾಣದಷ್ಟು ಕ್ಷೀಣವಾದ ಈ ಚುಕ್ಕೆ ಫಾರ್ಚುನಾ ಎಂಬ ಕ್ಷುದ್ರಗ್ರಹ.

ಈ ತಿಂಗಳಲ್ಲಿ ಎರಡು ಆಚ್ಛಾದನೆಗಳೂ ಇವೆ. ಚಂದ್ರ ೪ರಂದು ಜ್ಯೇಷ್ಠಾ ನಕ್ಷತ್ರವನ್ನು ಮುಚ್ಚಿಹಾಕುವುದು. ಸುಮಾರು ೧೨.೩೦ಕ್ಕೆ ಆಗ ಎರಡೂ ನೆತ್ತಿಯ ಮೇಲೆ ಇದ್ದರೂ ಸೂರ್ಯನೂ ಇರುವುದರಿಂದ ನಮಗೆ ಈ ದೃಶ್ಯ ಸಿಗುವುದಿಲ್ಲ. ಆದರೆ ಸಂಜೆಯಾಗುವಾಗ ಪಶ್ಚಿಮದ ಅಂಚಿನಲ್ಲಿ ಗೆರೆಯಂತಹ ಚಂದ್ರ ಮತ್ತು ಅನತಿದೂರದಲ್ಲೇ ಈ ನಕ್ಷತ್ರವೂ ಕಾಣುವುದು.

ನವೆಂಬರ್ ೨೮ರ ಬೆಳಗಿನ ಜಾವ ಚಂದ್ರನನ್ನು ನೋಡಿದಿರಾದರೆ ಚಿತ್ರಾನಕ್ಷತ್ರ ಅದಕ್ಕೆ ಅಂಟಿಕೊಂಡಂತೆ ಕಾಣುತ್ತದೆ. ಈ ಎರಡು ಅವಕಾಶಗಳು ಛಾಯಾಗ್ರಹಣಕ್ಕೆ ಸೂಕ್ತ.

### ಖಗೋಳ ದಿನಚರಿ

೦೨ ಅಮಾವಾಸ್ಯೆ ೬:೫೫ಕ್ಕೆ
೦೩ ಶುಕ್ರ ಗರಿಷ್ಠ ಕೋನೋನ್ನತಿ*
೩ ಬುಧ ಗರಿಷ್ಠ ಕೋನೋನ್ನತಿ* (ಗುರುತಿಸಲು ಒಳ್ಳೆಯ ಅವಕಾಶ)
೪ ಚಂದ್ರನ ಪಕ್ಕ ಜ್ಯೇಷ್ಠಾ ನಕ್ಷತ್ರ, ಬುಧ* (ಆಚ್ಛಾದನೆ ಕಾಣುವುದಿಲ್ಲ)
೫ ಚಂದ್ರನ ಪಕ್ಕ ಶುಕ್ರ*
೬ ಟಾರಿಡ್ಸ್ ಉಲ್ಕಾವೃಷ್ಟಿ
೭ ವಿಯುತಿ (ಸೂರ್ಯಾಸ್ತಕ್ಕೆ ಸರಿಯಾಗಿ) ಮಂಗಳದ ಉದಯ
೯ ಚಾಂದ್ರಮಾಸದ ಮೊದಲ ಪಾದ ಚಂದ್ರಾಸ್ತ ನಡುರಾತ್ರಿಗೆ
೧೦ ಭೂಮಿ-ಚಂದ್ರ ಅಂತರ ಕನಿಷ್ಠ
೧೪ ಬುಧಗ್ರಹದ ಹಿಮ್ಮುಖ ಚಲನೆ ಆರಂಭ
೧೫ ಚಂದ್ರನ ಪಕ್ಕ ಮಂಗಳ*
೧೬ ಹುಣ್ಣಿಮೆ ೫:೫೭ಕ್ಕೆ
೧೭ ಲಿಯೋನಿಡ್ಸ್ ಉಲ್ಕಾವೃಷ್ಟಿ
೧೮ ಬುಧ-ಜ್ಯೇಷ್ಠಾ ಜೋಡಿ (ಕಾಣುವುದು ದುಸ್ತರ)
೨೧ ಚಂದ್ರನ ಪಕ್ಕ ಶನಿ*
೨೨ ಶನಿ ತಟಸ್ಥ– ಹಿಮ್ಮುಖ ಚಲನೆ ಆರಂಭ
೨೩ ಚಂದ್ರ-ಭೂಮಿ ಅಂತರ ಗರಿಷ್ಠ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೮ ಚಂದ್ರ-ಚಿತ್ರಾ ಜೋಡಿ*
೨೯ ಚಂದ್ರ-ಗುರು ಜೋಡಿ*

* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

*೫೫ನೇ ಪುಟದಿಂದ (ವಚನಗಳಿಗೆ ಹೊಸ ದಿಕ್ಸೂಚಿ)*

ವೈದಿಕ ಪ್ರತಿಲೋಮ ಒಪ್ಪಲಿಲ್ಲ. ಆದ್ದರಿಂದಲೇ ಜಾತಿ ವಿನಾಶದ ಬಗ್ಗೆ ಬಸವಣ್ಣನಿಗಿರುವಷ್ಟು ಕಳಕಳಿ ಚನ್ನಬಸವಣ್ಣನಿಗಿರಲಿಲ್ಲ ಎಂದು ಲೇಖಕರು ಸೋದಾಹರಣವಾಗಿ ವಿವರಣೆ ನೀಡಿದ್ದಾರೆ. ಚೆನ್ನಬಸವಣ್ಣ 'ದೀಕ್ಷೆ'ಗೆ ಕಟ್ಟುನಿಟ್ಟಾದ ನಿಯಮ ಹಾಕಿದ. ಇದರಿಂದ ವಚನ ಸಂಸ್ಕೃತಿ ಸ್ಥಾವರವಾಗಲು ಅಂಕುರ ಹಾಕಲಾಯಿತು. ವೀರಶೈವಕ್ಕೆ ಸಂವಿಧಾನ ಬರೆಯುವ ಹವಣಿಕೆ ಉಂಟಾಯಿತು. ಚನ್ನಬಸವಣ್ಣ ಹರಿದಾಡುವ ವಚನ ಸಂಸ್ಕೃತಿಯ ಹೊಳೆಗೆ ಅಣೆಕಟ್ಟು ಕಟ್ಟಿದ. ವೀರಶೈವಕ್ಕೆ ಶಾಸ್ತ್ರದ ಗಲೀಪು ತೊಡಿಸಿದ. ಆದರೂ ಲೇಖಕರು ಇಲ್ಲಿ ವಚನ ಸಂಸ್ಕೃತಿಗೆ ಪುನರುಜ್ಜೀವನದ ಗುಣ ಇದೆ ಎಂದು ಹೇಳುವ ಆಶಾವಾದಿಗಳಾಗಿದ್ದಾರೆ. ''ಶೂನ್ಯ ಸಂಪಾದನೆ''ಯ ಲೇಖನದಲ್ಲಿ ಲಿಂಗಾಯತ ಸ್ಥಾಪಿತ ಧರ್ಮವನ್ನು ಒಪ್ಪಿಕೊಳ್ಳುವ ಹವಣಿಕೆ ಮಾಡಿ ತನ್ನ ಚಲನಶೀಲತೆಯನ್ನು ಕಳೆದುಕೊಂಡ ಬಗೆಯನ್ನು ಲೇಖಕರು ನಿರೂಪಿಸಿದ್ದಾರೆ.

ಜೈವಿಕ ನಿಯತಿವಾದವನ್ನು ವಚನ ಸಂಸ್ಕೃತಿ ನಿರಾಕರಿಸುವ ನಿರೂಪಣೆ ಇನ್ನೊಂದು ಲೇಖನದಲ್ಲಿ ಇದೆ. ಪರಂಪರಾನುಗತವಾಗಿ ಹೆಣ್ಣನ್ನು ಪ್ರಕೃತಿಯಾಗಿ ಗಂಡನ್ನು ಸಂಸ್ಕೃತಿಯಾಗಿ ಪರಿಭಾವಿಸಿಕೊಂಡು, ಹೆಣ್ಣು ಕೀಳು, ಗಂಡು ಶ್ರೇಷ್ಠ ಎಂಬ ನಿಯಮ ರೂಪಗೊಂಡಿತು. ವೈದಿಕ ಸಂಸ್ಕೃತಿ 'ಪ್ರಾರಬ್ಧ' ನಂಬಿದರೆ, ವಚನ ಸಂಸ್ಕೃತಿ 'ಪ್ರಯತ್ನ' ನಂಬುತ್ತದೆ. ''ವಚನ ಸಂಸ್ಕೃತಿಯ ಈಚಿನ ಒಲವುಗಳು'' ಎಂಬ ಲೇಖನ ಹೆಚ್ಚು ವಿಶಿಷ್ಟವಾಗಿದೆ. ಬಸವಣ್ಣನಿಗೆ ಚತುರಾಚಾರ್ಯರ ಕಿರೀಟ ಇಡುವ ಯತ್ನವನ್ನು ಲೇಖಕರು ಇಲ್ಲಿ ಪ್ರಶ್ನಿಸಿದ್ದಾರೆ. ಮಂಡೂಕವಾದಿಗಳು ಶರಣರ ಚಿಂತನೆಯನ್ನು ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣನಿಗೆ ನಿಲ್ಲಿಸುವ ಚಟ ವಿವರಿಸುತ್ತ ತಳವರ್ಗದ ವಚನಕಾರರ ಚಿಂತನೆಯನ್ನು ಒಳಗೊಳ್ಳುವ ಅಗತ್ಯವನ್ನು ಒತ್ತಿಹೇಳಿದ್ದಾರೆ. ಬಸವಣ್ಣ ವಚನ-ಸಂಸ್ಕೃತಿ ಒಂದು ಭಾಗ ಮಾತ್ರ. ಹನ್ನೆರಡನೇ ಶತಮಾನದ ನಂತರ ರೂಪಗೊಂಡ ಕಾವ್ಯಗಳು ಅಂಚಿನಲ್ಲಿರುವ ವಚನಕಾರರನ್ನು ಗುರುತಿಸಲೇ ಇಲ್ಲ. ವಚನಗಳನ್ನು ಕೇವಲ ಸಾಹಿತ್ಯದ ನೆಲೆಯಿಂದ ನೋಡಿದ ಪ್ರಭಾವ ಇದಾಗಿರಬಹುದು. ಜಾತಿ, ಲಿಂಗ, ಮೈಲಿಗೆ, ಸೂತಕ, ವರ್ಗ, ಕರ್ಮಗಳ ಮೀಮಾಂಸೆ ಮುಂತಾದವುಗಳನ್ನು ತಳವರ್ಗದ ವಚನಕಾರರು ಗಂಭೀರವಾಗಿ ಪರಿಭಾವಿಸಿದ್ದಾರೆ. ಆಯ್ದಕ್ಕಿ ಲಕ್ಕಮ್ಮ, ರಮ್ಮವ್ವೆಯಂಥವರು ಕಾಯಕ ಹಾಗೂ ಲಿಂಗಸಂಬಂಧೀ ವಿಚಾರಗಳನ್ನು ವಿಶಿಷ್ಟ ರೀತಿಯಲ್ಲಿ ಗ್ರಹಿಸಿದ್ದಾರೆ. ಪುಣ್ಯಸ್ತ್ರೀ ಕಾಳವ್ವೆ, ಮಾದಾರ ಚನ್ನಯ್ಯ, ಇತರ ತಳವರ್ಗದ ವಚನಕಾರರು ಅರಿವಿನ ಹರವನ್ನು ವಿಸ್ತರಿಸುತ್ತಾ ಭಕ್ತರ ಭಾಷೆಯಾದ ಕನ್ನಡಕ್ಕೆ ಮಣೆಹಾಕಿದುದನ್ನು ಲೇಖಕರು ವಿಭಿನ್ನ ಶೈಲಿಯಲ್ಲಿ ವರ್ಣಿಸಿದ್ದಾರೆ.

ಕೊನೆಯ 'ಸಾಮಾಜಿಕ ವಚನ ಸಂಪುಟ' ಎಂಬ ಲೇಖನದಲ್ಲಿ ವಚನಗಳ ವಿಂಗಡನೆಗೆ ಹೊಸ ದಿಕ್ಸೂಚಿಯನ್ನು ಲೇಖಕರು ನೀಡಿದ್ದಾರೆ. ವಚನ ಸಂಸ್ಕೃತಿಗಳ ಅಧ್ಯಯನ ಹೆಚ್ಚಿದಂತೆ ಅವುಗಳ ವರ್ಗೀಕರಣದ ಉದ್ದೇಶ ಹಾಗೂ ಅದರ ಪ್ರಸ್ತಾಪ ಹೆಚ್ಚುತ್ತ ಹೋಯಿತು. ಇದರಿಂದ ವಚನಗಳ ಮುಕ್ತ ಓದು ಇಂದು ಅಸಾಧ್ಯವಾಗಿದೆ. ವಚನಗಳ ಓದಿನಲ್ಲಿ ದೊರೆಯಬಹುದಾದ ವಸ್ತುನಿಷ್ಠತೆ ಇಂದು ಮಾಯವಾಗಿದೆ. ಓದುಗನನ್ನು ಒಂದು ಮತದ ಮೇಟಿಗೆ ಕಟ್ಟಿಹಾಕುವ ಯತ್ನ ಹೆಚ್ಚತೊಡಗಿದೆ. ಆದರೂ ಇವುಗಳ ಗುಣಗಳನ್ನಾಧರಿಸಿ ವಿಂಗಡನೆ ಮಾಡುವ ಸಂಪುಟಗಳು ಬರತೊಡಗಿವೆ. ಇಲ್ಲಿ ಲೇಖಕರು ಪದಾರ್ಥವಾದ, ಆಲಯ ವಿರೋಧ, ಲಿಂಗಸಂಬಂಧಿ, ಸಮಾನತೆ, ಸೂತಕ ವಿರೋಧಿ, ಕಾಯಕ, ಸ್ವಾವಲಂಬಿತನ, ಸಂಕೀರ್ಣ ಸಾಮಾಜಿಕ ವಚನ ಮುಂತಾದ ಜಾತ್ಯಾತೀತ ಚೌಕಟ್ಟಿನಲ್ಲಿ ವಚನ ವಿಂಗಡನೆ ಮಾಡಿದ್ದಾರೆ.

ಒಟ್ಟಿಗೆ ವಚನಗಳ ಓದಿಗೆ ಈ ಪುಸ್ತಕ ಹೊಸ ಆಯಾಮ ನೀಡಿದೆ. ಅಚ್ಚಿನಲ್ಲಿ ಕಾಗುಣಿತದ ದೋಷ ಅಲ್ಲಲ್ಲಿ ಕಾಣಿಸಿಕೊಂಡರೂ, ಗಂಭೀರ ರೀತಿಯ ವಿಷಯ ನಿರೂಪಣೆಯಲ್ಲಿ ಅದು ಮುಚ್ಚಿಹೋಗಿದೆ. ಹೊಸ ಸಮಾಜ ಕಟ್ಟುವ ತವಕ ಹನ್ನೆರಡನೇ ಶತಮಾನದ ದಲಿತ ಚಿಂತಕರಲ್ಲಿ ಹೇಗೆ ಇತ್ತು ಎಂಬುದನ್ನು ಈ ಪುಸ್ತಕ ವಿಭಿನ್ನ ರೀತಿಯಲ್ಲಿ ವರ್ಣಿಸುತ್ತದೆ.

**ಮಹೇಶ ತಿಪ್ಪಶೆಟ್ಟಿ**
ಮಹಾಂತನಗರ, ಹುನಗುಂದ – ೫೮೭೧೧೮
ಬಾಗಲಕೋಟೆ ಜಿಲ್ಲೆ





ಡಾ॥ ಲಿಂಗಣ್ಣ ಗೋನಾಲ

# ಲೋಹಿಯಾ ಅವರ ಪತ್ರಗಳಲ್ಲಿ ಡಾ॥ ಅಂಬೇಡ್ಕರ್

ಪತ್ರವು ಓಲೆ, ಕಾಗದ ಈ ಹೆಸರುಗಳಿಂದ ಪ್ರಸಿದ್ಧಿ ಪಡೆದಿರುವ ಒಂದು ಸಂವಹನ ಮಾಧ್ಯಮ. ಈ ಸಂವಹನ ಮಾಧ್ಯಮವು ವೈಯಕ್ತಿಕ ಸಂಬಂಧಗಳಿಗೆ, ಆಡಳಿತಕ್ಕೆ ಇನ್ನಿತರ ವಿಷಯಗಳಿಗೆ ಸಂಬಂಧಿಸಿದ್ದಾಗಿದೆ. ಇದರ ಸ್ವರೂಪ ಚಿಕ್ಕದು; ವ್ಯಾಪ್ತಿ ದೊಡ್ಡದು. ಇದರ ಪರಿಮಿತಿ ಅಂಗೈ ಅಗಲ ಕಾಗದದಿಂದ ಹಿಡಿದು ಪುಟಗಳವರೆಗೆ. ಈ ಒಂದು ಪರಿಮಿತಿಯಲ್ಲಿ ಯೋಗಕ್ಷೇಮ, ಸೂಚನೆ, ಸಲಹೆ, ವಿನಂತಿ, ಆಜ್ಞೆ, ಆದರ, ಪ್ರೀತಿ ಏನೆಲ್ಲ ಸಂಗತಿಗಳು ತುಂಬಿಕೊಂಡಿರುತ್ತವೆ. ತಾಂತ್ರಿಕ ಬೆಳವಣಿಗೆಯಿಲ್ಲದ ಕಾಲದಲ್ಲಿ ಪತ್ರ ಮಾಧ್ಯಮಕ್ಕೆ ಹೆಚ್ಚಿನ ಬೆಲೆಯಿತ್ತು. ಅಪ್ಪನ, ಅಣ್ಣ ಅಕ್ಕನ, ಸ್ನೇಹಿತನ, ಪ್ರೇಯಸಿಯ ಮುಂತಾದವರ ಪತ್ರಗಳು ಬರುವುದು! ಅದಕ್ಕೆ ಪ್ರತಿಯಾಗಿ ಪ್ರತ್ಯುತ್ತರ ಬರೆಯುವುದು ಒಂದು ಸೊಗಸಾದ ಸಂಪರ್ಕದ ಸಂವಹನವಾಗಿತ್ತು. ಆದರೆ ಇಂದು ಪತ್ರಗಳು ಇಲ್ಲವೆಂದಲ್ಲ, ಇವೆ. ಅವುಗಳನ್ನು ಬರೆಯುವ, ಓದುವ ತಾಳ್ಮೆ ಇಂದಿನ ಜೀವನಶೈಲಿಗೆ ಇಲ್ಲದಂತಾಗಿದೆ. ಟೆಲಿಫೋನಿನಿಂದ ಪತ್ರಕ್ಕೆ ಉತ್ತರವಾದರೆ ಸಾಕೆಂದು ಉಸಿರೆಳೆದುಕೊಳ್ಳುವ ಸ್ಥಿತಿ ಇಂದು ಉಂಟಾಗಿದೆ.

ಇಂದು ಪತ್ರ ವ್ಯವಹಾರ ಈ-ಮೇಲ್, ಎಸ್‌ಎಂಎಸ್‌ಗಳ ಮೂಲಕ ತನ್ನ ಸ್ವರೂಪವನ್ನು ರೂಪಾಂತರಿಸಿಕೊಂಡಿದೆ. ಚಿಕ್ಕ, ಚುಟುಕಾದ ಬರೆಹಗಳನ್ನು ಇಲ್ಲಿ ಕಾಣುತ್ತೇವೆ. ಪತ್ರವೂ ಒಂದು ಸಾಹಿತ್ಯ ಪ್ರಕಾರವೆಂಬಂತೆ ಕಂಡು ಬಂದರೂ ಅದು ಸಾಹಿತ್ಯ ಪ್ರಕಾರವಾಗಿ ಸ್ಥಾಪಿಸಿಕೊಳ್ಳಲಿಲ್ಲ. ಪ್ರಪಂಚದಲ್ಲಿ ಪತ್ರ ವ್ಯವಹಾರಕ್ಕೆ ಬಹು ಮಹತ್ವದ ಸ್ಥಾನವಿದೆ. ಪರಸ್ಪರ ವ್ಯವಹರಿಸಿದ ಪತ್ರಗಳು ಪುಸ್ತಕ ರೂಪದಲ್ಲಿ ಪ್ರಕಟಗೊಂಡಾಗ ಅವುಗಳ ಸ್ವಾರಸ್ಯ ತಿಳಿದುಬರುತ್ತದೆ. ಪತ್ರವು ಕೇವಲ ಸಂಬಂಧಿಸಿದ ವ್ಯಕ್ತಿಯೇ ಮಾತ್ರ ಓದಿಕೊಳ್ಳಬೇಕೆಂಬ ಕಾರಣದಿಂದಲೂ ಅವು ರಹಸ್ಯ ಸಂಬಂಧಿ ಚೌಕಟ್ಟಿನಲ್ಲಿ ಉಳಿಯಲು ಸಾಧ್ಯವಾಯಿತೇನೋ? ಆದರೂ ಮಹಾನ್ ಸಾಧಕರ, ಸಮಾಜ ಸುಧಾರಕರ ವಿಚಾರಗಳು ಪತ್ರದಲ್ಲಿಯೂ ಹೇಗೆ ಅವರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತವೆ ಎಂಬುದು ಅನೇಕ ಪ್ರಕಟಿತ ಪತ್ರಗುಚ್ಛಗಳ ಅಧ್ಯಯನದಿಂದ ತಿಳಿದುಬರುತ್ತದೆ. ಜಾಗತಿಕ ಸಾಲಿನ ಚಿಂತಕರಲ್ಲಿ ಹೆಸರಾದ ಶ್ರೀ ರಾಮಮನೋಹರ ಲೋಹಿಯಾ ಅವರು ತುಂಬ ಪತ್ರಗಳನ್ನು ಬರೆದಿದ್ದಾರೆ. ಸಮಾಜವಾದಿ ಚಿಂತನೆ, ಅಸಮಾನತೆಯ ವಿರುದ್ಧದ ಪ್ರತೀಕಾರ, ಜಾತಿ, ವರ್ಣ-ವರ್ಗಗಳ ಕುರಿತಾದ ಚಿಂತನೆಗಳು ಅವರ ಪತ್ರಗಳಲ್ಲಿವೆ. ಇಲ್ಲಿ ಮುಖ್ಯವಾಗಿ ಡಾ॥ ಅಂಬೇಡ್ಕರ್ ಅವರಿಗೆ ಬರೆದ ಪತ್ರಗಳನ್ನು ಉದಾಹರಿಸಿ ಅವುಗಳಲ್ಲಿ ಅವರನ್ನು ಹೇಗೆ ತಿಳಿದುಕೊಂಡಿದ್ದರು ಎಂಬುದನ್ನು ಗುರುತಿಸಲಾಗಿದೆ. ಲೋಹಿಯಾ ಮತ್ತು ಅಂಬೇಡ್ಕರ್ ಇಬ್ಬರೂ ಸ್ನೇಹಿತರಾದುದು, ಒಬ್ಬರನ್ನೊಬ್ಬರು ಗೌರವಿಸುತ್ತಿದ್ದುದು ಮತ್ತು ಅವರ ವಿಚಾರಧಾರೆಗಳು, ಇವೆಲ್ಲವನ್ನೂ ಕುರಿತ ವಿವರಗಳು ಆ ಪತ್ರಗಳಲ್ಲಿವೆ.

ಲೋಹಿಯಾ ಅವರು ಗಾಂಧೀಜಿ ಮತ್ತು ನೆಹರೂ ಅವರ ಸಂಪರ್ಕಕ್ಕೆ ಬಂದದ್ದು ಅತಿ ಶೀಘ್ರ ಅವಧಿಯಲ್ಲಿ. ಲೋಹಿಯಾ ಗಾಂಧೀಜಿಯವರಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದರು. ಆದರೆ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಡಾ॥ ಅಂಬೇಡ್ಕರ್ ಅವರೊಂದಿಗೆ ಆತ್ಮೀಯರಾದರು. ತಮ್ಮನ್ನು ಕಾಡುತ್ತಿದ್ದ ಜಾತಿ, ಲಿಂಗಭೇದ ಮುಂತಾದ ಸಮಕಾಲೀನ ಸಮಸ್ಯೆಗಳನ್ನು ಅವರೊಂದಿಗೆ ಚರ್ಚಿಸಲು ಆಸಕ್ತರಾಗಿದ್ದರು. ಇಬ್ಬರ ನೀತಿಗಳಲ್ಲೂ ಸಾಮ್ಯತೆ ಇದ್ದದ್ದರಿಂದ ಒಟ್ಟುಗೂಡಿ ಕೆಲಸ ಮಾಡುವ ಇಂಗಿತವನ್ನು ಅವರು ಡಾ॥ ಅಂಬೇಡ್ಕರ್‌ರೊಂದಿಗೆ ವ್ಯಕ್ತಪಡಿಸಿದ್ದರು. ಸಮಕಾಲೀನ ಸಮಸ್ಯೆಗಳನ್ನು ಚರ್ಚಿಸುವುದಕ್ಕಾಗಿ 'ಮ್ಯಾನ್‌ಕೈಂಡ್' ಪತ್ರಿಕೆಯನ್ನು ಲೋಹಿಯಾ ಅವರು ಸಂಪಾದಿಸಿ ಹೊರತರುತ್ತಿದ್ದರು. ಆ ಪತ್ರಿಕೆಗೆ ಲೇಖನವನ್ನು ಕೋರುತ್ತಾ ಡಾ॥ ಅಂಬೇಡ್ಕರರಿಗೆ ಬರೆದ ಪತ್ರದಲ್ಲಿ ''ದೇಶದಲ್ಲಿ ಪ್ರಚಲಿತವಿರುವ ಜಾತಿ ಪದ್ಧತಿಯ ಯಾವುದಾದರೂ ಒಂದು ಆಯಾಮವನ್ನು ನೀವು ಆಯ್ದುಕೊಂಡು ಭಾರತೀಯರು ಸಿಟ್ಟಿಗೇಳುವುದಷ್ಟೇ ಅಲ್ಲ, ಅವರು ದಂಗುಬಡಿದು ಕುಳಿತುಕೊಳ್ಳುವಂತೆ ಮಾಡುವಂಥದೇನಾದರೂ ಬರೆಯಿರಿ ಎಂದು ಮನವಿ ಮಾಡಿಕೊಳ್ಳುತ್ತೇನೆ... ಕೋಪದೊಂದಿಗೆ ಸಹಾನುಭೂತಿಯೂ ಇರಲಿ ಎಂದು ಆಶಿಸುತ್ತೇನೆ. ಹಾಗೂ ನೀವು ಬರಿ ಅನುಸೂಚಿತ ಜಾತಿಗಳಿಗಷ್ಟೇ ಅಲ್ಲ ಇಡೀ ಭಾರತೀಯರ ನಾಯಕರಾಗಬೇಕೆಂದು ಬಯಸುತ್ತೇನೆ,'' ಎಂದಿದ್ದಾರೆ (ಲೋಹಿಯಾ ಅಂಬೇಡ್ಕರ್‌ರಿಗೆ ಬರೆದ ಪತ್ರ ಪು. ೩೭, ೧-೧೦-೧೯೫೬). ಈ ಹೇಳಿಕೆಯಲ್ಲಿ ಮೂರು ಅಂಶಗಳು ಕಂಡುಬರುತ್ತವೆ. ಮೊದಲನೆಯದು, ಜಾತಿಪದ್ಧತಿ ಕುರಿತಾಗಿ ಅಂಬೇಡ್ಕರರು ಮಾಡಿರುವ ಕೆಲಸದ ಆಳವಾದ ಅಧ್ಯಯನ. ಕಾರಣ, ಆ ವಿಷಯವನ್ನು ಸಮರ್ಥವಾಗಿ ಬರೆಯಬಲ್ಲರೆಂಬ ವಿಶ್ವಾಸದ ಅಭಿವ್ಯಕ್ತಿ. ಟೀಕಿಸುವುದರಿಂದ ದೂಷಿಸುವುದರಿಂದ ಜನ ಸಿಟ್ಟಿಗೇಳಬಹುದು; ಹಾಗಾಗದೆ ಜನ ದಂಗು ಬಡಿದಂತವರಾಗಬೇಕೆಂಬ ಸೂಚನೆ ಅಲ್ಲಿದೆ. ದಂಗುಬಡಿದಾಗ ಜನ ಗಾಬರಿಯಾಗಬೇಕು, ಇಲ್ಲವೆ ತಮಗೆ ಗೊತ್ತಿದ್ದೂ ಗೊತ್ತಿಲ್ಲದ ವಿಷಯ ಹೇಗೆ ಹೇಳಿದ್ದಾರಲ್ಲ ಎಂದು ಭಾವನಾತ್ಮಕವಾಗಿ ಅದನ್ನು ಅಪ್ಪಿಕೊಳ್ಳುವಂತಾಗಬೇಕೆಂದು ಲೋಹಿಯಾ ಬಯಸುತ್ತಾರೆ.

ಮೂಲತಃ ನೊಂದ ಜನಾಂಗದ ಪ್ರತಿನಿಧಿಯಾದ ಡಾ॥ ಅಂಬೇಡ್ಕರ್‌ರಲ್ಲಿ ಸಹಜವಾಗಿ ಕೋಪ ಇರುವುದು ಕಂಡುಬರುತ್ತದೆ. ಅವರು ಬಹಿರಂಗ ಸಭೆಗಳಲ್ಲಿ ಆ ತರಹದ ಕೋಪ ಪ್ರಕಟಿಸುತ್ತಿದ್ದರಂತೆ; ಅದಕ್ಕೆ ಲೋಹಿಯಾ ಬರೆಹದಲ್ಲಿ ಅದನ್ನು ಸಹಾನುಭೂತಿಯನ್ನಾಗಿ ಪರಿವರ್ತಿಸಿಕೊಳ್ಳಲು ಇಚ್ಛಿಸಿದ್ದರು. ಅವರು ಕೇವಲ ದಲಿತ ನಾಯಕರಲ್ಲ; ಇಡೀ ಭಾರತೀಯರ ನಾಯಕರಾಗಬೇಕು ಎಂಬ ಅದಮ್ಯ ಪ್ರೀತಿಯ ಬಯಕೆ ಹೊಂದಿದ್ದರು. ದಲಿತರ ಸಮಸ್ಯೆಗಳನ್ನು ಕೈಗೆತ್ತಿಕೊಂಡಾಗ ದಲಿತೇತರ ವ್ಯಕ್ತಿ ಇಡೀ ಸಮಾಜದ ನಾಯಕನಾಗಬಲ್ಲ, ದಲಿತರಲ್ಲೇ ಬೆಳೆದವನು ದಲಿತಪರ ಹೋರಾಡಿದಾಗ ಅವನೊಬ್ಬ ದಲಿತರ ನಾಯಕ ಮಾತ್ರ ಎಂದು ಸಮಾಜವು ಗುರುತಿಸುವುದು

ಸಹಜ. ಅಂತರಾಳದಲ್ಲಿ ಡಾ|| ಅಂಬೇಡ್ಕರ್ ಅವರು ದಲಿತ ನಾಯಕರಾಗಿದ್ದರೂ ಸಹ ಜಾಗತಿಕ ದೃಷ್ಟಿಯಲ್ಲಿ ಅವರು ರಾಷ್ಟ್ರವಷ್ಟೇ ಅಲ್ಲ, ಜಾಗತಿಕ ನಾಯಕರಾಗಿದ್ದರು ಎಂದರೆ ತಪ್ಪಾಗಲಾರದು.

ಅಜ್ಞಾನ, ಅಂಧಕಾರಗಳಿಂದ ತುಂಬಿಹೋಗಿರುವ ಭಾರತದಲ್ಲಿ ಬೌದ್ಧಿಕತೆಯ ಕೊರತೆ ಸದಾ ಇರುವಂಥದ್ದು; ಆಗಾಗ ಬೌದ್ಧಿಕ ಕೊರತೆಯನ್ನು ತುಂಬಲು ಜ್ಞಾನಿಗಳು ಉದಯಿಸುತ್ತಾರೆ. ಅವರ ದುಡಿಮೆ ಅವಶ್ಯಕವಾಗಿರುತ್ತದೆ. ಅದನ್ನು ಅರಿತುಕೊಂಡಿದ್ದ ಲೋಹಿಯಾ ತಮ್ಮ ಕಾಲ ಸಂದರ್ಭದಲ್ಲಿ ದೇಶದಲ್ಲಿ ಆವರಿಸಿದ್ದ ಬೌದ್ಧಿಕ ಕುಸಿತ ವನ್ನು ಗುರುತಿಸಿ ಅದನ್ನು ಹೋಗಲಾಡಿಸಲು ಶ್ರಮಿಸಿದರು. ಅದಕ್ಕಾಗಿಯೇ ಮನಬಿಚ್ಚಿ ಮಾತನಾಡಿದರು. ''ನಮ್ಮ ದೇಶವನ್ನಾವರಿಸಿದ ಸಂಪೂರ್ಣ ಬೌದ್ಧಿಕ ಕುಸಿತವನ್ನು ಒತ್ತಿ ಹೇಳಬೇಕಾಗಿದೆ. ನಿಮ್ಮಂಥ ವ್ಯಕ್ತಿ ಮುಕ್ತವಾಗಿ ಮಾತಾಡುವುದು ತೀರ ಅವಶ್ಯಕವಾಗಿದೆ ಎಂದು ನನ್ನ ಅನಿಸಿಕೆ'' (ಪು. ೩೭, ಪತ್ರ ೧-೧೦-೧೯೫೬) ಎಂದು ಡಾ|| ಅಂಬೇಡ್ಕರರಿಗೆ ಬರೆದ ಪತ್ರದ ಸಾಲುಗಳು ಲೋಹಿಯಾ ಅವರು ದೇಶದಲ್ಲಿ ಬೌದ್ಧಿಕತೆಯು ಕುಸಿದು ಹೋಗುತ್ತಿರುವ ಇಂದಿನ ಸಂದರ್ಭದಲ್ಲಿ ಎಂಥ ವ್ಯಕ್ತಿಗಳು ಆ ಕೊರತೆಯನ್ನು ತುಂಬಿಕೊಡಲು ಸಾಧ್ಯವಿದೆ ಎಂಬುದನ್ನು ಮನಗಂಡಿದ್ದರು ಎಂಬುದನ್ನು ಸೂಚಿಸುತ್ತವೆ.

ಲೋಹಿಯಾ ಮತ್ತು ಅಂಬೇಡ್ಕರ್ ಇಬ್ಬರ ನಡುವೆ ಪರಸ್ಪರ ಪತ್ರಗಳ ಮೂಲಕ ವಿಚಾರ ವಿನಿಮಯ ಗಳಾಗುತ್ತಲೇ ಒಂದು ಸೈದ್ಧಾಂತಿಕ ಪ್ಲಾಟ್‌ಫಾರ್ಮಿಗೆ ಬರುವುದರೊಳಗಾಗಿ ಅಂಬೇಡ್ಕರ್ ನಿಧನರಾದರು. ಲೋಹಿಯಾ ಅವರು ಡಾ|| ಅಂಬೇಡ್ಕರ್‌ರನ್ನು ಕಾಣಲು ಸದಾ ಕಾತುರರಾಗಿದ್ದರು. ಈ ಅಂಶಗಳು ಪತ್ರಗಳಲ್ಲಿವೆ. ಅಂಬೇಡ್ಕರರಿಗೆ ಅನಾರೋಗ್ಯವಾಗಿದ್ದ ಸುದ್ದಿ ಕೇಳಿ, ಆರೋಗ್ಯದ ಬಗ್ಗೆ ಕಾಳಜಿ ವಹಿಸಲು ಆಗ್ರಹಿಸಿದ್ದರು. ಡಾ|| ಅಂಬೇಡ್ಕರರು ನಿಧನರಾದಾಗ ಡಾ|| ಲೋಹಿಯಾ ತುಂಬ ದುಃಖಿತರಾಗಿದ್ದರು. ಅವರು ತಮ್ಮ ಸ್ನೇಹಿತರಿಗೆ ಬರೆದ ಪತ್ರವೊಂದರಲ್ಲಿ ಅಭಿವ್ಯಕ್ತಿಸಿದ್ದು ಹೀಗಿದೆ: ''ಡಾ|| ಅಂಬೇಡ್ಕರ್ ಅವರ ಆಕಸ್ಮಿಕ ಸಾವಿನಿಂದ ನನಗಾಗಿರುವ ವ್ಯಥೆ ವೈಯಕ್ತಿಕವಾದುದೂ ಕೂಡ ಅನ್ನುವುದನ್ನು ನೀವು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲಿರಿ. ಅವರನ್ನು ನಮ್ಮ ಕಕ್ಷೆಯೊಳಗೆ ತರಬೇಕೆನ್ನುವುದು ಸಂಘಟನೆಯ ದೃಷ್ಟಿಯಿಂದಷ್ಟೇ ಅಲ್ಲದೆ ತಾತ್ವಿಕ ದೃಷ್ಟಿ ಯಿಂದಲೂ ಕೂಡ ಮುಖ್ಯವಾಗಿತ್ತು ಹಾಗೂ ಆ ಕಾಲವು ಸಂಪೂರ್ಣ ಹತ್ತಿರವಾಗುತ್ತಿರುವಂತೆ ಕಾಣುತ್ತಿತ್ತು... ನನ್ನ ದೃಷ್ಟಿಯಲ್ಲಿ ಡಾ|| ಅಂಬೇಡ್ಕರ್ ಭಾರತದ ರಾಜಕೀಯದ ಮಹಾನ್ ನಾಯಕರಾಗಿದ್ದರು. ಹಾಗೂ ಗಾಂಧೀಜಿಯವರೊಬ್ಬರನ್ನು ಬಿಟ್ಟು ಸವರ್ಣೀಯ ಹಿಂದೂ ನಾಯಕರಷ್ಟೇ ದೊಡ್ಡ ನಾಯಕರಾಗಿದ್ದರು. ಹಿಂದೂ ಧರ್ಮದಲ್ಲಿನ ಜಾತಿ ಪದ್ಧತಿಯನ್ನು ಒಂದಿಲ್ಲೊಂದು ದಿನ ನಾಶಪಡಿಸಬಹುದೆಂಬ ಆತ್ಮವಿಶ್ವಾಸ ಹಾಗೂ ನೆಮ್ಮದಿ ಈ ಅಂಶದಿಂದಲೂ ನನಗೆ ದೊರಕಿತ್ತು'' (ಪು. ೪೧, ಲೋಹಿಯಾ ಪತ್ರ ೧-೭-೧೯೫೭). ಈ ಮಾತುಗಳಿಂದ ಲೋಹಿಯಾ ಡಾ|| ಅಂಬೇಡ್ಕರ್‌ರನ್ನು ಹೇಗೆ ಗ್ರಹಿಸಿದ್ದರು ಎಂಬುದನ್ನು ಕಾಣಬಹುದಾಗಿದೆ.

ಸಂಘಟನೆ ಮತ್ತು ತಾತ್ವಿಕ ದೃಷ್ಟಿಯಿಂದ ಅಂಬೇಡ್ಕರ್ ಅವರು ತಮಗೆ ಸಮೀಪವಾಗಿದ್ದೂ ಅವರ ಆಶಯ ಕೈಗೂಡದುದಕ್ಕೆ ದುಃಖವನ್ನು ತೋಡಿಕೊಂಡಿದ್ದಾರೆ. ಜಾತೀಯ ಮನಸ್ಸುಗಳು ಡಾ|| ಅಂಬೇಡ್ಕರರನ್ನು ಮಹತ್ವದ ವ್ಯಕ್ತಿ, ರಾಷ್ಟ್ರ ನಾಯಕರೆಂದು ಒಪ್ಪದೇ ಇರುವಾಗ ಲೋಹಿಯಾ ಅವರಂಥ ವಿಚಾರವಾದಿಗಳು ಅವರ ನಾಯಕತ್ವವನ್ನು ಗುರುತಿಸಿದ್ದು ಸೂಕ್ತವಾದದ್ದೆ. ಅಲ್ಲದೆ ಡಾ|| ಅಂಬೇಡ್ಕರರಂಥ ನಾಯಕರಿದ್ದಾಗ ಹಿಂದೂ ಧರ್ಮದಲ್ಲಿನ ಜಾತಿ ವ್ಯವಸ್ಥೆಯನ್ನು ನಿರ್ಮೂಲನ ಮಾಡುವ ಆಶಯ ಅವರಲ್ಲಿ ಅಂಕುರಿಸಿತ್ತು.

ಡಾ|| ಲೋಹಿಯಾ ತಮ್ಮ ಸ್ನೇಹಿತರಿಗೆ ಬರೆದ ಪತ್ರವೊಂದರಲ್ಲಿ ಭಾರತದ ದಲಿತರಿಗೆ ಡಾ|| ಅಂಬೇಡ್ಕರ್ ಮತ್ತು ಶ್ರೀ ಜಗಜೀವನರಾಮ್ ಇಬ್ಬರು ಆಧುನಿಕ ಭಾರತದ ಹರಿಜನರ ಎರಡು ವಿಭಿನ್ನ ಮಾದರಿಗಳು ಎಂದು ಗುರುತಿಸಿದ್ದಾರೆ. ಈ ಎರಡು ಮಾದರಿಗಳ ಸ್ವರೂಪವನ್ನು ಹೀಗೆ ವಿವರಿಸುತ್ತಾರೆ : ''ಡಾ|| ಅಂಬೇಡ್ಕರ್ ವಿದ್ವಾಂಸ ರಾಗಿದ್ದರು, ಪ್ರಾಮಾಣಿಕರಾದ, ಸಮಗ್ರತೆಯನ್ನುಳ್ಳ ಹಾಗೂ ಸ್ವತಂತ್ರರಾದ ವ್ಯಕ್ತಿಯಾಗಿದ್ದರು; ಬಾಹ್ಯ ಜಗತ್ತಿಗೆ ಭಾರತದ ಪ್ರತೀಕವೆಂದು ಅವರನ್ನು ಹೆಸರಿಸಬಹುದು'' (ಪು. ೪೨). ''ಇದೇ ಪ್ರವೃತ್ತಿ ಇಂದು ದಲಿತರಲ್ಲಿ ಬೆಳೆಯುತ್ತಿದೆ. ಜಗಜೀವನ್‌ರಾಮ್ ಹಿಂದೂಗಳೊಂದಿಗೆ ಸದ್ಭಾವನೆ ಬೆಳೆಸಿಕೊಂಡಿದ್ದಾರೆ. ಅವರೊಂದಿಗೆ ಮೃದುವಾಗಿ ನಡೆದು ಕೊಳ್ಳುತ್ತಾರೆ. ಆದರೆ ಹರಿಜನರ ಪ್ರತ್ಯೇಕ ಸಭೆ ಸಮಾರಂಭ ಗಳಲ್ಲಿ ರೋಷದಿಂದ ಕಟುದನಿಯಲ್ಲಿ ಮಾತಾಡುತ್ತಾರೆ'' ಎಂಬುದನ್ನು ಲೋಹಿಯಾ ಪ್ರಸ್ತಾಪಿಸಿದ್ದಾರೆ. ಇದರಿಂದ ಹರಿಜನರ ಏಳಿಗೆಗೆ ಸಹಾಯಕವಾಗಲಾರದೆಂದು ಹೇಳುತ್ತಲೇ ಅಂಬೇಡ್ಕರ್‌ರ ಮಾದರಿ, ಅಂದರೆ ಅತಿಯಾದ ರೋಷ, ಕಟುವಾದ ವಿರೋಧಗಳು ಕೂಡ ಬದಲಾಗಬೇಕೆಂದೂ ಬಯಸಿದ್ದರು. ಭಾರತದ ದಲಿತರು ಅಂಬೇಡ್ಕರರಿಂದ ಏನನ್ನು ಕಲಿಯಬೇಕೆಂಬುದನ್ನು ಲೋಹಿಯಾ ಹೀಗೆ ಗುರುತಿಸಿದ್ದಾರೆ: ''ಅವರು (ದಲಿತರು) ಡಾ|| ಅಂಬೇಡ್ಕರ್ ಅವರ ಶ್ರದ್ಧೆ ಹಾಗೂ ಕಲಿಕೆಯನ್ನು ಒಂದು ಪ್ರತೀಕವನ್ನಾಗಿಸಿ ಕೊಳ್ಳಬೇಕು ಹಾಗೂ ಅಂಬೇಡ್ಕರರಲ್ಲಿದ್ದ ಕಹಿಯನ್ನು ಬಿಟ್ಟು ಅವರ ಸ್ವತಂತ್ರ ಮನೋಭಾವವನ್ನು ಅನುಕರಿಸ ಬೇಕು. ಅವರು ಬರಿ ಹರಿಜನರ ನಾಯಕರೆಂದಷ್ಟೇ ಅಲ್ಲ, ಅಖಿಲ ಭಾರತದ ನಾಯಕರಾಗಿ ಕಾರ್ಯ ಪ್ರವೃತ್ತರಾಗ ಬಲ್ಲವರು ಎಂದು ಗೌರವಿಸಿ ಡಾ|| ಅಂಬೇಡ್ಕರ್‌ರವರನ್ನು ಅನುಕರಿಸಬೇಕು'' (ಪು. ೪೨) ಎಂದು ಹೇಳಿರುವುದು ಸೂಕ್ತವಾಗಿದೆ. ಇಂದು ನಾವು ಕಲಿಯಬೇಕಾದದ್ದು ಬಹಳಷ್ಟಿದೆ. ಡಾ|| ಅಂಬೇಡ್ಕರ್ ಅವರ ವಿಚಾರಧಾರೆ ಗಳನ್ನು ಸರಿಯಾಗಿ ಅರಿತುಕೊಳ್ಳಬೇಕು. ಅವುಗಳನ್ನು ಅನುಸರಿಸಬೇಕು. ಅಂದಾಗ ಮಾತ್ರ ದಲಿತರೆಲ್ಲರೂ ಜಾಗೃತರಾಗಲು ಸಾಧ್ಯ. ಲೋಹಿಯಾ ಅವರು ತಮ್ಮ ಪತ್ರಗಳಲ್ಲಿ ಡಾ|| ಅಂಬೇಡ್ಕರ್ ಅವರ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ದಾಖಲಿಸಿದ್ದಾರೆ. ದಲಿತರು ಮಾತ್ರ ಹೊಗಳಿದರೆ ಅದು ಒಣ ಅಭಿಮಾನ ವೆನಿಸಬಹುದು; ಆದರೆ ದಲಿತೇತರ ವ್ಯಕ್ತಿ ಹಾಗೂ ಅವರ ಸಮಕಾಲೀನರು, ವಿಚಾರವಾದಿಗಳು ಹೇಳುವ ಮಾತಿನಲ್ಲಿ ವಸ್ತುನಿಷ್ಠತೆ ಇದೆ. ಅದರಲ್ಲಿ ಡಾ|| ಅಂಬೇಡ್ಕರ್ ಅವರ ಘನತೆ ಗೌರವ ಅಡಗಿದೆ.

ಟಿಪ್ಪಣಿ : ಇಲ್ಲಿ ಬಳಸಿಕೊಳ್ಳಲಾದ ಪತ್ರದ ಅಭಿಪ್ರಾಯಗಳು 'ಕಣ್ಣೆದುರಿನ ಪ್ರಶ್ನೆಗಳು' ರಾಮ ಮನೋಹರ ಲೋಹಿಯಾ ಬರಹಗಳು, ಸಂಪುಟ-೫ (ಸಂ) ಡಾ|| ನಟರಾಜ್ ಹುಳಿಯಾರ್, ಎಸ್. ಆರ್. ರಾಮಕೃಷ್ಣ. ಈ ಪುಸ್ತಕದ ''ಡಾ|| ಅಂಬೇಡ್ಕರ್ ಅವರೊಂದಿಗೆ ಪತ್ರ ವ್ಯವಹಾರ'' ಪತ್ರಗಳ ಅನುವಾದಕರು : ಹಸನ್ ನಯೀಂ ಸುರಕೋಡ, ಇಲ್ಲಿಯವು. ಪ್ರಕಾಶನ : ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೨೦೦೦)


**ಡಾ|| ಲಿಂಗಣ್ಣ ಗೋನಾಲ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಉಸ್ಮಾನಿಯಾ ವಿಶ್ವವಿದ್ಯಾಲಯ
ಹೈದ್ರಾಬಾದ್ - ೫೦೦ ೦೦೭
ಆಂಧ್ರಪ್ರದೇಶ




## ಮಳೆ

ಮಳೆ ಬಂದ ದಿನದಂದು
ಎಲ್ಲೆಲ್ಲು ಅವಸರ
ಯಾವಾಗ ನಿಲುವುದೋ
ಎಂದೆಂಬ ಕಾತುರ
ಮಳೆ ನಿಂತ ಮರುಕ್ಷಣ
ಇನ್ನಿಲ್ಲದ ಸಡಗರ
ಮನೆ ಕಡೆಗೆ ಹಾಕುವರು
ಹೆಜ್ಜೆಯನು ಸರಸರ

ನಾಗರಾಜ ಅನಂತ
ಬೆಂಗಳೂರು

# ನೆಲ-ಮುಗಿಲುಗಳ ನಡುವೆ




ಮತ, ಧರ್ಮ, ಪಂಥ, ಜಾತಿಗಳು ಫ್ಯೂಡಲ್ ವ್ಯವಸ್ಥೆಯ ಬಳುವಳಿಗಳು. ಇವುಗಳಲ್ಲಿರುವ ಸಾಂಸ್ಕೃತಿಕ ಮತ್ತು ವೈಚಾರಿಕ ಅಂಶಗಳನ್ನು ಗ್ರಹಿಸುತ್ತಲೇ ಜೀವವಿರೋಧಿ ಅಂಶಗಳನ್ನು ನಿರ್ದಾಕ್ಷಿಣ್ಯವಾಗಿ ಕೈ ಬಿಡುವಂತಾಗಬೇಕು. ಜನ ಸಮುದಾಯದ ಮಧ್ಯೆ ಸೂಕ್ಷ್ಮ ವಿಚಾರಗಳನ್ನು ಬಿತ್ತುವುದು ತುಂಬ ಕಷ್ಟದ ಕೆಲಸ. ಸಾವಿರಾರು ವರ್ಷಗಳಿಂದ ರೂಢಿಗತವಾಗಿರುವ ಧರ್ಮ, ಜಾತಿ ವ್ಯವಸ್ಥೆಗಳು ಸಮಾಜದಲ್ಲಿ ಆಳವಾಗಿ ಬೇರೂರಿವೆ. ಅವರವರ ಸಂಸ್ಕೃತಿ ಪರಂಪರೆ ಆಚರಣೆಗಳನ್ನು ಬಿಡುವುದು ಸುಲಭವಲ್ಲ. ಜೀವಪರ ಕಾಳಜಿಯುಳ್ಳ ಮಾನವೀಯ ಮೌಲ್ಯಗಳ ಪ್ರತಿಪಾದಕರು ಎಲ್ಲ ಕಾಲಗಳಲ್ಲೂ ಅಲ್ಪ ಸಂಖ್ಯಾತರಾಗಿ ಕಂಡುಬರುತ್ತಿರುವುದರಿಂದಾಗಿ ವೈಚಾರಿಕತೆ ಎನ್ನುವುದು ಅರಣ್ಯರೋದನವಾಗಿದೆ. ಬುದ್ಧ, ಬಸವ, ಅಂಬೇಡ್ಕರ್‌ರ ವಿಚಾರಗಳು ಕೆಲವು ಕಾಲ ಪ್ರಖರವಾಗಿ ಮಾರ್ಗದರ್ಶನ ನೀಡಿದರೂ ಬಹುಕಾಲ ಉಳಿಯಲಿಲ್ಲವೆಂಬ ಸತ್ಯ ನಮ್ಮ ಮುಂದಿದೆ. ಜನಜೀವನವನ್ನು ಹಸನುಗೊಳಿಸುವ ಮತ್ತು ಮನುಷ್ಯಮಾತ್ರರೆಲ್ಲರೂ ಸಮಾನರು ಎಂಬ ಮೌಖಿಕ ವಿಚಾರಗಳು ಬೆಳಕಿಗೆ ಬಂದಾಗಲೆಲ್ಲ ಪುರೋಹಿತಶಾಹಿಯ ಹುನ್ನಾರಗಳಿಗೆ ಜನತೆ ಬಲಿಯಾಗಿರುವುದನ್ನು ಚರಿತ್ರೆಯಿಂದ ತಿಳಿಯಬಹುದು. ಅಯೋಧ್ಯೆಯ ಕಟ್ಟಡ ಕೆಡವಿದ್ದು, ಗೋದ್ರಾ ರೈಲು ಬಂಕಿ ದುರಂತ ಮತ್ತು ನಂತರದ ನರಮೇಧ, ಇತ್ತೀಚಿನ ಕನಕನ ಗೋಪುರ ಕೆಡವಿದ ಪ್ರಕರಣಗಳ ಹಿಂದಿರುವ ಕೊಳಕು ಮನಸ್ಸುಗಳು, ಮತಾಂಧತೆ, ಪ್ರತಿಗಾಮಿತ್ವದ ಸಾಲಿಗೆ ಸೇರುತ್ತವೆ. ಕೋಮು ಸಮಸ್ಯೆಯಂತಹ ಸವಾಲುಗಳನ್ನು ಎದುರಿಸುವಾಗ ಈ ವೈರುಧ್ಯಗಳ ಸಂಘರ್ಷಗಳು ಎದುರಾಗುತ್ತವೆ. ಪ್ರಗತಿಪರರೂ ಆಂತರಿಕ ಸೆಳೆತಗಳಿಂದ ಪ್ರತಿಗಾಮಿಗಳನ್ನು ಎದುರಿಸುವ ಮುಖಾಮುಖಿಯಲ್ಲಿ ಕೆಲವೊಮ್ಮೆ ದುರ್ಬಲರಾಗಿ ಕಂಡುಬರುವುದು ಒಂದು ವಿಪರ್ಯಾಸ ಎನ್ನಬಹುದು. ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಬುದ್ಧ, ಬಸವ, ಅಂಬೇಡ್ಕರರಂತಹ ಮಹಾನ್ ಚಿಂತಕರೂ ಒಂದು ಹಂತದಿಂದ ಮುಂದೆ ಹೋಗಲು ಸಾಧ್ಯವಾಗದಂತಹ ಹುನ್ನಾರವನ್ನು ಪುರೋಹಿತಶಾಹಿ, ಪಟ್ಟಭದ್ರ ಹಿತಾಸಕ್ತಿಗಳು, ಕೋಮುವಾದಿಗಳು, ಯಶಸ್ವಿಯಾಗಿ ನಡೆಸುತ್ತಲೇ ಬಂದಿದ್ದಾರೆ. ಇಡೀ ಭಾರತಕ್ಕೆ ಒಂದೇ ಧರ್ಮ ಎಂಬ ಮಾತಿನಲ್ಲಿ ನಮ್ಮ ಬಹುಮುಖೀ ಸಂಸ್ಕೃತಿಯನ್ನು ನಾಶಮಾಡುವ ಕೊಳಕು ಮನೋಧರ್ಮ ಕಂಡುಬರುತ್ತದೆ. ಧರ್ಮ ಮೇಲ್ವರ್ಗ ಮತ್ತು ಮಧ್ಯಮ ವರ್ಗಗಳಿಗೆ ಮಾತ್ರ ಅನ್ವಯವಾಗುತ್ತದೆ. ಕೆಳ ವರ್ಗದವರಿಗೆ, ಇಂದಿಗೂ ತುಳಿಯಲ್ಪಡುತ್ತಿರುವ ದಲಿತರಿಗೆ ಎಲ್ಲ ಜಾತಿಯ ಬಡವರಿಗೆ ಮೇಲ್ವರ್ಗದವರ ಧರ್ಮದಲ್ಲಿ ಪ್ರವೇಶ ನಿರಾಕರಿಸಲ್ಪಟ್ಟಿರುವ ಸತ್ಯ ನಮ್ಮ ಮುಂದಿದೆ. ಎಲ್ಲರೂ ಮಾನವಧರ್ಮ, ವಿಶ್ವಧರ್ಮ, ಮಾನವೀಯ ಮೌಲ್ಯಗಳು, ಮಾನವೀಯ ಅನುಕಂಪ ಕುರಿತು ಮಾತನಾಡುತ್ತೇವೆ. ಆದರೆ ಪ್ರತಿಯೊಬ್ಬರಿಗೂ ಅವರದೇ ಆದ ಒಂದು ಜೀವನ ಧರ್ಮವಿದೆ ಎಂದು ಒಪ್ಪಲು ಸಿದ್ಧರಿಲ್ಲ. ಇತ್ತೀಚೆಗೆ ಕೆಲವು ಕೆಳವರ್ಗದ ಸಂಘಟನೆಗಳು ತಮ್ಮದೇ ಆದ ಧರ್ಮ, ಧರ್ಮಪೀಠಗಳನ್ನು, ಧರ್ಮಗುರುಗಳನ್ನು ಸ್ಥಾಪಿಸಿಕೊಳ್ಳುತ್ತಿರುವುದು ಕುತೂಹಲಕರ ಸಂಗತಿಯಾಗಿದೆ. ಬಣಜಾರ್, ಸೇವಾಲಾಲ್ ಗುರು ಪೀಠ, ಮಾದಿಗರ, ಕುರುಬರ ಧರ್ಮಪೀಠಗಳು, ಉಪ್ಪಾರರ ಧಾರ್ಮಿಕ ಟ್ರಸ್ಟ್‌ಗಳು ಅಸ್ತಿತ್ವದಲ್ಲಿ ಬರುತಿವೆ. ಇವುಗಳಲ್ಲಿ ಕೆಲವು ಪ್ರತಿಗಾಮಿ ಮತ್ತು ಪ್ರಗತಿವಿರೋಧಿ ಧೋರಣೆಗಳನ್ನು, ಮತಾಂಧತೆ ಮತ್ತು ಪಂಥಾಭಿಮಾನಗಳನ್ನು ಬಿತ್ತುತ್ತಿವೆ. ಕೋಮುಸಮಸ್ಯೆ, ಕೋಮು ಗಲಭೆಗಳಂತಹ ಗಂಭೀರ ಸವಾಲುಗಳನ್ನು ಎದುರಿಸುವಾಗ ಮೇಲಿನ ಸೂಕ್ಷ್ಮಗಳನ್ನು ಗಮನಿಸಬೇಕಾಗುತ್ತದೆ. ಅಲ್ಪ ಸಂಖ್ಯಾತರ ಹೆಸರಿನಲ್ಲಿ ಆಳುವ ವರ್ಗ ಓಟುಗಳಿಗಾಗಿ ಅನಗತ್ಯ ಆದ್ಯತೆ ಸವಲತ್ತುಗಳನ್ನು ನೀಡುತ್ತಿರುವುದೂ ಇಂದಿನ ಬಹುಸಂಖ್ಯಾತ ಯುವಕರ ಪಾಲಿಗೆ ಮರಣಶಾಸನವಾಗುತ್ತಿದೆ.

ಉಡುಪಿಯ ಕೃಷ್ಣದೇವಾಲಯದ ಪಶ್ಚಿಮದಲ್ಲಿ ಕನಕನ ಗೋಪುರವನ್ನು ಕೆಡವುದರ ಹಿಂದಿರುವ ಹುನ್ನಾರವನ್ನು ಎರಡು ವರ್ಷಗಳ ಮೊದಲೇ ಗುರುತಿಸಿರುವ ಡಾ|| ಆರ್ಕೆ ಮಣಿಪಾಲ ಅವರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಲೇಬೇಕು. ಈ ಕೃತಿಯನ್ನು ಪ್ರಕಟಿಸಿದ ಜನವಾದಿ ಪ್ರಕಾಶನದ ಗುಂಡ್ಮಿ ಅವರ ಸಾಮಾಜಿಕ ಕಳಕಳಿ ಮೆಚ್ಚುವಂತಹುದು. ಬಡತನ ಮತ್ತು ಮೇಲ್ವರ್ಗದವರ ಶೋಷಣೆಗಳೇ ಮುಖ್ಯ ಕಾರಣವಾಗಿ ಭಾರತದಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ನೆಲೆಯೂರಲು ಸಾಧ್ಯವಾಗಿದೆ. ಅತ್ಯಂತ ಪ್ರಾಚೀನ ಧರ್ಮ, ಪ್ರಪಂಚಕ್ಕೆ ಬೆಳಕು ತೋರುವ ಧರ್ಮ ಎಂದು ನಾವೇ ಅಬ್ಬರಿಸುವ ಸನಾತನ ಧರ್ಮವು ಎಲ್ಲಾ ಮಾನವರನ್ನು ಸಮಾನವಾಗಿ ಕಂಡಿದ್ದರೆ ಪ್ರಸ್ತುತ ಪರಿಸ್ಥಿತಿಯನ್ನು ಎದುರಿಸುವ ಪ್ರಮೇಯವೇ ಬರುತ್ತಿರಲಿಲ್ಲ. ವರ್ಗಭೇದ, ವರ್ಣಭೇದಗಳನ್ನು ಅಸ್ಪೃಶ್ಯತೆಯನ್ನು ಜೀವಂತವಾಗಿ ಪೋಷಿಸುತ್ತಲೇ ಕೋಮು ಸೌಹಾರ್ದದ ಮಾತನಾಡುವುದಾಗಲಿ **ಹಿಂದೂ ಎಲ್ಲರೂ ಒಂದು** ಎಂಬ ಘೋಷಣೆಯಾಗಲಿ ಅರ್ಥವಿಲ್ಲದ ಪ್ರಲಾಪಗಳಾಗಿ ತೋರುತ್ತದೆ. ಇತ್ತೀಚೆಗೆ ಮುಸ್ಲಿಂ ಜನಸಂಖ್ಯಾ ಬಾಹುಳ್ಯದ ಕುರಿತೂ ಬಿಸಿ ಬಿಸಿ ವರದಿಗಳು ಅಂಕಿ ಅಂಶಗಳು ಪತ್ರಿಕೆಗಳಲ್ಲಿ ವರದಿ ಆಗುತ್ತಿರುವುದೂ ಸಹ ಜನರ ಮನಸ್ಸಿನಲ್ಲಿ ದ್ವೇಷ, ಅಸೂಯೆಯ ಭಾವನೆಯನ್ನು ಬಿತ್ತುತ್ತಿದೆ. ಕನಕನ ಕಿಂಡಿಯ ಸಮಸ್ಯೆ ಮಾಧ್ಯಮಗಳಿಂದ, ರಾಜಕಾರಣಿಗಳಿಂದ, ಅಷ್ಟಮಠಗಳಿಂದ ಇನ್ನಷ್ಟು ಗೋಜಲಾಗುವ ಅಪಾಯವಿದೆ. ವಿಚಾರವಂತರು, ಇತಿಹಾಸಕಾರರು ಮತ್ತು ಮಾನವ ಕುಲ ಒಂದೇ ಎಂಬ ಆದರ್ಶವನ್ನು ಬಿತ್ತುವವರು ಮುಂದೆ ಬಂದು ನವಗ್ರಹ ಕಿಂಡಿ, ಕನಕನ ಕಿಂಡಿಗಳ ಸಂದುಗಳಲ್ಲಿ ಅಡಗಿ ಕುಳಿತಿರುವ ಕೃಷ್ಣನನ್ನು ಎಲ್ಲರಿಗೂ ತೆರೆದ ಬಾಗಿಲುಗಳ ಮೂಲಕ ದರ್ಶನ ಕೊಡುವಂತೆ ಆಮೂಲಾಗ್ರ ಬದಲಾವಣೆಯನ್ನು ತರಬೇಕಿದೆ. ದೇವರಿಗೂ ಭಕ್ತರಿಗೂ ಮಧ್ಯೆ ಇರುವ ದಲ್ಲಾಳಿಗಳನ್ನು ಕಿಂಡಿಗಳನ್ನು ನಿರಾಕರಿಸಬೇಕಿದೆ. ಆಗ ಮಾತ್ರ ''ಗೊಲ್ಲರ ಕೃಷ್ಣ ಎಲ್ಲರ ಕೃಷ್ಣನಾಗುವ'' ಸಾಧ್ಯತೆ ಇದೆ. ಈ ರೀತಿಯ ಸರ್ವ ಸಮಾನತೆಯನ್ನು ಕಾಣುವ ಭಾಗ್ಯ ನಮ್ಮೆಲ್ಲರದಾಗಲಿ ಎಂದು ಆಶಿಸುತ್ತೇನೆ.

ಮನುಷ್ಯನ ಮನಸ್ಸು ಧಾರ್ಮಿಕತೆಯ ಸೋಗಿನಲ್ಲಿ ಎಂತಹ ನೀಚತನಕ್ಕಿಳಿಯುತ್ತದೆ ಎಂಬುದಕ್ಕೆ ಕನಕ ಕಿಂಡಿಯ ನಿರ್ಮಾಣ ಮತ್ತು ಕನಕಗೋಪುರವನ್ನು ಕೆಡವಿದ್ದೇ ಸಾಕ್ಷಿ. ಧಾರ್ಮಿಕ ಮುಖಂಡರಿಗೆ ಪಾಪಪ್ರಜ್ಞೆ ಕಾಡದಿರುವುದನ್ನು ಕಂಡು ನಾಗರಿಕ ಜಗತ್ತು ತಲೆತಗ್ಗಿಸಬೇಕಾಗಿದೆ. ಕನಕದಾಸರ ಜನಪರ ಕಾಳಜಿಗಳು, ಮಾನವ ಪ್ರೀತಿಗಳನ್ನು ಜಗತ್ತಿಗೆ ಪರಿಚಯಿಸಬೇಕಾದವರೇ ಕನಕದಾಸರ ಚಾರಿತ್ರ್ಯಹನನದಲ್ಲಿ ತೊಡಗಿರುವುದು ಪ್ರಸ್ತುತ ಕಾಲಘಟ್ಟದ ಒಂದು ವಿಪರ್ಯಾಸ ಎನ್ನಬಹುದು. ವೈದಿಕರ ಆಧ್ಯಾತ್ಮಿಕತೆ, ವಚನಕಾರರ ಆಧ್ಯಾತ್ಮಿಕತೆ ಮತ್ತು ದಾಸರ

**ಜಯದೇವಪ್ಪ ಜೈನಕೇರಿ**



ಆಧ್ಯಾತ್ಮಿಕತೆಗಳಲ್ಲಿ ಬಹುಪಾಲು ವೈರುಧ್ಯಗಳಿದ್ದರೂ ಸಮಾನತೆಯ ಹಸಿವು ಜಾಗೃತಗೊಂಡಾಗಲೆಲ್ಲ ಭಕ್ತಿ ಚಳುವಳಿಗಳು ಹಿನ್ನೆಡೆ ಅನುಭವಿಸಿವೆ. ಆದರೆ ಇಂದಿಗೂ ಭಾರತೀಯ ಮಠ, ಪೀಠಗಳ ಸ್ವಾಮೀಜಿಗಳಲ್ಲಿ ಸಮಾನತೆ ಕಂಡುಬರುತ್ತಿಲ್ಲ ವೆಂಬುದು ವಿಚಿತ್ರವಾದರೂ ಸತ್ಯಸಂಗತಿ. ಜನರು ಅಂತರಂಗದಲ್ಲಿ ವರ್ಗಭೇದ, ಮೇಲು-ಕೀಳು, ಅಸ್ಪೃಶ್ಯತೆಯನ್ನು ಪೋಷಿಸುತ್ತಿರುವುದು ವಿಷಾದದ ಸಂಗತಿ. ಸಮಾನತೆಯಲ್ಲಿ ಮಾತ್ರ ಗಾಢವಾದ ಆಧ್ಯಾತ್ಮಿಕತೆ ಇರಲು ಸಾಧ್ಯ. ತೋರಿಕೆಯ ದೇಶಭಕ್ತರು ಯಾವಾಗಲೂ ತಮ್ಮ ದೇಶಪ್ರೇಮವನ್ನು ಹೇಳಿಕೊಳ್ಳುತ್ತಲೇ ಇರುತ್ತಾರೆ. ಅದೇ ಸಂದರ್ಭದಲ್ಲಿ ದೇಶವಾಸಿಗಳನ್ನು ದ್ವೇಷಿಸುತ್ತಾರೆ. ಇದಕ್ಕೆ ಕಾರಣ ಅವರಿಗೆ ತಮ್ಮ ದೇಶದ ಬಗ್ಗೆ ಇರುವ ಅಮೂರ್ತ ಕಲ್ಪನೆಗಳು ಮತ್ತು ಭ್ರಮೆಗಳು. ದೇಶದಲ್ಲಿರುವ ತಮ್ಮವರಲ್ಲದವರ ಬಗ್ಗೆ ಇರುವ ತಾತ್ಸಾರವೇ ಇದಕ್ಕೆ ಕಾರಣ. ವೈಚಾರಿಕತೆ ಎಂದರೆ ಪ್ರತಿಯೊಂದನ್ನೂ ವಿರೋಧಿಸುವುದಲ್ಲ, ಸಂಸ್ಕೃತಿಯ ನಿರಾಕರಣೆಯೂ ಅಲ್ಲ. ಬದಲಾಗಿ ಮೂಢನಂಬಿಕೆಗಳನ್ನು, ಅಮಾನವೀಯ ಆಚರಣೆಯನ್ನು ವಿರೋಧಿಸುವುದೇ ವೈಚಾರಿಕತೆ. ಪರಂಪರೆಯಿಂದ ಬಂದಿರುವ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುವುದೂ ವೈಚಾರಿಕತೆಯೇ. ವಿಚಾರಶಕ್ತಿ ಮತ್ತು ಅರಿವಿನಿಂದ ಎಲ್ಲಾ ಮಾನವರೂ ಸಹಜ ಪ್ರೀತಿ, ವಿಶ್ವಾಸ, ಗೌರವದಿಂದ ಬಾಳುವಂತಾಗಬೇಕು. ಅಂತರಂಗ, ಬಹಿರಂಗ ಶುದ್ಧಿಯಿಂದ ಬಾಳುವಂತಾಗಬೇಕು.

ನಮ್ಮ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ನಂಬಿಕೆಗಳು ಮಾನವೀಯತೆ ಯನ್ನು ಅಳಿಸಿಹಾಕುತ್ತಿರುವ ವರ್ತಮಾನದ ಕಾಲದಲ್ಲಿ, ವೈದಿಕ ಧರ್ಮವನ್ನೇ ಹಿಂದೂ ಧರ್ಮ, ಭಾರತೀಯತೆ ಎಂದು ಒಪ್ಪಿಕೊಂಡಿರುವ ಸಮಾಜದಲ್ಲಿ ಇತರ ಎಲ್ಲ ಬಹುಸಂಖ್ಯಾತರೂ ಅಸ್ಪೃಶ್ಯರಾಗಿಬಿಟ್ಟಿರುವ ವಾಸ್ತವ ನಮ್ಮೆದುರಿಗಿದೆ. ಜಾತಿ, ಅಸಮಾನತೆ ಮತ್ತು ಸಮಾನ ಹಕ್ಕುಗಳ ನಿರಾಕರಣೆ ಮನುಕುಲಕ್ಕೆ ಅಂಟಿದ ಶಾಪ ಎನ್ನಬಹುದು. ಧರ್ಮ ಎಂಬುದು ಒಂದು ಅಮಲು ಎಂಬ ಮಾತಿದೆ. ಇತರೆಲ್ಲಕ್ಕಿಂತಲೂ ಮನುಷ್ಯ, ಧರ್ಮದಿಂದ ನಿಯಂತ್ರಿಸಲ್ಪಟ್ಟಿದ್ದಾನೆ. ಮನುಷ್ಯನ ಮನಸ್ಸನ್ನು ಅತಿವೇಗವಾಗಿ ಜಾಗೃತಗೊಳಿಸಲು ಮನುಷ್ಯನಿಂದ ಮಾತ್ರ ಸಾಧ್ಯವಿದೆ. ಮನುಷ್ಯನ ಸ್ವಾತಂತ್ರ್ಯವನ್ನು ಅರಿವನ್ನು ಎತ್ತಿಹಿಡಿಯಲು ಧರ್ಮವನ್ನು ಬಳಸುವಂತೆ ಅವುಗಳನ್ನು ನಿರಾಕರಿಸಲೂ ಧರ್ಮದ ಬಳಕೆ ಆಗುತ್ತಿದೆ. ಮಾನವನ ಮನಸ್ಸಿನ ಭಾವನೆಗಳನ್ನು ಪಲ್ಲಟಗೊಳಿಸಲು ಧಾರ್ಮಿಕ ನಂಬಿಕೆಗಳಿಗಿಂತ ಬಲವಾದ ಸಾಧನ ಮತ್ತೊಂದಿಲ್ಲ. ಅನಕ್ಷರಸ್ಥರನ್ನು, ಅಮಾಯಕ ಶ್ರಮಜೀವಿಗಳನ್ನು ಶೋಷಿಸಲು, ಮೇಲ್ವರ್ಗದವರು ಬಳಸುವುದು ಧರ್ಮವನ್ನೇ. ಅನ್ಯಾಯ ಮತ್ತು ಅನೀತಿಯ ವಾಹಕರಾದ ಪುರೋಹಿತಶಾಹಿಗಳು, ತಮ್ಮ ಅಮಾನವೀಯ ಕೃತ್ಯಗಳಿಗೆಲ್ಲ ಧರ್ಮದ ವೇಷ ತೊಡಿಸಿ ವಂಚಿಸುತ್ತಾರೆ. ಪುರೋಹಿತಶಾಹಿಗಳಿಂದ ಪ್ರೇರಿತರಾದ ಶೋಷಕ ಆಡಳಿತವರ್ಗ, ತಮ್ಮ ಎಲ್ಲ ಕೃತ್ಯಗಳಿಗೆ ಧರ್ಮದ ಲೇಪ ಹಚ್ಚುತ್ತಾರೆ. ದೇವರು, ಧರ್ಮದ ಹೆಸರಿನಲ್ಲಿ ಅನ್ಯಾಯ ವೆಸಗುತ್ತಾರೆ. ಜನಸಾಮಾನ್ಯರಲ್ಲಿ ಧರ್ಮದ ಹೆಸರಿನಲ್ಲಿ ವಂಚಕರು, ಪೋಷಕರು, ಅತ್ಯಾಚಾರಿಗಳು, ನೀತಿಭ್ರಷ್ಟರು ಮೆರೆಯುತ್ತಾರೆ. ಜನಜೀವನ ಅಸ್ತವ್ಯಸ್ತಗೊಳ್ಳುತ್ತದೆ. ಇಂತಹ ಪರ್ವಕಾಲದಲ್ಲಿ ಧರ್ಮವನ್ನು ದುರುಪಯೋಗಪಡಿಸಿಕೊಳ್ಳುವವರ ವಿರುದ್ಧ ಕೆಲವರಾದರೂ ನೀತಿವಂತರು ಪ್ರತಿಭಟಿಸಿ ಶೋಷಣೆಯಿಂದ ಸಮಾಜವನ್ನು ಮುಕ್ತಗೊಳಿಸಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿಯೇ ನಮ್ಮ ದೇಶದಲ್ಲಿಯೂ ಬುದ್ಧ, ಮಹಾವೀರ, ಬಸವ, ಗಾಂಧೀಜಿ, ಅಂಬೇಡ್ಕರ್ ಮುಂತಾದ ಸಮಾಜ ಸುಧಾರಕರು ಮೂಡಿಬಂದಿರುವುದನ್ನು ಇತಿಹಾಸದಿಂದ ತಿಳಿಯಬಹುದು.

ಜಯದೇವಪ್ಪ ಜೈನಕೇರಿ
ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ-೫೭೭ ೨೦೧.

## ತಬ್ಬಲಿತನ

ಮಣ್ಣು ಸಾರಿಸಿದ ಗೋಡೆ
ಬಾಗಿಲಿಲ್ಲದ ಗರ್ಭಗುಡಿ
ಜಂತಿಯಲ್ಲಿ ಗುಬ್ಬಿಹಕ್ಕಿಗಳ ಚಿಲಿಪಿಲಿ
ಎತ್ತಿಟ್ಟ ಎರಡು ಕಲ್ಲು
ಈ ದೇವ ಮಂದಿರದ ಮೆಟ್ಟಿಲು;
ನಾದ ನುಡಿಸಲೂ ಗಂಟೆಯಿಲ್ಲ
ಈ ಗುಡಿಯಲ್ಲಿ!
ಏಕಾಂತ ಧ್ಯಾನದಲಿ ಮಣ್ಣಮೂರ್ತಿ
ಸುಣ್ಣವಿಲ್ಲ ಬಣ್ಣವಿಲ್ಲ
ಮಾಳಿಗೆ ಇಲ್ಲ
ನಡುವೆ ಗೋಡೆ ಒಂದೇ! ಪಕ್ಕದ ಮಸೀದಿಗೆ
ನಮಾಜೂ ಇರಲಿಲ್ಲ
ದೇವರಿದ್ದ ಒಳಗೆ;
ಊರಿಗೆ ಊರೇ
ಮೋಹರಂದ ಹೆಜ್ಜೆ ಮೇಳದಲಿ
ಗೆಜ್ಜೆ ಕಟ್ಟಿ ಕುಣಿವಾಗ
ಮಣ್ಣ ಮಕ್ಕಳ ಮಧ್ಯದಿಂದೆದ್ದು
ಹಂಚುತ್ತಿದ್ದ ಇಂವ ಪ್ರೀತಿ ಬೆಲ್ಲ,
ಕಳೆದುಹೋಗಿದೆ ನಿನ್ನೆ

ಇಂದು ಎದೆಯಿಂದಲೆದೆಗೆ ಹರಿವ
ನಂಬಿಗೆಯ ವಿರಸ
ಕಲಕಿಹೋದ ಮಕ್ಕಳ ಮನಸ್ಸು
ಕಣ್ಣಲ್ಲಿ ಧರ್ಮದ ಹಸಿವು
ಮಂದಿರ ಮಸೀದೆಗಳ
ನೆತ್ತಿಯ ಮೇಲೆ ಒಂದೊಂದು ಧ್ವಜ.
ಮುಗಿಲು ಮುಟ್ಟಿದೆ ಜೈಕಾರ
ನೆಲದೆದೆಯ ಮಸೀದೆ ಮಂದಿರ
ದೊಳಗೆ ಕೇಳಿಸುತ್ತಿಲ್ಲ
ಹಕ್ಕಿಗಳ ಚಿಲಿಪಿಲಿ
ಆಕರಾಳ-ವಿಕರಾಳ
ಅಂಗಳದಲ್ಲಿ, ದೈ, ದೈ...
ಗಂಟಲು ಬಿರಿದು ಅಳುವ
ಮಣ್ಣ ಗೋಡೆಯ ಮೌನ;
ದೇವರಿಗೂ ಕಾಡುತ್ತಿದೆ ತಬ್ಬಲಿತನ!



ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ, ಕನ್ನಡ ಸಂಸ್ಕೃತಿ ಇಲಾಖೆ, ಕೊಪ್ಪಳ ಜಿಲ್ಲೆ, ಕೊಪ್ಪ



# ಪ್ರಸ್ತುತವಿದೆ ಹಿಂದೆಂದಿಗಿಂತಲೂ ಉತ್ತಮವಾದ ಹೊಸ ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ ಸಂತೂರ್

ನಿಮಗೆಂದೇ ವಿಶೇಷವಾಗಿ

FCB◆ULKA-42940

**HOSATHU** Kannada Monthly / November 2005 Rs. 12 RNI Regn. No. KARKAN/1999/614 REGD. CPMG / KA / BGE – 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month

ಪ್ರಿಯದರ್ಶಿನಿಯ
ಗುಣಮಟ್ಟ ಹಾಗೂ
ವಿಶ್ವಾಸಾರ್ಹದ ಪ್ರತಿಬಿಂಬ.

- ಪರಿಶುದ್ಧ ನೂಲಿನ ಬಳಕೆ.
- ಪರಿಸರ ಸ್ನೇಹಿ ಬಣ್ಣಗಳು.
- ಇಳಕಲ್, ಮೊಳಕಾಲ್ಮೂರು, ಗದಗ-ಬೆಟಗೇರಿ ಮುಂತಾದ ಪ್ರದೇಶಗಳ ಪಾರಂಪಾರಿಕ ಕುಶಲ ನೇಕಾರರಿಂದ.
- ಕರ ಕುಶಲ ನೇಯ್ಗೆಯಿಂದಾಗಿ ಹೆಚ್ಚು ಬಾಳಿಕೆ.

ಬನ್ನಿ, ಸೊಬಗಿನ ರೇಷ್ಮೆ ವಸ್ತ್ರವೈವಿಧ್ಯ
ನಿಮ್ಮ ಮನಸೂರೆಗೊಳ್ಳಲಿ.

## ದೀಪಾವಳಿ ಮಾರಾಟ

ಅಕ್ಟೋಬರ್ 22 - ನವೆಂಬರ್ 5, 2005

ಸಾಂಪ್ರದಾಯಿಕ ರೇಷ್ಮೆ,
ಪ್ರಿಂಟೆಡ್ ರೇಷ್ಮೆ, ಜಾಮ್ದಾನಿ,
ಬ್ರೊಕೇಡ್, ಕಲಾಂಜಲಿ,
ಫ್ಯಾಬ್ರಿಕ್ ಪೈಂಟೆಡ್, ಕಾಂತಾ,
ಗಂಡಭೇರುಂಡ ಸೀರೆಗಳು.

ಶರ್ಟ್‌ಗಳು,
ಉಡುಪು ವಸ್ತ್ರಗಳು,
ಚೂಡಿದಾರ್ ಸೆಟ್‌ಗಳು,
ಗೃಹಾಲಂಕಾರಿಕ ವಸ್ತ್ರಗಳು ಸಹ
ದೊರೆಯುತ್ತವೆ.

ಭಾನುವಾರವೂ ತೆರೆದಿರುತ್ತದೆ

## ಪರಿಶುದ್ಧತೆಯ ಪರಂಪರೆ
# ಪ್ರಿಯದರ್ಶಿನಿ





**ಪ್ರಿಯದರ್ಶಿನಿ**
ಕೈಮಗ್ಗದ ತವರು
ಪ್ರಾಮಾಣಿಕತೆ ನಮ್ಮ ನಂಬಿಕೆ
ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ
(ಕರ್ನಾಟಕ ಸರ್ಕಾರದ ಒಂದು ಉದ್ಯಮ)
e-mail: khdc@vsnl.net www.khdcl.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna